# ಗ್ರಾಮ ಪಂಚಾಯತಿ ಮತ್ತು ಸಬಲೀಕರಣ

(ಬಳ್ಳಾರಿ ಜಿಲ್ಲೆಯ ಅಧ್ಯಯನ)

ಕನ್ನಡ ವಿಶ್ವವಿದ್ಯಾಲಯಕ್ಕೆ ಸಲ್ಲಿಸಿದ ಪಿಎಚ್.ಡಿ. ಮಹಾಪ್ರಬಂಧ

ಸಂಶೋಧಕ
ಯರಿಸ್ವಾಮಿ ಎಂ.

ಮಾರ್ಗದರ್ಶಕರು
ಡಾ. ಎಂ. ಚಂದ್ರ ಪೂಜಾರಿ
ಪ್ರವಾಚಕರು
ಅಭಿವೃದ್ಧಿ ಅಧ್ಯಯನ ವಿಭಾಗ





ಅಭಿವೃದ್ಧಿ ಅಧ್ಯಯನ ವಿಭಾಗ
ಸಮಾಜ ವಿಜ್ಞಾನಗಳ ನಿಕಾಯ
ಕನ್ನಡ ವಿಶ್ವವಿದ್ಯಾಲಯ, ಹಂಪಿ
ವಿದ್ಯಾರಣ್ಯ 583 276

2002

# ಗ್ರಾಮಪಂಚಾಯತಿ ಮತ್ತು ಸಬಲೀಕರಣ

(ಬಳ್ಳಾರಿ ಜಿಲ್ಲೆಯ ಅಧ್ಯಯನ)

ಕನ್ನಡ ವಿಶ್ವವಿದ್ಯಾಲಯಕ್ಕೆ ಸಲ್ಲಿಸಿದ ಪಿಎಚ್.ಡಿ. ಮಹಾಪ್ರಬಂಧ


ಸಂಶೋಧಕ

**ಯರಿಸ್ವಾಮಿ ಎಂ.**

ಮಾರ್ಗದರ್ಶಕರು

**ಡಾ. ಎಂ. ಚಂದ್ರಪೂಜಾರಿ**

ಪ್ರವಾಚಕರು

ಅಭಿವೃದ್ಧಿ ಅಧ್ಯಯನ ವಿಭಾಗ







ಅಭಿವೃದ್ಧಿ ಅಧ್ಯಯನ ವಿಭಾಗ

ಸಮಾಜ ವಿಜ್ಞಾನಗಳ ನಿಕಾಯ

ಕನ್ನಡ ವಿಶ್ವವಿದ್ಯಾಲಯ, ಹಂಪಿ

ವಿದ್ಯಾರಣ್ಯ 583 276

2002






29



## ಪ್ರಮಾಣ ಪತ್ರ

**ಗ್ರಾಮಪಂಚಾಯತಿ ಮತ್ತು ಸಬಲೀಕರಣ (ಬಳ್ಳಾರಿ ಜಿಲ್ಲೆಯ ಅಧ್ಯಯನ)** ಎಂಬ ಶೀರ್ಷಿಕೆಯ ಈ ಮಹಾಪ್ರಬಂಧವನ್ನು ಪಿಎಚ್.ಡಿ. ಪದವಿಗಾಗಿ ಕನ್ನಡ ವಿಶ್ವವಿದ್ಯಾಲಯಕ್ಕೆ ಸಲ್ಲಿಸಲು ಡಾ. ಎಂ. ಚಂದ್ರಪೂಜಾರಿ ಅವರ ಮಾರ್ಗದರ್ಶನದಲ್ಲಿ ಸಿದ್ಧಪಡಿಸಲಾಗಿದೆ. ಪ್ರಸ್ತುತ ಮಹಾ ಪ್ರಬಂಧವನ್ನು ಈ ಮೊದಲು ಯಾವುದೇ ಪದವಿಗಾಗಿ ಸಲ್ಲಿಸಿರುವುದಿಲ್ಲವೆಂದು ಪ್ರಮಾಣೀಕರಿಸುತ್ತೇನೆ.

ದಿನಾಂಕ : 23/12/2002
ಸ್ಥಳ : ವಿದ್ಯಾರಣ್ಯ

M. [signature]
**(ಯರಿಸ್ವಾಮಿ ಎಂ.)**
ಸಂಶೋಧಕ
ಅಭಿವೃದ್ಧಿ ಅಧ್ಯಯನ ವಿಭಾಗ
**ಕನ್ನಡ ವಿಶ್ವವಿದ್ಯಾಲಯ, ಹಂಪಿ**

## ಮಾರ್ಗದರ್ಶಕರ ಪತ್ರ

ಶ್ರೀ ಯರಿಸ್ವಾಮಿ ಎಂ. ಇವರು **ಗ್ರಾಮಪಂಚಾಯತಿ ಮತ್ತು ಸಬಲೀಕರಣ (ಬಳ್ಳಾರಿ ಜಿಲ್ಲೆಯ ಅಧ್ಯಯನ)** ಎಂಬ ಶೀರ್ಷಿಕೆಯ ಈ ಪಿಎಚ್.ಡಿ ಮಹಾಪ್ರಬಂಧವನ್ನು ನನ್ನ ಮಾರ್ಗದರ್ಶನದಲ್ಲಿ ಸಿದ್ಧಪಡಿಸಿದ್ದಾರೆ. ಇವರು ಪಿಎಚ್.ಡಿ ಪದವಿಗಾಗಿ ಕನ್ನಡ ವಿಶ್ವವಿದ್ಯಾಲಯಕ್ಕೆ ಸಲ್ಲಿಸುತ್ತಿರುವ ಈ ಮಹಾಪ್ರಬಂಧವನ್ನು ಈ ಮೊದಲು ಯಾವುದೇ ಪದವಿಗಾಗಿ ಸಲ್ಲಿಸಿರುವುದಿಲ್ಲ ವೆಂದು ದೃಢೀಕರಿಸುತ್ತೇನೆ.

ದಿನಾಂಕ : 23/12/2002
ಸ್ಥಳ : ವಿದ್ಯಾರಣ್ಯ

**(ಡಾ. ಎಂ. ಚಂದ್ರಪೂಜಾರಿ)**
ಪ್ರವಾಚಕರು
ಅಭಿವೃದ್ಧಿ ಅಧ್ಯಯನ ವಿಭಾಗ
ಕನ್ನಡ ವಿಶ್ವವಿದ್ಯಾಲಯ, ಹಂಪಿ

# ಕೃತಜ್ಞತೆಗಳು

ಕನ್ನಡ ವಿಶ್ವವಿದ್ಯಾಲಯದ ಕುಲಪತಿಗಳಾದ ಡಾ. ಎಚ್.ಜೆ. ಲಕ್ಕಪ್ಪಗೌಡ ಅವರಿಗೆ, ಕುಲಸಚಿವರಾದ ಡಾ.ಕೆ.ವಿ.ನಾರಾಯಣ ಹಾಗೂ ಅಧ್ಯಯನಾಂಗದ ನಿರ್ದೇಶಕರಾದ ಡಾ.ಕರೀಗೌಡ ಬೀಚನಹಳ್ಳಿ ಅವರಿಗೆ, ಪಿಎಚ್.ಡಿ. ಅಧ್ಯಯನಕ್ಕೆ ಅವಕಾಶ ಮಾಡಿಕೊಟ್ಟ ಡಾ. ಚಂದ್ರಶೇಖರ ಕಂಬಾರ ಅವರಿಗೆ ತುಂಬು ಹೃದಯದ ಕೃತಜ್ಞತೆಗಳು.

ಪಿಎಚ್.ಡಿ. ಅಧ್ಯಯನದ ಪ್ರತಿ ಹಂತದಲ್ಲೂ ಸೂಕ್ತ ಸಲಹೆ ಸೂಚನೆಗಳನ್ನು ಸೂಚಿಸಿ, ವಿವಿಧ ರೀತಿಯಲ್ಲಿ ಆತ್ಮೀಯವಾಗಿ ಮಾರ್ಗದರ್ಶನ ಮಾಡಿದ ಡಾ. ಎಂ.ಚಂದ್ರಪೂಜಾರಿ ಇವರಿಗೆ ಯಾವತ್ತೂ ಕೃತಜ್ಞ.

ಅಧ್ಯಯನ ಅವಧಿಯಲ್ಲಿ ಸಹಕರಿಸಿದ ವಿಶ್ರಾಂತ ಪ್ರಾಧ್ಯಪಕರಾದ ಡಾ.ಬಿ.ಶೇಷಾದ್ರಿ ಇವರಿಗೆ, ಕರಡು ಪ್ರತಿಯನ್ನು ತಿದ್ದಿ ಸಹಕರಿಸಿದ ಅಭಿವೃದ್ಧಿ ಅಧ್ಯಯನ ವಿಭಾಗದ ಮುಖ್ಯಸ್ಥರಾದ ಶ್ರೀ ಟಿ.ಆರ್.ಚಂದ್ರಶೇಖರ ಅವರಿಗೆ ಮತ್ತು ವಿಭಾಗದ ಅಧ್ಯಾಪಕರಾದ, ಎ.ಶ್ರೀಧರ, ಸಿದ್ದಗಂಗಮ್ಮ, ಎಚ್.ಡಿ.ಪ್ರಶಾಂತ ಮತ್ತು ಈ ಹಿಂದೆ ಮಾರ್ಗದರ್ಶಕರಾದ ಡಾ.ಶೌಕತ್ ಅಜೀಮ್ ಹಾಗೂ ಹಸ್ತಪ್ರತಿಯನ್ನು ತಿದ್ದಿದ ನಮ್ಮ ವಿಭಾಗದ ಜನಾರ್ದನ ಇವರಿಗೆ ಅಭಾರಿಯಾಗಿದ್ದೇನೆ.

ಅಧ್ಯಯನ ಅವಧಿಯಲ್ಲಿ ವಿಶ್ವಾಸ ತೋರಿಸಿದ, ಡಾ.ಹಿ.ಚಿ.ಬೋರಲಿಂಗಯ್ಯ, ಪ್ರೊ.ಮಲ್ಲೇಪುರಂ ಜಿ.ವೆಂಕಟೇಶ, ಪ್ರೊ.ಲಕ್ಷ್ಮಣ್ ತೆಲಗಾವಿ, ಡಾ.ಟಿ.ಪಿ.ವಿಜಯ್, ಡಾ.ಮಂಜುನಾಥ ಬೇವಿನಕಟ್ಟಿ, ಡಾ. ಮೈತ್ರಿಕಾಮಣ್ಣ, ಡಾ. ರಹಮತ್ ತರೀಕೆರೆ, ಡಾ. ವಿಠ್ಠಲರಾವ್ ಗಾಯಕ್ವಾಡ್, ಎ. ಎಸ್. ಪ್ರಭಾಕರ, ರಮೇಶ ನಾಯಕ್, ಡಾ. ವಿರೂಪಾಕ್ಷಿ ಪೂಜಾರಹಳ್ಳಿ,ಡಾ. ಚಿನ್ನಸ್ವಾಮಿ ಸೊಸಲೆ, ಎ.ವೆಂಕಟೇಶ್, ಡಾ. ಹರಿಶ್ಚಂದ್ರ ದಿಗ್ಸಂಗಿಕರ್, ಚೆಲುವರಾಜು, ಡಾ. ಶೈಲಜಾ ಹಿರೇಮಠ, ಕೆ.ಕೆ.ಮಕಾಳಿ, ಸುಜ್ಞಾನಮೂರ್ತಿ ಅವರಿಗೆ,

ಸದಾ ನನ್ನ ಶ್ರೇಯಸ್ಸನ್ನು ಬಯಸುತ್ತಿದ್ದ ದಿವಂಗತ ಪೂಜ್ಯ ತಂದೆಯವರನ್ನು ಈ ಸಂದರ್ಭದಲ್ಲಿ ದುಃಖದಿಂದ ನೆನೆಯುತ್ತೇನೆ. ತಾಯಿ ಸೀತಮ್ಮ, ದೊಡ್ಡಪ್ಪನವರಾದ ಹೆಚ್.ಡಿ.ದೇವೇಂದ್ರಪ್ಪ ಹಾಗೂ ಹೆಚ್.ಡಿ.ನೀಲಕಂಠಪ್ಪ, ಎಲ್ಲಾ ಸಹೋದರರಿಗೆ ಮತ್ತು ನನ್ನ ಎಲ್ಲಾ ಕುಟುಂಬವರ್ಗದವರನ್ನು ನೆನೆಯುತ್ತೇನೆ. ನನ್ನ ವಿದ್ಯಾಭ್ಯಾಸಕ್ಕೆ ಇಲ್ಲಿಯವರೆಗೆ ದಾರಿದೀಪವಾಗಿರುವ ನನ್ನ ಮಾವನವರಾದ ಜೆ.ಕೃಷ್ಣಮೂರ್ತಿ ಮತ್ತು ಅಕ್ಕನವರಾದ ಮೀನಾಕ್ಷಿ ಕೃಷ್ಣಮೂರ್ತಿ ಇವರುಗಳಿಗೆ, ಮಾವನವರಾದ ಜೆ.ಗುರುಪಾದ್, ಕಾಮಾಟಗಿ ನಾಗರಾಜ್ ಮತ್ತು ಶ್ಯಾನಭೋಗರ ರಾಮಣ್ಣ, ಸಹೋದರನಾದ ಕೆ ಶ್ರೀನಿವಾಸ ಅವರಿಗೆ,

ಬಂಧುಗಳಿಗಿಂತ ಹೆಚ್ಚು ಪ್ರೀತಿ ತೋರಿದ ಎಮ್.ಕೆ. ದುರಗಪ್ಪ, ಮಂಜುನಾಥ ತೆಲಗಿ, ಗುರುಬಸಪ್ಪ, ಪಿ.ಕೆ.ಶ್ರೀನಿವಾಸ್, ಕೆ.ಮಂಜುನಾಥ, ಶಿವಕುಮಾರ್ ಜಿ., ಗ್ಯಾನಪ್ಪ ಬಡಿಗೇರ್, ನಾರಾಯಣನಾಯ್ಕ ಮತ್ತು ಎಂ.ಪಿ. ಶಿವಮೂರ್ತಿ ಅವರುಗಳಿಗೆ,

ಗ್ರಂಥಾಲಯ ಸಿಬ್ಬಂದಿಗಳಾದ ಮಲ್ಲಿಕಾರ್ಜುನ, ಗುಡಿಮನೆ, ನಾಗವೇಣಿ, ಸುಹಾಸ್ ಮತ್ತು ನೆರಗೆಲ್ಲಪ್ಪ ಇವರುಗಳಿಗೆ,

ಸದಾ ನನ್ನ ಹಿತವನ್ನು ಬಯಸುವ ಆತ್ಮೀಯರಾದ ಡಾ.ಜೆ.ಕೃಷ್ಣ, ಡಾ.ವಿ ಸೀ ಮಾರುತಿ, ಡಾ.ಜಿ ಉಮೇಶ್ ಮತ್ತು ರಾಜಕುಮಾರ್, ಎಸ್.ಚಂದ್ರಪ್ಪ, ಶಶಿಕಾಂತ, ಮಂಜುನಾಥ ಜಿ., ಡಾ.ಆರ್.ಬಿ. ಕುಮಾರ್, ಸಿದ್ಧಪ್ಪ ಕೆ., ಗುರುಬಸವರಾಜು ಎಚ್., ಸಿ. ಅಶೋಕ, ಡಾ. ಎಂ.ನಾಗರಾಜ್, ಡಾ.ಗೋವಿಂದ, ಡಾ.ಎ.ಚನ್ನಪ್ಪ, ಡಾ. ರೇವಯ್ಯ ಒಡೆಯರ್, ಡಾ. ನಾಗಭೂಷಣ ಗೌಡ ಪಾಟೀಲ, ಡಾ.ಐ.ಜಿ. ಮ್ಯಾಗೇರಿ, ಡಾ.ಕೆ.ವೆಂಕಟೇಶ್, ಮಂಜುನಾಥ ಸಿ., ಮಹೇಶ್ ಕೋಳಿ, ಕರಿಸಿದ್ಧನಗೌಡ ಪಾಟೀಲ್, ರೇವಣ್ಣ ಜಯಣ್ಣ, ಜಾಜಿ ದೇವೇಂದ್ರಪ್ಪ, ವಾಣಿಶ್ರೀ, ಭಾರತಿ, ಅನುಸೂಯ, ರತ್ನಾಕರ್, ನಿಸಾರ್ ಮತ್ತು ನಮ್ಮ ವಿಭಾಗದ ಸಿಬ್ಬಂದಿಯಾದ ನಾಗರಾಜ ಬಡಿಗೇರ ಮತ್ತು ಮಹಮ್ಮದ್ ಆಲಿ ಅವರುಗಳಿಗೆ,

ಅಧ್ಯಯನ ಕೈಗೊಂಡ ಸಂದರ್ಭದಲ್ಲಿ ಅಂಕಿ-ಅಂಶಗಳನ್ನು ಮತ್ತು ಮಾಹಿತಿಗಳನ್ನು ಒದಗಿಸಿದ ಗ್ರಾಮಪಂಚಾಯತಿ, ತಾಲೂಕು ಮತ್ತು ಜಿಲ್ಲಾ ಪಂಚಾಯತ್ ಸಿಬ್ಬಂದಿಗಳಿಗೆ,

ಕೋಷ್ಟಕಗಳ ರಚನೆಯಲ್ಲಿ ಸಹಕರಿಸಿದ ಅಳಿಯನಾದ ಜೆ. ವಿಠ್ಠಲ ಹಾಗೂ ಅಧ್ಯಯನ ಅವಧಿಯಲ್ಲಿ ತಾಳ್ಮೆಯಿಂದ ಸಹಕರಿಸಿದ ಬಾಳಸಂಗಾತಿಯಾಗಿರುವ ಜೆ. ಪೂರ್ಣಿಮಳನ್ನು ಪ್ರೀತಿಯಿಂದ ನೆನೆಯುತ್ತೇನೆ.

ಮೊದಲು ಅಕ್ಷರ ಸಂಯೋಜನೆ ಮಾಡಿದ ಬಸವರಾಜ್ ಪತ್ರಕರ್ತ, ಶ್ರೀನಿವಾಸ್ ಕಲಾಲ್, ಮಾರುತಿ ಮತ್ತು ಶರಣ ಅವರುಗಳಿಗೆ,

ಸುಂದರವಾಗಿ ಅಕ್ಷರ ಸಂಯೋಜನೆ ಮತ್ತು ರೇಖಾಚಿತ್ರಗಳನ್ನು ಮಾಡಿದ ಎ. ಎಂ. ಕೃಪಾಶಂಕರ್ ಮತ್ತು ರಶ್ಮಿ ಕೃಪಾಶಂಕರ್ ಹಾಗೂ ಅಕ್ಷರ ಸಂಯೋಜನೆಯ ಸಮಯದಲ್ಲಿ ಕಿರಿಕಿರಿ ಮಾಡುತ್ತಿದ್ದ ಪುಟ್ಟ ಹರ್ಷನನ್ನು ಪ್ರೀತಿಯಿಂದ ನೆನೆಯುತ್ತೇನೆ.

ತುಂಬು ಹೃದಯದ ಕೃತಜ್ಞತೆಗಳೊಂದಿಗೆ,

ಎಂ. ಯರಿಸ್ವಾಮಿ

# ಪರಿವಿಡಿ


**ಪ್ರಸ್ತಾವನೆ** 1-9

ಅಧ್ಯಯನದ ಉದ್ದೇಶ, ವಿಧಾನ, ಮಿತಿಗಳು ಮತ್ತು ಅಧ್ಯಾಯಗಳ ವಿನ್ಯಾಸ

**ಅಧ್ಯಾಯ 1 ವಿಕೇಂದ್ರೀಕರಣ ಮತ್ತು ಅಭಿವೃದ್ಧಿ** 10-40

1.1 ಸ್ವಾತಂತ್ರ್ಯಾನಂತರ ಅಭಿವೃದ್ಧಿ

1.2 ಅಭಿವೃದ್ಧಿ ಮತ್ತು ವಿಕೇಂದ್ರೀಕರಣ

1.3 ಕರ್ನಾಟಕದಲ್ಲಿ ವಿಕೇಂದ್ರೀಕರಣ

1.4 1983ರ ಕರ್ನಾಟಕ ಪಂಚಾಯತ್‌ರಾಜ್ ಕಾಯ್ದೆ

1.5 1993ರ ಕರ್ನಾಟಕ ಪಂಚಾಯತ್‌ರಾಜ್ ಕಾಯ್ದೆ

1.6 ಅಧಿಕಾರ, ಸಮಿತಿ, ಸಭೆ ಇತ್ಯಾದಿಗಳು

1.7 ಕೇಂದ್ರ ಮತ್ತು ರಾಜ್ಯಸರ್ಕಾರದ ಅನುದಾನಗಳು

**ಅಧ್ಯಾಯ 2 ಅಧ್ಯಯನದ ಕ್ಷೇತ್ರಪರಿಚಯ** 41-73

2.1 ಜಿಲ್ಲೆಯ ಭೌಗೋಳಿಕ ಮತ್ತು ಚಾರಿತ್ರಿಕ ಹಿನ್ನೆಲೆ

2.2 ಜಿಲ್ಲೆಯ ಸಾಮಾಜಿಕ, ಆರ್ಥಿಕ ಮತ್ತು ರಾಜಕೀಯ ವಿವರಗಳು

2.3 ಜಿಲ್ಲೆಯ ತಾಲೂಕುಗಳ ಸಾಮಾಜಿಕ, ಆರ್ಥಿಕ ಮತ್ತು ರಾಜಕೀಯ ವಿವರಗಳು

2.4 ಅಧ್ಯಯನ ವ್ಯಾಪ್ತಿಯ ತಾಲೂಕುಗಳ ವಿವರಣೆ ಮತ್ತು ಆಯ್ಕೆ

2.5 ಅಧ್ಯಯನಕ್ಕೊಳಪಡಿಸಿದ ಗ್ರಾಮಪಂಚಾಯತಿಗಳ ವಿವರಣೆ ಮತ್ತು ಆಯ್ಕೆ

**ಅಧ್ಯಾಯ 3 ಯೋಜನೆಗಳ ಅನುಷ್ಠಾನ : ಕುಡಿಯುವ ನೀರು ಮತ್ತು ನೈರ್ಮಲೀಕರಣ** 74-122

3.1 ಅಭಿವೃದ್ಧಿ ಮತ್ತು ಮಾನವ ಅಭಿವೃದ್ಧಿ

3.2 ಗ್ರಾಮಪಂಚಾಯತಿ ಮತ್ತು ಕುಡಿಯುವ ನೀರು

3.3. ಗ್ರಾಮೀಣ ನೀರು ಸರಬರಾಜು ಯೋಜನೆಗಳು

3.4 ಗ್ರಾಮಪಂಚಾಯತಿಗಳಲ್ಲಿ ಕುಡಿಯುವ ನೀರು ಪೂರೈಕೆ ಮತ್ತು ನಿರ್ವಹಣೆ

3.5 ಗ್ರಾಮಪಂಚಾಯತಿಗಳ ತೌಲನಿಕ ವಿವರಣೆ

3.6 ಗ್ರಾಮಪಂಚಾಯತಿ ಮತ್ತು ನೈರ್ಮಲೀಕರಣ

3.7 ಗ್ರಾಮಪಂಚಾಯತಿಗಳಲ್ಲಿ ನೈರ್ಮಲ್ಯ ಕಾರ್ಯಕ್ರಮಗಳ ಅನುಷ್ಠಾನ ಮತ್ತು ನಿರ್ವಹಣೆ

3.8 ಗ್ರಾಮಪಂಚಾಯತಿಗಳ ತೌಲನಿಕ ವಿವರಣೆ

**ಅಧ್ಯಾಯ 4 ವಸತಿ, ಜವಾಹರ್ ಗ್ರಾಮಸಮೃದ್ಧಿ ಯೋಜನೆ ಮತ್ತು ಶಿಕ್ಷಣ** 123-182

4.1 ವಸತಿ ಯೋಜನೆಗಳು

4.2 ಗ್ರಾಮಪಂಚಾಯತಿಗಳಲ್ಲಿ ವಸತಿ ಯೋಜನೆಗಳ ವಿತರಣೆ

4.3 ಗ್ರಾಮಪಂಚಾಯತಿಗಳ ತೌಲನಿಕ ವಿವರಣೆ

4.4 ಬಡತನ ನಿರ್ಮೂಲನಾ ಕಾರ್ಯಕ್ರಮ

4.5 ಬಡತನ ಮತ್ತು ಅಭಿವೃದ್ಧಿ

4.6 ಜವಾಹರ್ ಗ್ರಾಮಸಮೃದ್ಧಿ ಯೋಜನ

4.7 ಜವಾಹರ್ ಗ್ರಾಮಸಮೃದ್ಧಿ ಯೋಜನೆ ಮತ್ತು ಗ್ರಾಮ ಪಂಚಾಯತಿಗಳು

4.8 ಗ್ರಾಮಪಂಚಾಯತಿಗಳ ತೌಲನಿಕ ವಿವರಣೆ

4.9 ಗ್ರಾಮಪಂಚಾಯತಿ ಮತ್ತು ಶಿಕ್ಷಣ

4.10 ಗ್ರಾಮಪಂಚಾಯತಿಗಳು ಮತ್ತು ಶಿಕ್ಷಣದ ನಿರ್ವಹಣೆ

4.11 ಗ್ರಾಮಪಂಚಾಯತಿಗಳ ತೌಲನಿಕ ವಿವರಣೆ

**ಅಧ್ಯಾಯ 5 ಗ್ರಾಮಪಂಚಾಯತಿಗಳ ಕಾರ್ಯಕ್ಷಮತೆ** 183-245

5.1 ಜಾತಿವಾರು ಪ್ರಾತಿನಿಧ್ಯ

5.2 ಗ್ರಾಮಸಭೆಗಳು

5.3 ತೆರಿಗೆ ಸಂಗ್ರಹ

5.4 ಪಂಚಾಯತ್ ವ್ಯವಸ್ಥೆ: ವಿವಿಧ ಸ್ತರಗಳು ಮತ್ತು ಪಕ್ಷರಾಜಕೀಯ

5.5 ಹಣದ ಲಾಭಿ

**ಅಧ್ಯಾಯ 6 ಸಮಾರೋಪ** 246-252

6.1 ಅಧ್ಯಯನದ ಫಲಿತಗಳು

6.2 ಅಧ್ಯಯನದ ಕೆಲವು ಸಲಹೆಗಳು

**ಗ್ರಂಥಋಣ** 253-266

# ಪ್ರಸ್ತಾವನೆ

ವಿಕೇಂದ್ರೀಕರಣ ವ್ಯವಸ್ಥೆಯ ಬುನಾದಿಯಾಗಿರುವ ಗ್ರಾಮ ಪಂಚಾಯತಿಯ ಕಾರ್ಯಕ್ಷಮತೆ ಯನ್ನು ಅಧ್ಯಯನ ಮಾಡುವುದು ಈ ಮಹಾ ಪ್ರಬಂಧದ ಮುಖ್ಯ ಉದ್ದೇಶ. ಸ್ವಾತಂತ್ರ್ಯಾನಂತರ ಸಮಾಜದ ಕೆಳವರ್ಗಗಳ ಕಲ್ಯಾಣಕ್ಕಾಗಿ ಅನೇಕ ಅಭಿವೃದ್ಧಿಪರ ಕಾರ್ಯಕ್ರಮಗಳನ್ನು ಜಾರಿಗೆ ತರಲಾಯಿತು. ಈ ಕಾರ್ಯಕ್ರಮಗಳ ಮುಖ್ಯ ಉದ್ದೇಶ ಕೆಳವರ್ಗಗಳ ಆರ್ಥಿಕ ಮತ್ತು ಸಾಮಾಜಿಕ ಪರಿವರ್ತನೆ. ಆದರೆ ಈ ಕಾರ್ಯಕ್ರಮಗಳು ನಿರೀಕ್ಷಿತ ಫಲವನ್ನು ನೀಡಲಿಲ್ಲ. ಪರಿಣಾಮವಾಗಿ ಅಭಿವೃದ್ಧಿಯ ಲಾಭಗಳು ಜನ ಸಾಮಾನ್ಯರಿಗೆ ಯಾಕೆ ತಲುಪುತ್ತಿಲ್ಲ ಎನ್ನುವುದರ ಅಧ್ಯಯನಕ್ಕೆ ಬಲವಂತ್‌ರಾಯ್‌ಮೆಹ್ತಾ ಅವರ ಅಧ್ಯಕ್ಷತೆಯಲ್ಲಿ 1957ರಲ್ಲಿ ಒಂದು ಸಮಿತಿ ನೇಮಕವಾಯಿತು. ತಳಮಟ್ಟದ ಆಡಳಿತ ಊಳಿಗಮಾನ್ಯ ಲಕ್ಷಣಗಳಿಂದ ಕೂಡಿದೆ. ಸರಕಾರ ಜಾರಿಗೆ ತಂದ ಅಭಿವೃದ್ಧಿ ಕಾರ್ಯಕ್ರಮಗಳ ಲಾಭಗಳು ಸ್ಥಳೀಯ ಮೇಲ್ವರ್ಗಗಳ ಮೂಲಕವೇ ಹಾದು ಜನ ಸಾಮಾನ್ಯರಿಗೆ ತಲುಪಬೇಕಾಗಿದೆ. ಆದುದರಿಂದ ಯೋಜನೆಯ ಫಲಗಳು ತಲುಪಬೇಕಾದವರಿಗೆ ತಲುಪುತ್ತಿಲ್ಲ ಎಂದು ಸಮಿತಿ ಗುರುತಿಸಿತು. ಈ ಸಮಸ್ಯೆಗಳ ಪರಿಹಾರಕ್ಕೆ ಮೂರು ಹಂತದ ಪಂಚಾಯತ್‌ರಾಜ್ ವ್ಯವಸ್ಥೆಯನ್ನು ಜಾರಿಗೆ ತರಲು ಸಮಿತಿ ಶಿಫಾರಸ್ಸು ಮಾಡಿತು. ಜತೆಗೆ ಈ ಪಂಚಾಯತ್ ವ್ಯವಸ್ಥೆಯ ಮೂಲಕ ಅಭಿವೃದ್ಧಿ ಕಾರ್ಯಕ್ರಮಗಳನ್ನು ಜಾರಿಗೆ ತರಬೇಕೆಂದು ಸಮಿತಿ ಸಲಹೆ ನೀಡಿತು.[1] ಕೆಲವು ಸಣ್ಣ ಪುಟ್ಟ ಬದಲಾವಣೆಗಳೊಂದಿಗೆ ಈ ಸಮಿತಿಯ ಶಿಫಾರಸ್ಸುಗಳು ಜಾರಿಗೆ ಬಂದವು. ಕೆಲವು ಅಭಿವೃದ್ಧಿ ಕಾರ್ಯಕ್ರಮಗಳು ಪಂಚಾಯತಿ ವ್ಯವಸ್ಥೆ ಮೂಲಕ ಹಾದು ಬರಲು ಆರಂಭವಾದವು. ಸುಮಾರು 70ರ ದಶಕದವರೆಗೆ ಈ ಕಾರ್ಯಕ್ರಮದ ವಿಕೇಂದ್ರೀಕರಣ ಪ್ರಕ್ರಿಯೆ ಮುಂದುವರಿಯಿತು. ಆದಾಗ್ಯೂ ತಳಮಟ್ಟದ ಜನರ ಬದುಕು ವಿಶೇಷ ಪರಿವರ್ತನೆಗಳನ್ನು ಕಾಣಲಿಲ್ಲ.

ಆ ಸಂದರ್ಭದಲ್ಲಿ ಪಂಚಾಯತ್‌ರಾಜ್ ವ್ಯವಸ್ಥೆಯನ್ನು ಪುನರ್ ಸಂಘಟಿಸುವ ಅವಶ್ಯಕತೆಯನ್ನು ಅಂದಿನ ಕೇಂದ್ರ ಸರಕಾರ ಮನಗಂಡಿತು. ಜಾರಿಯಲ್ಲಿದ್ದ ಪಂಚಾಯತಿ ವ್ಯವಸ್ಥೆಯನ್ನು ಅಧ್ಯಯನ ಮಾಡಿ ಸುಧಾರಣೆಗೆ ಅಗತ್ಯವಿರುವ ಸಲಹೆ ಸೂಚನೆಗಳನ್ನು ನೀಡಲು 1977ರಲ್ಲಿ ಅಶೋಕಮೆಹ್ತಾ ಸಮಿತಿಯನ್ನು ನೇಮಕ ಮಾಡಲಾಯಿತು. ಕೇಂದ್ರ ಮತ್ತು ರಾಜ್ಯದಿಂದ ಈ ಸಂಸ್ಥೆಗಳಿಗೆ ಅನುದಾನವಿಲ್ಲ, ಸ್ಥಳೀಯ ಸಂಪನ್ಮೂಲ ಸಂಗ್ರಹಕ್ಕೆ ಅವಕಾಶವಿಲ್ಲ, ಅಭಿವೃದ್ಧಿ ಕಾಮಗಾರಿಗಳನ್ನು ಕೈಗೊಳ್ಳುವ ಪ್ರಶ್ನೆಯೇ ಇರಲಿಲ್ಲ, ಹೀಗೆ ಸಂಪನ್ಮೂಲ ಮತ್ತು ಅಧಿಕಾರಗಳಿಲ್ಲದೇ ಪಂಚಾಯತಿ ವ್ಯವಸ್ಥೆ ತಳಮಟ್ಟದಲ್ಲಿ ಭದ್ರವಾಗಿ ನೆಲೆಯೂರಲಿಲ್ಲ ಎಂದು ಸಮಿತಿ ವರದಿ ಮಾಡಿತು. ಈ ಎಲ್ಲಾ ದೋಷಗಳ ನಿವಾರಣೆಗೆ ಎರಡು ಹಂತದ ಪಂಚಾಯತ್‌ರಾಜ್ ವ್ಯವಸ್ಥೆಯನ್ನು ಜಾರಿಗೆ ತರಲು ಸಮಿತಿ ಶಿಫಾರಸ್ಸು ಮಾಡಿತು. ಗ್ರಾಮೀಣ ಪ್ರದೇಶಗಳ ಸರ್ವಾಂಗೀಣ ಅಭಿವೃದ್ಧಿಯಾಗಬೇಕಾದರೆ ನಿಜವಾದ ಅರ್ಥದಲ್ಲಿ ಅಧಿಕಾರದ ವಿಕೇಂದ್ರೀಕರಣ ಆಗಬೇಕು ಎಂದು

ಸಮಿತಿ ಪ್ರತಿಪಾದಿಸಿತು. ಸಮಿತಿಯ ಶಿಫಾರಸ್ಸಿನಂತೆ ದೇಶಾದ್ಯಂತ ಎರಡು ಹಂತದ ಪಂಚಾಯತ್ ವ್ಯವಸ್ಥೆಯನ್ನು ಜಾರಿಗೊಳಿಸಲಾಯಿತು.[2] ಈ ಕಾಯ್ದೆಯಂತೆ ತಳಮಟ್ಟದಲ್ಲಿ ಮಂಡಲಪಂಚಾಯತ್ ಮತ್ತು ಜಿಲ್ಲಾ ಮಟ್ಟದಲ್ಲಿ ಜಿಲ್ಲಾ ಪರಿಷತ್ತನ್ನು ರಚಿಸಲಾಯಿತು. ಮಂಡಲಪಂಚಾಯತಿಗಳಿಗೆ ಹೆಚ್ಚು ಅಧಿಕಾರ ಮತ್ತು ಕಾರ್ಯಗಳನ್ನು ವಹಿಸಲಾಯಿತು. ಕೇಂದ್ರ ಮತ್ತು ರಾಜ್ಯ ಸರ್ಕಾರಗಳು ಹಣಕಾಸು ನೆರವನ್ನು ಈ ಸಂಸ್ಥೆಗಳಿಗೆ ಒದಗಿಸಿದವು. ಮೊಟ್ಟಮೊದಲ ಬಾರಿಗೆ ಗ್ರಾಮಸಭೆಯನ್ನು ನಡೆಸುವಂತೆ ಸಮಿತಿ ಶಿಫಾರಸ್ಸು ಮಾಡಿತು.[3]

ಎರಡು ಹಂತದ ಪಂಚಾಯತ್‌ರಾಜ್ ವ್ಯವಸ್ಥೆ ಜಾರಿಯಲ್ಲಿದ್ದರೂ ಯೋಜನೆಗಳು ಹಿಂದಿನ ರೀತಿಯಲ್ಲಿ ರಾಜ್ಯ ಮತ್ತು ಕೇಂದ್ರದಲ್ಲಿ ರೂಪಿತಗೊಳ್ಳುತ್ತಿದ್ದವು. ಜೊತೆಗೆ ಅವಧಿಗೆ ಸರಿಯಾಗಿ ಪಂಚಾಯತಿ ಚುನಾವಣೆಗಳು ನಡೆಯುತ್ತಿರಲಿಲ್ಲ. 1985ರಲ್ಲಿ ನೇಮಕಗೊಂಡ ಜಿ.ವಿ.ಕೆ.ರಾವ್ ಸಮಿತಿಯು ಜಿಲ್ಲೆಯು ಯೋಜನೆಯ ಮೂಲಘಟಕವಾಗಿರಬೇಕು ಮತ್ತು ಅವಧಿಗೆ ಸರಿಯಾಗಿ ಪಂಚಾಯತಿ ಚುನಾವಣೆಗಳನ್ನು ನಡೆಸಬೇಕು ಎಂದು ಶಿಫಾರಸ್ಸು ಮಾಡಿತು. 1986ರಲ್ಲಿ ನೇಮಕವಾದ ಎಲ್. ಎಂ. ಸಾಂಗ್ವಿ ಸಮಿತಿಯು ಪಂಚಾಯತ್ ಸಂಸ್ಥೆಗಳಿಗೆ ಹೆಚ್ಚಿನ ಹಣಕಾಸನ್ನು ಒದಗಿಸಿ ಪ್ರಜಾಸತ್ತಾತ್ಮಕ ಸಂಸ್ಥೆಗಳಾಗಿ ಕಾರ್ಯನಿರ್ವಹಿಸಬೇಕು ಎಂದು ಸಲಹೆ ನೀಡಿತು.[4] ಹೀಗೆ ಕೆಲವು ಸಮಿತಿಗಳ ಶಿಫಾರಸ್ಸುಗಳು ವಿಕೇಂದ್ರೀಕರಣವನ್ನು ಬಲಯುತಗೊಳಿಸುವಲ್ಲಿ ಪ್ರಯತ್ನಿಸಿದವು. ಇಷ್ಟೆಲ್ಲ ಸಮಿತಿಗಳ ಮತ್ತು ಶಿಫಾರಸ್ಸುಗಳ ನಡುವೆಯೂ ಪಂಚಾಯತ್‌ರಾಜ್ ವ್ಯವಸ್ಥೆ ಅದರ ಮೂಲ ಉದ್ದೇಶಕ್ಕೆ ಅನುಗುಣವಾಗಿ ಕಾರ್ಯನಿರ್ವಹಿಸಲು ವಿಫಲವಾಗಿತ್ತು. ಅಂದರೆ ನಿಜವಾದ ಅರ್ಥದಲ್ಲಿ ಅಭಿವೃದ್ಧಿ ಆಡಳಿತದ ವಿಕೇಂದ್ರೀಕರಣ ಅಥವಾ ತಳಮಟ್ಟದ ಜನರು ತಮ್ಮ ಬೇಕು ಬೇಡಗಳಿಗೆ ಅನುಗುಣವಾದ ಯೋಜನೆಗಳನ್ನು ಪಡೆಯುವಂತಹ ವ್ಯವಸ್ಥೆ ಜಾರಿಗೆ ಬರಲಿಲ್ಲ.

ಪಂಚಾಯತಿಯನ್ನು ಅದರ ಮೂಲ ಉದ್ದೇಶಕ್ಕೆ ಅನುಗುಣವಾಗಿ ಸಂಘಟಿಸುವ ದೃಷ್ಟಿಯಿಂದ 1992ರಲ್ಲಿ ಜನತೆಗೆ ಅಧಿಕಾರ ಎಂಬ ಘೋಷಣೆಯೊಂದಿಗೆ ಸಂವಿಧಾನದ 73ನೇ ತಿದ್ದುಪಡಿ ಆಯಿತು. ಈ ತಿದ್ದುಪಡಿ ಅನ್ವಯ ಗ್ರಾಮ, ತಾಲೂಕು ಮತ್ತು ಜಿಲ್ಲಾ ಮಟ್ಟಗಳಲ್ಲಿ ಚುನಾಯಿತ ಸಂಸ್ಥೆಗಳನ್ನು ರಚಿಸುವುದು, ಪ್ರತಿ ಐದು ವರ್ಷಗಳಿಗೊಮ್ಮೆ ಚುನಾವಣೆಗಳನ್ನು ನಡೆಸಲು ಪ್ರತ್ಯೇಕ ಚುನಾವಣಾ ಆಯೋಗದ ರಚನೆ, ಆಯಾ ಪಂಚಾಯತಿ ಪ್ರದೇಶದಲ್ಲಿರುವ ಪರಿಶಿಷ್ಟ ಜಾತಿ/ಪಂಗಡ ಜನಸಂಖ್ಯೆ ಪ್ರಮಾಣಕ್ಕನುಗುಣವಾಗಿ ಸ್ಥಾನಗಳ ಮೀಸಲಾತಿ, ಮಹಿಳೆಯರಿಗೆ ಶೇಕಡ 33 ರಷ್ಟು ಸ್ಥಾನಗಳ ಮೀಸಲು, ಸ್ಥಳೀಯ ಸಂಸ್ಥೆಗಳಿಗೆ ಕೇಂದ್ರ ಮತ್ತು ರಾಜ್ಯದಿಂದ ಅನುದಾನ, ಸಂಪನ್ಮೂಲ ಕ್ರೋಢೀಕರಣ, ಹಣಕಾಸು ವ್ಯವಸ್ಥೆ ನಿರ್ವಹಣೆಗೆ ರಾಜ್ಯ ಹಣಕಾಸು ಆಯೋಗ ರಚನೆ, ಪ್ರತಿ ಜಿಲ್ಲೆಯಲ್ಲೂ ಯೋಜನಾ ಸಮಿತಿಗಳ ರಚನೆ ಮತ್ತು ಈ ಕಾಯ್ದೆಯ ಇತರ ವಿಷಯಗಳೊಂದಿಗೆ ಎಲ್ಲಾ ರಾಜ್ಯಗಳಲ್ಲೂ ಸಮಾನ ಸ್ವರೂಪದ ಪಂಚಾಯತ್ ಆಡಳಿತ ವ್ಯವಸ್ಥೆಯನ್ನು ಸ್ಥಾಪಿಸಬೇಕೆಂದು ಕಡ್ಡಾಯಗೊಳಿಸಲಾಯಿತು.[5] ಈ ಎಲ್ಲಾ ಅಂಶಗಳೊಂದಿಗೆ ಇಂದು ಎಲ್ಲಾ ರಾಜ್ಯಗಳಲ್ಲಿ ಪಂಚಾಯತಿಗಳು ಸಂವಿಧಾನಿಕವಾಗಿ ರಚನೆಗೊಂಡಿವೆ. ಕರ್ನಾಟಕದಲ್ಲೂ ಇದೇ ಮಾದರಿಯಲ್ಲಿ 1993ರಲ್ಲಿ ಪಂಚಾಯತ್‌ರಾಜ್ ಕಾಯ್ದೆಯನ್ನು ಜಾರಿಗೆ ತರಲಾಯಿತು.

ಸಂವಿಧಾನದ 73ನೇ ತಿದ್ದುಪಡಿಯಿಂದ ಗ್ರಾಮಪಂಚಾಯತಿಗಳು ಇಂದು ಆಧುನಿಕ ಪಂಚಾಯತಿಗಳಾಗಿವೆ. ಇಲ್ಲಿ ಎಲ್ಲಾ ವರ್ಗಗಳ ಪ್ರತಿನಿಧಿಕರಣವಿದೆ. ಕೇಂದ್ರ ಮತ್ತು ರಾಜ್ಯ ಸರ್ಕಾರಗಳು ಈ ಸಂಸ್ಥೆಗಳಿಗೆ ಅನುದಾನಗಳನ್ನು ಒದಗಿಸುತ್ತಿವೆ ಹಾಗೂ ಸ್ಥಳೀಯ ಸಂಪನ್ಮೂಲದ ಸಂಗ್ರಹಕ್ಕೆ ಅವಕಾಶ ಇದೆ.

## ಅಧ್ಯಯನದ ಉದ್ದೇಶ

ನಮ್ಮಲ್ಲಿನ ವಿಕೇಂದ್ರೀಕರಣಕ್ಕೆ ಎರಡು ಮುಖಗಳಿವೆ. ಒಂದು ಮೇಲ್‌ಸ್ತರದಲ್ಲಿ ರೂಪುಗೊಳ್ಳುವ ಅಭಿವೃದ್ಧಿ ಕಾರ್ಯಕ್ರಮಗಳನ್ನು ತಳಮಟ್ಟದ ಜನರಿಗೆ ತಲುಪಿಸುವುದು. ಎರಡು, ತಳಮಟ್ಟದ ಜನರನ್ನು ಸಶಕ್ತೀಕರಣಗೊಳಿಸುವುದು. ಒಂದನೇ ಉದ್ದೇಶ ಈಡೇರಿದರೆ ಎರಡನೆ ಉದ್ದೇಶ ಈಡೇರುತ್ತದೆ ಎನ್ನುವ ನಂಬಿಕೆ ಇದೆ. ಅಂದರೆ ತಳಮಟ್ಟದ ಜನರ ಮುಖ್ಯ ಸಮಸ್ಯೆ ಇಂದು ಕೂಡ ಮೂಲಭೂತ ಸೌಲಭ್ಯಗಳ - ಕುಡಿಯುವ ನೀರು, ನೈರ್ಮಲ್ಯ, ವಸತಿ, ಉದ್ಯೋಗ ಮತ್ತು ಶಿಕ್ಷಣ ಇತ್ಯಾದಿಗಳ - ಕೊರತೆ. ಇವುಗಳನ್ನು ಅವರು ಹೊಂದಿದರೆ ಅಥವಾ ಹೊಂದಲು ಶಕ್ತರಾದರೆ ಇತರ ಕ್ಷೇತ್ರದಲ್ಲಿ ಸಶಕ್ತೀಕರಣಗೊಳ್ಳಲು ಅವರಿಗೆ ಅನುಕೂಲವಾಗುತ್ತದೆ ಎನ್ನುವ ಗ್ರಹಿಕೆ ಇದೆ. ಮೇಲೆ ವಿವರಿಸಿದ ಗ್ರಹಿಕೆಯನ್ನು ಯಥಾ ರೀತಿಯಲ್ಲಿ ಒಪ್ಪಿಕೊಂಡು, ಅವು ಎಷ್ಟರ ಮಟ್ಟಿಗೆ ತಳಮಟ್ಟದಲ್ಲಿ ಕಾರ್ಯರೂಪಕ್ಕೆ ಬಂದಿದೆ ಅಥವಾ ಪಂಚಾಯತ್ ತನ್ನ ಜವಾಬ್ದಾರಿಯನ್ನು ಎಷ್ಟು ಸಮರ್ಪಕವಾಗಿ ನಿಭಾಯಿಸಿದೆ ಎಂದು ವಿಶ್ಲೇಷಿಸುವುದು ಈ ಅಧ್ಯಯನದ ಮುಖ್ಯ ಉದ್ದೇಶ. ಕೆಳವರ್ಗದವರ ಸಶಕ್ತೀಕರಣ ಪ್ರಕ್ರಿಯೆ ಪರಿಣಾಮಕಾರಿಯಾಗಿ ಜಾರಿ ಬರುವುದಕ್ಕಾಗಿ ಹಲವು ಸಾಂಸ್ಥಿಕ ರಚನೆಗಳನ್ನು ಮಾಡಲಾಗಿದೆ. ಜತೆಗೆ ಹಲವಾರು ವಿಚಾರಗಳಲ್ಲಿ ತಳಮಟ್ಟದ ಜನರ ಸಹಭಾಗಿತ್ವವನ್ನು ನಿರೀಕ್ಷಿಸಲಾಗುತ್ತದೆ. ಹೀಗೆ ಪಂಚಾಯತಿಯ ಕಾರ್ಯಕ್ಷಮತೆಯ ವಿಶ್ಲೇಷಣೆ ಅನಿವಾರ್ಯವಾಗಿ ಸಂಬಂಧಿತ ಇತರ ವಿಚಾರಗಳ ವಿಶ್ಲೇಷಣೆಯೂ ಆಗಿದೆ. ಈ ಎಲ್ಲದರ ಹಿನ್ನೆಲೆಯಲ್ಲಿ ಅಧ್ಯಯನ ಉದ್ದೇಶಗಳನ್ನು ಈ ಕೆಳಗಿನಂತೆ ನಿರ್ವಚಿಸಿಕೊಳ್ಳಲಾಗಿದೆ.

1. ತಳಮಟ್ಟದ ಜನರ ಸಶಕ್ತೀಕರಣಕ್ಕೆ ಅನಿವಾರ್ಯವೆಂದು ತಿಳಿದಿರುವ ಮೂಲಭೂತ ಸೌಲಭ್ಯಗಳನ್ನು ಉದ್ದೇಶಿತ ವರ್ಗಕ್ಕೆ ತಲುಪಿಸುವಲ್ಲಿ ಗ್ರಾಮ ಪಂಚಾಯತಿ ಸಾಧಿಸಿರುವ ಕಾರ್ಯಕ್ಷಮತೆಯನ್ನು ಪರೀಕ್ಷಿಸುವುದು
2. ಪಂಚಾಯತ್ ವ್ಯವಸ್ಥೆಯ ಆಂತರಿಕ ಅಂಶಗಳಾದ ಗ್ರಾಮಸಭೆ, ತೆರಿಗೆ ಸಂಗ್ರಹ, ಜನರ ಮತ್ತು ಪ್ರತಿನಿಧಿಗಳ ಅರಿವು ಮತ್ತು ಭಾಗವಹಿಸುವಿಕೆ ಇತ್ಯಾದಿಗಳು ಪಂಚಾಯತಿಯ ಕಾರ್ಯಕ್ಷಮತೆಯನ್ನು ಯಾವ ರೀತಿ ಪ್ರಭಾವಿಸಿದೆ ಎಂದು ಗುರುತಿಸುವುದು.
3. ಪಂಚಾಯತ್ ವ್ಯವಸ್ಥೆ ಕಾರ್ಯನಿರ್ವಹಿಸುವ ಸಾಮಾಜಿಕ ಹಾಗೂ ಆರ್ಥಿಕ ಪರಿಸರ ಪಂಚಾಯತಿಯ ಕಾರ್ಯಕ್ಷಮತೆಯನ್ನು ಹೇಗೆ ಪ್ರಭಾವಿಸಿದೆ ಎಂದು ವಿಶ್ಲೇಷಿಸುವುದು.
4. ಪಂಚಾಯತ್ ಕಾರ್ಯಕ್ಷಮತೆಯಲ್ಲಿ ಪಂಚಾಯತ್ ವ್ಯವಸ್ಥೆ ಮತ್ತು ಅದು ಕಾರ್ಯನಿರ್ವಹಿಸುವ ಪರಿಸರ ಇವೆರಡರಲ್ಲಿ ಯಾವುದೂ ಹೆಚ್ಚು ಪ್ರಭಾವಿಸಿದೆ ಎಂದು ಕಂಡುಹಿಡಿಯುವುದು.

5. ಮೇಲೆ ಸೂಚಿಸಿದ ವಿಶ್ಲೇಷಣೆಯ ಹಿನ್ನೆಲೆಯಲ್ಲಿ ಅಗತ್ಯವಿದ್ದರೆ ಪಂಚಾಯತಿಯ ಕಾರ್ಯಕ್ಷಮತೆಯನ್ನು ಸುಧಾರಿಸಲು ಸೂಕ್ತ ಕ್ರಮಗಳನ್ನು ಸೂಚಿಸುವುದು

## ಅಧ್ಯಯನ ವಿಧಾನ

ಅಧ್ಯಯನದ ಉದ್ದೇಶಗಳನ್ನು ಪರೀಕ್ಷಿಸಲು ಈ ಕೆಳಗಿನ ಅಂಕಿ ಅಂಶಗಳು ಮತ್ತು ಮಾಹಿತಿಗಳು ಅಗತ್ಯ. ಒಂದು, ಪಂಚಾಯತಿಯ ಮೂಲಭೂತ ಕಾರ್ಯಗಳಿಗೆ ಸಂಬಂಧಿಸಿದ ಮಾಹಿತಿ. ಕುಡಿಯುವ ನೀರಿನ ಪೂರೈಕೆ, ಗ್ರಾಮೀಣ ನೈರ್ಮಲ್ಯೀಕರಣ, ವಸತಿ ಮತ್ತು ಬಡತನ ನಿರ್ಮೂಲನಾ ಕಾರ್ಯಕ್ರಮ ಜಾರಿ ಪಂಚಾಯತಿ ವ್ಯಾಪ್ತಿಗೆ ಬರುವ ಮುಖ್ಯ ಜವಾಬ್ದಾರಿಗಳು. ಇವುಗಳ ಜತೆಗೆ ಶಿಕ್ಷಣ ಕೂಡ ಸೇರಿದೆ. ಆದರೆ ಶಿಕ್ಷಣಕ್ಕೆ ಸಂಬಂಧಿಸಿದ ಕೆಲವು ಅಂಚಿನ ಜವಾಬ್ದಾರಿಗಳನ್ನು ನೋಡಿಕೊಳ್ಳುವುದು ಮಾತ್ರ ಪಂಚಾಯತಿಯ ಕೆಲಸವಾಗಿದೆ ಅಥವಾ ಶಿಕ್ಷಣಕ್ಕೆ ಸಂಬಂಧಿಸಿದಂತೆ ಪಂಚಾಯತಿಯ ಜವಾಬ್ದಾರಿ ತುಂಬಾ ಸೀಮಿತವಾಗಿದೆ. ಎರಡು, ಪಂಚಾಯತ್ ವ್ಯವಸ್ಥೆಯಲ್ಲಿ ನೇರವಾಗಿ ಪಾಲುಗೊಳ್ಳುವ ಜನ ಪ್ರತಿನಿಧಿಗಳು, ಪದಾಧಿಕಾರಿಗಳು, ಅಧಿಕಾರಿಗಳು ಮತ್ತು ಅಭಿವೃದ್ಧಿ ಯೋಜನೆಗಳ ಫಲಾನುಭವಿಗಳು ಮುಂತಾದವರ ಹಿನ್ನೆಲೆ ಮತ್ತು ಅಭಿಪ್ರಾಯಗಳು. ಮೂರು, ಪಂಚಾಯತ್ ವ್ಯವಸ್ಥೆ ಕಾರ್ಯನಿರ್ವಹಿಸುತ್ತಿರುವ ಸಾಮಾಜಿಕ, ಆರ್ಥಿಕ ಹಾಗೂ ರಾಜಕೀಯ ಪರಿಸರಕ್ಕೆ ಸಂಬಂಧಿಸಿದ ಮಾಹಿತಿ. ಈ ಮೂರು ವಿಚಾರಗಳಿಗೆ ಸಂಬಂಧಿಸಿದ ಮಾಹಿತಿ ಯನ್ನು ಸ್ಥೂಲವಾಗಿ ಎರಡು ಮೂಲಗಳಿಂದ ಪಡೆಯಲಾಗಿದೆ. ಒಂದು ಆನುಷಂಗಿಕ, ಇನ್ನೊಂದು ಪ್ರಾಥಮಿಕ ಮಾಹಿತಿ. ಅಧ್ಯಯನದಲ್ಲಿ ಉಪಯೋಗಿಸಿದ ಆನುಷಂಗಿಕ ಮಾಹಿತಿಗಳ ಮೂಲ ಇಂತಿವೆ. ಒಂದು, ಜಿಲ್ಲಾಪಂಚಾಯತ್, ತಾಲೂಕು ಪಂಚಾಯತ್ ಮತ್ತು ಗ್ರಾಮಪಂಚಾಯತ್ ದಾಖಲೆಗಳು. ಮೂಲಭೂತ ಸೌಲಭ್ಯಗಳ ಪೂರೈಕೆ ಕುರಿತ ಅಂಕಿ-ಅಂಶಗಳು, ತೆರಿಗೆ ಸಂಗ್ರಹ, ವಾರ್ಷಿಕ ಬಜೆಟ್, ಗ್ರಾಮಸಭೆಗಳ ಸಂಖ್ಯೆ, ಹಾಜರಾದ ಸದಸ್ಯರ ಸಂಖ್ಯೆ, ಕೈಗೊಂಡ ನಿರ್ಣಯಗಳು ಇತ್ಯಾದಿಗಳಿಗೆ ಸಂಬಂಧಿಸಿದ ಮಾಹಿತಿಯನ್ನು ಈ ದಾಖಲೆಗಳು ಒದಗಿಸಿವೆ. ಶಿಕ್ಷಣ, ಕುಡಿಯುವ ನೀರು, ಸಾರ್ವಜನಿಕ ಕಾಮಗಾರಿ ಇತ್ಯಾದಿಗಳಿಗೆ ಸಂಬಂಧಿಸಿದ ಅಂಕಿ-ಅಂಶಗಳನ್ನು ಆಯಾ ಇಲಾಖೆಗಳಿಂದ ಸಂಗ್ರಹಿಸಲಾಗಿದೆ. ಎರಡು, ಸೆನ್ಸಸ್ ದಾಖಲೆಗಳು. ಗ್ರಾಮಗಳ ಜನಸಂಖ್ಯೆ, ಸಾಕ್ಷರತೆ, ವಿವಿಧ ವಲಯಗಳಲ್ಲಿ ತೊಡಗಿಸಿಕೊಂಡಿರುವ ಕೆಲಸಗಾರರ ಸಂಖ್ಯೆ ಇತ್ಯಾದಿಗಳನ್ನು ಈ ಮೂಲಗಳಿಂದ ಪಡೆಯಲಾಗಿದೆ. ಗ್ರಾಮ ಪಂಚಾಯತಿ ಒಂದರಲ್ಲಿ ಇರಬೇಕಾದ ಮೂಲಭೂತ ಸೌಲಭ್ಯಗಳ ಸಂಖ್ಯೆ ಮತ್ತು ವಾಸ್ತವದಲ್ಲಿ ಇರುವ ಸಂಖ್ಯೆಗಳನ್ನು ವಿವಿಧ ಇಲಾಖೆಗಳು ಒದಗಿಸಿದ ದಾಖಲೆಗಳಿಂದ ಪಡೆಯಲಾಗಿದೆ. ಮೂರು, ಪ್ರಕಟಿತ ಮತ್ತು ಅಪ್ರಕಟಿತ ಸಂಶೋಧನಾ ಪ್ರಬಂಧಗಳು, ಲೇಖನಗಳು ಮತ್ತು ವಿಚಾರ ಸಂಕಿರಣಗಳಲ್ಲಿ ಮಂಡಿತವಾದ ಬರಹಗಳು. ಸ್ಥಳೀಯ ಸಾಮಾಜಿಕ, ಆರ್ಥಿಕ ಹಾಗೂ ರಾಜಕೀಯ ಬದುಕಿಗೆ ಸಂಬಂಧಿಸಿದ ಮಾಹಿತಿಗಳನ್ನು ಸಂಶೋಧನಾ ಪ್ರಬಂಧಗಳು ಮತ್ತು ಲೇಖನಗಳಿಂದ ಪಡೆಯಲಾಗಿದೆ. ದೇಶದ ಇತರ ಕಡೆಗಳಲ್ಲಿನ ಪಂಚಾಯತಿಗಳ ಕಾರ್ಯಕ್ಷಮತೆ ಕುರಿತ ಮಾಹಿತಿಯನ್ನು ಲೇಖನಗಳಿಂದ ಮತ್ತು ಪುಸ್ತಕಗಳಿಂದ ಪಡೆಯಲಾಗಿದೆ.

ಎರಡು, ಪ್ರಾಥಮಿಕ ಮಾಹಿತಿ ಮೂಲ. ಅಧ್ಯಯನಕ್ಕೆ ಅವಶ್ಯವಾದ ಪ್ರಾಥಮಿಕ ಮಾಹಿತಿಯನ್ನು ಚುನಾಯಿತ ಪ್ರತಿನಿಧಿಗಳಿಂದ, ಗ್ರಾಮೀಣ ಜನತೆಯಿಂದ ಮತ್ತು ಅಧಿಕಾರಿಗಳಿಂದ ಪ್ರಶ್ನಾವಳಿಗಳ ಮೂಲಕ ಸಂಗ್ರಹಿಸಲಾಗಿದೆ. ಸಂದರ್ಶನ ಸೂಚಿಯ ಅನ್ವಯ ಪ್ರಶ್ನೆಗಳನ್ನು ಕೇಳಲಾಗಿದ್ದು ಮಾಹಿತಿದಾರರು ನೀಡಿರುವ ಉತ್ತರವನ್ನು ಅವರ ಸಮ್ಮುಖದಲ್ಲಿ ತುಂಬಲಾಗಿದೆ. ಮೂಲಭೂತ ಅವಶ್ಯಕತೆಗಳ ಬಗ್ಗೆ, ಗ್ರಾಮಸಭೆ, ಪಂಚಾಯತ್ ಯೋಜನೆ, ವಿತರಣೆ, ವಾರ್ಷಿಕ ಬಜೆಟ್, ಮುಂತಾದ ಅಂಶಗಳ ಜೊತೆಗೆ ಚುನಾಯಿತ ಪ್ರತಿನಿಧಿಗಳ ಮತ್ತು ಗ್ರಾಮೀಣ ಜನತೆಯ ಅರಿವು ಹಾಗೂ ಭಾಗವಹಿಸುವಿಕೆ ಬಗ್ಗೆ ಪ್ರಶ್ನೆಗಳನ್ನು ರಚಿಸಲಾಗಿದೆ. ಇಲ್ಲಿ ಚುನಾಯಿತ ಪ್ರತಿನಿಧಿಗಳನ್ನು ಮತ್ತು ಜನತೆಯನ್ನು ನೇರವಾಗಿ ಸಂದರ್ಶಿಸುವುದರ ಮೂಲಕ ಇವರ ಅಭಿಪ್ರಾಯಗಳನ್ನು ಸಂಗ್ರಹಿಸಲಾಗಿದೆ.

ಬಳ್ಳಾರಿ ಜಿಲ್ಲೆಯ ಹೊಸಪೇಟೆ ಮತ್ತು ಕೂಡ್ಲಿಗಿ ತಾಲೂಕುಗಳಿಗೆ ಅಧ್ಯಯನವನ್ನು ಸೀಮಿತಗೊಳಿಸಲಾಗಿದೆ. ಹೊಸಪೇಟೆ ತಾಲೂಕು ಜಿಲ್ಲೆಯಲ್ಲಿ ಅತಿ ಹೆಚ್ಚು ನೀರಾವರಿ ಪ್ರದೇಶವನ್ನು ಹೊಂದಿದ್ದು, ಜಿಲ್ಲೆಯ ಅಭಿವೃದ್ಧಿ ಹೊಂದಿದ ತಾಲೂಕುಗಳಲ್ಲಿ ಒಂದಾಗಿದೆ. ಕೂಡ್ಲಿಗಿ ತಾಲೂಕು ಜಿಲ್ಲೆಯಲ್ಲಿ ಅತಿ ಹೆಚ್ಚು ಒಣಭೂಮಿ ಪ್ರದೇಶವನ್ನು ಹೊಂದಿದ್ದು, ಜಿಲ್ಲೆಯ ಹಿಂದುಳಿದ ತಾಲೂಕುಗಳಲ್ಲಿ ಒಂದಾಗಿದೆ. ಹಾಗಾಗಿ ಜಿಲ್ಲೆಯ ನೀರಾವರಿ ಮತ್ತು ಒಣಭೂಮಿ ಪ್ರದೇಶವೆಂದು ವಿಂಗಡಿಸಿ ಅಧ್ಯಯನಕ್ಕೆ ಎರಡು ತಾಲೂಕುಗಳನ್ನು ಆರಿಸಿಕೊಳ್ಳಲಾಗಿದೆ. ಇದೇ ಮಾದರಿಯಲ್ಲಿ ಪ್ರತಿ ತಾಲೂಕಿನಲ್ಲಿ ಎರಡು ಗ್ರಾಮಪಂಚಾಯತಿಗಳನ್ನು ಆಯ್ದುಕೊಳ್ಳಲಾಗಿದೆ. ಹೊಸಪೇಟೆ ತಾಲೂಕು 23 ಗ್ರಾಮ ಪಂಚಾಯತಿಗಳನ್ನು ಹೊಂದಿದ್ದು, ಇದರಲ್ಲಿ ತಾಲೂಕಿಗೆ ಹತ್ತಿರವಿರುವ ನೀರಾವರಿ ಪ್ರದೇಶವಾದ ನಾಗೇನಹಳ್ಳಿ ಗ್ರಾಮಪಂಚಾಯತಿಯನ್ನು ಮತ್ತು ತಾಲೂಕಿಗೆ ದೂರವಿರುವ ಒಣಭೂಮಿ ಪ್ರದೇಶ ಬೈಲುವದ್ದಿಗೆರೆ ಗ್ರಾಮಪಂಚಾಯತಿಯನ್ನು ಆಯ್ಕೆ ಮಾಡಿಕೊಳ್ಳಲಾಗಿದೆ. ಕೂಡ್ಲಿಗಿ ತಾಲೂಕು 33 ಗ್ರಾಮ ಪಂಚಾಯತಿಗಳನ್ನು ಹೊಂದಿದ್ದು, ಈ ತಾಲೂಕು ಸಂಪೂರ್ಣ ಒಣಭೂಮಿ ಪ್ರದೇಶವಾಗಿದೆ. ಆದಕಾರಣ ಹೆಚ್ಚು ಕೆರೆ ನೀರು ಮತ್ತು ಪಂಪ್‌ಸೆಟ್ ಹೊಂದಿರುವ ಹಿರೇಹೆಗ್ಡಾಳ್ ಪಂಚಾಯತಿಯನ್ನು ನೀರಾವರಿ ಪ್ರದೇಶವೆಂದು ಪರಿಗಣಿಸಲಾಗಿದೆ. ಇದು ತಾಲೂಕಿಗೆ ಹತ್ತಿರವಿರುವ ಪ್ರದೇಶ ಕೂಡ ಆಗಿದೆ. ಹಿರೇಹೆಗ್ಡಾಳ್ ಗ್ರಾಮಪಂಚಾಯತಿಯನ್ನು ಮತ್ತು ತಾಲೂಕಿಗೆ ದೂರವಿರುವ ಒಣಭೂಮಿ ಪ್ರದೇಶವಾದ ಉಜ್ಜಿನಿ ಗ್ರಾಮಪಂಚಾಯತಿಯನ್ನು ಆಯ್ಕೆ ಮಾಡಿಕೊಳ್ಳಲಾಗಿದೆ. ಅಧ್ಯಯನಕ್ಕೆ ಆಯ್ಕೆ ಮಾಡಿಕೊಂಡ ನಾಲ್ಕು ಗ್ರಾಮಪಂಚಾಯತಿಗಳು ಬೇರೆ ಬೇರೆ ಅಂಶಗಳಿಂದ ಭಿನ್ನವಾಗಿವೆ. ಆದ್ದರಿಂದ ಇದೊಂದು ಸ್ಪಷ್ಟವಾದ ತುಲನಾತ್ಮಕವಾದ ಅಧ್ಯಯನವಾಗಿದೆ. ಪ್ರತಿ ಪಂಚಾಯತಿಯ ಎಲ್ಲಾ ಚುನಾಯಿತ ಪ್ರತಿನಿಧಿಗಳನ್ನು ಮತ್ತು ಗ್ರಾಮಪಂಚಾಯತಿಯ ಒಟ್ಟು ಕುಟುಂಬಗಳಲ್ಲಿ ಶೇ.10ರಷ್ಟು ಕುಟುಂಬಗಳನ್ನು ಸಂದರ್ಶಿಸಲಾಗಿದೆ. ಇದರಲ್ಲಿ ಜಾತಿವಾರು ಮತ್ತು ಲಿಂಗವಾರು ಮಾದರಿ ಬರುವಂತೆ ಆಯ್ಕೆ ಮಾಡಲಾಗಿದೆ. ಒಟ್ಟು ಅಧ್ಯಯನಕ್ಕೆ ನಾಲ್ಕು ಪಂಚಾಯಿತಿಗಳಿಂದ 55 ಜನ ಪಂಚಾಯತ್ ಸದಸ್ಯರು ಮತ್ತು 480 ಕುಟುಂಬಗಳನ್ನು ಸಂದರ್ಶಿಸಿ ಅಭಿಪ್ರಾಯಗಳನ್ನು ಸಂಗ್ರಹಿಸಲಾಗಿದೆ.

ಈ ರೀತಿಯಲ್ಲಿ ಸಂಗ್ರಹಿಸಿದ ಮಾಹಿತಿಯನ್ನು ವಿವರಣಾತ್ಮಕ ವಿಧಾನದಲ್ಲಿ ಬಳಸಲಾಗಿದೆ. ಪಂಚಾಯತಿಯ ಕಾರ್ಯಕ್ಷಮತೆಗೆ ಸಂಬಂಧಿಸಿದ ಅಂಕಿ-ಅಂಶಗಳನ್ನು ಬಳಸಿಕೊಂಡು ಕಾರ್ಯಕ್ಷಮತೆಯನ್ನು ಅಳೆಯಲು

ಒಂದು ಸರಳ ಸೂಚ್ಯಂಕವನ್ನು ತಯಾರಿಸಲಾಗಿದೆ. ಮೂಲಭೂತ ಸೌಲಭ್ಯಗಳಾದ ನೀರು, ವಸತಿ, ಗ್ರಾಮೀಣ ನೈರ್ಮಲ್ಯ, ಜವಾಹರ್ ಗ್ರಾಮಸಮೃದ್ಧಿ ಯೋಜನೆ ಜಾರಿ ಮತ್ತು ಶಿಕ್ಷಣ ಇತ್ಯಾದಿಗಳಿಗೆ ಸಂಬಂಧಿಸಿದ ಅಂಕಿ-ಅಂಶಗಳನ್ನು ಆಧಾರಿಸಿ ಆ ಸೂಚ್ಯಂಕವಿದೆ. ಸರಕಾರ ನಿಗಧಿಪಡಿಸಿದ ಮಾನದಂಡವನ್ನು ಆಧಾರವಾಗಿ ಇಟ್ಟುಕೊಂಡು ಇಲ್ಲಿ ಅಂಕಗಳನ್ನು ಕೊಡಲಾಗಿದೆ. ಮೇಲಿನ ಸೌಲಭ್ಯಗಳ ಪೂರೈಕೆಯಲ್ಲಿ ಸರಕಾರ ನಿಗದಿಪಡಿಸಿದ ಮಟ್ಟಕ್ಕೆ ಸಮ ಅಥವಾ ಅದಕ್ಕಿಂತ ಹೆಚ್ಚಿನ ಸಾಧನೆಯನ್ನು ಮಾಡಿದ ಪಂಚಾಯತ್ ಹೆಚ್ಚು ಅಂಕ ಪಡೆದರೆ, ಸಾಧನೆ ಕಡಿಮೆಯಾದಂತೆ ಪಂಚಾಯತ್ ಪಡೆಯುವ ಅಂಕ ಕಡಿಮೆ ಆಗುತ್ತಾ ಹೋಗುತ್ತದೆ. ಆದೇ ರೀತಿ ಪಂಚಾಯತಿಯ ಕಾರ್ಯಕ್ಷಮತೆಯು ಎರಡು ವಿಚಾರಗಳಿಂದ ನಿರ್ಧರಿಸಲ್ಪಡುತ್ತದೆ ಎಂದು ಗ್ರಹಿಸಲಾಗಿದೆ. ಒಂದು, ಪಂಚಾಯತಿ ವ್ಯವಸ್ಥೆಯ ಆಂತರಿಕ ಅಂಶಗಳು. ಇಲ್ಲಿ ಗ್ರಾಮಸಭೆ, ತೆರಿಗೆ ಸಂಗ್ರಹ, ಪಂಚಾಯತ್‌ನ ವಿವಿಧ ಸ್ತರಗಳ (ತಾಲ್ಲೂಕು ಮತ್ತು ಜಿಲ್ಲಾ ಪಂಚಾಯತ್) ಪಾತ್ರ, ಪ್ರತಿನಿಧಿಗಳ ಮತ್ತು ಅವರ ಊರವರ ಅರಿವು ಮತ್ತು ಭಾಗವಹಿಸುವಿಕೆ ಇತ್ಯಾದಿಗಳು ಪಂಚಾಯತಿಯ ಆಂತರಿಕ ಅಂಶಗಳೆಂದು ಪಟ್ಟಿಮಾಡಲಾಗಿದೆ. ಇವುಗಳ ಕಾರ್ಯನಿರ್ವಹಣೆಯನ್ನು ಆಧಾರವಾಗಿಟ್ಟುಕೊಂಡು ಅಧ್ಯಯನಕ್ಕೆ ಆರಿಸಿಕೊಂಡ ಪಂಚಾಯತಿಗಳಿಗೆ ಅಂಕಗಳನ್ನು ಕೊಡಲಾಗಿದೆ. ಮೇಲಿನ ಎಲ್ಲಾ ಅಂಶಗಳಲ್ಲೂ ಉತ್ತಮ ನಿರ್ವಹಣೆಯನ್ನು ತೋರಿದ ಪಂಚಾಯತಿ ಹೆಚ್ಚು ಅಂಕಗಳಿಸಿದರೆ, ನಿರ್ವಹಣೆ ಕಳಪೆ ಇರುವ ಪಂಚಾಯತಿ ಕಡಿಮೆ ಅಂಕ ಪಡೆಯುತ್ತದೆ. ಎರಡು, ಬಾಹ್ಯ ಅಂಶಗಳು. ಅಂದರೆ ಪಂಚಾಯತಿ ಕಾರ್ಯನಿರ್ವಹಿಸುವ ಸಾಮಾಜಿಕ ಹಾಗು ಆರ್ಥಿಕ ಪರಿಸರ. ಪಂಚಾಯತಿಯ ಕಾರ್ಯಕ್ಷಮತೆ ಸೂಚ್ಯಂಕ ಮತ್ತು ಅದರ ಆಂತರಿಕ ಅಂಶಗಳ ಸೂಚ್ಯಂಕವನ್ನು ಹೋಲಿಸಿ ನೋಡಲಾಗಿದೆ. ಅವುಗಳಿಗೆ ನೇರ ಸಂಬಂಧ ಇದ್ದಲ್ಲಿ - ಒಂದು ಹೆಚ್ಚಿದ್ದರೆ ಮತ್ತೊಂದು ಹೆಚ್ಚು ಇರುವುದು - ಪಂಚಾಯತ್‌ನ ಕಾರ್ಯಕ್ಷಮತೆ ಅದರ ಆಂತರಿಕ ಅಂಶಗಳಿಂದ ಪ್ರಭಾವಿತವಾಗಿದೆ ಎನ್ನುವ ತೀರ್ಮಾನಕ್ಕೆ ಬರಲಾಗಿದೆ. ಅವರೆಡಕ್ಕೆ ನೇರ ಸಂಬಂಧ ಇಲ್ಲದಿದ್ದ ಪ್ರಸಂಗಗಳಲ್ಲಿ ಬಾಹ್ಯ ಅಂಶಗಳು ಪಂಚಾಯತಿಯ ಕಾರ್ಯಕ್ಷಮತೆಯನ್ನು ನಿರ್ಧರಿಸುತ್ತವೆ ಎನ್ನುವ ತೀರ್ಮಾನಕ್ಕೆ ಬರಲಾಗಿದೆ.

## ಅಧ್ಯಯನದ ಮಿತಿಗಳು

ಪ್ರಸ್ತುತ ಅಧ್ಯಯನಕ್ಕೆ ಕೆಲವು ಮಿತಿಗಳಿವೆ. ಅಧ್ಯಯನದಲ್ಲಿ ಹೆಚ್ಚು ಎಂಪಿರಿಕಲ್ ಅಂಶಗಳಿಗೆ ಮಹತ್ವ ಕೊಡಲಾಗಿದೆ. ಅಂಕಿ-ಅಂಶಗಳ ಮತ್ತು ಮಾಹಿತಿ ಸಂಗ್ರಹಣೆಯ ಮೂಲಕ ಫಲಿತಗಳನ್ನು ಕಂಡುಕೊಳ್ಳಲಾಗಿದೆ. ಕೆಲವು ಅಂಕಿ-ಅಂಶಗಳ ಕೊರತೆಯನ್ನು ಅಧ್ಯಯನದಲ್ಲಿ ಕಾಣಬಹುದು. ಜಾತಿವಾರು ಜನಸಂಖ್ಯೆ, ಗ್ರಾಮಸಭೆಯನ್ನು ನಡೆಸಿರುವ ಬಗ್ಗೆ ಸರಿಯಾದ ದಾಖಲೆಗಳಿಲ್ಲ, ಯೋಜನೆಯ ಪಲಾನುಭವಿಗಳ ಪಟ್ಟಿ ಮತ್ತು ಆರೋಗ್ಯಕ್ಕೆ ಸಂಬಂಧಪಟ್ಟ ಅಂಕಿ-ಅಂಶಗಳ ಕೊರತೆಯನ್ನು ಕಾಣಬಹುದು. ಗ್ರಾಮಪಂಚಾಯಿತಿಗಳಲ್ಲಿ ಲಭ್ಯವಿರುವ ಅಗತ್ಯ ಮಾಹಿತಿಗಳನ್ನು ಅಧ್ಯಯನಕ್ಕೆ ಬಳಸಿಕೊಳ್ಳಲಾಗಿದೆ. ತಳಮಟ್ಟದಲ್ಲಿ ಗ್ರಾಮಪಂಚಾಯಿತಿಗಳ ಕಾರ್ಯಕ್ಷಮತೆಯನ್ನು ಸಂಪೂರ್ಣವಾಗಿ ಗುರುತಿಸಲು ಪ್ರಯತ್ನಿಸಲಾಗಿದೆ. ಇದೊಂದು ತುಲನಾತ್ಮಕ ಅಧ್ಯಯನವಾಗಿದೆ. ಈ ಅಧ್ಯಯನವು ಸೂಕ್ಷ್ಮ ಮತ್ತು ಆಳವಾದ ಅಧ್ಯಯನವಾಗಿದ್ದರಿಂದ ಜಿಲ್ಲೆಯ ನಾಲ್ಕು ಗ್ರಾಮಪಂಚಾಯತಿಗಳಿಗೆ ಅಧ್ಯಯನವನ್ನು ಸೀಮಿತಗೊಳಿಸಲಾಗಿದೆ. ಇದು ಈ ಅಧ್ಯಯನದ ಮಿತಿಯು ಸಹ ಆಗಿದೆ.

## ಅಧ್ಯಾಯಗಳ ವಿನ್ಯಾಸ

ಸಂಶೋಧನಾ ಮಹಾಪ್ರಬಂಧವು ಒಟ್ಟು ಆರು ಅಧ್ಯಾಯಗಳನ್ನು ಒಳಗೊಂಡಿದೆ. ಅವುಗಳನ್ನು ಈ ಕೆಳಗಿನಂತೆ ರಚಿಸಲಾಗಿದೆ. ಪ್ರಸ್ತಾವನೆಯಲ್ಲಿ ಅಧ್ಯಯನದ ಉದ್ದೇಶ, ವಿಧಾನ, ಮಿತಿಗಳು ಮತ್ತು ಅಧ್ಯಾಯಗಳ ವಿನ್ಯಾಸ, ಇತ್ಯಾದಿಗಳನ್ನು ವಿವರಿಸಲಾಗಿದೆ.

ಅಧ್ಯಾಯ ಒಂದು - ಈ ಅಧ್ಯಾಯದಲ್ಲಿ ಸ್ವಾತಂತ್ರ್ಯಾನಂತರ ನಡೆದ ಅಭಿವೃದ್ಧಿಯ ಸ್ಥೂಲ ಚಿತ್ರಣವನ್ನು ಕೊಡಲಾಗಿದೆ. ಮೂಲಭೂತ ಸಾಮಾಜಿಕ ಪರಿವರ್ತನೆಗಾಗಿ ಕೈಗೊಂಡ ಅಭಿವೃದ್ಧಿ ಕಾರ್ಯಕ್ರಮಗಳ ಜಾರಿ ಮತ್ತು ವಿಫಲತೆ, ಅದಕ್ಕಾಗಿ ವಿಕೇಂದ್ರೀಕರಣ ಹೇಗೆ ಮುಂಚೂಣಿಗೆ ಬಂತು, ಕಾಲಕಾಲಕ್ಕೆ ಪಂಚಾಯತಿ ವ್ಯವಸ್ಥೆ ಪಡೆದುಕೊಂಡ ರೂಪಗಳೇನು, ವಿವಿಧ ಸಮಿತಿಗಳ ಸಲಹೆ ಮತ್ತು ಶಿಫಾರಸ್ಸು ಇತ್ಯಾದಿ ವಿವರಗಳನ್ನು ಈ ಅಧ್ಯಾಯದಲ್ಲಿ ಕಾಣಬಹುದು. ವಿವಿಧ ಪಂಚಾಯತ್ ಕಾಯ್ದೆಗಳು ಮತ್ತು ಅವುಗಳು ತಳಮಟ್ಟದ ಅಭಿವೃದ್ಧಿಯಲ್ಲಿ ವಹಿಸಿದ ಪಾತ್ರವನ್ನು ಇಲ್ಲಿ ವಿವರಿಸಲಾಗಿದೆ.

ಅಧ್ಯಾಯ ಎರಡು - ಅಧ್ಯಯನದ ಕ್ಷೇತ್ರ ಪರಿಚಯವನ್ನು ಈ ಅಧ್ಯಾಯದಲ್ಲಿ ಮಾಡಲಾಗಿದೆ. ಜಿಲ್ಲೆ, ತಾಲೂಕು ಮತ್ತು ಗ್ರಾಮಪಂಚಾಯತಿಗಳ ಸಾಮಾಜಿಕ ಮತ್ತು ಆರ್ಥಿಕ ವಿವರಗಳನ್ನು ಅಂಕಿ-ಅಂಶಗಳ ಮೂಲಕ ವಿಶ್ಲೇಷಿಸಿ, ಅಧ್ಯಯನ ಆಯ್ಕೆಯ ಮಾದರಿಯನ್ನು ತಿಳಿಸಲಾಗಿದೆ. ಪಂಚಾಯತಿ ವ್ಯಾಪ್ತಿಯಲ್ಲಿ ಬರುವ ಗ್ರಾಮಗಳ ವಿವರಣೆ, ಜನಸಂಖ್ಯೆ, ಸಾಕ್ಷರತೆ, ಬದುಕು, ಕುಟುಂಬಗಳ ಸಂಖ್ಯೆ, ಬಡತನ ರೇಖೆ ಕೆಳಗಿರುವ ಕುಟುಂಬಗಳು ಇತ್ಯಾದಿ ವಿವರಗಳನ್ನು ಅಂಕಿ-ಅಂಶಗಳ ಮೂಲಕ ಚರ್ಚಿಸಲಾಗಿದೆ.

ಅಧ್ಯಾಯ ಮೂರು - ಈ ಅಧ್ಯಾಯದಲ್ಲಿ ಕುಡಿಯುವ ನೀರು ಮತ್ತು ನೈರ್ಮಲ್ಯೀಕರಣ ಕಾರ್ಯಕ್ರಮಗಳ ಅನುಷ್ಠಾನ, ವಿತರಣೆ ಮತ್ತು ನಿರ್ವಹಣೆಯನ್ನು ಗ್ರಾಮಪಂಚಾಯತಿಯು ಯಾವ ರೀತಿ ಕೈಗೊಂಡಿದೆ ಎಂಬುದನ್ನು ಅಂಕಿ-ಅಂಶಗಳ ಮೂಲಕ ವಿಶ್ಲೇಷಣೆ ಮಾಡಲಾಗಿದೆ.

ಅಧ್ಯಾಯ ನಾಲ್ಕು - ಈ ಅಧ್ಯಾಯದಲ್ಲಿ ಗ್ರಾಮಪಂಚಾಯಿತಿಯು ವಸತಿ ಯೋಜನೆಗಳ ಮನೆಗಳನ್ನು ಹೇಗೆ ವಿತರಿಸಿದೆ, ಶಿಕ್ಷಣದ ನಿರ್ವಹಣೆಯನ್ನು ಹೇಗೆ ನಿರ್ವಹಿಸಿದೆ ಮತ್ತು ಬಡತನ ನಿರ್ಮೂಲನಾ ಕಾರ್ಯಕ್ರಮಗಳನ್ನು ಹೇಗೆ ಅನುಷ್ಠಾನಗೊಳಿಸಿದೆ ಎಂಬುದನ್ನು ವಿವರಿಸಲಾಗಿದೆ.

ಅಧ್ಯಾಯ ಐದು - ಈ ಅಧ್ಯಾಯದಲ್ಲಿ ಗ್ರಾಮಪಂಚಾಯತಿಯು ತನಗೆ ವಹಿಸಿರುವ ಪ್ರಕಾರ್ಯಗಳನ್ನು ಯಾವ ರೀತಿ ನಿರ್ವಹಿಸಿದೆ ಎಂಬುದನ್ನು ಕೆಲವು ಸೂಚ್ಯಂಕಗಳ ಮೂಲಕ ಗುರುತಿಸಲು ಪ್ರಯತ್ನಿಸಲಾಗಿದೆ. ಕಾರ್ಯಕ್ಷಮತೆಯನ್ನು ಮಾಪನ ಮಾಡಲು ಮುಖ್ಯ ಎರಡು ಸೂಚ್ಯಂಕಗಳನ್ನು ಇಲ್ಲಿ ಬಳಸಲಾಗಿದೆ. ಇದರಲ್ಲಿ ಒಂದು ಪಂಚಾಯತಿ ವ್ಯವಸ್ಥೆಗೆ ಸಂಬಂಧಪಟ್ಟಂತೆ ಜಾತಿವಾರು ಪ್ರಾತಿನಿಧ್ಯ, ಗ್ರಾಮಸಭೆ, ತೆರಿಗೆ ಸಂಗ್ರಹ, ಪಂಚಾಯತ್ ವ್ಯವಸ್ಥೆ ಮತ್ತು ಪಕ್ಷ ರಾಜಕೀಯ. ಎರಡನೆಯದಾಗಿ, ಒಟ್ಟು ಪರಿಸರಕ್ಕೆ ಸಂಬಂಧಿಸಿದ್ದು. ಇದರಲ್ಲಿ ಗ್ರಾಮಗಳ ಆರ್ಥಿಕ, ಸಾಮಾಜಿಕ ಅಂಶಗಳು, ತಾಲ್ಲೂಕು ಕೇಂದ್ರಕ್ಕೆ ಇರುವ ದೂರ ಮತ್ತು ಹಣದ ಲಾಭ. ಈ ಅಂಶಗಳ ಮೂಲಕ ಗ್ರಾಮಪಂಚಾಯತಿಯ ಕಾರ್ಯಕ್ಷಮತೆಯನ್ನು

ಗುರುತಿಸಲಾಗಿದೆ. ಹಾಗೆಯೇ ನೀರಾವರಿ ಮತ್ತು ಒಣಭೂಮಿ ಪಂಚಾಯತಿಗಳ ಕಾರ್ಯಕ್ಷಮತೆಯನ್ನು ತೌಲನಿಕವಾಗಿ ಚರ್ಚಿಸಲಾಗಿದೆ. ಒಟ್ಟಾರೆ ಈ ಅಧ್ಯಾಯವು ಗ್ರಾಮಪಂಚಾಯತಿ ಕಾರ್ಯಕ್ಷಮತೆಯನ್ನು ತಿಳಿಸುತ್ತದೆ.

ಕೊನೆಯ ಅಧ್ಯಾಯ - ಅಧ್ಯಯನದ ಸಾರಾಂಶ ಮತ್ತು ಫಲಿತಗಳನ್ನು ಇಲ್ಲಿ ನೀಡಲಾಗಿದೆ. ಜತೆಗೆ ಪಂಚಾಯತ್‌ಗಳ ಕಾರ್ಯಕ್ಷಮತೆಯನ್ನು ಸುಧಾರಿಸಲು ಕೆಲವು ಕ್ರಮಗಳನ್ನು ಕೂಡ ಈ ಅಧ್ಯಾಯದಲ್ಲಿ ಸೂಚಿಸಲಾಗಿದೆ.

## ಅಡಿಟಿಪ್ಪಣಿಗಳು

1. ಬಲವಂತ್‌ರಾಯ್ ಮೆಹ್ತಾ, *ರಿಪೋರ್ಟ್ ಆಫ್ ದಿ ಟೀಮ್ ಫಾರ್ ದಿ ಸ್ಟಡಿ ಆಫ್ ಕಮ್ಯುನಿಟಿ ಪ್ರಾಜೆಕ್ಟ್ ಆ್ಯಂಡ್ ನೇಶನಲ್ ಎಕ್ಸ್‌ಟೆನಶನ್ ಸರ್ವಿಸಸ್,* ನ್ಯೂಡೆಲ್ಲಿ: ವ್ಯಾಲೂಮ್ 1, ಪ್ಲಾನಿಂಗ್ ಕಮೀಷನ್,1959
2. ಅಶೋಕ್ ಮೆಹ್ತಾ, *ರಿಪೋರ್ಟ ಆಫ್ ದಿ ಕಮಿಟಿ ಆನ್ ಪಂಚಾಯತ್ ರಾಜ್ ಇನ್‌ಸ್ಟಿಟ್ಯೂಶನ್ಸ್,* ನ್ಯೂಡೆಲ್ಲಿ: ಮಿನಿಸ್ಟ್ರಿ ಆಫ್ ಅಗ್ರಿಕಲ್ಚರ್ ಆ್ಯಂಡ್ ಇರಿಗೇಷನ್, 1978
3. ಭುವನಹಳ್ಳಿ ನಾಗರಾಜ್, ''ವಿಕೇಂದ್ರೀಕರಣ: ಪಂಚಾಯತ್‌ರಾಜ್ ಸಂಸ್ಥೆಗಳು ನಡೆದು ಬಂದ ದಾರಿ-ಒಂದು ಅವಲೋಕನ'', *ಕರ್ನಾಟಕ ವಿಕಾಸ,* ಸಂಪುಟ-40, ಸಂಚಿಕೆ-2, ಜನವರಿ-2000, ಪುಟ-8-14
4. ಗವರ್ನ್‌ಮೆಂಟ್ ಆಫ್ ಇಂಡಿಯಾ, *ಪಂಚಾಯತ್ ರಾಜ್ ಸ್ಟೇಟಸ್ ರಿಪೋರ್ಟ್-1999,* ನ್ಯೂಡೆಲ್ಲಿ: ರಾಜೀವ್ ಗಾಂಧಿ ಫೌಂಡೇಶನ್, ಮಾರ್ಚ್ 2002, ಪುಟ.5-6
5. ಬಡ್ಡಿ ಎಂ. ಎಂ. *ಕರ್ನಾಟಕ ಪಂಚಾಯತ್‌ರಾಜ್ ಕಾಯಿದೆ- 1993,* ಬೆಂಗಳೂರು: ಕರ್ನಾಟಕ ಸರ್ಕಾರ, 1993

ಸಾಮಾಜಿಕ ಪರಿವರ್ತನೆಗಾಗಿ ಸ್ವತಂತ್ರ ಭಾರತವು ಆಧುನೀಕರಣ ಪ್ರಕ್ರಿಯೆಯನ್ನು ಆರಂಭಿಸಿತು. ಕೃಷಿ, ಕೈಗಾರಿಕೆ ಮತ್ತು ಸೇವಾ ವಲಯದಲ್ಲಿ ಆಧುನಿಕ ತಂತ್ರಜ್ಞಾನ ಮತ್ತು ಸಾಂಸ್ಥಿಕ ವ್ಯವಸ್ಥೆಯ ಅಳವಡಿಸುವಿಕೆ ಈ ಆಧುನೀಕರಣ ಪ್ರಕ್ರಿಯೆಯ ಮುಖ್ಯ ಲಕ್ಷಣಗಳಾಗಿವೆ. ಈ ಕ್ಷೇತ್ರಗಳು ಅಭಿವೃದ್ಧಿ ಹೊಂದಿದರೆ ಸಮಾಜದ ಎಲ್ಲ ವರ್ಗದ ಜನರ ಬದುಕು ಹಸನಾಗುತ್ತದೆ ಎನ್ನುವ ಸರಳ ನಂಬಿಕೆ ಆಧುನೀಕರಣ ಕ್ರಮದ ಹಿಂದೆ ಇತ್ತು. ಆದರೆ ಆ ರೀತಿ ಆಗಲಿಲ್ಲ. ಎಲ್ಲ ವಲಯಗಳು ತಕ್ಕಮಟ್ಟಿನ ಪ್ರಗತಿ ಸಾಧಿಸಿದರೂ ಸಮಾಜದ ಅಂಚಿನಲ್ಲಿದ್ದ ಜನರ ಬದುಕು ವಿಶೇಷವಾಗಿ ಬದಲಾಗಲಿಲ್ಲ. ಈ ಜನರ ಬದುಕಿನ ಸುಧಾರಣೆಗಾಗಿ ಪ್ರತ್ಯೇಕ ವಿಧಾನ ಹಾಗೂ ಪಾಲಿಸಿಗಳ ಅವಶ್ಯಕತೆ ಕಂಡುಬಂತು. ಈ ಉದ್ದೇಶ ಇಟ್ಟುಕೊಂಡು ಜಾರಿಗೆ ಬಂದ ಹಲವಾರು ಪರಿವರ್ತನೆಗಳಲ್ಲಿ ಅಭಿವೃದ್ಧಿ ಆಡಳಿತದ ವಿಕೇಂದ್ರೀಕರಣ ಒಂದು. ಇದು ಬಹು ಪ್ರಮುಖ ಸುಧಾರಣಾ ಅಸ್ತ್ರವಾಗಿ ನಮ್ಮ ಕಣ್ಣ ಮುಂದೆ ಇದೆ. ಈ ಅಧ್ಯಾಯದಲ್ಲಿ ಭಾರತ ಮತ್ತು ಕರ್ನಾಟಕದಲ್ಲಿ ಸ್ವಾತಂತ್ರ್ಯಾನಂತರ ನಡೆದ ವಿಕೇಂದ್ರೀಕರಣ ಪ್ರಕ್ರಿಯೆಯ ವಿವಿಧ ಹಂತಗಳು ಮತ್ತು ಈ ಸುಧಾರಣೆಗಳು ಅಭಿವೃದ್ಧಿಯನ್ನು ತಳಮಟ್ಟಕ್ಕೆ ಒಯ್ಯಲು ಮಾಡಿರುವ ಪ್ರಯತ್ನದ ಕಿರು ಪರಿಚಯವಿದೆ. ವಿಕೇಂದ್ರೀಕರಣ ನಮ್ಮಲ್ಲಿ ನಡೆದು ಬಂದ ಬಗೆಯ ಕಿರು ಪರಿಚಯ ಪ್ರಸ್ತುತ ಪ್ರಬಂಧದ ಮುಖ್ಯ ಉದ್ದೇಶವನ್ನು ಪರೀಕ್ಷಿಸಲು ಹಿನ್ನೆಲೆಯನ್ನು ಒದಗಿಸುತ್ತದೆ.

## 1.1. ಸ್ವಾತಂತ್ರ್ಯಾನಂತರ ಅಭಿವೃದ್ಧಿ

ವಸಾಹತುಶಾಹಿ ಆಡಳಿತದಿಂದ ಮುಕ್ತವಾದ ಭಾರತ ಸಾಮಾಜಿಕ, ಆರ್ಥಿಕ, ಮತ್ತು ರಾಜಕೀಯ ಬದಲಾವಣೆಗಾಗಿ ಮೊದಲು ಪ್ರಯತ್ನಿಸಬೇಕಾಯಿತು. ಅದರಲ್ಲೂ ಗ್ರಾಮೀಣ ಬದುಕಿನ ಸುಧಾರಣೆಗೆ ಕ್ರಮ ಕೈಗೊಳ್ಳುವುದು ಅತ್ಯಂತ ಅವಶ್ಯವಾಗಿತ್ತು. ಯಾಕೆಂದರೆ ಬಹುತೇಕ ಭಾರತೀಯರು ಗ್ರಾಮ ವಾಸಿಗಳಾಗಿದ್ದರು. ಅವರ ಅಭಿವೃದ್ಧಿ ಭಾರತದ ಅಭಿವೃದ್ಧಿ ಎನ್ನುವ ಕನಿಷ್ಠ ತಿಳುವಳಿಕೆ ಅಂದಿನ ನಾಯಕರುಗಳಿಗೆ ಇತ್ತು. ಅದಕ್ಕಾಗಿಯೇ 1948ರಿಂದಲೇ ಕೇಂದ್ರ ಸರ್ಕಾರವು ಗ್ರಾಮೀಣ ಅಭಿವೃದ್ಧಿ ಯೋಜನೆಗಳನ್ನು ಅನುಷ್ಠಾನಗೊಳಿಸಲು ಆರಂಭಿಸಿತು. ಆ ಸಲುವಾಗಿ ಬ್ಲಾಕ್, ಜಿಲ್ಲಾ ಹಾಗೂ ರಾಜ್ಯ ಮಟ್ಟಗಳಲ್ಲಿ ಅಭಿವೃದ್ಧಿ ಸಂಸ್ಥೆಗಳನ್ನು ರಚಿಸಿತು. ಈ ಅಭಿವೃದ್ಧಿ ಸಂಸ್ಥೆಗಳಿಗೆ ಅಧಿಕಾರೇತರ ಪ್ರತಿನಿಧಿಗಳನ್ನು ಮುಖ್ಯಸ್ಥರನ್ನಾಗಿ ನೇಮಿಸಿ ಇವರುಗಳ ಮೂಲಕ ಗ್ರಾಮೀಣ ಅಭಿವೃದ್ಧಿ ಇಲಾಖೆಯು ಕಾರ್ಯನಿರ್ವಹಿಸುವಂತೆ ಅನುವು ಮಾಡಿಕೊಟ್ಟಿತ್ತು.[1] 1952ರಲ್ಲಿ ಪ್ರಾರಂಭವಾದ ಸಮುದಾಯ ಅಭಿವೃದ್ಧಿಯ ಯೋಜನೆಗಳನ್ನು ಈ ದೃಷ್ಟಿಯಿಂದ ನೋಡಬೇಕಾಗಿದೆ. ಈ ಯೋಜನೆಗಳು ಕೆಳಜಾತಿ/ವರ್ಗಗಳ, ಸಾಮಾಜಿಕ, ಆರ್ಥಿಕ, ಹಾಗೂ ರಾಜಕೀಯ ಬದಲಾವಣೆಯನ್ನು ತರುವುದಕ್ಕಾಗಿ ಹಲವಾರು ಅಭಿವೃದ್ಧಿ ಕಾರ್ಯಕ್ರಮಗಳು ಜಾರಿಗೆ ಬಂದವು. 1956ರ ಹೊತ್ತಿಗೆ ಸುಮಾರು 1114 ಬ್ಲಾಕ್‌ಗಳಲ್ಲಿ ಸಮುದಾಯ ಅಭಿವೃದ್ಧಿ ಯೋಜನೆಯನ್ನು ಅನುಷ್ಠಾನಗೊಳಿಸಲಾಯಿತು.[2] ಇದೇ ಅವಧಿಯಲ್ಲಿ ಆರಂಭಗೊಂಡ ಪಂಚವಾರ್ಷಿಕ ಯೋಜನೆಗಳಲ್ಲೂ

ಗ್ರಾಮೀಣ ಅಭಿವೃದ್ಧಿಗೆ ತಕ್ಕಮಟ್ಟಿನ ಪ್ರಾಮುಖ್ಯತೆ ಕೊಡಲಾಯಿತು. ಈ ಯೋಜನೆಗಳ ಮುಖ್ಯ ಉದ್ದೇಶ ಜನತೆಯ ಜೀವನಮಟ್ಟ ಸುಧಾರಣೆ, ಸಾಮಾಜಿಕ ನ್ಯಾಯ ಮತ್ತು ಅಭಿವೃದ್ಧಿ ಕಾರ್ಯಕ್ರಮಗಳನ್ನು ತಳಮಟ್ಟದ ಜನರಿಗೆ ತಲುಪಿಸುವುದು ಆಗಿತ್ತು. ಜಿಲ್ಲೆಯು ಯೋಜನೆಯ ಮುಖ್ಯ ಕೇಂದ್ರವಾಗಿತ್ತು.[3] ಕೇಂದ್ರ ಮತ್ತು ಆಯಾ ರಾಜ್ಯ ಸರ್ಕಾರಗಳು ಜಿಲ್ಲೆಗಳಿಗೆ ನೇರವಾಗಿ ಸಂಪನ್ಮೂಲಗಳನ್ನು ಒದಗಿಸುತ್ತಿದ್ದವು. ಗ್ರಾಮೀಣ ಸಮುದಾಯಗಳ ಅಭಿವೃದ್ಧಿಯನ್ನು ಕೈಗೊಳ್ಳುವ ಕೆಲಸವನ್ನು ಕೆಲವು ಸಂಸ್ಥೆಗಳಿಗೆ ವಹಿಸಿಕೊಡಲಾಗಿತ್ತು. ಜನತೆಯ ಮೂಲಭೂತ ಅವಶ್ಯಕತೆಗಳಾದ ಶಿಕ್ಷಣ, ಆರೋಗ್ಯ, ರಸ್ತೆಗಳ ನಿರ್ಮಾಣ ಮುಂತಾದ ನಾಗರೀಕ ಸೌಲಭ್ಯಗಳ ಕಡೆಗೆ ಕಾಳಜಿವಹಿಸಲಾಗಿತ್ತು. ಈ ಎಲ್ಲಾ ಅಂಶಗಳ ಕಡೆಗೆ ಮೊದಲನೆಯ ಪಂಚವಾರ್ಷಿಕ ಯೋಜನೆಯಲ್ಲಿ ಗಮನಹರಿಸಲಾಗಿತ್ತು.[4] ಹೀಗೆ ಸ್ವಾತಂತ್ರ್ಯ ನಂತರದಲ್ಲಿ ಗ್ರಾಮೀಣಾಭಿವೃದ್ಧಿ ಯೋಜನೆಗಳಿಗೆ ಹೆಚ್ಚು ಒತ್ತು ಕೊಡಲಾಯಿತು.

ಇದು ಒಂದು ವಿಧದಲ್ಲಿ ಮಹಾತ್ಮ ಗಾಂಧಿ ಅವರು ಸಂವಿಧಾನ ರಚನೆಯ ಸಂದರ್ಭದಲ್ಲಿ ಗ್ರಾಮಸ್ವರಾಜ್ಯದ ಬಗ್ಗೆ ಒತ್ತಿ ಹೇಳಿದ್ದರ ಪರಿಣಾಮವೂ ಇರಬಹುದು. ಭಾರತವು ಗ್ರಾಮ ಪ್ರಧಾನವಾದ ರಾಷ್ಟ್ರವಾದ್ದರಿಂದ ಅವರು ಗ್ರಾಮಸ್ವರಾಜ್ಯ ಎಂಬ ಕಲ್ಪನೆಯನ್ನು ರೂಪಿಸಿದರು. ಗಾಂಧೀಜಿಯವರ ಪ್ರಕಾರ ಗ್ರಾಮಗಳು ಸ್ವಾವಲಂಬಿಯಾಗಬೇಕಾದರೆ ಚುನಾಯಿತ ಸಂಸ್ಥೆಗಳ ಮೂಲಕ ಅವು ಸ್ವಯಂ ಅಧಿಕಾರವನ್ನು ಪಡೆಯಬೇಕು.[5] ಆದರೆ ಅದೇ ಸಂದರ್ಭದಲ್ಲಿ ಸಂವಿಧಾನದ ಕರಡು ಸಮಿತಿ ಪ್ರತಿ ರಚಿಸುವಾಗ ಡಾ. ಬಿ. ಆರ್. ಅಂಬೇಡ್ಕರವರು ಉದ್ದೇಶಪೂರ್ವಕವಾಗಿ ಗ್ರಾಮಸ್ವರಾಜ್ಯದ ಬಗ್ಗೆ ಪ್ರಸ್ತಾಪಿಸಿರಲಿಲ್ಲ ಎನ್ನುವುದನ್ನು ಕೂಡ ಗಮನಿಸಬೇಕಾಗಿದೆ. ಕಾರಣ ಅಂದಿನ ಸಾಮಾಜಿಕ ವ್ಯವಸ್ಥೆಯಲ್ಲಿ ಜಮೀನ್ದಾರರ, ಸ್ಥಳೀಯ ಮೇಲ್ವರ್ಗದವರ ಕೈಯಲ್ಲಿ ಸ್ಥಳೀಯ ಆಡಳಿತ ಕೇಂದ್ರೀಕೃತ ಗೊಂಡಿತ್ತು. ಅಂತಹ ಪರಿಸರದಲ್ಲಿ ಗ್ರಾಮಸ್ವರಾಜ್ಯವನ್ನು ಜಾರಿಗೆ ತಂದರೆ ಆ ವರ್ಗಗಳು ಅಧಿಕಾರದ ಲಾಭವನ್ನು ಹೆಚ್ಚು ಪಡೆಯುತ್ತವೆ. ಗ್ರಾಮದಲ್ಲಿನ ದುರ್ಬಲರು, ಕೆಳಜಾತಿಗಳು ಇನ್ನೂ ಶೋಷಣೆಗೆ ಒಳಗಾಗುತ್ತವೆ ಎಂದು ಅಂಬೇಡ್ಕರ್ ಗ್ರಹಿಸಿದ್ದರು.[6] ಆದಾಗ್ಯೂ ಗಾಂಧೀಜಿಯವರನ್ನು ಸಮಾಧಾನ ಪಡಿಸಲೋ ಎಂಬಂತೆ ಗ್ರಾಮ ಸ್ವರಾಜ್ಯವನ್ನು ಸಂವಿಧಾನದಲ್ಲಿ ಸೇರಿಸಲಾಯಿತು. ಸಂವಿಧಾನದ ನಾಲ್ಕನೇ ಭಾಗದ ರಾಜ್ಯ ನಿರ್ದೇಶಕ ತತ್ವಗಳ 40ನೇ ವಿಧಿಯಲ್ಲಿ ಗ್ರಾಮ ಸ್ವರಾಜ್ಯ ಸಂವಿಧಾನದಲ್ಲಿ ಸೇರಿದೆ. ಗ್ರಾಮಸ್ವರಾಜ್ಯವನ್ನು ಜಾರಿಗೊಳಿಸುವ ಜವಾಬ್ದಾರಿಯನ್ನು ಆಯಾಯ ರಾಜ್ಯಗಳಿಗೆ ವಹಿಸಲಾಗಿತ್ತು. ಪ್ರತಿ ರಾಜ್ಯವು ಸ್ಥಳೀಯ ಸಂಸ್ಥೆಗಳನ್ನು ಸಂಘಟಿಸಿ ಇದರ ಮೂಲಕ ಸ್ಥಳೀಯ ಆಡಳಿತ ನಡೆಸಲು ಅವಶ್ಯಕವಾದ ಅಧಿಕಾರವನ್ನು ನೀಡಬೇಕೆಂದು ಹೇಳಲಾಯಿತು.[7] ಹೀಗೆ ಸ್ವಾತಂತ್ರ್ಯಾನಂತರ ಗ್ರಾಮಸ್ವರಾಜ್ಯವನ್ನು ಸಂವಿಧಾನದಲ್ಲಿ ಸೇರಿಸಲಾಯಿತು.

## 1.2. ಅಭಿವೃದ್ಧಿ ಮತ್ತು ವಿಕೇಂದ್ರೀಕರಣ

ಸ್ಥಳೀಯ ಸಂಸ್ಥೆಗಳ ಸ್ಥಾಪನೆ ಬಗ್ಗೆ ಸಂವಿಧಾನದಲ್ಲಿ ಸೇರಿಸಿದ್ದರೂ ಅವುಗಳು ಸರಿಯಾದ ರೀತಿಯಲ್ಲಿ ಸ್ಥಾಪಿತವಾಗಲಿಲ್ಲ. ಅಭಿವೃದ್ಧಿ ಯೋಜನೆಗಳು ಆರಂಭಗೊಂಡರೂ ಅವುಗಳು ಈ ಸಂಸ್ಥೆಗಳ ಮೂಲಕ ಜಾರಿ ಆಗಲಿಲ್ಲ. ಬ್ಲಾಕ್ ಮಟ್ಟದಲ್ಲಿ ಸಮುದಾಯ ಅಭಿವೃದ್ಧಿ ಯೋಜನೆಗಳನ್ನು ಜಾರಿಗೆ ತಂದರೂ ಸಹ

ಅದಕ್ಕೆ ಸರಿಯಾದ ಸಾಂಸ್ಥಿಕ ಚೌಕಟ್ಟು ಇರಲಿಲ್ಲ. ಹೀಗೆ ಸ್ವಾತಂತ್ರ್ಯಾನಂತರ ಹಲವಾರು ಅಭಿವೃದ್ಧಿ ಯೋಜನೆಗಳನ್ನು ಜಾರಿಗೆ ತಂದರು ಅವುಗಳು ನಿರೀಕ್ಷಿತ ಗುರಿಯನ್ನು ತಲುಪಲಿಲ್ಲ. ಯೋಜನೆಗಳ ವಿಫಲತೆಗೆ ಕಾರಣಗಳನ್ನು ಗುರುತಿಸಲು ಹಲವಾರು ಪ್ರಯತ್ನಗಳು ನಡೆದವು. ಅಭಿವೃದ್ಧಿ ವಿಫಲತೆಯ ಕಾರಣಗಳನ್ನು ಪಟ್ಟಿ ಮಾಡಿ ಅವುಗಳ ಸುಧಾರಣೆಗೆ ಸಲಹೆಗಳು ಬಂದವು. ಅಭಿವೃದ್ಧಿಯ ಫಲಗಳು ಉದ್ದೇಶಿತ ವರ್ಗಕ್ಕೆ ತಲುಪದೇ ಇರುವುದಕ್ಕೆ ಮುಖ್ಯ ಕಾರಣ ಗ್ರಾಮದ ಆಡಳಿತ ಊಳಿಗಮಾನ್ಯ ಲಕ್ಷಣಗಳಿಂದ ತುಂಬಿರುವುದು. ಆ ಕಾರಣದಿಂದಲೇ ಅಭಿವೃದ್ಧಿಯ ಸಿಂಹಪಾಲನ್ನು ಸ್ಥಳೀಯ ಮೇಲ್ವರ್ಗಗಳು ಪಡದುಕೊಂಡಿದ್ದವು. ಎಲ್ಲ ವರ್ಗದ ಜನರಿಗೆ ಅಭಿವೃದ್ಧಿ ಲಾಭ ತಲುಪಬೇಕಾದರೆ ಅಭಿವೃದ್ಧಿ ಯೋಜನೆಗಳ ವಿತರಣೆಗಾಗಿ ಸಾಂಸ್ಥಿಕ ರಚನೆಗಳನ್ನು ಸ್ಥಾಪಿಸಬೇಕು.[8] ಅದರಲ್ಲಿ ಎಲ್ಲಾ ವರ್ಗದ ಜನತೆಗೆ ಪ್ರಾತಿನಿಧ್ಯವನ್ನು ಒದಗಿಸಬೇಕು ಎಂಬ ಒಲುವು ಬಲಗೊಂಡಿತು. ಗ್ರಾಮೀಣ ಮಟ್ಟದಲ್ಲಿ ಸಾಂಸ್ಥಿಕ ರಚನೆಗಳನ್ನು ಸ್ಥಾಪಿಸುವ ದೃಷ್ಟಿಯಿಂದ ಮೂರುಹಂತದ ಪಂಚಾಯತ್‌ರಾಜ್ ವ್ಯವಸ್ಥೆಯನ್ನು ಜಾರಿಗೊಳಿ ಸುವ ಪ್ರಯತ್ನಗಳು ನಡೆದವು.

ಹೀಗೆ ಒಂದು ಕಡೆಯಿಂದ ಅಭಿವೃದ್ಧಿ ಯೋಜನೆಗಳನ್ನು ವಿಸ್ತೃತಗೊಳಿಸುವ ಪ್ರಯತ್ನಗಳು ನಡೆದರೆ ಇನ್ನೊಂದು ಕಡೆ ಪ್ರಜಾಪ್ರಭುತ್ವವಾದಿ ವಿಕೇಂದ್ರೀಕರಣದ ಮೂಲಕ ಅದನ್ನು ತಳಮಟ್ಟಕ್ಕೆ ತಲುಪಿಸುವ ಪ್ರಯತ್ನವನ್ನು ನಡೆಸಲಾಯಿತು. ಸ್ಥಳೀಯ ಸಂಸ್ಥೆಗಳನ್ನು ಸ್ವಾಯತ್ತ ಸಂಸ್ಥೆಗಳನ್ನಾಗಿ ಮಾಡಿ ಈ ಸಂಸ್ಥೆಗಳ ಮೂಲಕ ಅಭಿವೃದ್ಧಿ ಕಾರ್ಯಕ್ರಮಗಳನ್ನು ಜನರಿಗೆ ತಲುಪಿಸಲು ಪ್ರಯತ್ನಿಸಲಾಯಿತು. ಆದರೆ ವಸಹಾತುಶಾಹಿ ಆಡಳಿತದಿಂದ ಮುಕ್ತಿ ಹೊಂದಿದ್ದರೂ ಸಹ ಬ್ರಿಟೀಷ್ ಸಾಮ್ರಾಜ್ಯಶಾಹಿಯು ಉಳಿಸಿ ಹೋಗಿದ್ದ ಊಳಿಗಮಾನ್ಯ ಲಕ್ಷಣಗಳು ಗ್ರಾಮಗಳಲ್ಲಿ ಇನ್ನೂ ಗಟ್ಟಿಯಾಗಿ ಉಳಿದುಕೊಂಡಿದ್ದವು. ಸ್ಥಳೀಯ ಸಂಸ್ಥೆಗಳ ಆಡಳಿತಕ್ಕೆ ಒಂದು ಚೌಕಟ್ಟನ್ನು ಸರ್ಕಾರ ಒದಗಿಸಿದ್ದರೂ ಸಹ ಎಲ್ಲಾ ವರ್ಗದ ಜನರ ಪ್ರಾತಿನಿಧ್ಯ ಅದರಲ್ಲಿ ಇರಲಿಲ್ಲ. ಸಮುದಾಯ ಅಭಿವೃದ್ಧಿ ಕಾರ್ಯಕ್ರಮ ಜನತೆಯನ್ನು ಅಭಿವೃದ್ಧಿ ಪ್ರಯತ್ನದಲ್ಲಿ ಅಳವಡಿಸುವ ತನ್ನ ಮುಖ್ಯವಾದ ನಿರೀಕ್ಷಿತ ಗುರಿಯನ್ನು ಸಾಧಿಸಲಿಲ್ಲ. ಇದು ಗ್ರಾಮೀಣ ಜನತೆಯಲ್ಲಿ ನಿರೀಕ್ಷಿತ ಉತ್ಸಾಹ ಮತ್ತು ಅಭಿವೃದ್ಧಿಯನ್ನು ಹುಟ್ಟು ಹಾಕಲಿಲ್ಲ. ಆದಕಾರಣ ಈ ಕಾರ್ಯಕ್ರಮದ ಪುನರಾವಲೋಕನದ ಅವಶ್ಯಕತೆ ಇದೆ ಎಂದು ಕೇಂದ್ರ ಸರ್ಕಾರ ನಿರ್ಧರಿಸಿತು. 1956ರಲ್ಲಿ ರಾಷ್ಟ್ರೀಯ ಯೋಜನಾ ಆಯೋಗವು ಬಲವಂತರಾಯ್ ಮೆಹತಾರವರ ಅಧ್ಯಕ್ಷತೆಯಲ್ಲಿ ಸಮುದಾಯ ಅಭಿವೃದ್ಧಿ ಯೋಜನೆಯನ್ನು ಮತ್ತು ರಾಷ್ಟ್ರೀಯ ವಿಸ್ತರಣಾ ಯೋಜನೆಯನ್ನು ಪುನರ್‌ವಿಮರ್ಶಿಸಲು ಅಧ್ಯಯನ ಸಮಿತಿಯೊಂದನ್ನು ನೇಮಿಸಿತು.[9] ಈ ಸಮಿತಿಯು ರಾಷ್ಟ್ರ ವ್ಯಾಪ್ತಿ ಅಧ್ಯಯನ ನಡೆಸಿ ತನ್ನ ವರದಿಯಲ್ಲಿ ಯೋಜನೆಗಳು ರಾಜ್ಯಮಟ್ಟದಲ್ಲಿ ರೂಪುಗೊಳ್ಳುತ್ತಿರುವುದರಿಂದ ಅವಾಸ್ತವ ಗುರಿಗಳನ್ನು ಹೊಂದಿವೆ. ಸ್ಥಳೀಯ ಸಂಸ್ಥೆಗಳು ಅಭಿವೃದ್ಧಿ ಹೊಂದದೇ ಇರುವುದಕ್ಕೆ ಮುಖ್ಯ ಕಾರಣ ಜವಾಬ್ದಾರಿ ಮತ್ತು ಅಧಿಕಾರಗಳ ವಿಕೇಂದ್ರೀಕರಣವಾಗದೇ ಇರುವುದು, ಅಲ್ಲದೇ ಗ್ರಾಮ ಪಂಚಾಯತಿಗಳ ಸಶಕ್ತೀಕರಣ ಬಗ್ಗೆ ಆಸಕ್ತಿ ವಹಿಸದಿರುವುದು ಎಂದು ಅಭಿಪ್ರಾಯಪಟ್ಟಿತು. ಅಭಿವೃದ್ಧಿಫಲಗಳನ್ನು ಕೆಲವೇ ವರ್ಗಗಳು ಪಡೆದುಕೊಂಡಿದ್ದವು. ಈ ಎಲ್ಲಾ ಅಂಶಗಳನ್ನು ಇಟ್ಟುಕೊಂಡು ಸಮಿತಿ ತನ್ನ ವರದಿಯನ್ನು ಸಲ್ಲಿಸಿತು. ಮೆಹತಾ ಸಮಿತಿಯು ಪ್ರಜಾಸತ್ತಾತ್ಮಕ ವಿಕೇಂದ್ರೀಕರಣ

ಸಿದ್ಧಾಂತಕ್ಕೆ ಪ್ರತಿಸ್ಪಂದಿಸಿ ಪಂಚಾಯತ್‌ರಾಜ್ ವ್ಯವಸ್ಥೆಗೆ ಹೊಸ ರೂಪ ನೀಡಿತು. ಮೂರು ಹಂತದ ಪಂಚಾಯತ್‌ರಾಜ್ ವ್ಯವಸ್ಥೆಗೆ ಶಿಫಾರಸ್ಸು ಮಾಡಿತು.[10] ಸ್ಥಳೀಯ ಜನತೆಯ ಭಾಗವಹಿಸುವಿಕೆಯಲ್ಲಿ ಗ್ರಾಮೀಣ ಮಟ್ಟದ ರಾಜಕೀಯ ಮತ್ತು ಆಡಳಿತ ಪರಿಸರವೇ ಕಾರಣ ಎಂದು ಹೇಳಿ ಪ್ರಮುಖ ಕಾರ್ಯಗಳನ್ನು ಪಟ್ಟಿ ಮಾಡಿತು. ಚುನಾವಣೆಯ ಮೂಲಕ ಈ ಸಂಸ್ಥೆಗಳನ್ನು ಸಂಘಟಿಸಬೇಕೆಂದು ಸಮಿತಿ ಹೇಳಿತು. ಮೆಹತಾ ಸಮಿತಿಯು ಈ ಕೆಳಗಿನ ಬಹು ಮುಖ್ಯವಾದ ಅಂಶಗಳನ್ನು ಜಾರಿಗೆ ತರಲು ಶಿಫಾರಸ್ಸು ಮಾಡಿತು.[11]

1. ಮೂರು ಹಂತದ ಪಂಚಾಯತ್‌ರಾಜ್ ವ್ಯವಸ್ಥೆಯನ್ನು ರಚಿಸಿ, ಈ ಮೂರು ಸ್ತರಗಳು ಒಂದಕ್ಕೊಂದು ಅಂತರ ಮತ್ತು ಅವಿನಾಭಾವ ಸಂಬಂಧ ಹೊಂದಿರಬೇಕು.

2. ಪಂಚಾಯತ್‌ರಾಜ್ ವ್ಯವಸ್ಥೆಯು ಮೂರು ಹಂತದ ಸಂಸ್ಥೆಗಳಿಗೆ ಬೇಕಾಗುವ ಸಂಪನ್ಮೂಲಗಳನ್ನು ಸರ್ಕಾರಗಳು ಒದಗಿಸಬೇಕು.

3. ಅಭಿವೃದ್ಧಿ ಕಾರ್ಯಕ್ರಮಗಳು ಈ ಸಂಸ್ಥೆಗಳ ಮೂಲಕ ಅನುಷ್ಠಾನಗೊಳ್ಳಬೇಕು.

4. ಚುನಾವಣೆಯ ಮೂಲಕ ಈ ಸಂಸ್ಥೆಗಳನ್ನು ಸಂಘಟಿಸಬೇಕು.

5. ಸ್ಥಳೀಯ ಸಂಸ್ಥೆಗಳಿಗೆ ಜವಾಬ್ದಾರಿ ಮತ್ತು ಅಧಿಕಾರಗಳನ್ನು ಒದಗಿಸಬೇಕು.

1959ರಲ್ಲಿ ಈ ಕಾಯ್ದೆಯನ್ನು ರಾಜಸ್ಥಾನ ಮತ್ತು ಆಂದ್ರಪ್ರದೇಶ ರಾಜ್ಯಗಳು ಮೊಟ್ಟಮೊದಲು ಜಾರಿಗೊಳಿಸಿ ಪಂಚಾಯತ್‌ರಾಜ್ ವ್ಯವಸ್ಥೆಯನ್ನು ಜಾರಿಗೆ ತಂದವು. ಉಳಿದ ರಾಜ್ಯಗಳು ಕೇಂದ್ರ ಸರ್ಕಾರ ಸಿದ್ಧಾಂತವನ್ನು ಗಮನದಲ್ಲಿಟ್ಟುಕೊಂಡು ಪಂಚಾಯತ್‌ರಾಜ್ ವ್ಯವಸ್ಥೆಯನ್ನು ಸ್ಥಾಪಿಸಿದವು. ಕರ್ನಾಟಕ ರಾಜ್ಯವು 1959ರಲ್ಲಿ ಬಲವಂತರಾಯ್ ಮೆಹತಾ ಸಮಿತಿಯ ಶಿಫಾರಸ್ಸಿನ ಹಿನ್ನೆಲೆಯಲ್ಲಿ ಪಂಚಾಯತ್ ಕಾಯ್ದೆಯನ್ನು ಜಾರಿಗೆ ತಂದು ವಿಕೇಂದ್ರೀಕರಣ ವ್ಯವಸ್ಥೆಯನ್ನು ಕಾರ್ಯಗತ ಮಾಡಿತು. ಇದೇ ಅವಧಿಯಲ್ಲಿ ಎರಡನೇ ಪಂಚವಾರ್ಷಿಕ ಯೋಜನೆಯಲ್ಲಿ ಗ್ರಾಮಗಳ ಅಭಿವೃದ್ಧಿಗೆ ಹೆಚ್ಚು ಆದ್ಯತೆಯನ್ನು ಕೊಟ್ಟಿತು. ಜಿಲ್ಲಾ ಮಟ್ಟದಲ್ಲಿ ಜನತೆಯ ಸಹಭಾಗಿತ್ವವನ್ನು ಒಳಗೊಂಡಿದ್ದು ಈ ಯೋಜನೆಯಲ್ಲಿ ಜಿಲ್ಲಾ ಅಭಿವೃದ್ಧಿ ಮಂಡಳಿ ಸ್ಥಾಪನೆಗೆ ಶಿಫಾರಸ್ಸು ಮಾಡಿತ್ತು. ತದನಂತರ ರಾಷ್ಟ್ರವ್ಯಾಪ್ತಿಯಾದ ಮೂರನೇ ಪಂಚವಾರ್ಷಿಕ ಯೋಜನೆಯು ಪಂಚಾಯತ್‌ರಾಜ್ ಸಂಸ್ಥೆಗಳ ಕಡೆಗೆ ಹೆಚ್ಚು ಮಹತ್ವವನ್ನು ನೀಡಿದ್ದು, ಹೆಚ್ಚು ಅಭಿವೃದ್ಧಿ ತರಲು ಮಾನವನ ಶಕ್ತಿಯನ್ನು ಬಳಸಲಾಯಿತು. ಅಧಿಕ ಸಂಪನ್ಮೂಲ ಸಂಗ್ರಹ, ಜನತೆಯ ಸಹಕಾರ, ಸಮುದಾಯಗಳನ್ನು ಗುರುತಿಸುವುದು ಇವೆಲ್ಲಾ ಸೇರಿದ್ದವು. ಕೃಷಿ, ಗುಡಿಕೈಗಾರಿಕೆ, ಮೂಲ ಶಿಕ್ಷಣ, ಕುಡಿಯುವ ನೀರು ಇವೆಲ್ಲಾ ಜಿಲ್ಲಾ ಯೋಜನೆಯಲ್ಲಿ ಸೇರಿದ್ದವು. ಆದರೆ ಇವುಗಳು ಜನತೆಗೆ ತಲುಪುವಲ್ಲಿ ವಿಫಲವಾದವು.[12] ಗ್ರಾಮದ ಯೋಜನೆಗಳು ಜನತೆಯ ಹಿತಾಸಕ್ತಿಯ ಪ್ರಕಾರ ಇರಲಿಲ್ಲ. ಸ್ಥಳೀಯ ಸಂಪನ್ಮೂಲಗಳನ್ನು ಬಳಸಿಕೊಳ್ಳುವಲ್ಲಿ ಅವು ವಿಫಲಗೊಂಡವು. ಜಿಲ್ಲಾ ಯೋಜನೆಗಳು ಗ್ರಾಮದವರೆಗೆ ಬರಲಿಲ್ಲ.[13] ಯೋಜನೆಗಳು ಮೇಲ್‌ಸ್ತರದಲ್ಲಿ ತಯಾರಾಗುತ್ತಿದ್ದರಿಂದ ಅವುಗಳಲ್ಲಿ ತಳಮಟ್ಟದ ಜನರ ಆಶಯಗಳು ಪ್ರತಿಪಲಿತವಾಗುತ್ತಿರಲಿಲ್ಲ. ಹೀಗೆ ಅಭಿವೃದ್ಧಿಯನ್ನು ವಿಕೇಂದ್ರೀಕರಣಗೊಳಿಸುವ ಕೆಲಸ ಸಂಪೂರ್ಣವಾಗಿ ಸಫಲವಾಗಲಿಲ್ಲ.

1977ರಲ್ಲಿ ಕೇಂದ್ರದಲ್ಲಿ ಮೊಟ್ಟ ಮೊದಲನೆ ಬಾರಿಗೆ ಕಾಂಗ್ರೆಸ್ಸೇತರ ಸರಕಾರ ಆಡಳಿತದ ಚುಕ್ಕಾಣಿಯನ್ನು ಹಿಡಿಯಿತು. ಈ ಸರಕಾರವು ಪಂಚಾಯತ್‌ರಾಜ್ ವ್ಯವಸ್ಥೆಯನ್ನು ಪುನರ್‌ರಚಿಸುವ ದೃಷ್ಟಿಯಿಂದ 1977ರಲ್ಲಿ ಅಶೋಕ ಮೆಹತಾರವರ ಅಧ್ಯಕ್ಷತೆಯಲ್ಲಿ ಸಮಿತಿಯನ್ನು ನೇಮಕ ಮಾಡಿತು. ಸಮಿತಿಯು ಅಧ್ಯಯನ ನಡೆಸಿ ಅಂದು ಚಾಲ್ತಿಯಲ್ಲಿದ್ದ ಪಂಚಾಯತ್ ವ್ಯವಸ್ಥೆಯಲ್ಲಿನ ದೋಷಗಳ ಪಟ್ಟಿಯನ್ನು ಮಾಡಿತು. ಗ್ರಾಮೀಣಾಭಿವೃದ್ಧಿಗೆ ಪಂಚಾಯತ್ ಸಂಸ್ಥೆಗಳ ಪಾತ್ರ ಬಹಳ ಮುಖ್ಯ. ಆದಾಗ್ಯೂ ಇವುಗಳಿಗೆ ಅಗತ್ಯವಾದ ಕೇಂದ್ರ ಮತ್ತು ರಾಜ್ಯ ಸರಕಾರದ ಅನುದಾನವಿರಲಿಲ್ಲ. ಸ್ಥಳೀಯ ಸಂಪನ್ಮೂಲ ಸಂಗ್ರಹಕ್ಕೆ ಅವಕಾಶವಿರಲಿಲ್ಲ. ಕೇಂದ್ರ ಮತ್ತು ರಾಜ್ಯ ಸರಕಾರಗಳು ರೂಪಿಸುವ ಕೆಲವು ನಾಗರಿಕ ಕೆಲಸಗಳನ್ನು ಮಾಡಿಸುವುದು ಮಾತ್ರ ಪಂಚಾಯತಿಯ ಕೆಲಸವಾಗಿತ್ತು. ಪಂಚಾಯತಿ ಚುನಾವಣೆಗಳು ಕ್ರಮವಾಗಿ ನಡೆಯುತ್ತಿರಲಿಲ್ಲ. ದುರ್ಬಲ ವರ್ಗದವರಿಗೆ ಮತ್ತು ಮಹಿಳೆ ಯರಿಗೆ ಪ್ರಾತಿನಿಧ್ಯವಿರಲಿಲ್ಲ. ಸಂಪನ್ಮೂಲದ ಕೊರತೆ ಎದ್ದು ಕಾಣುತ್ತಿತ್ತು. ಗ್ರಾಮೀಣ ಮಟ್ಟದ ಒಟ್ಟು ಪರಿಸರ ಪಂಚಾಯತ್‌ರಾಜ್ ವ್ಯವಸ್ಥೆಗೆ ಪೂರಕವಾಗಿರಲಿಲ್ಲ.[14] ಗ್ರಾಮೀಣ ಪ್ರದೇಶಗಳ ಸರ್ವಾಂಗೀಣ ಅಭಿವೃದ್ಧಿಯಾಗಬೇಕಾದರೆ ಅಧಿಕಾರದ ವಿಕೇಂದ್ರೀಕರಣ ಅವಶ್ಯಕವಾಗಿತ್ತು ಎಂದು ವರದಿಯಲ್ಲಿ ಹೇಳಿ ಎರಡು ಹಂತದ ಪಂಚಾಯತ್‌ರಾಜ್ ವ್ಯವಸ್ಥೆಯನ್ನು ಜಾರಿಗೆ ತರಲು ಶಿಫಾರಸ್ಸು ಮಾಡಿತು. ಜಿಲ್ಲಾ ಮಟ್ಟದಲ್ಲಿ ಜಿಲ್ಲಾ ಪರಿಷತ್ ಮತ್ತು ಗ್ರಾಮಗಳ ಮಟ್ಟದಲ್ಲಿ ಮಂಡಲ ಪಂಚಾಯತ್‌ನ್ನು ಸಂಘಟಿಸಲಾಯಿತು. ದೇಶಾದ್ಯಂತ ಈ ಸಮಿತಿಯ ವರದಿ ಅನ್ವಯವಾಗಿ ರಾಜ್ಯ ಸರಕಾರಗಳು ಎರಡು ಹಂತದ ಪಂಚಾಯತ್‌ರಾಜ್ ವ್ಯವಸ್ಥೆಯನ್ನು ಜಾರಿಗೆ ತಂದವು. ಕರ್ನಾಟಕದಲ್ಲಿ ಸಮಿತಿಯ ಶಿಫಾರಸ್ಸಿನನ್ವಯ 1983ರಲ್ಲಿ ಜಿಲ್ಲಾ ಪರಿಷತ್ ಮತ್ತು ಮಂಡಲಪಂಚಾಯತ್ ಎಂಬ ಎರಡು ಹಂತದ ಪಂಚಾಯತ್ ರಾಜ್ ವ್ಯವಸ್ಥೆಯನ್ನು ಜಾರಿಗೆ ತರಲಾಯಿತು. ಈ ಕಾಯ್ದೆ ಅನ್ವಯ ಹೆಚ್ಚು ಸಂಪನ್ಮೂಲಗಳನ್ನು ಸ್ಥಳೀಯ ಸಂಸ್ಥೆಗಳಿಗೆ ಒದಗಿಸಲಾಯಿತು.

ಮೇಲಿನ ಬೃಹತ್ ಸಮಿತಿಗಳ ಜತೆ ಇತರ ಸಣ್ಣಪುಟ್ಟ ಸಮಿತಿಗಳ ವರದಿ ಕೂಡ ಪಂಚಾಯತ್ ವ್ಯವಸ್ಥೆಯನ್ನು ಬಲಪಡಿಸುವ ಕೆಲಸವನ್ನು ಮಾಡಿವೆ. 1985ರಲ್ಲಿ ಜೆ.ವಿ.ಕೆ. ರಾವ್ ಅವರ ಅಧ್ಯಕ್ಷತೆಯಲ್ಲಿ ಕೇಂದ್ರ ಯೋಜನಾ ಆಯೋಗವು ಸಮಿತಿಯನ್ನು ನೇಮಕ ಮಾಡಿತು. ಸಮಿತಿಯು ಚುನಾವಣೆಗಳು ಸರಿಯಾದ ಅವಧಿಯಲ್ಲಿ ನಡೆಯದಿರುವುದನ್ನು ಜಿಲ್ಲೆಯು ಯೋಜನೆಯ ಮುಖ್ಯ ಘಟಕವಾಗಿರಬೇಕು ಮತ್ತು ಅವಧಿಗೆ ಸರಿಯಾಗಿ ಚುನಾವಣೆಗಳನ್ನು ನಡೆಸಬೇಕೆಂದು ಸಮಿತಿಯು ತನ್ನ ವರದಿಯಲ್ಲಿ ಹೇಳಿತು.[15] 1986ರಲ್ಲಿ ಎಲ್. ಎಂ. ಸಾಂಗ್ವಿ ಸಮಿತಿಯು ಪಂಚಾಯತ್‌ರಾಜ್ ಸಂಸ್ಥೆಗಳಿಗೆ ಹೆಚ್ಚಿನ ಹಣಕಾಸನ್ನು ಒದಗಿಸಿ ಪ್ರಜಾಸತ್ತಾತ್ಮಕ ಸಂಸ್ಥೆಗಳನ್ನಾಗಿ ಕಾರ್ಯನಿರ್ವಹಿಸಬೇಕು ಎಂದು ಸಲಹೆ ನೀಡಿತು. ಪಂಚಾಯತ್‌ರಾಜ್ ವ್ಯವಸ್ಥೆ ಅದರ ಮೂಲ ಉದ್ದೇಶಕ್ಕೆ ಅನುಗುಣವಾಗಿ ಕಾರ್ಯನಿರ್ವಹಿಸುವಂತೆ ಸಲಹೆ ನೀಡಿತು.[16] ಹೀಗೆ ಹಲವು ಸಮಿತಿಗಳು ವಿಕೇಂದ್ರೀಕರಣವನ್ನು ಬಲಯುತಗೊಳಿಸುವ ಪ್ರಯತ್ನ ನಡೆಸಿದವು. ಈ ಹೊತ್ತಿಗೆ ಐದನೇ ಪಂಚವಾರ್ಷಿಕ ಯೋಜನೆಯು ಆರಂಭಗೊಂಡಿತ್ತು. ನಾಲ್ಕನೇ ಯೋಜನೆಯಲ್ಲಿ ಜಾರಿಗೆ ತಂದ ಬ್ಲಾಕ್ ಮಟ್ಟದ ಯೋಜನೆಗಳು ಅಷ್ಟೊಂದು ಫಲಕಾರಿ ಯಾಗಿರಲಿಲ್ಲ. ಈ ಯೋಜನೆಗಳ ಫಲ ದುರ್ಬಲ ವರ್ಗಗಳಿಗೆ ಏಕೆ ತಲುಪುತ್ತಿಲ್ಲ ಎಂಬುದಕ್ಕೆ ದಂತವಾಲ ಇವರ ಅಧ್ಯಕ್ಷತೆಯಲ್ಲಿ ಸಮಿತಿಯನ್ನು ರಚಿಸಲು

ಸೂಚಿಸಲಾಗಿತ್ತು. ಇದು ಮುಖ್ಯವಾಗಿ ಗ್ರಾಮೀಣ ಪ್ರದೇಶದ ಬಡತನ ನಿರ್ಮೂಲನೆ ಮತ್ತು ನಿರುದ್ಯೋಗ ನಿವಾರಣೆ ಹಾಗೂ ಬ್ಲಾಕ್ ಮಟ್ಟದ ಯೋಜನೆಯಲ್ಲಿ ಜನತೆಯ ಭಾಗವಹಿಸುವಿಕೆ ಬಹಳ ಮುಖ್ಯ ಎಂದು ವರದಿಯಲ್ಲಿ ಹೇಳಿತು.[17] ಮುಖ್ಯವಾಗಿ ಸ್ಥಳೀಯರನ್ನು ಯೋಜನೆಯಲ್ಲಿ ತೊಡಗಿಸಿಕೊಳ್ಳಬೇಕು ಎಂದು ಸಮಿತಿ ಶಿಫಾರಸ್ಸು ಮಾಡಿತು. ಹೀಗೆ ವಿಕೇಂದ್ರೀಕರಣದ ಸುಧಾರಣೆಗೆ ರಾಷ್ಟ್ರಮಟ್ಟದಲ್ಲಿ ಹಲವಾರು ಪ್ರಯತ್ನಗಳು ನಡೆದವು. ಇದರಂತೆ ಪಂಚವಾರ್ಷಿಕ ಯೋಜನೆಯಲ್ಲಿ ಅಭಿವೃದ್ಧಿಗೆ ಹೆಚ್ಚಿನ ಆದ್ಯತೆಯನ್ನು ಕೊಡಲಾಯಿತು.

ಆರನೇ ಮತ್ತು ಏಳನೆ ಪಂಚವಾರ್ಷಿಕ ಯೋಜನೆಯಲ್ಲಿ ಪ್ರಜಾಪ್ರಭುತ್ವವಾದಿ ವಿಕೇಂದ್ರೀ ಕರಣವನ್ನು ಬಲಗೊಳಿಸಲು ಹೆಚ್ಚು ಮಹತ್ವವನ್ನು ನೀಡಲಾಯಿತು. ಜಿಲ್ಲಾ ಮಟ್ಟದಲ್ಲಿ ಜಿಲ್ಲಾ ಅಭಿವೃದ್ಧಿ ಅಧಿಕಾರಿಗಳನ್ನು ನೇಮಕ ಮಾಡಲಾಯಿತು. ಇವರಿಗೆ ಜಿಲ್ಲಾಧಿಕಾರಿಗಳಿಗೆ ಸಮಾನವಾದ ಅಧಿಕಾರಗಳನ್ನು ನೀಡಲಾಗಿತ್ತು. ಮೊಟ್ಟಮೊದಲನೆಯದಾಗಿ ವಿಕೇಂದ್ರೀಕೃತ ಯೋಜನೆಯ ಅಂಕಿ-ಅಂಶಗಳನ್ನು ಒದಗಿಸಿ ಎಲ್ಲಾ ಮಟ್ಟಗಳಲ್ಲಿ ಜನತೆಯ ಭಾಗವಹಿಸುವಿಕೆಗೆ ಅನುಕೂಲ ಮಾಡಿಕೊಡಲಾಯಿತು. ಪಂಚಾಯತ್‌ರಾಜ್ ಸಂಸ್ಥೆಗಳನ್ನು ಬಲಗೊಳಿಸುವುದಕ್ಕೆ ಈ ಯೋಜನೆಗಳಲ್ಲಿ ಪ್ರಾಮುಖ್ಯತೆಯನ್ನು ನೀಡಲಾಯಿತು.[18] ಎಂಟನೇ ಯೋಜನೆಯಲ್ಲಿ ವಿಕೇಂದ್ರೀಕೃತ ಯೋಜನೆಗೆ ಮಹತ್ವ ಕೊಟ್ಟು ಅದರಲ್ಲಿ ಜನತೆಯ ಭಾಗವಹಿಸುವಿಕೆಗೆ ಮಹತ್ವಕೊಡಲಾಯಿತು. ತಳಮಟ್ಟದ ಯೋಜನೆಗಳಿಗೆ ಹೆಚ್ಚು ಒತ್ತು ನೀಡಲಾಯಿತು. ಜಿಲ್ಲೆ, ಬ್ಲಾಕ್ ಮತ್ತು ಗ್ರಾಮ ಮಟ್ಟದಲ್ಲಿ ಪ್ರತಿಹಂತದಲ್ಲಿ ಯೋಜನೆ ಆಗುವಂತೆ ಆಯೋಗ ಶಿಫಾರಸ್ಸು ಮಾಡಿತು. ಈ ಯೋಜನೆಗಳು ಜನತೆಯ ಆಶೋತ್ತರಗಳಿಗೆ ಸ್ಪಂದಿಸಬೇಕು ಎಂದು ಹೇಳಿತು.[19] ಸ್ಥಳೀಯ ಜನತೆಯ ಪರಿಣಾಮಕಾರಿಯಾಗಿ ಭಾಗವಹಿಸುವಿಕೆ ಮುಖ್ಯವಾಗಬೇಕು. ಯೋಜನಾ ಮಂಡಳಿಗಳನ್ನು ಬಲಗೊಳಿಸಬೇಕು. ಹೀಗೆ ಪಂಚವಾರ್ಷಿಕ ಯೋಜನೆಗಳಲ್ಲಿ ಸಹ ವಿಕೇಂದ್ರೀಕರಣ ಅಭಿವೃದ್ಧಿಗೆ ಮಹತ್ವ ಕೊಡಲಾಯಿತು. ಯೋಜನೆಗಳನ್ನು ಅನುಷ್ಠಾನಗೊಳಿಸಲು ಈ ಸಂಸ್ಥೆಗಳನ್ನು ಬೆಳೆಸಿಕೊಳ್ಳಲಾಯಿತು. ಆದರೂ ಈ ಯೋಜನೆಗಳು ನಿರೀಕ್ಷಿತ ಫಲಗಳನ್ನು ಕೊಡಲಿಲ್ಲ.

ಪಂಚಾಯತ್ ಸಂಸ್ಥೆಗಳನ್ನು ಮತ್ತಷ್ಟು ಬಲಗೊಳಿಸುವ ದೃಷ್ಟಿಯಿಂದ 1993ರಲ್ಲಿ ಸಂವಿಧಾನದ 73ನೇ ತಿದ್ದುಪಡಿಯನ್ನು ಮಾಡಲಾಯಿತು. ಈ ತಿದ್ದುಪಡಿಯಿಂದ ಪಂಚಾಯತ್ ರಾಜ್ ಸಂಸ್ಥೆಗಳು ಸಂವಿಧಾನಾತ್ಮಕ ಮನ್ನಣೆಯನ್ನು ಪಡೆದವು. ಅಧಿಕಾರವನ್ನು ಸಂವಿಧಾನದ ತಿದ್ದುಪಡಿಗೆ ಅನುಗುಣವಾಗಿ ವಿಕೇಂದ್ರಿಕರಣ ಗೊಳಿಸಲು ಮೂರು ಹಂತದ ಪಂಚಾಯತ್‌ರಾಜ್ ಸಂಸ್ಥೆಗಳನ್ನು ಮತ್ತಷ್ಟು ಹೊಣೆಗಾರಿಕೆ ಗಳೊಂದಿಗೆ ಕಾರ್ಯನಿರ್ವಹಿಸು ವಂತೆ ಮಾಡಲಾಯಿತು. ಅಭಿವೃದ್ಧಿಗೆ ಸಂಬಂಧಪಟ್ಟ 29 ವಿಷಯಗಳಿಗೆ ಹಣಕಾಸು, ಕಾರ್ಯಗಳು ಮತ್ತು ಅಧಿಕಾರ ಗಳನ್ನು ಒದಗಿಸಲಾಗಿದೆ. ಭಾರತ ಸಂವಿಧಾನದ 73ನೇ ತಿದ್ದುಪಡಿಯಿಂದ ಕೆಲವು ಮುಖ್ಯ ಅಂಶಗಳನ್ನು ಸೇರಿಸಲಾಯಿತು.

1. ನಿಯಮಿತವಾಗಿ ಐದು ವರ್ಷಗಳಿಗೊಮ್ಮೆ ಚುನಾವಣೆಗಳನ್ನು ಪಂಚಾಯತ್‌ರಾಜ್ ಸಂಸ್ಥೆಗಳಿಗೆ ನಡೆಸಬೇಕು.

2. ಜಿಲ್ಲಾ, ತಾಲೂಕು ಮತ್ತು ಗ್ರಾಮ ಮಟ್ಟದಲ್ಲಿ ಚುನಾಯಿತ ಸಂಸ್ಥೆಗಳನ್ನು ಸ್ಥಾಪಿಸಬೇಕು.

3. ಪ್ರತ್ಯೇಕ ಚುನಾವಣೆ ಆಯೋಗವನ್ನು ರಚಿಸಬೇಕು.

4. ಪರಿಶಿಷ್ಟ ಸಮುದಾಯಗಳಿಗೆ ಸಂಬಂಧಿಸಿದಂತೆ ಆಯಾ ಪಂಚಾಯತ್ ಪ್ರದೇಶದಲ್ಲಿರುವ ಜನಸಂಖ್ಯೆಯಲ್ಲಿನ ಪ್ರಮಾಣಕ್ಕೆ ಅನುಗುಣವಾಗಿ ಸದಸ್ಯರ ಸ್ಥಾನಗಳಲ್ಲಿ ಮತ್ತು ಅಧ್ಯಕ್ಷ ಮತ್ತು ಉಪಾಧ್ಯಕ್ಷರ ಸ್ಥಾನಗಳಲ್ಲಿ ಮೀಸಲಾತಿ ನೀಡಬೇಕು.

5. ಪ್ರತಿ ವರ್ಗದಲ್ಲಿನ ಸದಸ್ಯರ ಸಂಖ್ಯೆಯಲ್ಲಿನ ಮೂರನೇ ಒಂದು ಭಾಗಕ್ಕಿಂತ ಕಡಿಮೆ ಇಲ್ಲದಷ್ಟು ಸ್ಥಾನಗಳನ್ನು ಮತ್ತು ಹುದ್ದೆಗಳನ್ನು ಆಯಾ ವರ್ಗದ ಮಹಿಳೆಯರಿಗೆ ಮೀಸಲಿಡಬೇಕು.

6. ಪಂಚಾಯತ್‌ರಾಜ್ ಸಂಸ್ಥೆಗಳಿಗೆ ಕೇಂದ್ರ ಮತ್ತು ರಾಜ್ಯದಿಂದ ಕೊಡುವ ಅನುದಾನ ಸಂಪನ್ಮೂಲ ಕ್ರೋಢಿಕರಣ ಇತ್ಯಾದಿ ಹಣಕಾಸು ವ್ಯವಸ್ಥೆ ಬಗ್ಗೆ ಶಿಫಾರಸ್ಸು ಮಾಡಲು ಆಯಾ ರಾಜ್ಯದಲ್ಲಿ ಹಣಕಾಸು ಆಯೋಗ ರಚಿಸಬೇಕು.

7. ಸ್ಥಳೀಯ ಸಂಸ್ಥೆಗಳ ಯೋಜನೆ ತಯಾರಿಸಲು ಪ್ರತಿ ಜಿಲ್ಲೆಯಲ್ಲಿ ಜಿಲ್ಲಾ ಯೋಜನಾ ಸಮಿತಿಗಳನ್ನು ರಚಿಸಬೇಕು.[20]

ಈ ಕಾಯ್ದೆಯ ಇತರ ವಿಷಯಗಳೊಂದಿಗೆ ಎಲ್ಲಾ ರಾಜ್ಯಗಳಲ್ಲಿ ಸಮಾನ ಸ್ವರೂಪದ ಪಂಚಾಯತ್ ರಾಜ್ ಆಡಳಿತ ವ್ಯವಸ್ಥೆಯನ್ನು ಸ್ಥಾಪಿಸಬೇಕೆಂದು ಕಡ್ಡಾಯಗೊಳಿಸಲಾಯಿತು. ಇದರಿಂದಾಗಿ ಪಂಚಾಯತ್‌ರಾಜ್ ಸಂಸ್ಥೆಗಳಿಗೆ ಹೊಸ ಸ್ವರೂಪ ಒದಗಿತು. ಜನತೆಗೆ ಅಧಿಕಾರ ಎಂಬ ಪರಿಕಲ್ಪನೆಯನ್ನು ಕಾರ್ಯಾಚರಣೆಗೆ ತರಲು ಅಗತ್ಯ ಇರುವ ಕಾನೂನಿನ ಚೌಕಟ್ಟು ಅದಕ್ಕೆ ಬಂತು. ಈ ಕಾಯ್ದೆಯಲ್ಲಿ ಆಯಾ ರಾಜ್ಯ ಸರಕಾರಗಳು ಹೆಚ್ಚಿನ ಅಧಿಕಾರಗಳನ್ನು ಇಟ್ಟುಕೊಂಡವು. ಪಂಚಾಯತ್‌ರಾಜ್ ಸಂಸ್ಥೆಗಳ ನಿಯಂತ್ರಣ ನಿರ್ವಹಣೆ ಮತ್ತು ಅವುಗಳ ವಿಸರ್ಜನೆ ಮುಂತಾದ ಅಧಿಕಾರಗಳು ರಾಜ್ಯ ಸರಕಾರಗಳ ಹಿಡಿತದಲ್ಲಿದ್ದವು.[21] ಗ್ರಾಮೀಣ ಜನತೆಯ ಅವರ ಆಶೋತ್ತರಗಳಿಗೆ ಅನುಗುಣವಾಗಿ ಸ್ಥಳೀಯ ಸಂಸ್ಥೆಗಳನ್ನು ಸ್ಥಾಪಿಸಲಾಯಿತು. ಸರಕಾರವು ಯೋಜಿಸಿಕೊಂಡ ಯೋಜನೆಗಳನ್ನು ಗ್ರಾಮಮಟ್ಟದವರೆಗೂ ಅನುಷ್ಠಾನಗೊಳಿಸುವುದು ಈ ಸಂಸ್ಥೆಗಳ ಮುಖ್ಯ ಉದ್ದೇಶವಾಗಿತ್ತು. ವಿಕೇಂದ್ರೀಕರಣವು ಪರಿಣಾಮಕಾರಿಯಾಗಿ ಆಚರಣೆಗೆ ಬರಲು ಮತ್ತು ಪಂಚಾಯತ್‌ರಾಜ್ ಸಂಸ್ಥೆಗಳು ಸ್ವಯಂ ಆಡಳಿತ ಸಂಸ್ಥೆಗಳಾಗಿ ರೂಪುಗೊಳ್ಳಲು ಅಗತ್ಯವಾದ ಸಂಗತಿಯಿಂದರೆ ಜನರ ಸಶಕ್ತೀಕರಣ ಎನ್ನಲಾಗಿದೆ. ವಿಕೇಂದ್ರೀಕರಣವು ಪರಿಣಾಮಕಾರಿಯಾಗಲು ಜನತೆಯ ಸಶಕ್ತೀಕರಣ ಅವಶ್ಯಕವೆಂದು ಹೇಳಲಾಗಿದೆ. ಅತ್ಯಂತ ವ್ಯವಸ್ಥಿತವಾಗಿ ಹಲವಾರು ಶತಮಾನಗಳಿಂದ ಶೋಷಣೆಗೆ ಒಳಗಾದ ದುರ್ಬಲವರ್ಗಗಳಿಗೆ, ಮಹಿಳೆಯರಿಗೆ ಈ ಕಾಯ್ದೆಯಲ್ಲಿ ಪ್ರಾತಿನಿಧ್ಯವನ್ನು ಒದಗಿಸಲಾಯಿತು. ಹೀಗೆ 1993ರ ಸಂವಿಧಾನ ತಿದ್ದುಪಡಿಯ ಅನ್ವಯ ರಾಷ್ಟ್ರಾದ್ಯಂತ ಮೂರು ಹಂತದ ಪಂಚಾಯತ್‌ರಾಜ್ ವ್ಯವಸ್ಥೆಯನ್ನು ಜಾರಿಗೆ ತರಲಾಯಿತು.

ಸಂವಿಧಾನದ 73ನೇ ತಿದ್ದುಪಡಿಯಿಂದ ಜಿಲ್ಲಾ ಪಂಚಾಯತಿಯು ವಿಕೇಂದ್ರೀಕೃತ ಯೋಜನೆಯ ಮುಖ್ಯ ಘಟಕವಾಗಿದೆ. ಇದರ ಮೂಲಕ ಕೆಳಗಿನ ಸ್ತರಗಳಿಗೆ ಯೋಜನೆಗಳು ಹರಿದು ಬರುತ್ತವೆ.

1. ಆಯಾ ಪಂಚಾಯತ್ ಹಂತಗಳಲ್ಲಿ ತಮ್ಮದೇ ಆದ ಯೋಜನೆಯ ನಿರ್ಮಾಣ
2. ಜನತೆಯ ಹಿತಾಸಕ್ತಿ ಪ್ರಕಾರ ಯೋಜನೆಗಳ ತಯಾರಿ
3. ಮೂಲಭೂತ ಅವಶ್ಯಕತೆಗಳ ಸಮಗ್ರ ಅಭಿವೃದ್ಧಿ
4. ಆಯಾ ಪ್ರದೇಶದ ರಕ್ಷಣೆಯ ಜವಬ್ದಾರಿ
5. ಸಂಪನ್ಮೂಲದ ಹೆಚ್ಚಳದ ಹೊಣೆಗಾರಿಕೆ

ಈ ಎಲ್ಲಾ ಮೇಲ್ವಿಚಾರಣೆಯನ್ನು ಆಯಾ ರಾಜ್ಯ ಸರಕಾರಗಳು ಜಿಲ್ಲಾ ಯೋಜನೆ ಸಮಿತಿಯ ಮೂಲಕ ನೆರವೇರಿಸಬೇಕೆಂದು ನಿರ್ಧರಿಸಲಾಗಿದೆ. ಈ ಸಮಿತಿಗೆ ಶೇ 80ರಷ್ಟು ಸದಸ್ಯರು ವಿವಿಧ ಪಂಚಾಯತ್ ಸ್ತರಗಳಿಗೆ ಸೇರಿದವರಾಗಿದ್ದು ಉಳಿದ ಶೇ 20ರಷ್ಟು ಸದಸ್ಯರನ್ನು ರಾಜ್ಯ ಸರಕಾರ ನಿರ್ಧರಿಸುತ್ತದೆ. ಸ್ಥಳೀಯ ಸಂಸ್ಥೆಗಳ ಅಭಿವೃದ್ಧಿ ಕಾರ್ಯಕ್ರಮಗಳನ್ನು ಆಯಾ ಜಿಲ್ಲಾ ಯೋಜನಾ ಸಮಿತಿ ನಿರ್ವಹಿಸುತ್ತವೆ.[22] 9ನೇ ಪಂಚವಾರ್ಷಿಕ ಯೋಜನೆ ಹೊತ್ತಿಗೆ ಪಂಚಾಯತ್‌ರಾಜ್ ಸಂಸ್ಥೆಗಳಿಗೆ ಸಂವಿಧಾನಿಕ ಸ್ಥಾನಮಾನ ನೀಡಲಾಗಿತ್ತು. ಈ ಸಂಸ್ಥೆಗಳ ಮೂಲಕ ವಿಕೇಂದ್ರೀಕೃತ ಯೋಜನೆಯನ್ನು ಎಲ್ಲಾ ಸ್ತರಗಳಲ್ಲಿ ಯೋಜಿಸಲಾಗಿತ್ತು. 9ನೇ ಪಂಚವಾರ್ಷಿಕ ಯೋಜನೆಯಲ್ಲಿ ಆರ್ಥಿಕ ಅಭಿವೃದ್ಧಿ ಮತ್ತು ಸಾಮಾಜಿಕ ನ್ಯಾಯ ಒದಗಿಸುವಂತೆ ಉತ್ತೇಜನ ನೀಡಿದೆ. ರಾಷ್ಟ್ರೀಯ ಅಭಿವೃದ್ಧಿ ಮಂಡಳಿಯ ಶಿಫಾರಸ್ಸಿನ ಅನ್ವಯ ಶೇ 41ರಷ್ಟು ಸಂಪನ್ಮೂಲಗಳನ್ನು ಈ ಸಂಸ್ಥೆಗಳಿಗೆ ಒದಗಿಸಬಹುದಾಗಿದೆ ಎಂದು ಹೇಳಿತು.[23] ವಿಕೇಂದ್ರೀಕೃತ ಯೋಜನೆಯು ಮುಖ್ಯವಾಗಿ ತಳಮಟ್ಟದ ಜನತೆಯ ಸಾಮಾಜಿಕ, ಆರ್ಥಿಕ ಮತ್ತು ರಾಜಕೀಯ ಅಭಿವೃದ್ಧಿಯ ಗುರಿಯನ್ನು ಇಟ್ಟುಕೊಂಡಿವೆ. 8ನೇ ಪಂಚವಾರ್ಷಿಕ ಯೋಜನೆಯವರೆಗೆ ವಿಕೇಂದ್ರಿಕೃತ ಯೋಜನೆಯು ಜಿಲ್ಲಾ ಮಟ್ಟಕ್ಕೆ ಬಂದು ನಿಂತಿತ್ತು. ಇವುಗಳು ಜನತೆಯ ಸಂಸ್ಥೆಗಳಾಗಿ ಸ್ಥಾಪಿತವಾಗಲಿಲ್ಲ. ಕೇಂದ್ರ ಮತ್ತು ರಾಜ್ಯ ಪ್ರತಿನಿಧಿಗಳಲ್ಲಿ ಹಾಗೂ ಅಧಿಕಾರಿಗಳಲ್ಲಿ ಎಲ್ಲಾ ಅಧಿಕಾರಗಳು ಕೇಂದ್ರಿಕರಿಸಲ್ಪಟ್ಟಿದ್ದವು. ಮುಖ್ಯವಾಗಿ ಬ್ಲಾಕ್ ಮಟ್ಟದ ಯೋಜನೆಗಳು ಫಲಕಾರಿಯಾಗಲಿಲ್ಲ. ಯೋಜನೆಯ ಪ್ರಗತಿಯಲ್ಲಿ ಜಿಲ್ಲಾ ಯೋಜನೆ ಸಮಿತಿಗಳ ಕಾರ್ಯಗಳು ಅಷ್ಟೊಂದು ಸಫಲವಾಗಲಿಲ್ಲ. ಸ್ಥಳೀಯರ ಆದ್ಯತೆಗಳಿಗೆ ಮನ್ನಣೆ ಸಿಗಲಿಲ್ಲ. ಯಾವ ಉದ್ದೇಶಗಳನ್ನು ಇಟ್ಟುಕೊಂಡು ಯೋಜನೆಗಳೂ ರೂಪಗೊಂಡಿದ್ದವೋ ಆ ಉದ್ದೇಶಗಳು ಈಡೇರಲಿಲ್ಲ. ಸ್ಥಳೀಯರ ಹಿತಾಸಕ್ತಿಗೆ ಪೂರಕವಾಗಿ ಕೆಲಸ ಅಲ್ಲಿ ನಡೆಯಲಿಲ್ಲ.

ಯೋಜನೆಗಳಲ್ಲಿ ಜನತೆಯ ಭಾಗವಹಿಸುವಿಕೆಯ ಕುರಿತು ಖ್ಯಾತ ಅರ್ಥಶಾಸ್ತ್ರಜ್ಞರಾದ ಮೆಹಬೂಬು ಉಲ್-ಹಕ್‌ರವರು ಹೀಗೆ ಅಭಿಪ್ರಾಯಪಡುತ್ತಾರೆ. ಸರಕಾರದ ನೀತಿ ನಿರೂಪಣೆಗಳು ಜನತೆಯ ಆಶೋತ್ತರಗಳಿಗೆ ತಕ್ಕಂತೆ ಸ್ಪಂದಿಸುವಂತಿರಬೇಕು. ಜನತೆಯ ಅಭಿವೃದ್ಧಿ ಪ್ರಕ್ರಿಯೆಯಲ್ಲಿ ನೀತಿ ನಿರೂಪಣೆಯಲ್ಲಿ ಸಕ್ರಿಯವಾಗಿ ಪಾಲ್ಗೊಳ್ಳಬೇಕು. ಜನತೆಯ ಮನೆ ಬಾಗಿಲಿಗೆ ಆಡಳಿತವು ಮತ್ತು ಅಧಿಕಾರವು ವಿಕೇಂದ್ರೀಕರಣಗೊಳ್ಳಬೇಕು. ಅಭಿವೃದ್ಧಿಯು ಜನತೆಯಿಂದ ಜನರಿಗೋಸ್ಕರ ಜನರಿಂದ ತಯಾರಾಗಬೇಕು

ಎಂದು ಸಬಲೀಕರಣ ಅಂಶವು ಪ್ರತಿಪಾದಿಸುತ್ತದೆ ಎಂದು ಹೇಳಿದ್ದಾರೆ.[24] ಅಂದರೆ ಅಭಿವೃದ್ಧಿಯ ಕೇಂದ್ರ ಬಿಂದು ಜನತೆಯೇ ಆಗಬೇಕು. ಭಾರತದಲ್ಲಿ ಪ್ರಚಲಿತವಿರುವ ಅತಿ ಕೆಳಮಟ್ಟದ ಯೋಜನೆಯ ವಿಧಾನವನ್ನು ಗಮನಿಸಿದರೆ, ಅಭಿವೃದ್ಧಿ ಯೋಜನೆಯ ಪ್ರಕ್ರಿಯೆಯಲ್ಲಿ ಜನರು ಆಡಳಿತಗಾರರ ಮತ್ತು ರಾಜಕೀಯ ನಿರ್ಣಾಯಕರ ಭಾಗವಹಿಸುವಿಕೆ ಇಲ್ಲದೇ ಇರುವುದರಿಂದ ವಿಕೇಂದ್ರೀಕೃತ ಯೋಜನೆಗಳು ಯಶಸ್ಸನ್ನು ಕಾಣಲಿಲ್ಲ.[25] ಹಾಗಾಗಿ ವಿಕೇಂದ್ರೀಕೃತ ಯೋಜನೆ ಮತ್ತು ಗ್ರಾಮೀಣಾಭಿವೃದ್ಧಿ ಕಾರ್ಯಗಳಲ್ಲಿ ಜನರು ಹೆಚ್ಚಾಗಿ ಪಾಲ್ಗೊಳ್ಳುವಂತೆ ಮಾಡುವ ಉದ್ದೇಶದಿಂದ ಸಂವಿಧಾನ 73ನೇ ತಿದ್ದುಪಡಿ ತಂದು ಮೂರು ಹಂತದ ಚುನಾಯಿತ ಸಂಸ್ಥೆಗಳನ್ನು ಸ್ಥಾಪಿಸಲಾಗಿದೆ. ರಾಷ್ಟ್ರಮಟ್ಟದ ಈ ತಿದ್ದುಪಡಿ ಅನ್ವಯ 1993ರಲ್ಲಿ ಕರ್ನಾಟಕ ಪಂಚಾಯತ್‌ರಾಜ್ ಕಾಯ್ದೆಯನ್ನು ಜಾರಿಗೆ ತರಲಾಯಿತು. ಹೀಗೆ ರಾಷ್ಟ್ರಮಟ್ಟದಲ್ಲಿ ನಡೆದ ಹಲವಾರು ಪ್ರಯತ್ನಗಳನ್ನು ಕರ್ನಾಟಕ ರಾಜ್ಯ ಯಾವ ರೀತಿ ಅಳವಡಿಸಿಕೊಂಡಿದೆ ಮತ್ತು ರಾಜ್ಯದಲ್ಲಿ ವಿಕೇಂದ್ರೀಕರಣದ ಸುಧಾರಣೆ ಹೇಗೆ ನಡೆದಿದೆ ಎಂಬ ಸಂಗತಿಗಳನ್ನು ವಿವರಿಸಲಾಗಿದೆ.

## 1.3. ಕರ್ನಾಟಕದಲ್ಲಿ ವಿಕೇಂದ್ರೀಕರಣ

ರಾಜ್ಯಕ್ಕೆ ಸೇರಿದ ನಾಲ್ಕು ಪ್ರದೇಶಗಳಲ್ಲಿ ಪ್ರತ್ಯೇಕವಾದ ಸ್ಥಳೀಯ ಸರಕಾರ ಕಾಯ್ದೆಗಳು ಅನುಷ್ಠಾನದಲ್ಲಿದ್ದವು. ಕರ್ನಾಟಕದಲ್ಲಿ 1923ರ ಬಾಂಬೇ ಜಿಲ್ಲಾ ಸ್ಥಳೀಯ ಬೋರ್ಡುಗಳ ಕಾಯ್ದೆ ಮತ್ತು 1933ರ ಬಾಂಬೇ ಗ್ರಾಮಪಂಚಾಯತ್ ಕಾಯ್ದೆ 1956ರ ಮದ್ರಾಸ್ ಬೋರ್ಡುಗಳ ಕಾಯ್ದೆ ಮತ್ತು 1950 ಮದ್ರಾಸ್ ಗ್ರಾಮಪಂಚಾಯತ್ ಕಾಯ್ದೆ 1956ರ ಹೈದ್ರಾಬಾದ್ ಜಿಲ್ಲಾ ಬೋರ್ಡುಗಳ ಕಾಯ್ದೆ ಮತ್ತು 1951ರ ಹೈದ್ರಾಬಾದ್ ಗ್ರಾಮಪಂಚಾಯತ್ ಕಾಯ್ದೆಗಳು ಜಾರಿಯಲ್ಲಿದ್ದವು.[26] ಸ್ವಾತಂತ್ರ್ಯಾನಂತರ ಇವೇ ಪಂಚಾಯತ್ ವ್ಯವಸ್ಥೆಗಳು ಮುಂದುವರಿದವು. ನಾನಾ ಭಾಗಗಳಲ್ಲಿ ವಿವಿಧ ಮಾದರಿಯಲ್ಲಿ ಪಂಚಾಯತ್‌ರಾಜ್ ಕಾಯ್ದೆಗಳು ಜಾರಿಯಲ್ಲಿದ್ದುದರಿಂದ ಇಡೀ ರಾಜ್ಯಕ್ಕೆ ಏಕರೂಪದ ಸ್ಥಳೀಯ ಸರಕಾರ ಪದ್ಧತಿಯನ್ನು ಜಾರಿಗೆ ತರುವುದು ರಾಜ್ಯದ ಪ್ರಥಮ ಆದ್ಯತೆಯಾಗಿತ್ತು. ಏಕರೂಪಿ ಪಂಚಾಯತ್ ವ್ಯವಸ್ಥೆಯನ್ನೂ ರೂಪಿಸಲು ಕರ್ನಾಟಕ ಸರ್ಕಾರ ವಿ.ವೆಂಕಟಪ್ಪ ಅವರ ಅಧ್ಯಕ್ಷತೆಯಲ್ಲಿ ಸಮಿತಿಯನ್ನು ನೇಮಕ ಮಾಡಿತು.[27] ಸಮಿತಿಯು ಅಧ್ಯಯನ ನಡೆಸಿ 1950 ಜೂನ್ 12 ರಂದು ವರದಿಯನ್ನು ಸಲ್ಲಿಸಿತು. ಸಮಿತಿಯು ಕೆಲವು ಶಿಫಾರಸ್ಸುಗಳನ್ನು ಪಟ್ಟಿ ಮಾಡಿತು. ಗುಂಪು ಪಂಚಾಯತ್ ವ್ಯವಸ್ಥೆಯನ್ನು ರೂಪಿಸಿ ಸ್ಥಳೀಯ ನಾಯಕತ್ವ ಬೆಳೆಸುವುದು, ಹೆಚ್ಚಿನ ಹಣಕಾಸಿನ ನೆರವು, ತಾಲ್ಲೂಕ ಮಟ್ಟದಲ್ಲಿ, ತಾಲ್ಲೂಕ್ ಅಭಿವೃದ್ಧಿ ಮಂಡಳಿ, ಜಿಲ್ಲಾ ಮಟ್ಟದಲ್ಲಿ ಜಿಲ್ಲಾ ಅಭಿವೃದ್ಧಿ ಮಂಡಳಿಗಳ ರಚನೆ ಮತ್ತು ಪರಿಶಿಷ್ಟ ಜಾತಿ ಜನಾಂಗದವರಿಗೆ ಪ್ರಾತಿನಿಧ್ಯ ನೀಡುವುದು ಮುಂತಾದ ಸಲಹೆಗಳನ್ನು ನೀಡಿತು.[28] ಸಮಿತಿಯ ಶಿಫಾರಸ್ಸಿನ ಅನ್ವಯ 1952ರಲ್ಲಿ ಅಧಿನಿಯಮವನ್ನು ಅಂಗೀಕರಿಸಲಾಯಿತು. ಈ ಸಮಿತಿಯ ಶಿಫಾರಸ್ಸಿನ ಅನ್ವಯ ಕರ್ನಾಟಕದಲ್ಲಿ 1952ರಲ್ಲಿ ಮೈಸೂರು ಗ್ರಾಮ ಪಂಚಾಯತ್ ಮತ್ತು ಜಿಲ್ಲಾ ಬೋರ್ಡುಗಳ ಕಾಯ್ದೆಯನ್ನು ರೂಪಿಸಲಾಯಿತು. ಈ ಕಾಯ್ದೆಯು 1926ರ ಮೈಸೂರು ಜಿಲ್ಲಾ ಮತ್ತು ಗ್ರಾಮ ಪಂಚಾಯತ್ ಕಾಯ್ದೆಯ ಹೆಚ್ಚು ಲಕ್ಷಣಗಳನ್ನು ಹೊಂದಿತ್ತು. ವೆಂಕಟಪ್ಪ ಸಮಿತಿ ಮತ್ತು 1952ರ ಕಾಯ್ದೆಗಳು ಗುಂಪು ಪಂಚಾಯತ್‌ಗಳಿಗೆ ಹೆಚ್ಚು ಮಹತ್ವ ಕೊಟ್ಟಿದ್ದರಿಂದ ವ್ಯಾಪಕ ವಿರೋಧ ವ್ಯಕ್ತವಾಯಿತು.[29] ಆದಕಾರಣ ಏಕಗ್ರಾಮ ಪಂಚಾಯತ್ ಉಳಿಸಿಕೊಳ್ಳುವಂತೆ ತಿದ್ದುಪಡಿ

ಮಾಡಲಾಯಿತು. ಹಾಗೆಯೇ ಜಿಲ್ಲಾ ಬೋರ್ಡುಗಳಿಗೆ ಪರೋಕ್ಷ ಚುನಾವಣೆಗಳನ್ನು ಕಾಯ್ದೆಯಲ್ಲಿ ನಮೂದಿಸಿರುವುದರಿಂದ ಇದಕ್ಕೆ ವಿರೋಧ ಕಂಡುಬಂದಿತು ಮತ್ತು ತಾಲ್ಲೂಕ್ ಮಟ್ಟದಲ್ಲಿ ತಾಲ್ಲೂಕ್ ಬೋರ್ಡುಗಳನ್ನು ಸ್ಥಾಪಿಸುವಂತೆ ಸರ್ಕಾರದ ಮೇಲೆ ಒತ್ತಡ ತರಲಾಯಿತು. ಸ್ಥಾಯಿ ಸಮಿತಿಗಳು ಚುನಾಯಿತ ಅಧ್ಯಕ್ಷ ಮತ್ತು ಉಪಾಧ್ಯಕ್ಷ ಮುಂತಾದ ಪ್ರಗತಿದಾಯಕ ಅಂಶಗಳು ಇದ್ದರೂ ಈ ವ್ಯವಸ್ಥೆಯು ಬಹುಕಾಲ ತನ್ನ ಅಸ್ತಿತ್ವವನ್ನು ಸ್ಥಾಪಿಸುವಲ್ಲಿ ಆಶಾದಾಯಕ ಪ್ರಗತಿಯನ್ನು ಕಾಣಲಿಲ್ಲ. ಈ ಸಮಿತಿಯ ಕೆಲವು ಸಲಹೆಗಳಿಗೆ ವಿರೋಧ ಬಂದದ್ದರಿಂದ ನಿರೀಕ್ಷಿತ ಯಶಸ್ಸನ್ನು ಕಾಣದಿದ್ದರಿಂದ ಡಿ. ಎಚ್. ಚಂದ್ರಶೇಖರಯ್ಯ ನವರ ನೇತೃತ್ವದಲ್ಲಿ ಸರ್ಕಾರವು 1953ರಲ್ಲಿ ಮತ್ತೊಂದು ಸಮಿತಿಯನ್ನು ನೇಮಕ ಮಾಡಿ ಸ್ಥಳೀಯ ಸಂಸ್ಥೆಗಳ ಬಗ್ಗೆ ಪರಿಶೀಲನಾ ವರದಿಯನ್ನು ನೀಡುವಂತೆ ಸೂಚಿಸಿತು.[30]

ಈ ಸಮಿತಿಯು ಸ್ಥಳೀಯ ಸಂಸ್ಥೆಗಳ ಬಗ್ಗೆ ಪರಿಶೀಲಿಸಿ ಅಧ್ಯಯನ ನಡೆಸಿ 1954ರ ಆಗಸ್ಟ್‌ನಲ್ಲಿ ವರದಿಯನ್ನು ಸರ್ಕಾರಕ್ಕೆ ಸಲ್ಲಿಸಿತು. ಜಿಲ್ಲಾ ಬೋರ್ಡು, ತಾಲ್ಲೂಕ್ ಬೋರ್ಡು ಮತ್ತು ಗ್ರಾಮ ಪಂಚಾಯತ್ ಎಂಬ ಮೂರು ಹಂತದ ಪಂಚಾಯತ್ ವ್ಯವಸ್ಥೆಗೆ ಸಮಿತಿ ಶಿಫಾರಸ್ಸು ಮಾಡಿತು. ವಿಶೇಷವಾಗಿ ಹಿಂದುಳಿದ ಗುಂಪುಗಳಿಗೆ ಮತ್ತು ಮಹಿಳೆಯರಿಗೆ ಪ್ರಾತಿನಿಧ್ಯವನ್ನು ನೀಡುವ ಕೆಲವು ಸುಧಾರಣೆಗಳನ್ನು ತರಲು ಸಮಿತಿಯು ವರದಿಯಲ್ಲಿ ಹೇಳಿತು. ತಾಲ್ಲೂಕ್ ಬೋರ್ಡುಗಳಿಗೆ 2/3 ಸದಸ್ಯರನ್ನು ನೇರವಾಗಿ, 1/3 ಭಾಗದ ಸದಸ್ಯರನ್ನು ಪರೋಕ್ಷವಾಗಿ ಆಯ್ಕೆ ಮಾಡುವುದು ಮತ್ತು ಜಿಲ್ಲಾ ಬೋರ್ಡುಗಳಿಗೆ ಸದಸ್ಯರನ್ನು ಪರೋಕ್ಷವಾಗಿ ಆಯ್ಕೆ ಮಾಡುವುದು ಮುಂತಾದ ಪ್ರಗತಿದಾಯಕ ಅಂಶಗಳನ್ನು ಜಾರಿಗೆ ತರಲು ಸಮಿತಿಯು ಶಿಫಾರಸ್ಸು ಮಾಡಿತು. ಇದರ ಅನ್ವಯ ಏಕೀಕೃತ ಕರ್ನಾಟಕದಲ್ಲಿ ಪಂಚಾಯತ್‌ರಾಜ್ ವ್ಯವಸ್ಥೆಗೆ ಭದ್ರಬುನಾದಿಯನ್ನು ಹಾಕಲಾಯಿತು.

ಮೈಸೂರು ಸರಕಾರವು ಡಿ. ಎಚ್. ಚಂದ್ರಶೇಖರಯ್ಯ ಸಮಿತಿ ವರದಿ ಮತ್ತು ಕೇಂದ್ರದ ಮೆಹತಾ ಸಮಿತಿಯ ಶಿಫಾರಸ್ಸುಗಳನ್ನು ಗಮನದಲ್ಲಿಟ್ಟುಕೊಂಡು 1959ರಲ್ಲಿ ಗ್ರಾಮ ಪಂಚಾಯತ್ ಕಾಯ್ದೆಯನ್ನು ಜಾರಿಗೆ ತಂದಿತು. ಜನರು ಅರ್ಥಪೂರ್ಣ ಹಾಗೂ ಪರಿಣಾಮಕಾರಿ ಯಾಗಿ ಭಾಗವಹಿಸುವಿಕೆಗೆ ಮೂರು ಹಂತದ ಪಂಚಾಯತ್‌ರಾಜ್ ಸಂಸ್ಥೆಗಳನ್ನು ಸ್ಥಾಪಿಸಿಲಾಯಿತು. ಇವುಗಳಿಗೆ ಅಧಿಕಾರ, ಕಾರ್ಯಗಳು ಮತ್ತು ಜವಾಬ್ದಾರಿಗಳನ್ನು ನೀಡಿ ಇವುಗಳ ಮೂಲಕ ಗ್ರಾಮೀಣಾಭಿವೃದ್ಧಿ ಕಾರ್ಯಗಳನ್ನು ಅನುಷ್ಠಾನಗೊಳಿಸುವುದೇ ಈ ಕಾಯ್ದೆಯ ಮುಖ್ಯ ಉದ್ದೇಶವಾಗಿತ್ತು. 1939ರ ಮೈಸೂರು ಪಂಚಾಯತ್‌ಗಳ ಮತ್ತು ಸ್ಥಳೀಯ ಮಂಡಳಿಗಳ ಕಾಯ್ದೆಯನ್ನು ಅಧಿನಿಯಮವನ್ನಾಗಿ ಮಾಡಿದ ಕೂಡಲೇ ಪಂಚಾಯತಿಗಳು ಅಭಿವೃದ್ಧಿಪರ ಆಡಳಿತಾತ್ಮಕ ಹಾಗೂ ರಾಜಕೀಯ ಹೊಣೆಗಳನ್ನು ನಿರ್ವಹಿಸಲು ಸಜ್ಜುಗೊಂಡು ಸ್ಥಳೀಯ ಸ್ವಯಂ ಆಡಳಿತದ ಗುರಿಯನ್ನು ಹೊಂದಿದ್ದವು. ನವ ಮೈಸೂರು ರಾಜ್ಯದಲ್ಲಿ ಗ್ರಾಮೀಣ ಸ್ಥಳೀಯ ಸರಕಾರದ ವ್ಯವಸ್ಥೆಗೆ ಒಂದು ಉತ್ತಮ ಬುನಾದಿಯನ್ನು ಹಾಕಲಾಯಿತು. ಈ ಕಾಯ್ದೆ ಅನ್ವಯ ಗ್ರಾಮಮಟ್ಟದಲ್ಲಿ ಗ್ರಾಮಪಂಚಾಯತಿ, ತಾಲೂಕು ಮಟ್ಟದಲ್ಲಿ ತಾಲೂಕು ಅಭಿವೃದ್ಧಿ ಮಂಡಳಿ ಮತ್ತು ಜಿಲ್ಲಾ ಮಟ್ಟದಲ್ಲಿ ಜಿಲ್ಲಾ ಅಭಿವೃದ್ಧಿ ಪರಿಷತ್ ಎಂಬ ಮೂರು ಹಂತದ ಪಂಚಾಯತ್‌ರಾಜ್ ವ್ಯವಸ್ಥೆಯನ್ನು ಜಾರಿಗೆ ತರಲಾಯಿತು.[31] ಪ್ರತಿ ಕಂದಾಯ ಗ್ರಾಮಗಳು ನಿರ್ದಿಷ್ಟ ಚುನಾಯಿತ ಪ್ರತಿನಿಧಿಗಳಿರುವ

ಗ್ರಾಮಪಂಚಾಯತಿಯಲ್ಲಿ ಕನಿಷ್ಠ 11 ರಿಂದ 19 ಮಂದಿ ಸದಸ್ಯರಿರಬೇಕು. ಸದಸ್ಯರುಗಳು ಚುನಾವಣೆಯ ಮೂಲಕ ಆರಿಸಿ ಬರುವಂತಿರಬೇಕು. ಗ್ರಾಮಪಂಚಾಯತಿಯ ವ್ಯಾಪ್ತಿ ಕನಿಷ್ಠ 1,500 ರಿಂದ 10,000 ಜನಸಂಖ್ಯೆಯನ್ನು ಹೊಂದಿರಬೇಕು. ಗ್ರಾಮ ಅಥವಾ ಗ್ರಾಮಗಳ ಗುಂಪಿಗೆ ಒಂದು ಗ್ರಾಮ ಪಂಚಾಯತ್ ಇರಬೇಕು. ತಾಲೂಕು ಬೋರ್ಡುಗಳಿಗೆ ಪ್ರತ್ಯೇಕವಾಗಿ ನೇರ ಚುನಾವಣೆ ಗಳನ್ನು ನಡೆಸಬೇಕು. ಬ್ಲಾಕ್ ಮಟ್ಟದ ಬದಲಿಗೆ ತಾಲೂಕು ಕೇಂದ್ರವು ಆಡಳಿತ ಘಟಕವಾಗಿರಬೇಕು. ಇವು ಈ ಕಾಯ್ದೆಯ ವಿಶೇಷವಾಗಿದ್ದವು. ಇದರ ಕಾಲಾವಧಿ ನಾಲ್ಕು ವರ್ಷ ಇದ್ದು ಗ್ರಾಮಪಂಚಾಯತಿಯಲ್ಲಿ ಒಬ್ಬ ಅಧ್ಯಕ್ಷ ಮತ್ತು ಒಬ್ಬ ಉಪಾಧ್ಯಕ್ಷನನ್ನು ಆಯ್ಕೆ ಮಾಡಲಾಗುತ್ತದೆ. ಚುನಾಯಿತ ಪ್ರತಿನಿಧಿಗಳಲ್ಲಿ ದುರ್ಬಲವರ್ಗದವರಿಗೆ ಮತ್ತು ಮಹಿಳೆಯರಿಗೆ ಪ್ರಾತಿನಿಧ್ಯವನ್ನು ಒದಗಿಸಬೇಕು. ಗ್ರಾಮಕ್ಕೆ ಅವಶ್ಯಕವಾದ ಕಾರ್ಯಗಳನ್ನು ಗ್ರಾಮಪಂಚಾಯತ್ ನಿರ್ವಹಿಸಬೇಕು. ಅವಶ್ಯಕ ಕಾರ್ಯಗಳಲ್ಲಿ ಗ್ರಾಮ ರಸ್ತೆಗಳು, ಚರಂಡಿ, ಕುಡಿಯುವ ನೀರು, ವಿದ್ಯುತ್ ದೀಪಗಳ ಪೂರೈಕೆ, ಸ್ಮಶಾನ ಭೂಮಿಯ ನಿರ್ವಹಣೆ, ಮನೋರಂಜನಾ ಸ್ಥಳಗಳ ನೊಂದಣಿ, ಅಂಗಡಿ, ಹೋಟೆಲ್, ಸಂತೆಗಳ ನಿರ್ವಹಣೆ, ಸಾರ್ವಜನಿಕ ಕಟ್ಟಡಗಳ ರಕ್ಷಣೆ, ಸಾರ್ವಜನಿಕ ಆರೋಗ್ಯ ಮತ್ತು ಅರಣ್ಯ ಪ್ರದೇಶಗಳ ನಿರ್ವಹಣೆ ಮುಂತಾದವು ಸೇರಿದ್ದವು. ಜಿಲ್ಲಾ ಅಭಿವೃದ್ಧಿ ಪರಿಷತ್ ಒಂದು ಸಲಹಾ ಮತ್ತು ಮೇಲ್ವಿಚಾರಣಾ ಘಟಕವಾಗಿತ್ತು. ಗ್ರಾಮದ ವ್ಯವಹಾರಗಳನ್ನು ಮುನ್ನಡೆಸಲು ಒಂದು ಅಥವಾ ಹೆಚ್ಚಿನ ಸಮಿತಿಯನ್ನು ನೇಮಕ ಮಾಡುವ ಅಧಿಕಾರ ಪಂಚಾಯತಿಗೆ ಇರುತ್ತಿತ್ತು. ಗ್ರಾಮಪಂಚಾಯತ್‌ಗಳ ಕೆಲವು ಕೆಲಸಗಳನ್ನು ತಾಲೂಕ್ ಅಭಿವೃದ್ಧಿ ಬೋರ್ಡುಗಳಿಗೆ ವಹಿಸಲಾಗಿತ್ತು.

1959ರ ಪಂಚಾಯತ್‌ಕಾಯ್ದೆ ತಳಮಟ್ಟದ ಅಭಿವೃದ್ಧಿ ಪ್ರಕ್ರಿಯೆಯಲ್ಲಿ ಕೆಲವು ಬದಲಾವಣೆಗಳನ್ನು ತಂದರೂ ಅದು ಹಲವಾರು ಇತಿಮಿತಿಗಳನ್ನು ಹೊಂದಿತ್ತು. ಗ್ರಾಮ ಪಂಚಾಯತಿಗಳು ಹಣಕಾಸು ಮೂಲಗಳಲ್ಲಿ ಮುಖ್ಯವಾಗಿ ಕೇಂದ್ರ ಮತ್ತು ರಾಜ್ಯ ಸರಕಾರಗಳ ಅನುದಾನಗಳನ್ನು ಅವಲಂಬಿಸಿದ್ದವು. ಕರಸಂಗ್ರಹ, ವಿಕ್ರಯ ತೆರಿಗೆ, ಮತ್ತು ಪಂಚಾಯತ್ ಸ್ವತ್ತುಗಳಿಂದ ಬರುವ ಆದಾಯವನ್ನು ಸಂಗ್ರಹಿಸಲಾಗುತ್ತಿತ್ತು. ಆದರೆ ಅಂತಹ ಮೂಲಗಳು ಮತ್ತು ಅದರಿಂದ ಸಂಗ್ರಹವಾದ ಸಂಪನ್ಮೂಲಗಳು ತುಂಬಾ ಸೀಮಿತವಾಗಿದ್ದವು. ಜೊತೆಗೆ ಕೆಲವು ಸಂದರ್ಭಗಳಲ್ಲಿ ಸಂಪನ್ಮೂಲ ಸಂಗ್ರಹಣೆಗೆ ಪಂಚಾಯತಿಗಳು ತಹಸೀಲ್ದಾರರನ್ನು ವಿನಂತಿಸಬೇಕಿತ್ತು. ಪ್ರತಿ ಪಂಚಾಯತಿ ತನ್ನ ವ್ಯಾಪ್ತಿಯ ಪ್ರದೇಶದಿಂದ ಸಂಗ್ರಹಿಸಿದ ಆದಾಯದಿಂದ ಶೇ 30ರಷ್ಟನ್ನು ನೀಡಬಹುದಿತ್ತು. ವಾರ್ಷಿಕ ಬಜೆಟ್‌ನ್ನು ಪ್ರತಿ ವರ್ಷ ಪಂಚಾಯತಿ ತಯಾರಿಸಿ ತಾಲೂಕ್ ಬೋರ್ಡ್‌ನ ಬ್ಲಾಕ್ ಅಭಿವೃದ್ಧಿ ಅಧಿಕಾರಿಗಳಿಂದ ಅನುಮೋದನೆಯನ್ನು ಪಡೆಯಬೇಕಾಗಿತ್ತು. ಇದರ ಜತೆಗೆ ಅಂದಿನ ಅಸಮಾನ ಸಾಮಾಜಿಕ, ಆರ್ಥಿಕ, ಮತ್ತು ರಾಜಕೀಯ ವ್ಯವಸ್ಥೆ ಕೂಡ ಪಂಚಾಯತಿಯ ವಿಫಲತೆಗೆ ಕಾರಣವಾಗಿತ್ತು. ಅದರಲ್ಲೂ ಜಾತಿ ವ್ಯವಸ್ಥೆ ಪ್ರಧಾನ ಅಂಶವಾಗಿತ್ತು. ಸ್ಥಳೀಯ ಮೇಲ್ವರ್ಗಗಳು ಅಧಿಕಾರದ ಸಿಂಹಪಾಲನ್ನು ಹೊಂದಿದ್ದವು. ಗ್ರಾಮೀಣ ಪ್ರದೇಶಗಳಲ್ಲಿನ ದುರ್ಬಲ ವರ್ಗಗಳು ಧ್ವನಿ ಎತ್ತುವ ಸ್ಥಿತಿಯಲ್ಲಿ ಇರಲಿಲ್ಲ.

ಮೇಲೆ ವಿವರಿಸಿದ ದೋಷಗಳನ್ನು ಪರಿಹರಿಸಿ ಪಂಚಾಯತ್‌ರಾಜ್ ಸಂಸ್ಥೆಗಳನ್ನು ಇನ್ನಷ್ಟು ಬಲಗೊಳಿಸುವ ಉದ್ದೇಶದಿಂದ 1962ರಲ್ಲಿ ಕೊಂಡಜ್ಜಿ ಬಸಪ್ಪನವರ ನೇತೃತ್ವದಲ್ಲಿ ಸಮಿತಿಯನ್ನು ನೇಮಿಸಲಾಯಿತು.

ಸಮಿತಿಯು ಅಧ್ಯಯನ ನಡೆಸಿ 1963ರಲ್ಲಿ ತನ್ನ ವರದಿಯನ್ನು ಸರ್ಕಾರಕ್ಕೆ ಸಲ್ಲಿಸಿತು. ಜಿಲ್ಲಾ ಅಭಿವೃದ್ಧಿ ಸಲಹಾ ಸಮಿತಿಗಳ ಬದಲು ಜಿಲ್ಲಾ ಪರಿಷತ್‌ಗಳ ಸ್ಥಾಪನೆ ಮತ್ತು ಈ ಸಂಸ್ಥೆಗಳಿಗೆ ನೇರ ಚುನಾವಣೆ, ಜಿಲ್ಲಾ ಮಟ್ಟದಲ್ಲಿ ಕಾರ್ಯಾಂಗ ಘಟಕವನ್ನು ಸ್ಥಾಪಿಸಿ ತಾಲೂಕು ಅಭಿವೃದ್ಧಿ ಮಂಡಳಿ ಮತ್ತು ಗ್ರಾಮ ಪಂಚಾಯತಿಗಳೊಂದಿಗೆ ಸಾಂಸ್ಥಿಕ ಸಂಬಂಧ ಇರುವಂತೆ ಶಿಫಾರಸ್ಸು ಮಾಡಿತು. ಗ್ರಾಮಸಭೆಗಳನ್ನು ನಡೆಸುವಂತೆ ಸಮಿತಿಯು ಶಿಫಾರಸ್ಸು ಮಾಡಿತು. ಹೀಗೆ ಜಿಲ್ಲಾ ಪರಿಷತ್, ತಾಲೂಕ್ ಅಭಿವೃದ್ಧಿ ಬೋರ್ಡ್, ಗ್ರಾಮಸಭೆ ಮತ್ತು ನ್ಯಾಯ ಪಂಚಾಯತಿ ದೊಡಗೂಡಿದ ಗ್ರಾಮಪಂಚಾಯತಿಯನ್ನು ಸ್ಥಾಪಿಸುವಂತೆ ಸಮಿತಿ ಸಲಹೆ ನೀಡಿತು.[32] 1964ರ ಮೈಸೂರು ಪಂಚಾಯತ್‌ರಾಜ್ ಕಾಯ್ದೆಯು ಕೊಂಡಜ್ಜಿ ಬಸಪ್ಪ ಸಮಿತಿಯ ವರದಿಯನ್ನು ಆಧರಿಸಿದೆ. ಗ್ರಾಮ ಪಂಚಾಯತಿಯ ಸದಸ್ಯರ ಸಂಖ್ಯೆಯನ್ನು ಕನಿಷ್ಠ 9 ರಿಂದ 11 ಮತ್ತು ಗರಿಷ್ಠ 19 ರಿಂದ 15ಕ್ಕೆ ಇಳಿಸಿತು. ಜನಸಂಖ್ಯೆಗನುಗುಣವಾಗಿ ಸದಸ್ಯರ ಸಂಖ್ಯೆಯನ್ನು ನಿಗದಿಪಡಿಸಲಾಯಿತು. 1500 ಜನಸಂಖ್ಯೆ ಇರುವ ಪಂಚಾಯತಿಗೆ 9 ಸದಸ್ಯರನ್ನು, 5000 ಜನಸಂಖ್ಯೆಗಿಂತ ಹೆಚ್ಚಿಗೆ ಇರುವ ಪಂಚಾಯತಿಗೆ 15 ಜನ ಸದಸ್ಯರಿರಬೇಕೆಂದು ಹೇಳಿತು. ಗ್ರಾಮಪಂಚಾಯತಿಯ ಅಧ್ಯಕ್ಷ ಮತ್ತು ಉಪಾಧ್ಯಕ್ಷರ ಅಧಿಕಾರ ಮತ್ತು ಕಾರ್ಯಗಳ ಬಗ್ಗೆ ಪ್ರತ್ಯೇಕ ಪಟ್ಟಿಯನ್ನು ತಯಾರಿಸಲಾಯಿತು. ನ್ಯಾಯ ಪಂಚಾಯತಿಯಲ್ಲಿ ಕೆಲವು ಬದಲಾವಣೆಗಳನ್ನು ಮಾಡಲಾಯಿತು. ಗ್ರಾಮಸಭೆಗೆ ಸಂಬಂಧಿಸಿ ದಂತೆ ಸಮಿತಿಯ ಎಲ್ಲಾ ಶಿಫಾರಸ್ಸನ್ನು ಸರ್ಕಾರ ಪೂರ್ಣವಾಗಿ ಒಪ್ಪಿಕೊಂಡಿತು. ತಾಲೂಕು ಅಭಿವೃದ್ಧಿ ಮಂಡಳಿಗೆ ಸಂಬಂಧಿಸಿದಂತೆ ಬಸಪ್ಪ ಸಮಿತಿ ಮತ್ತು ಕಾಯ್ದೆಯಲ್ಲಿ ಕೆಲವು ವ್ಯತ್ಯಾಸಗಳಿದ್ದು ಸಮಿತಿಯು ಆಂಶಿಕ ಪರೋಕ್ಷ ಚುನಾವಣೆಗಳನ್ನು ಸೂಚಿಸಿತು. ಈ ಕಾಯ್ದೆಯು ಸದಸ್ಯರ ಸಂಖ್ಯೆ ಮತ್ತು ಗ್ರಾಮಪಂಚಾಯತಿ ನಿರ್ವಹಿಸುವ ಕಾರ್ಯಗಳನ್ನು ಹೊರತುಪಡಿಸಿ ಪೂರ್ತಿಯಾಗಿ ಕೊಂಡಜ್ಜಿ ಬಸಪ್ಪ ಸಮಿತಿಯ ಶಿಫಾರಸ್ಸನ್ನೇ ಹೋಲುತ್ತವೆ. ಆದರೆ ಸರಕಾರ ಈ ಕಾಯ್ದೆಯ ಬಗ್ಗೆ ಹೆಚ್ಚು ಆಸಕ್ತಿ ತೋರಲಿಲ್ಲ. 1969ರಲ್ಲಿ ಸರಕಾರವು ಪಂಚಾಯತ್‌ರಾಜ್ ಸಂಸ್ಥೆಗಳ ಸಮಸ್ಯೆಗಳ ಬಗ್ಗೆ ಚರ್ಚಿಸಿ ಮಸೂದೆಯ ಶಿಫಾರಸ್ಸುಗಳನ್ನು ಅನುಮೋದಿಸಿದರೂ ಕೆಲವು ರಾಜಕೀಯ ಕಾರಣಗಳಿಂದ ಅವು ಅನುಷ್ಠಾನಕ್ಕೆ ಬರಲಿಲ್ಲ. ಇದಕ್ಕೆ ಬದಲಾಗಿ ಸರಕಾರವು 1959ರ ಮೈಸೂರು ಗ್ರಾಮಪಂಚಾಯತಿ ಮತ್ತು ಸ್ಥಳೀಯ ಬೋರ್ಡ್‌ಕಾಯ್ದೆಗೆ 1969, 1978 ಮತ್ತು 1983ರಲ್ಲಿ ಕೆಲವು ತಿದ್ದುಪಡಿಗಳನ್ನು ತಂದು ಜಾರಿಗೊಳಿಸಿತು.[33] ಪಂಚಾಯತ್‌ರಾಜ್ ಸಂಸ್ಥೆಗಳ ಕಾಲಾವಧಿಯನ್ನು ನಾಲ್ಕು ವರ್ಷದಿಂದ ಐದು ವರ್ಷಕ್ಕೆ ಹೆಚ್ಚಿಸಿದ್ದು, ಗ್ರಾಮಪಂಚಾಯತ್ ಮತ್ತು ತಾಲೂಕು ಬೋರ್ಡ್‌ಗಳಲ್ಲಿ ಸಾಮಾಜಿಕ ನ್ಯಾಯ ಸಮಿತಿ ರಚನೆ ಮತ್ತು ಕೆಳಜಾತಿಗಳ ಕಲ್ಯಾಣ ಕಾರ್ಯಕ್ರಮಗಳಿಗೆ ಪ್ರಾಮುಖ್ಯತೆ ಇತ್ಯಾದಿಗಳು ಈ ತಿದ್ದುಪಡಿಯ ಪ್ರಮುಖ ಅಂಶಗಳು. ಇದೇ ಅವಧಿಯಲ್ಲಿ ಪಂಚಾಯತ್‌ರಾಜ್ ಸಂಸ್ಥೆಗಳನ್ನು ಪುನರ್‌ಸಂಘಟಿಸುವ ಪ್ರಯತ್ನಗಳು ಕೇಂದ್ರ ಮಟ್ಟದಲ್ಲಿ ನಡೆದುದರ ಬಗ್ಗೆ ಈಗಾಗಲೇ ಚರ್ಚಿಸಲಾಗಿದೆ.

## 1.4. 1983ರ ಕರ್ನಾಟಕ ಪಂಚಾಯತ್‌ರಾಜ್ ಕಾಯ್ದೆ

ಕರ್ನಾಟಕ ಪಂಚಾಯತ್‌ರಾಜ್ ವ್ಯವಸ್ಥೆಯ ಇತಿಹಾಸದಲ್ಲಿ 1983ನೇ ವರ್ಷವು ಅತಿ ಮಹತ್ವದ್ದಾಗಿದೆ. ಮೊಟ್ಟ ಮೊದಲಿಗೆ ಕರ್ನಾಟಕದಲ್ಲಿ ಕಾಂಗ್ರೆಸ್ ಪಕ್ಷವು ಅಧಿಕಾರ ಕಳೆದುಕೊಂಡು ಜನತಾಪಕ್ಷ ಅಧಿಕಾರಕ್ಕೆ ಬಂತು. ಪಂಚಾಯತ್‌ರಾಜ್ ಸಂಸ್ಥೆಗಳನ್ನು ಪುನರುಜ್ಜೀವಗೊಳಿಸುವ ಭರವಸೆಯನ್ನು ತನ್ನ ಚುನಾವಣಾ

ಪ್ರಣಾಳಿಕೆಯಲ್ಲಿ ಜನತಾಪಕ್ಷವು ನೀಡಿತ್ತು. ಆ ಭರವಸೆಯನ್ನು ನೆರವೇರಿಸುವ ಸಲುವಾಗಿ ಜನತಾ ಸರಕಾರವು ಕೇಂದ್ರದ ಅಶೋಕ ಮೆಹತಾ ಸಮಿತಿಯ ಶಿಫಾರಸ್ಸುಗಳನ್ನು ಗಮನದಲ್ಲಿಟ್ಟುಕೊಂಡು 1983ರಲ್ಲಿ ಕರ್ನಾಟಕ ಜಿಲ್ಲಾ ಪರಿಷತ್, ತಾಲೂಕು ಪಂಚಾಯತ್ ಸಮಿತಿಗಳು, ಮಂಡಲ ಪಂಚಾಯತ್ ಮತ್ತು ನ್ಯಾಯ ಪಂಚಾಯತ್‌ಗಳ ಕಾಯ್ದೆಯನ್ನು ಜಾರಿಗೊಳಿಸಿತು. ಇದರಂತೆ ಮೂರು ಸ್ತರದ ಪಂಚಾಯತ್ ಸಂಸ್ಥೆಗಳು ಇದ್ದರು ಹೆಚ್ಚು ಅಧಿಕಾರಗಳು ಜಿಲ್ಲಾ ಪರಿಷತ್ ಮತ್ತು ಮಂಡಲ ಪಂಚಾಯತ್‌ಗಳಿಗೆ ವಹಿಸಲಾಗಿತ್ತು. ಮಧ್ಯದ ಸ್ತರದಲ್ಲಿ ತಾಲೂಕು ಪಂಚಾಯತ್ ಸಮಿತಿ ಇದ್ದು, ಇದು ಮಂಡಲ ಪಂಚಾಯತ್‌ಗಳ ಕಾರ್ಯದಲ್ಲಿ ಸಮನ್ವಯ ಹಾಗೂ ಮೇಲ್ವಿಚಾರಣಾ ಪಾತ್ರವನ್ನು ಹೊಂದಿತ್ತು. ತಳಮಟ್ಟದ ವ್ಯವಸ್ಥೆಯಾದ ಮಂಡಲ ಪಂಚಾಯತ್‌ಗಳಿಗೆ ಹೆಚ್ಚಿನ ಅಧಿಕಾರಗಳನ್ನು ಕೊಡಲಾಯಿತು. ಈ ಕಾಯ್ದೆ ಅನ್ವಯ ಹಣಕಾಸು ಅವಶ್ಯಕತೆಯನ್ನು ಪರಿಶೀಲಿಸಲು ಐದು ವರ್ಷಗಳಿಗೊಮ್ಮೆ ಒಂದು ಹಣಕಾಸು ಆಯೋಗವನ್ನು ರಚಿಸುವಂತೆ ಸಮಿತಿ ಶಿಫಾರಸ್ಸು ಮಾಡಿತು. ಸ್ಥಳೀಯ ಸಂಸ್ಥೆಗಳಲ್ಲಿ ಶೇ 25ರಷ್ಟು ಮಹಿಳೆಯರಿಗೆ, ಆಯಾ ಪ್ರದೇಶದ ಜನಸಂಖ್ಯೆಗನುಗುಣವಾಗಿ ಪರಿಶಿಷ್ಟ ಜಾತಿ/ಪರಿಶಿಷ್ಟ ಪಂಗಡದವರಿಗೆ ಮೀಸಲಾತಿ ಮತ್ತು ಹಿಂದುಳಿದವರಿಗೆ ಮೀಸಲಾತಿಯನ್ನು ನೀಡಲಾಯಿತು. ಗ್ರಾಮೀಣ ಪ್ರದೇಶದ ದುರ್ಬಲ ವರ್ಗದವರಿಗೆ ಹೆಚ್ಚು ಪ್ರಾತಿನಿಧ್ಯ ದೊರೆಯಿತು. ಜಿಲ್ಲಾ ಪರಿಷತ್ ಮುಖ್ಯ ಆಡಳಿತ ಘಟಕವಾಗಿ ಮತ್ತು ಸಮನ್ವಯ ಹಾಗೂ ಸಹಕಾರ ರೂಪದಲ್ಲಿ ಈ ಘಟಕ ಕಾರ್ಯನಿರ್ವಹಿಸಬೇಕು. ಜಿಲ್ಲಾ ಪರಿಷತ್ ರೂಪಿಸಿದ ಹಾಗೂ ಅದಕ್ಕೆ ಸರಕಾರ ವರ್ಗಾಯಿಸಿದ ಯೋಜನೆ ಮತ್ತು ಕಾರ್ಯಕ್ರಮಗಳನ್ನು ಜಾರಿಗೊಳಿಸಲು ಅಧಿಕಾರಯುತ ಸಂಸ್ಥೆಯಾಗಿದ್ದರೆ, ಮಂಡಲ ಪಂಚಾಯತಿಯು ಹಳ್ಳಿ ಮತ್ತು ತಾಲೂಕುಗಳ ನಡುವೆ ಸ್ಥಾಪನೆಗೊಂಡ ಮೊದಲನೆ ಹಂತದ ಚುನಾಯಿತ ಸಂಸ್ಥೆಯಾಗಿದೆ.[34] ತಳಮಟ್ಟದಲ್ಲಿ ಮಂಡಲ ಪಂಚಾಯತಿಗಳು ಸಾಮಾಜಿಕ ಪ್ರಜಾಪ್ರಭುತ್ವದ ತಳಹದಿಯ ಮೇಲೆ ರಚನೆ ಗೊಂಡಿದ್ದವು.

ಪ್ರತಿ ಮಂಡಲ ಪಂಚಾಯತಿಯು ಸಾಮಾನ್ಯವಾಗಿ ಒಂದು ಅಥವಾ ಹೆಚ್ಚು ಗ್ರಾಮಗಳನ್ನು ಒಳಗೊಂಡಿದೆ. 1983ರ ಅಧಿನಿಯಮದ ಪ್ರಕಾರ ಕನಿಷ್ಠ 8,000 ದಿಂದ 12,000 ಗರಿಷ್ಠ ಜನಸಂಖ್ಯೆಯುಳ್ಳ ಗ್ರಾಮಗಳ ಗುಂಪಿನ ವ್ಯಾಪ್ತಿಗೆ ಒಂದು ಮಂಡಲ ಪಂಚಾಯತ್ ಮತ್ತು ಪ್ರತಿ 400 ಜನಸಂಖ್ಯೆಗೆ ಒಬ್ಬ ಸದಸ್ಯನಿರುತ್ತಾನೆ. ವಿರಳ ಜನಸಂಖ್ಯೆಯುಳ್ಳ ಗ್ರಾಮಗಳನ್ನು ಅಧಿಕವಾಗಿ ಹೊಂದುವಂತಹ ಜಿಲ್ಲೆಗಳಲ್ಲಿ 4,000 ಜನಸಂಖ್ಯೆಗೆ ಮತ್ತು 8ಕಿ.ಮೀ ವ್ಯಾಪ್ತಿಗೆ ಒಳಪಟ್ಟಂತೆ ಮಂಡಲ ಪಂಚಾಯತ್‌ಗಳನ್ನು ರಚಿಸುವಂತೆ ಅವಕಾಶ ಕಲ್ಪಿಸಲಾಗಿದೆ. ಚುನಾಯಿತ ಸದಸ್ಯರಲ್ಲಿ ಒಬ್ಬರು ಪ್ರಧಾನರನ್ನಾಗಿ ಮತ್ತೊಬ್ಬರು ಉಪಪ್ರಧಾನರನ್ನಾಗಿ ಆಯ್ಕೆ ಆಗತಕ್ಕದ್ದು. ಪ್ರಧಾನರು ಪಂಚಾಯತ್ ಸಭೆಯನ್ನು ಕರೆದು ಸಭೆಯ ಅಧ್ಯಕ್ಷತೆಯನ್ನು ವಹಿಸುತ್ತಾರೆ. ಪ್ರತಿ ತಿಂಗಳು ಸಭೆ ಸೇರಬೇಕು. ಕೆಲವು ನಾಗರಿಕ ಕಾರ್ಯಗಳ ಜೊತೆಗೆ, ಮೂಲಭೂತ ಅವಶ್ಯಕತೆಗಳ ಪೂರೈಕೆ, ಕೃಷಿ, ಪಶುಸಂಗೋಪನೆ, ಗ್ರಾಮೀಣ ಅರಣ್ಯ ಮತ್ತು ಮಂಡಲ ಪ್ರದೇಶದ ಅಭಿವೃದ್ಧಿಗೆ ಸಂಬಂಧಿಸಿದ ಕಾರ್ಯಗಳನ್ನು ಮಂಡಲ ಪಂಚಾಯತ್‌ಗೆ ವಹಿಸಲಾಗಿತ್ತು. ದುರ್ಬಲ ವರ್ಗದ ಕಲ್ಯಾಣ ಸಹ ಇದರ ಹೊಣೆಗಾರಿಕೆಯ ಕಾರ್ಯವಾಗಿತ್ತು. ಕಾಯ್ದೆಯಲ್ಲಿ ಮೂರು ಸ್ಥಾಯಿ ಸಮಿತಿಗಳ ರಚನೆಗೆ ಅವಕಾಶ ಕಲ್ಪಿಸಲಾಗಿತ್ತು. 1. ಉತ್ಪಾದನಾ ಸಮಿತಿ : ಕೃಷಿ ಉತ್ಪನ್ನ, ಪಶು ಸಂಗೋಪನಾ ಮತ್ತು ಗ್ರಾಮೀಣ ಕೈಗಾರಿಕೆಗಳ ಸಂಬಂಧಿಸಿದ

ಕಾರ್ಯಗಳ ಉಸ್ತುವಾರಿ), 2. ಸಾಮಾಜಿಕ ನ್ಯಾಯ ಸಮಿತಿ : ಪರಿಶಿಷ್ಟ ಜಾತಿ/ವರ್ಗ, ಮಹಿಳೆ ಮತ್ತು ದುರ್ಬಲ ವರ್ಗದವರ ಕಲ್ಯಾಣ ಕಾರ್ಯಗಳನ್ನು, ಸಾಮಾಜಿಕ ಆರ್ಥಿಕ ಅಭಿವೃದ್ಧಿ ಮತ್ತು ಸಾಮಾಜಿಕ ನ್ಯಾಯವನ್ನು ದೊರಕಿಸಿಕೊಡುವುದು ಮತ್ತು 3. ಸೌಲಭ್ಯ ಸಮಿತಿ: ಶಿಕ್ಷಣ, ಆರೋಗ್ಯ, ಸಾರ್ವಜನಿಕ ಕಾಮಗಾರಿ ಮತ್ತಿತರ ಕಾರ್ಯಗಳ ಉಸ್ತುವಾರಿಯನ್ನು ನೋಡಿಕೊಳ್ಳುತ್ತಿದ್ದವು. ಪ್ರಧಾನ ಮತ್ತು ಉಪ ಪ್ರಧಾನರೊಳಗೊಂಡ ಪ್ರತಿ ಸ್ಥಾಯಿ ಸಮಿತಿಗೆ ಮೂರು ರಿಂದ ಐದು ಜನ ಸದಸ್ಯರಿರುತ್ತಾರೆ. ಸಾಮಾಜಿಕ ನ್ಯಾಯ ಸಮಿತಿಯಲ್ಲಿ ಒಬ್ಬ ಮಹಿಳೆ ಮತ್ತು ಪರಿಶಿಷ್ಟ ಜಾತಿ/ವರ್ಗದ ಒಬ್ಬರು ಸದಸ್ಯರು ಇರಲೇಬೇಕು. ಪಂಚಾಯತ್ ತೀರ್ಮಾನ ಮತ್ತು ನಿರ್ದೇಶನಗಳನ್ನು ಮತ್ತು ಆಡಳಿತಾತ್ಮಕ ಜವಾಬ್ದಾರಿಗಳನ್ನು ನಿರ್ವಹಿಸಲು ಖಾಯಂ ಕಾರ್ಯದರ್ಶಿಯು ಇರುತ್ತಾನೆ. ಸರಕಾರವು ಪ್ರತಿ ವರ್ಷ ರೂ. 7.50ಲಕ್ಷ ರೂಗಳನ್ನು ತಲಾನುದಾನವನ್ನು ಜಿಲ್ಲಾ ಪರಿಷತ್ ಮೂಲಕ ಒದಗಿಸುತ್ತದೆ. ಇದು ಹಣಕಾಸಿನ ಪ್ರಧಾನ ಮೂಲವಾಗಿತ್ತು. ಮಂಡಲ ವ್ಯಾಪ್ತಿಯೊಳಗಿನ ಕಟ್ಟಡ ಮತ್ತಿತರ ಮೂಲಗಳಿಂದ ಸ್ಥಳೀಯ ತೆರಿಗೆಯನ್ನು ಸಂಗ್ರಹಿಸುವ ಅಧಿಕಾರವನ್ನು ಮಂಡಲ ಪಂಚಾಯತ್ ಹೊಂದಿತ್ತು. ಜಿಲ್ಲಾ ಪರಿಷತ್ ಪಂಚಾಯತ್‌ಗಳ ಬಜೆಟ್‌ನ್ನು ಅನುಮೋದಿಸುವ ಅಧಿಕಾರವನ್ನು ಹೊಂದಿದೆ. ಹೀಗೆ ಮಂಡಲ ಪಂಚಾಯತಿಗಳ ಮಟ್ಟದಲ್ಲಿ ಪರಿಣಾಮಕಾರಿಯಾಗಿ ಕೆಲಸ ನಿರ್ವಹಿಸಲು ಅವಶ್ಯಕ ಕಾರ್ಯಗಳು ಮತ್ತು ಅಧಿಕಾರಗಳನ್ನು ಕೊಡಲಾಗಿತ್ತು.[35] 1983ರ ಕಾಯ್ದೆಯು ವಿಕೇಂದ್ರಿಕರಣ ವ್ಯವಸ್ಥೆಗೆ ಹೊಸ ಅಡಿಪಾಯ ಹಾಕಿತು. 1984ರ ಮೇ ಯಲ್ಲಿ ಜಿಲ್ಲಾ ಯೋಜನೆ ಸಮಿತಿಯ ವರದಿಯ ಪ್ರಕಾರ ಕ್ಷೇತ್ರ ಮಟ್ಟದಲ್ಲಿ ಯೋಜನೆಗಳು ತಯಾರಾಗಬೇಕು ಎಂದು ಹೇಳಿತು. ಜಿಲ್ಲಾ ಯೋಜನಾ ಸಮಿತಿಗಳಿಗೆ ರಾಜ್ಯವು ನೇರವಾಗಿ ಅನುದಾನಗಳನ್ನು ಒದಗಿಸುತ್ತಿತ್ತು. ಈ ಪದ್ಧತಿಯನ್ನು ಮಹಾರಾಷ್ಟ್ರ, ಗುಜರಾತ್, ಕರ್ನಾಟಕ, ಉತ್ತರಪ್ರದೇಶ ಸರ್ಕಾರಗಳು ಜಾರಿಗೆ ತಂದವು. ರಾಜ್ಯಗಳು ಸರಾಸರಿ ಶೇ. 30.40ರಷ್ಟು ಹಣವನ್ನು ಈ ಸಂಸ್ಥೆಗಳಿಗೆ ಒದಗಿಸುತ್ತಿದ್ದವು. ಪ್ರಾಯೋಗಿಕ ಅಧ್ಯಯನಗಳ ಸಮೀಕ್ಷೆಗಳ ಪ್ರಕಾರ ಪಂಚಾಯತ್‌ರಾಜ್ ಕಾರ್ಯ ನಿರ್ವಹಣೆಯಲ್ಲಿ ಬದಲಾವಣೆ ತರುವಲ್ಲಿ ಈ ವ್ಯವಸ್ಥೆ ಸಮರ್ಥವಾಗಿತ್ತು ಎಂದು ಹೇಳಿವೆ.[36] ಏನೇ ಆದರೂ ಈ ವ್ಯವಸ್ಥೆಯು ಪಂಚಾಯತಿಯ ನಾಯಕತ್ವ ಮತ್ತು ಗ್ರಾಮೀಣ ಅಧಿಕಾರದ ಸಂರಚನೆಯನ್ನು ಪೂರ್ಣವಾಗಿ ಬದಲಾಯಿಸುವಲ್ಲಿ ಸಫಲವಾಗಲಿಲ್ಲ. ಈ ವ್ಯವಸ್ಥೆಯು ಹೆಚ್ಚು ಕಡಿಮೆ ಶ್ರೀಮಂತರ ಭೂಮಾಲಿಕರ ಹಾಗೂ ಬಲಾಢ್ಯ ಜಾತಿಗಳ ಕ್ಷೇತ್ರವಾಗಿ ಉಳಿಯಿತು. ಆದುದರಿಂದ ಈ ಸಂಪನ್ಮೂಲಗಳು ವಿಕೇಂದ್ರೀಕೃತ ಯೋಜನೆಗೆ ಅಷ್ಟೊಂದು ಸಹಕಾರಿಯಾಗಲಿಲ್ಲ. ಜಿಲ್ಲಾ ಯೋಜನೆಯ ಕಾರ್ಯಕ್ಷಮತೆಯನ್ನು ಇನ್ನು ಹೆಚ್ಚಿಸಬೇಕೆಂದು ಮತ್ತು ಕೆಲವು ತಾಂತ್ರಿಕ ಅಂಶಗಳ ಜೊತೆಗೆ ತರಬೇತಿಯನ್ನು ಕೊಡಬೇಕೆಂದು ಹೇಳಿದೆ.[37]

ಈ ಎಲ್ಲ ಅಂಶಗಳನ್ನು ಪರಿಕ್ಷೀಸಲು 1989ರಲ್ಲಿ ಸರಕಾರವು ಜಿಲ್ಲಾ ಪರಿಷತ್ ಮತ್ತು ಮಂಡಲ ಪಂಚಾಯತಿ ಮೌಲ್ಯಮಾಪನ ಸಮಿತಿಯನ್ನು ಕೃಷ್ಣಸ್ವಾಮಿಯವರ ಅಧ್ಯಕ್ಷತೆಯಲ್ಲಿ ಮತ್ತು ಹೊನ್ನಾವರ್‌ರವರ ಅಧ್ಯಕ್ಷತೆಯಲ್ಲಿ ಹಣಕಾಸು ಆಯೋಗವನ್ನು ಸರಕಾರವು ನೇಮಕ ಮಾಡಿತು. ಕೃಷ್ಣಸ್ವಾಮಿ ಆಯೋಗವು ರಾಜ್ಯದ ಕೆಲವು ಜಿಲ್ಲೆಗಳಲ್ಲಿ ಜಿಲ್ಲಾ ಪರಿಷತ್ ಮತ್ತು ಮಂಡಲ ಪಂಚಾಯತ್‌ಗಳ ಕಾರ್ಯ ಸಾಧನೆ ಬಗ್ಗೆ ಉತ್ಸಾಹ ವ್ಯಕ್ತಪಡಿಸಿತು. ಗ್ರಾಮೀಣ ಪ್ರದೇಶದ ಮೂಲಭೂತ ಅವಶ್ಯಕತೆಗಳಾದ ಶಿಕ್ಷಣ, ಆರೋಗ್ಯ

ಸೇವೆಗಳು, ವೇತನ ವಿತರಣೆ, ವಸತಿ ಯೋಜನೆಗಳು, ಅರಣ್ಯ, ತೋಟಗಾರಿಕೆ ಮುಂತಾದ ಕಾರ್ಯಗಳು ಅನುಷ್ಠಾನಗೊಂಡಿದ್ದವು. ಅಭಿವೃದ್ಧಿ ಚಟುವಟಿಕೆಗಳಿಗೆ ಸ್ಥಳೀಯ ಸಂಪನ್ಮೂಲಗಳನ್ನು ಬಳಸಲು ತಳಮಟ್ಟದ ಸಂಸ್ಥೆಯಾದ ಮಂಡಲ ಪಂಚಾಯತ್ ಮುಂದಾಯಿತು. ಮಂಡಲ ಪ್ರಧಾನರಿಗೆ ಹೆಚ್ಚಿನ ಅಧಿಕಾರಗಳು ಇದ್ದುದರಿಂದ ಜನತೆಯ ವಿಶ್ವಾಸಕ್ಕೆ ಪಾತ್ರರಾಗಿದ್ದರು. ಎಲ್ಲಾ ವರ್ಗಗಳ ಪ್ರತಿನಿಧೀಕರಣ ಪ್ರಗತಿದಾಯಕವಾಗಿತ್ತು. ಈ ಎಲ್ಲಾ ಅಂಶಗಳೊಂದಿಗೆ ಸಂಪನ್ಮೂಲಗಳನ್ನು ಇನ್ನಷ್ಟು ಹೆಚ್ಚಿಸಬೇಕೆಂದು ಸಮಿತಿಯ ವರದಿಯಲ್ಲಿ ಹೇಳಿತ್ತು.[38] ಅಧಿಕಾರ ವರ್ಗ ತಮ್ಮ ಕಾರ್ಯದಲ್ಲಿ ನೈಜತೆಯನ್ನು ಇನ್ನೂ ಹೊಂದಬೇಕು ಎಂದು ಹೇಳಲಾಗಿದೆ. ಗ್ರಾಮಸಭಯ ಬಗ್ಗೆ ಸಮಾಧಾನಕರ ಉತ್ತರವಿರಲಿಲ್ಲ. ನಿಯಮಿತವಾಗಿ ಗ್ರಾಮಸಭೆಗಳು ನಡೆದಿಲ್ಲ ಎಂದು ವರದಿಯಲ್ಲಿ ಹೇಳಲಾಗಿದ್ದು ಜಿಲ್ಲಾ ಪರಿಷತ್ ಮತ್ತು ಮಂಡಲ ಪಂಚಾಯತ್‌ಗಳ ಮದ್ಯೆ ಇರುವ ಸಂಬಂಧ ಸುಧಾರಿಸಬೇಕೆಂದು ಸಮಿತಿಯ ವರದಿಯಲ್ಲಿ ಹೇಳಿತು. ಸುಮಾರು ಐದರಿಂದ ಆರು ವರ್ಷಗಳ ಕಾಲ ಮಂಡಲ ಪಂಚಾಯತ್ ಮತ್ತು ಜಿಲ್ಲಾ ಪರಿಷತ್ ಕಾರ್ಯ ನಿರ್ವಹಣೆಯ ಬಗ್ಗೆ ಉತ್ತಮ ವರದಿ ಇದಾಗಿತ್ತು. ಹೊನ್ನಾವರ ಹಣಕಾಸು ಆಯೋಗವು ಕೆಲವೊಂದು ಹಣಕಾಸಿಗೆ ಸಂಬಂಧ ಪಟ್ಟ ಶಿಫಾರಸ್ಸುಗಳನ್ನು ಪಟ್ಟಿ ಮಾಡಿತು. ಸರಕಾರದ ಸಹಾಯ ಧನವನ್ನು ಪ್ರತಿ ವರ್ಷ ಶೇ 12ರಷ್ಟು ಏರಿಸಬೇಕು ಈ ಎರಡು ಸ್ತರಗಳಿಗೆ 1:2ರ ಪ್ರಮಾಣದಲ್ಲಿ ವಿತರಣೆಯಾಗಬೇಕು. ವಿಭಾಗದ ರಸೀದಿಗಳನ್ನು ಮಂಡಲ ಪಂಚಾಯತ್‌ಗಳಿಗೆ ವರ್ಗಾಯಿಸಬೇಕು, ಮೂಲಭೂತ ಸೇವಾಸೌಲಭ್ಯ ನಿರ್ವಹಣೆಗೆ ಅಗತ್ಯವಾದ ಸಂಪನ್ಮೂಲಗಳನ್ನು ಹೆಚ್ಚಿಸಬೇಕೆಂದು ವರದಿ ಸೂಚಿಸಿತು.[39] ಆಯಾ ಹಂತದ ಸಾಮರ್ಥ್ಯಕ್ಕೆ ಹೊಂದಿಕೊಳ್ಳುವಂತಹ ಕಾರ್ಯಗಳನ್ನು ಆಯಾ ಸಂಸ್ಥೆಗಳಿಗೆ ವಿಕೇಂದ್ರಿಕರಿಸಬೇಕು. ಕೆಳಗಿನ ಹಂತದ ಸಂಸ್ಥೆ ನಿರ್ವಹಿಸಬಹುದಾದ ಕರ್ತವ್ಯಗಳು ಮೇಲಿನ ಹಂತದ ವ್ಯಾಪ್ತಿಗೆ ಸೇರಬಾರದು. ಪ್ರತಿಯೊಂದು ಹಂತದ ವ್ಯವಸ್ಥೆಯ ಕಾರ್ಯವ್ಯಾಪ್ತಿಯು ಅದರ ಶಕ್ಯಾನುಸಾರವಾಗಿರಬೇಕು ಎಂದು ಸಮಿತಿ ಅಭಿಪ್ರಾಯಪಟ್ಟಿತು.

1987-88ರಿಂದ ಪಂಚಾಯತ್‌ರಾಜ್ ಸಂಸ್ಥೆಗಳು ಅಸ್ತಿತ್ವಕ್ಕೆ ಬಂದಾಗಿನಿಂದ ಇಲ್ಲಿಯವರೆಗೂ ರಾಜ್ಯ ಸರಕಾರವು ಯೋಜನಾ ಗಾತ್ರದ ಬಹುಪಾಲು ಅನುದಾನವನ್ನು ಜಿಲ್ಲಾ ಯೋಜನಾ ಕಾರ್ಯಕ್ರಮಗಳಿಗೆ ನೀಡುತ್ತಿವೆ. ಜಿಲ್ಲಾ ವಲಯ ಪ್ರಾರಂಭಿಕ ವರ್ಷಗಳಲ್ಲಿ ಒಟ್ಟು ಯೋಜನಾ ಗಾತ್ರದ ಪ್ರತಿಶತ 30ಕ್ಕೂ ಹೆಚ್ಚಿನ ಅನುದಾನವನ್ನು ಹೊಂದಿತ್ತು. 1987-88ರಲ್ಲಿ ರೂ 365 ಕೋಟಿಗಳನ್ನು ನಿಗದಿಪಡಿಸಿದರೆ 2000-01ನೇ ಸಾಲಿನಲ್ಲಿ 1697ಕೋಟಿಗಳನ್ನು ನಿಗಧಿಪಡಿಸಿದೆ.[40] ರಾಜ್ಯದ ಯೋಜನಾ ವೆಚ್ಚದಿಂದ 1987-91ರ ಅವಧಿಯಲ್ಲಿ ಜಿಲ್ಲಾ ಪರಿಷತ್‌ಗಳಿಗೆ ಶೇ.23 ರಿಂದ 27 ಮತ್ತು ಸುಮಾರು ಶೇ.60 ರಿಂದ 84ರವರೆಗೆ ರಾಜ್ಯಕ್ಕೆ ಕೇಂದ್ರ ಸರ್ಕಾರದ ಯೋಜನಾ ವೆಚ್ಚದಿಂದ ಅಭಿವೃದ್ಧಿ ಕಾರ್ಯಗಳಿಗೆ ಹಣಕಾಸು ಬಿಡುಗಡೆ ಮಾಡಲಾಯಿತು. 1987-88ರವರೆಗೆ ಜಿಲ್ಲಾ ಪರಿಷತ್‌ಗಳಿಗೆ ಒಟ್ಟು ಅಭಿವೃದ್ಧಿ ಕಾರ್ಯಗಳಿಗೆ ರೂ.1747.00 ರೂ.ಗಳನ್ನು ನೀಡಲಾಗಿದೆ.[41] ಈ ಹಣದ ಬಳಕೆಯಲ್ಲಿ ಗ್ರಾಮೀಣಾಭಿವೃದ್ಧಿ ಕಾರ್ಯಗಳಾದ ಬಡತನ ನಿವಾರಣೆ, ಕೃಷಿ, ಸಂಪರ್ಕಕ್ಕೆ ಹೆಚ್ಚು ಪ್ರಾಶಸ್ತ್ಯವನ್ನು ನೀಡಲಾಯಿತು. 1987-92ರ ಅವಧಿವರೆಗೆ ಕೇಂದ್ರ ಸರಕಾರದ ಗ್ರಾಮೀಣಾಭಿವೃದ್ಧಿ ಕಾರ್ಯಕ್ರಮಗಳಾದ ಬಡತನ ನಿರ್ಮೂಲನಾ ಕಾರ್ಯಕ್ರಮಗಳು ಅನುಷ್ಠಾನಗೊಂಡಿದ್ದವು. ಜವಹಾರ್ ರೋಜ್‌ಗಾರ್ ಯೋಜನೆ, (ಜೆ.ಆರ್.ವೈ) ಸಮಗ್ರ ಗ್ರಾಮೀಣಾಭಿವೃದ್ಧಿ

ಯೋಜನೆ (ಐ.ಆರ್.ಡಿ.ಪಿ) ಮುಂತಾದ ಕಾರ್ಯಕ್ರಮಗಳನ್ನು ಜಾರಿಗೊಳಿಸಲು ಐ.ಆರ್.ಡಿ.ಪಿ ಯೋಜನೆಯ ಅಡಿಯಲ್ಲಿ 6.83 ಲಕ್ಷದಷ್ಟು ಗುರಿ ಸಾಧನೆಯಡಿಯಲ್ಲಿ 7.5ಲಕ್ಷದಷ್ಟು ಈ ಯೋಜನೆಯ ಪ್ರಯೋಜನ ಪಡೆದರೆ, ಜೆ.ಆರ್.ವೈ ಯೋಜನೆಯಡಿಯಲ್ಲಿ 52.4ದಶಲಕ್ಷ ಮಾನವ ದಿನಗಳ ಗುರಿ ಸಾಧನೆಯಡಿಯಲ್ಲಿ 122.5ಮಿಲಿಯನ್ ಮಾನವ ಶ್ರಮ ದಿನಗಳ ಉದ್ಯೋಗವನ್ನು ಸೃಷ್ಟಿಸಲಾಯಿತು.[42] ಹೀಗೆ ಎರಡು ಹಂತದ ಪಂಚಾಯತ್‌ರಾಜ್ ವ್ಯವಸ್ಥೆಯ ಅವಧಿಯಲ್ಲಿ ಗ್ರಾಮೀಣಾಭಿವೃದ್ಧಿಯನ್ನು ಸಾಕಷ್ಟು ಸಾಧಿಸಲಾಗಿದೆ ಎಂದು ದಾಖಲೆಗಳು ತಿಳಿಸುತ್ತವೆ. ಹೀಗೆ ಗ್ರಾಮೀಣಾಭಿವೃದ್ಧಿ ಕಾರ್ಯಕ್ರಮಗಳಿಗೆ ಕೇಂದ್ರ ಮತ್ತು ರಾಜ್ಯ ಸರಕಾರಗಳು ಹಣಕಾಸು ಒದಗಿಸಿವೆ. ಇಷ್ಟೆಲ್ಲಾ ಹಣಕಾಸು ಮತ್ತು ಅಧಿಕಾರಗಳನ್ನು ಈ ಸಂಸ್ಥೆಗಳಿಗೆ ಒದಗಿಸಿದ್ದರೂ ಈ ಕಾಯ್ದೆಯು ಸರಿಯಾಗಿ ಅನುಷ್ಠಾನಗೊಳ್ಳದೆ ಅಭಿವೃದ್ಧಿ ಕಾರ್ಯಕ್ರಮಗಳು ತಳಮಟ್ಟಕ್ಕೆ ಸರಿಯಾಗಿ ತಲುಪಲಿಲ್ಲ. ಇದನ್ನು ಸರಿಪಡಿಸಲು ಸಂವಿಧಾನದ ತಿದ್ದುಪಡಿ ಮತ್ತು ಪಂಚಾಯತ್‌ರಾಜ್ ಮತಕ್ಷೇತ್ರಗಳ ಮರುವಿಂಗಡನೆಯಾಗಬೇಕೆಂದು ಸರಕಾರವು ನಿರ್ಧರಿಸಿ, ಮಂಡಲ ಪಂಚಾಯತ್‌ಗೆ ಬದಲಿ ಗ್ರಾಮಪಂಚಾಯತಿಗಳನ್ನು ಸ್ಥಾಪಿಸಬೇಕೆಂಬ ಉದ್ದೇಶದಿಂದ 1993ರಲ್ಲಿ ಸಂವಿಧಾನದ 73ನೇ ತಿದ್ದುಪಡಿಯನ್ನು ಮಾಡಲಾಯಿತು. ತಿದ್ದುಪಡಿ ಅನ್ವಯ 1993ರಲ್ಲಿ ಕರ್ನಾಟಕ ಪಂಚಾಯತ್‌ರಾಜ್ ಕಾಯ್ದೆಯನ್ನು ಜಾರಿಗೆ ತರಲಾಯಿತು.

## 1.5. 1993ರ ಕರ್ನಾಟಕ ಪಂಚಾಯತ್‌ರಾಜ್ ಕಾಯ್ದೆ

ಭಾರತ ಸಂವಿಧಾನದ 73ನೇ ತಿದ್ದುಪಡಿ ಅನ್ವಯ ಕರ್ನಾಟಕದಲ್ಲಿ ಪಂಚಾಯತ್‌ರಾಜ್ ಅಧಿನಿಯಮ 1993ನ್ನು ಜಾರಿಗೆ ತರಲಾಯಿತು. ಈ ಕಾಯ್ದೆಯಿಂದ ಕರ್ನಾಟಕದಲ್ಲಿ ಮೂರು ಸ್ತರದ ಪಂಚಾಯತ್‌ರಾಜ್ ವ್ಯವಸ್ಥೆ ಜಾರಿಗೆ ಬಂದಿತು. ಜಿಲ್ಲಾ ಮಟ್ಟದಲ್ಲಿ ಜಿಲ್ಲಾ ಪಂಚಾಯತಿ ತಾಲ್ಲೂಕು ಮಟ್ಟದಲ್ಲಿ ತಾಲೂಕು ಪಂಚಾಯತಿ ಮತ್ತು ಗ್ರಾಮಮಟ್ಟದಲ್ಲಿ ಗ್ರಾಮಪಂಚಾಯತಿ ಅಸ್ತಿತ್ವಕ್ಕೆ ಬಂದವು. ಈ ತಿದ್ದುಪಡಿಯಿಂದ ಪಂಚಾಯತ್‌ರಾಜ್ ಸಂಸ್ಥೆಗಳಿಗೆ ಸಂವಿಧಾನಿಕ ಸ್ಥಾನ ಒದಗಿಸಲಾಯಿತು. ಈ ಹೊಸ ಕಾಯಿದೆಯಲ್ಲಿ ಸಮಾಜದ ದುರ್ಬಲ ವರ್ಗದವರಿಗೆ ಮತ್ತು ಮಹಿಳೆಯರಿಗೆ ಮೀಸಲಾತಿ ನೀಡಲಾಗಿದೆ. ಹಾಗೂ ಅಭಿವೃದ್ಧಿ ಕಾರ್ಯಗಳಿಗೆ ಹೆಚ್ಚು ಒತ್ತು ನೀಡಲಾಗಿದೆ. ಇದೊಂದು ಸ್ವಾಗತಾರ್ಹ ಕ್ರಮವಾಗಿದೆ. ಗ್ರಾಮೀಣಾಭಿವೃದ್ಧಿ ಕಾರ್ಯ ಕ್ರಮಗಳು ಹೆಚ್ಚು ಪರಿಣಾಮಕಾರಿಯಾಗಿ ಜಾರಿಗೊಳಿಸಲಾಗಿದೆ. ಕರ್ನಾಟಕ ಪಂಚಾಯತ್‌ರಾಜ್ ಕಾಯ್ದೆಯಿಂದ ಈಗ ಪಂಚಾಯತ್‌ರಾಜ್ ಸಂಸ್ಥೆಗಳಿಗೆ ಸರಕಾರವು ನಿಯಮಿತವಾಗಿ ಚುನಾವಣೆಗಳನ್ನು ನಡೆಸಬೇಕಾಗಿದೆ. ಆಯಾ ಪ್ರದೇಶದ ಜನಸಂಖ್ಯೆಗೆ ಅನುಗುಣವಾಗಿ ಪರಿಶಿಷ್ಟ ಜಾತಿ/ಪಂಗಡಗಳ ಜನವರ್ಗಕ್ಕೆ ಮೀಸಲಾತಿಯನ್ನು ಅದರಂತೆ ಮಹಿಳೆಯರಿಗೆ ಶೇ 33.33ರಷ್ಟು ಸ್ಥಾನಗಳನ್ನು ಮೀಸಲಿಡಲಾಗಿದೆ. ಹಿಂದುಳಿದ ವರ್ಗದವರಿಗೆ ಮೀಸಲಾತಿ ಸೌಲಭ್ಯವನ್ನು ನೀಡಲಾಗಿದೆ. ರಾಜ್ಯ ಸರಕಾರ ಮತ್ತು ಪಂಚಾಯತ್‌ರಾಜ್ ಸಂಸ್ಥೆಗಳ ನಡುವೆ ಹಣಕಾಸು ಸಂಪನ್ಮೂಲ ಹಂಚಿಕೆಯನ್ನು ನಿಗಧಿಪಡಿಸುವ ಸಲುವಾಗಿ ಸರಕಾರವು ಹಣಕಾಸು ಆಯೋಗವನ್ನು ರಚಿಸುವುದು ಅನಿವಾರ್ಯವಾಗಿದೆ. ಸಂವಿಧಾನದ 73ನೇ ತಿದ್ದುಪಡಿಯಲ್ಲಿ ಪಟ್ಟಿ ಮಾಡಿದ ಪಂಚಾಯತ್‌ರಾಜ್ ಸಂಸ್ಥೆಗಳಿಗೆ ವರ್ಗಾಯಿಸಬೇಕಾದ ಎಲ್ಲಾ 29 ವಿಷಯಗಳಿಗೆ ಸಂಬಂಧಿಸಿದಂತೆ ಹಣಕಾಸು ಮತ್ತು ಅಧಿಕಾರಗಳನ್ನು ವರ್ಗಾಯಿಸಿದ ಏಕೈಕ ರಾಜ್ಯವೆಂದರೆ ಕರ್ನಾಟಕವೆಂದು ಹೇಳಬಹುದು.[43]

1993ರ ಪಂಚಾಯತ್‌ರಾಜ್ ಕಾಯ್ದೆಯನ್ನು ಪರಿಶೀಲಿಸಿ ಸೂಕ್ತ ಬದಲಾವಣೆಗಳನ್ನು ಮಾಡಲು 1995ರಲ್ಲಿ ಪಿ. ಆರ್. ನಾಯಕ್ ಸಮಿತಿಯನ್ನು ಸರಕಾರ ನೇಮಕ ಮಾಡಿತು. 1996ರಲ್ಲಿ ಸಮಿತಿಯು ಕಾಯಿದೆಗೆ ಮೂರು ತಿದ್ದುಪಡಿಗಳನ್ನು ಸೂಚಿಸಿತು.

1. ಪಂಚಾಯತ್‌ರಾಜ್ ಸಂಸ್ಥೆಗಳಲ್ಲಿ ಅಧಿಕಾರಿಗಳ ಪಾತ್ರವು ಸಾಪೇಕ್ಷವಾಗಿರಬೇಕೆ ಹೊರತು ನಿರಂಕುಶವಾಗಿರಬಾರದು.
2. ಜಿಲ್ಲಾ ಪಂಚಾಯತ್ ಅಧ್ಯಕ್ಷರು ಮತ್ತು ತಾಲೂಕು ಪಂಚಾಯತ್ ಅಧ್ಯಕ್ಷರು ತಮ್ಮ ತಮ್ಮ ನೆಲೆಯಲ್ಲಿ ಕಾರ್ಯಾಂಗ ಮುಖ್ಯಸ್ಥರನ್ನಾಗಿ ಮಾಡಬೇಕು.
3. ಪಂಚಾಯತ್ ರಾಜ್ ಸಂಸ್ಥೆಗಳನ್ನು ರದ್ದುಪಡಿಸುವ ಅಧಿಕಾರವನ್ನು ಅಧಿಕಾರಿಗಳ ವಶದಿಂದ ಪಂಚಾಯತ್‌ರಾಜ್ ಸಂಸ್ಥೆಗಳಿಗೆ ನೀಡಬೇಕು.[44]

ಹೀಗೆ ಕೆಲವು ತಿದ್ದುಪಡಿಗಳನ್ನು ಮಾಡುವುದರ ಮೂಲಕ ಚುನಾಯಿತ ಪ್ರತಿನಿಧಿಗಳಿಗೆ ಹೆಚ್ಚಿನ ಅಧಿಕಾರಗಳನ್ನು ನೀಡಲಾಯಿತು. ಈ ಕಾಯಿದೆ ಜಾರಿಗೆ ಬಂದ ಮೇಲೆ ಪಂಚಾಯತ್‌ರಾಜ್ ಸಂಸ್ಥೆಗಳು ಕರ್ನಾಟಕದಲ್ಲಿ ಬಂದು ಎರಡನೆ ಅವಧಿಯನ್ನು ಮುಗಿಸಿ ಮೂರನೆ ಅವಧಿಯಲ್ಲಿ ಇಂದು ಆಡಳಿತವನ್ನು ನಡೆಸುತ್ತಿವೆ. ಸ್ಥಳೀಯ ಸಂಸ್ಥೆಗಳಿಗೆ ಕರ್ನಾಟಕದಲ್ಲಿ ಹೀಗೆ ಸುಧಾರಣೆಗಳನ್ನು ಜಾರಿಗೆ ತರಲಾಗಿದೆ. ಈ ಸುಧಾರಣೆಗಳು ಪಂಚಾಯತ್‌ರಾಜ್ ಸಂಸ್ಥೆಗಳನ್ನು ಬಲಯುತಗೊಳಿಸುವಲ್ಲಿ ತುಂಬಾ ಸಹಕಾರಿಯಾಗಿವೆ. ಗ್ರಾಮೀಣಾಭಿವೃದ್ಧಿ ಕಾರ್ಯಗಳಲ್ಲಿ ಜನರು ಹೆಚ್ಚಾಗಿ ಭಾಗವಹಿಸುವ ಉದ್ದೇಶವನ್ನು ಈ ಸಂಸ್ಥೆಗಳು ಹೊಂದಿವೆ. ಕರ್ನಾಟಕದಲ್ಲಿ 435 ಯೋಜನಾ ಕಾರ್ಯಕ್ರಮಗಳನ್ನು ಮತ್ತು 230 ಯೋಜನೇತರ ಕಾರ್ಯಕ್ರಮಗಳನ್ನು ಅನುಷ್ಠಾನಗೊಳಿಸುವ ಜವಾಬ್ದಾರಿಯನ್ನು ಪಂಚಾಯತ್‌ರಾಜ್ ಸಂಸ್ಥೆಗಳಿಗೆ ವಹಿಸಲಾಗಿದೆ.[45] ಪಂಚಾಯತ್ ಸಂಸ್ಥೆಗಳು ಪರಿಣಾಮಕಾರಿ ಯಾಗಿ ಯೋಜನೆಗಳನ್ನು ಅನುಷ್ಠಾನಗೊಳಿಸುತ್ತಿವೆಯೇ, ಇಲ್ಲವೇ ಎಂಬುದನ್ನು ಎಂದು ಪರೀಕ್ಷಿಸುವುದು ಈ ಅಧ್ಯಯನದ ಮುಖ್ಯ ಉದ್ದೇಶವಾಗಿದೆ. ವಿವಿಧ ಹಂತಗಳಲ್ಲಿ, ಅಂದರೆ ಜಿಲ್ಲಾ ಮಟ್ಟದಲ್ಲಿ, ತಾಲ್ಲೂಕು ಮಟ್ಟದಲ್ಲಿ ಮತ್ತು ಗ್ರಾಮ ಮಟ್ಟದಲ್ಲಿ ಯೋಜನೆಗಳು ಅನುಷ್ಠಾನಗೊಳ್ಳುತ್ತಿವೆ. ಆದರೂ ಬಹುತೇಕ ಅಭಿವೃದ್ಧಿ ಕಾರ್ಯಕ್ರಮಗಳು ಕಾರ್ಯರೂಪಕ್ಕೆ ಬರುವುದು ಗ್ರಾಮಮಟ್ಟದಲ್ಲಿ. ಆದುದರಿಂದ ಗ್ರಾಮಪಂಚಾಯತಿಗಳ ಕಾರ್ಯನಿರ್ವಹಿಸುವಿಕೆಯನ್ನು ಪರೀಕ್ಷಿಸುವುದು ವಿಕೇಂದ್ರೀಕೃತ ಅಭಿವೃದ್ಧಿಯನ್ನು ಅರ್ಥಮಾಡಿಕೊಳ್ಳಲು ಸೂಕ್ತ ಎಂದು ನಂಬಲಾಗಿದೆ. ಪ್ರಸ್ತುತ ಅಧ್ಯಯನವು ಗ್ರಾಮಪಂಚಾಯತಿಗಳ ಕಾರ್ಯಕ್ಷಮತೆಯನ್ನು ಗುರುತಿಸುವ ಅಧ್ಯಯನವಾಗಿರುವುದರಿಂದ 1993ರ ಕರ್ನಾಟಕ ಪಂಚಾಯತ್‌ರಾಜ್ ಕಾಯಿದೆ ಅನ್ವಯ ಗ್ರಾಮಪಂಚಾಯತಿ ರಚನೆ, ಅಧಿಕಾರ, ಕಾರ್ಯಗಳು ಇತ್ಯಾದಿಗಳ ತಿಳುವಳಿಕೆ ಅಗತ್ಯವಾಗಿದೆ.

ಮೇಲಿನ ಪುಟಗಳಲ್ಲಿ ಪಂಚಾಯತ್ ವ್ಯವಸ್ಥೆ ನಮ್ಮಲ್ಲಿ - ಭಾರತ ಮತ್ತು ಕರ್ನಾಟಕದಲ್ಲಿ ನಡೆದ ಬಂದ ದಾರಿಯ ಒಂದು ಸ್ಥೂಲ ಚಿತ್ರಣವನ್ನು ನೋಡಬಹುದು. ವಿವಿಧ ಚಾರಿತ್ರಿಕ ಸಂದರ್ಭಗಳಲ್ಲಿ ಪಂಚಾಯತ್ ವ್ಯವಸ್ಥೆ ವಿವಿಧ ರೂಪದಲ್ಲಿ ಕಾರ್ಯರೂಪದಲ್ಲಿತ್ತು. ಆಯಾಯ ಕಾಲಘಟ್ಟದ ಅಗತ್ಯಕ್ಕೆ ಅನುಗುಣವಾಗಿ

ಪಂಚಾಯತಿಗಳು ತಕ್ಕಮಟ್ಟಿನ ಬದಲಾವಣೆಗಳನ್ನು ರೂಢಿಸಿಕೊಳ್ಳಲು ಪ್ರಯತ್ನಿಸಿವೆ. ಇಷ್ಟೊಂದು ಸಮಿತಿಗಳ ನೇಮಕ ಮತ್ತು ಅವುಗಳು ಮಾಡಿರುವ ಶಿಪಾರಸ್ಸುಗಳು ಒಂದು ಬಹುಮುಖ್ಯ ಅಂಶದ ಕಡೆಗೆ ನಮ್ಮ ಗಮನ ಸೆಳೆಯುತ್ತವೆ. ಪ್ರತಿ ಕಾಲಘಟ್ಟದಲ್ಲೂ ರೂಪುಗೊಂಡ ಪಂಚಾಯತ್ ವ್ಯವಸ್ಥೆ ಆ ಕಾಲ ಘಟ್ಟದ ಎಲ್ಲ ಅವಶ್ಯಕತೆಗಳನ್ನು ತೃಪ್ತಿಕರವಾಗಿ ಪೂರೈಸಿಲ್ಲ ಎನ್ನುವ ಅಂಶ ಈ ಸಮಿತಿಗಳ ಶಿಫಾರಸ್ಸಿನಿಂದ ಸ್ಪಷ್ಟವಾಗುತ್ತದೆ. ಈ ಸಮಸ್ಯೆಗೆ ಮುಖ್ಯ ಕಾರಣ ನಾವು ಇಂದು ಕಾರ್ಯರೂಪಕ್ಕೆ ತರಲು ಪ್ರಯತ್ನಿಸುವ ಪಂಚಾಯತ್ ವ್ಯವಸ್ಥೆ ನಮ್ಮ ಸಮಾಜದ ಚಾರಿತ್ರಿಕ ಬೆಳವಣಿಗೆ ಆಗದಿರುವುದೇ ಆಗಿದೆ. ಈ ಮಾತನ್ನು ಪಂಚಾಯತ್ ಬಗ್ಗೆ ಹೇಳುವಾಗ ತುಂಬಾ ಜಾಗರೂಕರಾಗಿರಬೇಕು. ಯಾಕೆಂದರೆ ಪಂಚಾಯತ್ ನಮ್ಮ ಸಮಾಜದ ಚಾರಿತ್ರಿಕ ಬೆಳವಣಿಗೆ ಎನ್ನುವ ನಂಬಿಕೆ ನಮ್ಮಲ್ಲಿ ತುಂಬಾ ಆಳವಾಗಿ ಬೇರು ಬಿಟ್ಟಿದೆ. ಆದರೆ ಈ ನಂಬಿಕೆ ಸರಿಯಲ್ಲ. ನಮ್ಮಲ್ಲಿ ಚಾರಿತ್ರಿಕವಾಗಿ ರೂಪಗೊಂಡ ಪಂಚಾಯತಿಯ ಆದರ್ಶಕ್ಕೂ ಈಗ ನಾವು ಕಾರ್ಯರೂಪದಲ್ಲಿ ತರಲು ಪ್ರಯತ್ನಿಸುತ್ತಿರುವ ಪಂಚಾಯತಿಯ ಆದರ್ಶಕ್ಕೂ ತುಂಬಾ ವ್ಯತ್ಯಾಸವಿದೆ. ಸಮಾನತೆ ಮತ್ತು ಪ್ರಜಾಪ್ರಭುತ್ವದ ಕಲ್ಪನೆಯೇ ಇಲ್ಲದ ಒಂದು ವ್ಯವಸ್ಥೆಯಲ್ಲಿ ರೂಪಗೊಳ್ಳುವ ಪಂಚಾಯತಿ ಸಮಾನತೆಯ ಕಲ್ಪನೆಯನ್ನು ಪ್ರತಿನಿಧಿಕರಿಸಲು ಸಾಧ್ಯವಿಲ್ಲ. ಇದು ಚಾರಿತ್ರಿಕವಾಗಿ ರೂಪುಗೊಂಡ ನಮ್ಮ ಪಂಚಾಯತಿಯ ಬಹುದೊಡ್ಡ ಕೊರತೆ. ಇಂದು ಅದಕ್ಕೆ ವಿರುದ್ದವಾಗಿ ಸಮಾನತೆ ಮತ್ತು ಪ್ರಜಾಪ್ರಭುತ್ವ ತತ್ವದ ನೆಲಗಟ್ಟಲ್ಲಿ ಪಂಚಾಯತಿ ರೂಪುಗೊಳ್ಳುತ್ತಿದೆ. ತಳಮಟ್ಟದ ಜನರ ಪಾಲುಗೊಳ್ಳುವಿಕೆಗೆ ಅಗತ್ಯವಾದ ಸಾಂಸ್ಥಿಕ ಚೌಕಟ್ಟನ್ನು ರೂಪಿಸಲು ಸತತ ಪ್ರಯತ್ನ ನಡೆದಿದೆ. ಪಂಚಾಯತಿಯ ಮೂರು ಹಂತಗಳನ್ನು ಗಮನಿಸಿದರೆ ತಳಮಟ್ಟದಲ್ಲಿ ಜನರು ನೇರವಾಗಿ ಪಾಲುಗೊಳ್ಳಲು ಸಾಧ್ಯವಾಗುವುದು ಗ್ರಾಮಪಂಚಾಯತ್ ಮಟ್ಟದಲ್ಲಿ ಮಾತ್ರ. ಈ ಪ್ರಬಂಧ ಕೂಡ ಗ್ರಾಮಪಂಚಾಯತಿಯನ್ನು ವಿಕೇಂದ್ರೀಕರಣದ ಕೇಂದ್ರ ಬಿಂದುವಾಗಿ ಇಟ್ಟುಕೊಂಡಿದೆ. ಆದುದರಿಂದ ಗ್ರಾಮ ಪಂಚಾಯತಿ, ಅದರ ಅಧಿಕಾರ, ಜವಾಬ್ದಾರಿ ಮತ್ತು ವ್ಯಾಪ್ತಿ ಬಗ್ಗೆ ಕನಿಷ್ಠ ತಿಳುವಳಿಕೆ ಅಗತ್ಯ.

### ಗ್ರಾಮಪಂಚಾಯತಿ

1993ರ ಕರ್ನಾಟಕ ಪಂಚಾಯತ್ ಕಾಯಿದೆ ಅನ್ವಯ ತಳಮಟ್ಟದ ವ್ಯವಸ್ಥೆಯಾದ ಗ್ರಾಮಪಂಚಾಯತಿ ತನ್ನದೆ ಆದ ರಚನೆ, ಅಧಿಕಾರ ಮತ್ತು ಕಾರ್ಯಗಳನ್ನು ಸಂವಿಧಾನಾತ್ಮಕವಾಗಿ ಹೊಂದಿದೆ. 1993ರ ಅಧಿನಿಯಮದ ನಾಲ್ಕನೇ ಪ್ರಕರಣವು ಸರಕಾರದ ಸಾಮಾನ್ಯ ಅಥವಾ ವಿಶೇಷ ಆದೇಶಕ್ಕೆ ಅನುಗುಣವಾಗಿ ಗ್ರಾಮಪಂಚಾಯತಿಗಳನ್ನು ಸ್ಥಾಪಿಸಲಾಗಿದೆ. 5000ಕ್ಕಿಂತ ಕಡಿಮೆ ಇಲ್ಲದ 7000ಕ್ಕೆ ಮೀರದ ಜನಸಂಖ್ಯೆಯುಳ್ಳ ಗ್ರಾಮವನ್ನು ಅಥವಾ ಗ್ರಾಮಗಳ ಗುಂಪನ್ನು ಸೇರಿಸಿ ಗ್ರಾಮಪಂಚಾಯತಿಯನ್ನು ರಚಿಸಲಾಗಿದೆ. ಯಾವುದೇ ಪಂಚಾಯತಿ ಪ್ರದೇಶಕ್ಕೆ ಗ್ರಾಮ ಮತ್ತು ಗ್ರಾಮಗಳ ಗುಂಪನ್ನು ಸೇರಿಸುವ ಮೂಲಕ ಅದರ ಕ್ಷೇತ್ರ ವ್ಯಾಪ್ತಿಯನ್ನು ಹೆಚ್ಚಿಸುವ ಅಥವಾ ಕಡಿಮೆ ಮಾಡುವ ಅಧಿಕಾರವನ್ನು ಆಯಾ ಜಿಲ್ಲೆಯ ಜಿಲ್ಲಾಧಿಕಾರಿಗಳಿಗೆ ಕೊಡಲಾಗಿದೆ. ಕೆಲವು ಜಿಲ್ಲೆಗಳಲ್ಲಿ ಜನಸಂಖ್ಯೆ 2500 ಕಡಿಮೆ ಇಲ್ಲದಂತಹ ಪ್ರದೇಶವನ್ನು ಇನ್ನೂ ಕೆಲವು ಜಿಲ್ಲೆಗಳಲ್ಲಿ ಐದು ಕಿ.ಮಿ. ವ್ಯಾಪ್ತಿಯಲ್ಲಿರುವ ಪ್ರದೇಶವನ್ನು ಗ್ರಾಮಪಂಚಾಯತಿ ಕೇಂದ್ರಗಳಾಗಿ ನಿರ್ಧರಿಸಬಹುದಾಗಿದೆ. ಪಂಚಾಯತಿ ಪ್ರದೇಶದ 400 ಜನಸಂಖ್ಯೆಗೆ ಒಬ್ಬರಂತೆ ಚುನಾಯಿತ ಸದಸ್ಯನಿರುತ್ತಾನೆ.

ಸದಸ್ಯರ ಸಂಖ್ಯೆಯು ಆಯಾ ಗ್ರಾಮಪಂಚಾಯತಿ ಪ್ರದೇಶಗಳಲ್ಲಿ ಜನಸಂಖ್ಯೆಗೆ ಅನುಗುಣವಾಗಿ ಇರುತ್ತದೆ. ಕಾಯ್ದೆ ಅನ್ವಯ ಪ್ರತಿಯೊಂದು ಗ್ರಾಮಪಂಚಾಯತಿಯಲ್ಲಿ ಅನುಸೂಚಿತ ಜಾತಿಗಳಿಗೆ ಶೇ.15 ರಷ್ಟು, ಅನುಸೂಚಿತ ಪಂಗಡಗಳಿಗೆ ಶೇ.3 ರಷ್ಟು, ಹಿಂದುಳಿದ ವರ್ಗಗಳಿಗೆ ಮತ್ತು ಮಹಿಳೆಯರಿಗೆ ಶೇ.33ರಷ್ಟು ಸ್ಥಾನಗಳನ್ನು ಮೀಸಲಿಡಲಾಗಿದೆ. ಗ್ರಾಮಪಂಚಾಯತಿಯ ಅಧಿಕಾರ ವ್ಯಾಪ್ತಿಯಲ್ಲಿ ಬರುವ ಪ್ರದೇಶವನ್ನು ಚುನಾವಣಾ ಕ್ಷೇತ್ರವನ್ನಾಗಿ ವಿಂಗಡಿಸಲಾಗಿದೆ. ಯಾವುದೇ ಗ್ರಾಮಪಂಚಾಯತಿ ಸದಸ್ಯರ ಒಟ್ಟು ಸಂಖ್ಯೆಯ 2/3 ರಷ್ಟು ಸದಸ್ಯರು ಚುನಾಯಿತರಾದಲ್ಲಿ ಆ ಗ್ರಾಮಪಂಚಾಯತಿಯು ಅಧಿನಿಯಮ ವ್ಯಾಪ್ತಿಯಲ್ಲಿ ಕ್ರಮಬದ್ಧವಾಗಿ ರಚನೆಯಾಗಿವೆ ಎಂದು ಪರಿಗಣಿಸಬಹುದಾಗಿದೆ. ಅಧಿನಿಯಮದ 6ನೇ ಪ್ರಕರಣವು ಗ್ರಾಮ ಪಂಚಾಯತಿಗೆ ತನ್ನದೇ ಆದ ಕಾನೂನುಬದ್ಧವಾದ ಅಸ್ತಿತ್ವವನ್ನು ನೀಡಿದೆ. ಗ್ರಾಮಪಂಚಾಯತಿ ಮೂಲಕ ಗ್ರಾಮದ ಎಲ್ಲಾ ವ್ಯವಹಾರಗಳನ್ನು ಅದು ಆಡಳಿತಾತ್ಮಕವಾಗಿ ನಿರ್ವಹಿಸಬಹುದಾಗಿದೆ. ರಾಜ್ಯದ ಪ್ರತಿಯೊಂದು ಪಂಚಾಯತಿಯೂ ಒಳಗೊಂಡಿರಬಹುದಾದ ಎಲ್ಲಾ ಚರ ಮತ್ತು ಸ್ಥಿರ ಆಸ್ತಿಗಳ ಮೇಲೆ ಸಂಪೂರ್ಣ ಅಧಿಕಾರವನ್ನು ಅದು ಹೊಂದಿದೆ. ಇದರ ಹೊರತಾಗಿ ಗ್ರಾಮಪಂಚಾಯತಿಯ ರಚನೆಯ ಮೂಲ ಉದ್ದೇಶವಾದ ಅಧಿಕಾರ ವಿಕೇಂದ್ರೀಕರಣ ಅಭಿವೃದ್ಧಿ ಯೋಜನೆಗಳನ್ನು ನಿರ್ವಹಿಸಬಹುದಾಗಿದೆ. ಅದಕ್ಕೆ ಅವಶ್ಯಕವಾದ ಅಧಿಕಾರ ಮತ್ತು ಹಣಕಾಸನ್ನು ಕೇಂದ್ರ ಮತ್ತು ರಾಜ್ಯ ಸರಕಾರಗಳು ಒದಗಿಸಿ ಕೊಟ್ಟಿವೆ. ಪಂಚಾಯತ್‌ರಾಜ್ ಅಧಿನಿಯಮದ 7ನೇ ಪ್ರಕರಣವು ಪಂಚಾಯತಿ ಸದಸ್ಯರನ್ನು ಆಯ್ಕೆ ಮಾಡುವ ಮತ್ತು ಚುನಾವಣೆ ನಡೆಸುವ ವಿಧಾನವನ್ನು ತಿಳಿಸುತ್ತದೆ. ಪ್ರತಿಯೊಬ್ಬ ಮತದಾರನು ಆಯ್ದ ಮತ ಕ್ಷೇತ್ರದಿಂದ ಎಷ್ಟು ಮಂದಿ ಚುನಾಯಿತನಾಗಬೇಕು ಎಷ್ಟು ಮತಗಳನ್ನು ಹೊಂದಿರುತ್ತಾನೆ. ಸದಸ್ಯರನ್ನು ಚುನಾಯಿಸುವಾಗ ಗುಪ್ತ ಮತದಾನ ಪದ್ದತಿಗೆ ಅನುಗುಣವಾಗಿ ಪಕ್ಷರಹಿತವಾಗಿ ಚುನಾವಣೆಗಳನ್ನು ನಡೆಸಬೇಕು. ಗ್ರಾಮಪಂಚಾಯಿತಿಯ ಸದಸ್ಯರನ್ನು ಚುನಾಯಿಸುವುದರಲ್ಲಿ ಯಾವುದಾದರು ಅಡತಡೆಗಳು ಬಂದರೆ 6 ತಿಂಗಳ ಅವಧಿಗೆ ಆಡಳಿತಾಧಿಕಾರಿಯನ್ನು ನೇಮಕ ಮಾಡಬೇಕು. ಈ ಅವಧಿಯಲ್ಲಿ ಚುನಾವಣೆ ನಡೆಸಬೇಕು. ಗ್ರಾಮಪಂಚಾಯಿತಿಯ ಸದಸ್ಯರ ಐದು ವರ್ಷ ಕಾಲಾವಧಿಯಲ್ಲಿ ತನ್ನ ಸ್ಥಾನದಲ್ಲಿ ಮುಂದುವರಿಸಿ ಕೊಂಡು ಹೋಗಬಹುದಾದರು ತನಗಿಷ್ಟ ಬಂದ ಸಮಯದಲ್ಲಿ ತನ್ನ ಸ್ಥಾನವನ್ನು ತ್ಯಜಿಸಬಹುದಾಗಿದೆ.[46]

## 1.6. ಅಧಿಕಾರ, ಸಮಿತಿ, ಸಭೆ, ಇತ್ಯಾದಿಗಳು

ಗ್ರಾಮಪಂಚಾಯತಿ ಪ್ರದೇಶದಲ್ಲಿ ಕಾಲಕಾಲಕ್ಕೆ ನಿರ್ದಿಷ್ಟಪಡಿಸಿದ ಕಾರ್ಯಗಳನ್ನು ಗ್ರಾಮಪಂಚಾಯತಿ ನಿರ್ವಹಿಸಬೇಕು ಎಂದು ಒಂದನೇ ಅನುಸೂಚಿಯಲ್ಲಿ ಹೇಳಲಾಗಿದೆ. ಮುಖ್ಯವಾಗಿ ಪಂಚಾಯಿತಿಯು ತನ್ನ ವ್ಯಾಪ್ತಿಯಲ್ಲಿ ಬರುವ ಪ್ರದೇಶದ ವಾಸಿಗಳ ಆರೋಗ್ಯ ಸಂರಕ್ಷಣೆಗೆ, ಶಿಕ್ಷಣ ಜೀವನಮಟ್ಟ ಸುಧಾರಣೆ, ಆರ್ಥಿಕ ಉನ್ನತಿ, ಸೌಕರ್ಯ, ಸಾಮಾಜಿಕ ಉನ್ನತಿ ಇತರೆ ಮಾರ್ಗೋಪಾಯಗಳನ್ನು ನಿರ್ವಹಿಸಲು ಸಹ ಏರ್ಪಾಟು ಮಾಡಬೇಕು. ಸಂವಿಧಾನದ 73ನೇ ತಿದ್ದುಪಡಿಯ 11ನೇ ಅನುಸೂಚಿಯಲ್ಲಿ 29 ವಿಷಯಗಳ ಮೇಲೆ ಪಂಚಾಯತಿಗಳಿಗೆ ಅಧಿಕಾರಗಳನ್ನು ಕೊಡಲಾಗಿದೆ. ಇದರಲ್ಲಿ ಮುಖ್ಯವಾಗಿ ಕೃಷಿ, ಭೂಸುಧಾರಣೆ, ಹೈನುಗಾರಿಕೆ, ಅರಣ್ಯ, ಕೈಗಾರಿಕೆ, ಗ್ರಾಮೀಣ ವಸತಿ, ಕುಡಿಯುವ ನೀರು, ನೈರ್ಮಲ್ಯೀಕರಣ, ಬಡತನ ನಿರ್ಮೂಲನೆ, ಶಿಕ್ಷಣ, ಆರೋಗ್ಯ, ವಿದ್ಯುಚ್ಛಕ್ತಿ, ಕುಟುಂಬ ಕಲ್ಯಾಣ ಸಾರ್ವಜನಿಕ ಆಸ್ತಿ ರಕ್ಷಣೆ, ದುರ್ಬಲ

ವರ್ಗಗಳ ಕಲ್ಯಾಣ ಮುಂತಾದವುಗಳು ಇದರಲ್ಲಿ ಸೇರಿವೆ. ಗ್ರಾಮಪಂಚಾಯತಿಯು ಈ ಕಾರ್ಯಗಳ ಬಗ್ಗೆ ತನ್ನ ಸಭೆಯಲ್ಲಿ ಅಂಗೀಕರಿಸಿ ಮತ್ತು ಸದಸ್ಯರ ಒಟ್ಟು ಸಂಖ್ಯೆಯ 2/3 ರಷ್ಟು ಸದಸ್ಯರು ಅನುಮೋದಿಸಿದ ಕಾರ್ಯಗಳನ್ನು ಕೈಗೊಳ್ಳಬೇಕೆಂದು ಆದೇಶಿಸಲಾಗಿದೆ.[47]

ಪಂಚಾಯತ್‌ರಾಜ್ ಕಾಯ್ದೆಯ ಪ್ರಕರಣ 61ನೇ ಪ್ರಕಾರ ರಾಜ್ಯದ ಪ್ರತಿಯೊಂದು ಗ್ರಾಮಪಂಚಾಯತಿಗಳು ಮೂರು ಸ್ಥಾಯಿ ಸಮಿತಿಗಳನ್ನು ಹೊಂದಿರಬೇಕು.[48] ಪ್ರತಿ ಸಮಿತಿಯಲ್ಲಿ ಅಧ್ಯಕ್ಷ ಮತ್ತು ಉಪಾಧ್ಯಕ್ಷ ಒಳಗೊಂಡಂತೆ ಮೂರರಿಂದ ಐದು ಜನ ಸದಸ್ಯರನ್ನು ಒಳಗೊಂಡಿರಬೇಕೆಂದು ಹೇಳಲಾಗಿದೆ. ಅಧ್ಯಕ್ಷನೂ ಸಮಿತಿಯ ಪದನಿಮಿತ್ತ ಸದಸ್ಯ ಹಾಗೂ ಸಭಾಪತಿಯಾಗಿರುವನು. ಸಾಮಾಜಿಕ ನ್ಯಾಯ ಸಮಿತಿಯಲ್ಲಿ ಕನಿಷ್ಠ ಪಕ್ಷ ಒಬ್ಬ ಮಹಿಳಾ ಸದಸ್ಯೆ ಮತ್ತು ಪರಿಶಿಷ್ಟ ಜಾತಿ/ಪಂಗಡದ ಒಬ್ಬ ಸದಸ್ಯನಿರಬೇಕು. ಸಂಘ ಸಂಸ್ಥೆಗಳ ಸದಸ್ಯರನ್ನು ಆಯ್ಕೆ ಮಾಡಬಹುದು. ಈ ಮೂರು ಸಮಿತಿಗಳು ನಿರ್ದಿಷ್ಟ ಪಡಿಸಿದ ಕಾರ್ಯಗಳನ್ನು ನಿರ್ವಹಿಸಬೇಕು.

1. **ಉತ್ಪಾದನಾ ಸಮಿತಿ** : ಉತ್ಪಾದನಾ ಸಮಿತಿಯು ಕೃಷಿ ಉತ್ಪಾದನೆ, ಪಶು ಸಂಗೋಪನೆ ಗ್ರಾಮಾಂತರ ಕೈಗಾರಿಕೆಗಳು ಮತ್ತು ಬಡತನ ನಿರ್ಮೂಲನೆ ಕಾರ್ಯಕ್ರಮಗಳಿಗೆ ಸಂಬಂಧಿಸಿದಂತೆ ಪ್ರಕಾರ್ಯಗಳನ್ನು ನಿರ್ವಹಿಸುತ್ತದೆ.

2. **ಸಾಮಾಜಿಕ ನ್ಯಾಯ ಸಮಿತಿ** : ಗ್ರಾಮದಲ್ಲಿನ ದುರ್ಬಲ ವರ್ಗಗಳಿಗೆ ಮತ್ತು ಮಹಿಳೆಯರ ಕಲ್ಯಾಣದ ಹಿತದೃಷ್ಟಿಯಿಂದ ಈ ಸಮಿತಿಯನ್ನು ರಚಿಸಲಾಗಿದೆ. ಈ ಸಮಿತಿಯು ತನ್ನದೇ ಆದ ಪ್ರಕಾರ್ಯಗಳನ್ನು ಹೊಂದಿದೆ.

ಅ. ಅನುಸೂಚಿತ ಜಾತಿ/ಪಂಗಡಗಳು ಮತ್ತು ಹಿಂದುಳಿದ ವರ್ಗದವರ ಶೈಕ್ಷಣಿಕ, ಆರ್ಥಿಕ, ಸಾಮಾಜಿಕ ಮತ್ತು ಇತರೆ ಆಸಕ್ತಿಗಳ ಏಳಿಗೆಯ ಕಾರ್ಯವನ್ನು ನಿರ್ವಹಿಸುತ್ತದೆ,

ಆ. ಮಹಿಳೆಯರ ಮತ್ತು ಮಕ್ಕಳ ಕಲ್ಯಾಣ,

ಇ. ಎಲ್ಲಾ ಜಾತಿ/ವರ್ಗಗಳಿಗೆ ಸಾಮಾಜಿಕ ನ್ಯಾಯವನ್ನು ಒದಗಿಸುವುದು ಯಾವುದೇ ಸಾಮಾಜಿಕ ಅನ್ಯಾಯ, ಶೋಷಣೆ ಆಗದಂತೆ ರಕ್ಷಣೆಯನ್ನು ನೀಡುವುದು ಈ ಸಮಿತಿಯ ಮುಖ್ಯ ಕಾರ್ಯವಾಗಿದೆ.

3. **ಗ್ರಾಮೀಣ ಶಿಕ್ಷಣ ಸಮಿತಿ** : ಈ ಮುಂಚೆ ಇದ್ದ ಸೌಕರ್ಯ ಸಮಿತಿಯನ್ನು ಇಂದು ಗ್ರಾಮೀಣ ಶಿಕ್ಷಣ ಸಮಿತಿಯೆಂದು ಬದಲಾಯಿಸಲಾಗಿದೆ. ಈ ಸಮಿತಿಯು ಹೆಚ್ಚು ಗ್ರಾಮೀಣ ಮಟ್ಟದ ಶಿಕ್ಷಣ ಸುಧಾರಣೆಯ ಕಾರ್ಯಗಳನ್ನು ನಿರ್ವಹಿಸುತ್ತದೆ. ಸಮಿತಿಯು ಶಿಕ್ಷಣ, ಆರೋಗ್ಯ ಲೋಕೋಪಯೋಗಿ ಕಾರ್ಯಗಳನ್ನು ಮಾಡತಕ್ಕದ್ದು. ಈ ಮೇಲ್ಕಂಡ ಸಮಿತಿಗಳ ಅಧಿಕಾರ ಗ್ರಾಮಪಂಚಾಯತಿಯು ಅವುಗಳಿಗೆ ವಹಿಸಿಕೊಟ್ಟಿರುವ ಕಾರ್ಯಗಳಿಗೆ ಸೀಮಿತವಾಗಿರುತ್ತದೆ. ಈ ಸಭೆಗಳಲ್ಲಿ ಅಂಗೀಕರಿಸಿದ ಎಲ್ಲಾ ನಿರ್ಣಯಗಳನ್ನು ಪಂಚಾಯತಿ ಸಭೆಗಳಲ್ಲಿ ಮಂಡಿಸಿ ಅನುಮೋದನೆಯನ್ನು ಪಡೆಯತಕ್ಕದ್ದು. 1993ರ ಕಾಯ್ದೆಗೆ ಅನುಗುಣವಾಗಿ ಈ ಮೂರು ಸ್ಥಾಯಿ ಸಮಿತಿಗಳು ರಚನೆಗೊಂಡಿದ್ದು ತಮ್ಮದೇ ಪ್ರಕಾರ್ಯಗಳನ್ನು

ನಿರ್ವಹಿಸತಕ್ಕದ್ದು. ಪ್ರಸ್ತುತ ಅಧ್ಯಯನದಲ್ಲಿ ಆಯ್ಕೆ ಮಾಡಿಕೊಂಡ ಗ್ರಾಮಪಂಚಾಯತಿಗಳಲ್ಲಿ ಈ ಮೂರು ಸ್ಥಾಯಿ ಸಮಿತಿಗಳು ಹೇಗೆ ಕಾರ್ಯನಿರ್ವಹಿಸುತ್ತವೆ ಎಂಬುದನ್ನು ಮುಂದಿನ ಅಧ್ಯಾಯಗಳಲ್ಲಿ ಚರ್ಚಿಸಲಾಗಿದೆ.

**4. ಜಂಟಿ ಸಮಿತಿ :** ಜಿಲ್ಲಾ ಪಂಚಾಯತಿಯು ಆಪೇಕ್ಷಿಸಿದಲ್ಲಿ ಗ್ರಾಮಪಂಚಾಯತಿಯು ಒಂದು ಅಥವಾ ಹೆಚ್ಚಿನ ಇತರೆ ಸ್ಥಳೀಯ ಪ್ರಾಧಿಕಾರ ಅಥವಾ ಶಾಸನಬದ್ಧ ಮಂಡಳಿಯೊಂದಿಗೆ ಜಂಟಿ ಹಿತಾಸಕ್ತಿಯನ್ನು ಹೊಂದಿರುವ ಉದ್ಧೇಶಕ್ಕಾಗಿ ಜಂಟಿ ಸಮಿತಿಯನ್ನು ನೇಮಕ ಮಾಡಬಹುದು. ಗ್ರಾಮಪಂಚಾಯತಿ ಇರುವ ತಾಲ್ಲೂಕಿನ ತಾಲ್ಲೂಕ್ ಪಂಚಾಯತಿಯ ಅಧ್ಯಕ್ಷರು ಮುಖ್ಯಸ್ಥರಾಗಿರುತ್ತಾರೆ. ಇಂತಹ ಸಮಿತಿಗೆ ಸ್ಥಳೀಯ ಪ್ರಾಧಿಕಾರಗಳ ಅಥವಾ ಮಂಡಲಿಗಳ ಸದಸ್ಯರಲ್ಲದ ಅಂದರೆ ಅಂತಹ ಸಮಿತಿಯಲ್ಲಿ ಸೇವೆ ಸಲ್ಲಿಸಲು ವಿಶೇಷ ಅರ್ಹತೆ ಹೊಂದಿರುವ ಇತರೆ ವ್ಯಕ್ತಿಗಳನ್ನು ನೇಮಿಸಿಕೊಳ್ಳಬಹುದು. ಆದರೆ ಈ ಸಂಖ್ಯೆ ಸಮಿತಿಯ ಸದಸ್ಯರ ಒಟ್ಟು ಸಂಖ್ಯೆಯು 1/3 ರಷ್ಟು ಮೀರತಕ್ಕದ್ದಲ್ಲ. ಇಂತಹ ಸಮಿತಿಯ ರಚನೆ ಹಾಗೂ ವ್ಯವಹಾರಗಳು ಜಿಲ್ಲಾ ಪಂಚಾಯತಿ ರಚಿಸಿದ ಜಿಲ್ಲಾಕ್ಕೆ ಒಳಪಟ್ಟಿರತಕ್ಕದ್ದು. ಇಂತಹ ಸಮಿತಿ ಯಾವ ಉದ್ದೇಶಕ್ಕಾಗಿ ಸ್ಥಾಪಿಸಲಾಗಿರುತ್ತದೋ ಅಂತಹ ಉದ್ದೇಶ ನೆರವೇರಿದ ತರುವಾಯ ಅದನ್ನು ವಿಸರ್ಜಿಸಬಹುದು.

ಕರ್ನಾಟಕ ಪಂಚಾಯತ್‌ರಾಜ್ ಅಧಿನಿಯಮ 1993ರ ಪ್ರಕರಣ 52ರ ಪ್ರಕಾರ ಸಮಿತಿಯೊಂದು ಗ್ರಾಮಪಂಚಾಯತಿಯ ಕಛೇರಿಯಲ್ಲಿ ಕನಿಷ್ಠ ಎರಡು ತಿಂಗಳಿಗೊಮ್ಮೆ ಸಭೆ ಸೇರತಕ್ಕದ್ದು. ಸಭೆ ನಡೆಯುವ ದಿನಾಂಕ ಮತ್ತು ವೇಳೆಯನ್ನು ಆಯಾ ಗ್ರಾಮಪಂಚಾಯತಿ ಅಧ್ಯಕ್ಷರು ನಿರ್ಧರಿಸುತ್ತಾನೆ. ಸಾಮಾನ್ಯ ಸಭೆ, ವಿಶೇಷ ಸಭೆ ಮತ್ತು ತುರ್ತು ಸಭೆಗಳನ್ನು ಕರೆಯಬಹುದಾಗಿದೆ.[49]

**1. ಸಾಮಾನ್ಯ ಸಭೆ :** ಗ್ರಾಮಪಂಚಾಯತಿಯ ಕಾರ್ಯದರ್ಶಿಯು ಸಾಮಾನ್ಯ ಸಭೆಯ ತಿಳುವಳಿಕೆಯನ್ನು ನೀಡತಕ್ಕದ್ದು. ಇಂತಹ ತಿಳುವಳಿಕೆಯಲ್ಲಿ ಸಭೆ ನಡೆಯುವ ದಿನಾಂಕ, ವೇಳೆ ಮತ್ತು ಸ್ಥಳವನ್ನು ನಮೂದಿಸಿರಬೇಕು. ಅಲ್ಲದೆ ಸಭೆಗಳಲ್ಲಿ ನಡೆಯುವ ಕಾರ್ಯಕಲಾಪಗಳ ಪಟ್ಟಿಯನ್ನು ಸಹ ಅದಕ್ಕೆ ಲಗತ್ತಿಸಿರಬೇಕು. ಸಾಮಾನ್ಯ ಸಭೆ ಕರೆಯುವ ಏಳು ದಿವಸಗಳ ಮೊದಲೇ ನೋಟಿಸ್ ನೀಡಬೇಕು. ಅಂದರೆ ಸಭಾ ತಿಳುವಳಿಕೆಯ ಪತ್ರವು ಏಳು ದಿವಸಗಳ ಮೊದಲು ಎಲ್ಲಾ ಸದಸ್ಯರುಗಳಿಗೆ ಮತ್ತು ಸರ್ಕಾರ ಗೊತ್ತುಪಡಿಸಿದ ಅಧಿಕಾರಿಗಳಿಗೆ ತಲುಪಬೇಕು. ಅಲ್ಲದೇ ಅದರ ಪ್ರತಿಯನ್ನು ಗ್ರಾಮಪಂಚಾಯತಿ ಕಛೇರಿಯ ನೋಟೀಸ್ ಬೋರ್ಡಿನಲ್ಲಿ ಅಂಟಿಸತಕ್ಕದ್ದು. ಗ್ರಾಮಪಂಚಾಯತಿ ಸಾಮಾನ್ಯ ಸಭೆಯಲ್ಲಿ ಸದಸ್ಯರ ಕೋರಂ ಒಟ್ಟು ಸದಸ್ಯರ 1/3 ರಷ್ಟು ಆಗಬೇಕು. ಕಾಯ್ದೆಯ ಎರಡನೇ ಪ್ರಕರಣದಲ್ಲಿ ಹೇಳಿರುವಂತೆ ಅಧ್ಯಕ್ಷನು ಸಭೆಯನ್ನು ಕರೆಯಲು ತಪ್ಪಿದರೆ ಉಪಾಧ್ಯಕ್ಷನು ಕರೆಯತಕ್ಕದ್ದು. ಅಥವಾ ಸದಸ್ಯರ ಒಟ್ಟು ಸಂಖ್ಯೆಯು 1/3 ರಷ್ಟು ಕೋರಿಕೆಯನ್ನು ಸಲ್ಲಿಸಿದ ತರುವಾಯ 15 ದಿನ ಮೀರದಂತೆ ಅಂತಹ ಸಭೆಯನ್ನು ಕರೆಯತಕ್ಕದ್ದು. ಸದಸ್ಯರಿಗೆ ನೋಟೀಸ್ ಕೊಡುವಂತೆ ಮತ್ತು ಸಭೆಯನ್ನು ಕರೆಯಲು ಅವಶ್ಯವಾಗಬಹುದಾದ ಕ್ರಮವನ್ನು ಕೈಗೊಳ್ಳಲು ಗ್ರಾಮಪಂಚಾಯತಿ ಕಾರ್ಯದರ್ಶಿಗೆ ಅಗತ್ಯಪಡಿಸಬಹುದಾಗಿದೆ. ಎಲ್ಲಾ ವಿಷಯಗಳ ತೀರ್ಮಾನಗಳನ್ನು ತೆಗೆದುಕೊಳ್ಳುವಾಗ ಹಾಜರಿ ಇರುವ ಸದಸ್ಯರು ಬಹುಮತ ನೀಡುವ ಮೂಲಕ ತೀರ್ಮಾನಿಸಬಹುದಾಗಿದೆ. ಸಮಾನ ಮತಗಳು ಬಂದ ಸಂದರ್ಭದಲ್ಲಿ ಅಧ್ಯಕ್ಷನು ನಿರ್ಣಾಯಕ ಮತವನ್ನು

ಹಾಕಬಹುದು. ಅಧ್ಯಕ್ಷತೆ ವಹಿಸಿರುವ ಸದಸ್ಯನಿಗೆ ಚರ್ಚೆಯಲ್ಲಿರುವ ಯಾವುದೇ ವಿಷಯದಲ್ಲಿ ಹಣಕಾಸಿನ ಹಿತಾಸಕ್ತಿ ಇದೆ ಎಂದು ಸಭೆಯಲ್ಲಿ ಹಾಜರಿರುವ ಯಾವನೇ ಸದಸ್ಯನೂ ಅಭಿಪ್ರಾಯಪಟ್ಟರೆ ಮತ್ತು ಆ ಬಗ್ಗೆ ಒಂದು ಸೂಚನೆಯನ್ನು ಅಂಗೀಕರಿಸಿದರೆ ಅವನು ಸಭೆಯ ಅಧ್ಯಕ್ಷತೆಯನ್ನು ವಹಿಸತಕ್ಕದ್ದಲ್ಲ ಮತ್ತು ಭಾಗವಹಿಸ ಕೂಡದು. ಅಂತಹ ಚರ್ಚೆ ಮುಂದುವರಿಯುತ್ತಿ ರುವ ಕಾಲದಲ್ಲಿ ಪಂಚಾಯತಿಯ ಯಾರಾದರೂ ಒಬ್ಬ ಸದಸ್ಯನು ಅಧ್ಯಕ್ಷತೆಯನ್ನು ವಹಿಸತಕ್ಕದ್ದು. ಗ್ರಾಮಪಂಚಾಯತಿಯ ಸಭೆಯಲ್ಲಿ ತೆಗೆದುಕೊಳ್ಳಲಾದ ನಿರ್ಣಯಗಳನ್ನು ಪಾಸು ಮಾಡಿದ ನಂತರ ಆರು ತಿಂಗಳೊಳಗೆ ಒಂದು ಗೊತ್ತುವಳಿಯನ್ನು ಹೊರಡಿಸಲಾಗುವುದು. ಗ್ರಾಮಪಂಚಾಯತಿಯು ಅಂಗೀಕರಿಸಿದ ಪ್ರತಿಯೊಂದು ನಿರ್ಣಯದ ಒಂದು ಪ್ರತಿಯನ್ನು ಸಭೆಯ ದಿನಾಂಕದಿಂದ ಹತ್ತು ದಿನಗಳೊಳಗಾಗಿ ಸಂಭಂದಪಟ್ಟ ಕಾರ್ಯದರ್ಶಿಯು ತಾಲ್ಲೂಕ್ ಕಾರ್ಯನಿರ್ವಾಹಕ ಅಧಿಕಾರಿಗಳಿಗೆ ಕಳುಹಿಸಿ ಕೊಡತಕ್ಕದ್ದು. ಪಂಚಾಯತಿ ಪ್ರದೇಶಕ್ಕೆ ಸಂಬಂಧಿಸಿದ ಯಾವುದೇ ಸಮಸ್ಯೆಯನ್ನು ಸದಸ್ಯರು ಚರ್ಚಿಸಬಹುದು. ಇಂತಹ ಸಮಸ್ಯೆಗಳಲ್ಲಿ ಪಂಚಾಯತಿ ಕೆಲಸ ನಿರ್ವಹಣೆಯಲ್ಲಿ ಉದಾಸೀನತೆಯಾಗಲೀ ಆಸ್ತಿಯ ಉಪಯೋಗವಾಗಲೀ ಅಥವಾ ಯಾವುದೇ ಪ್ರದೇಶದ ಕುಂದು ಕೊರತೆಯನ್ನಾಗಲೀ ಎತ್ತಿ ತೋರಿಸಬಹುದಾಗಿದೆ. ಇದಲ್ಲದೇ ಯಾವುದೇ ಕಾರ್ಯವು ಆಪೇಕ್ಷಣೀಯವಾಗಿದ್ದರೆ ಅವುಗಳ ಸುಧಾರಣೆಗೆ ಸಲಹೆ ಮಾಡಬಹುದು. ಈ ರೀತಿ ಅಂಶಗಳು ತಿಂಗಳ ಸಭೆಗಳಲ್ಲಿ ಚರ್ಚಿಸಬಹುದಾಗಿದೆ.

**2. ವಿಶೇಷ ಸಭೆ** : ಗ್ರಾಮಪಂಚಾಯತಿಯ ಅಧ್ಯಕ್ಷನು ಸ್ವತಃ ಸೂಕ್ತವೆಂದು ಯೋಚಿಸಿದಾಗ ಅಥವಾ ಗ್ರಾಮಪಂಚಾಯತಿಯ ಸದಸ್ಯರ ಒಟ್ಟು ಸಂಖ್ಯೆಯ ಮೂರನೇ ಒಂದು ಭಾಗ ಸದಸ್ಯರಿಗೆ ಕಡಿಮೆ ಇಲ್ಲದಷ್ಟು ಸದಸ್ಯರು ಬರಹದಲ್ಲಿ ಕೋರಿದಾಗ ಅಂತಹ ಕೋರಿ ತಲುಪಿದ 15 ದಿನಗಳೊಳಗೆ ಪ್ರಕರಣ 52(2)ರ ಪ್ರಕಾರ ವಿಶೇಷ ಸಭೆಯನ್ನು ಕರೆಯಬಹುದು. ಮೇಲ್ಕಂಡ ಸದಸ್ಯರು ಕೋರಿದಾಗ ಅಧ್ಯಕ್ಷನು ವಿಶೇಷ ಸಭೆಯನ್ನು ಕರೆಯಲು ತಪ್ಪಿದಲ್ಲಿ ಉಪಾಧ್ಯಕ್ಷ ಅಥವಾ ಕೋರಿಕೆ ನೀಡಿದ 1/3ರಷ್ಟು ಸದಸ್ಯರು ಅಂತಹ ಸಭೆಯನ್ನು ಕರೆಯಬಹುದು. ಇಂತಹ ಸಭೆಗಳ ಕೋರಂ ಹಾಗೂ ಕಾರ್ಯ ವಿಧಾನ ಸಾಮಾನ್ಯ ಸಭೆಯ ಕೋರಂ ಹಾಗೂ ಕಾರ್ಯವಿಧಾನವೇ ಆಗುತ್ತದೆ. ಈ ಸಭೆಯ ಎಲ್ಲಾ ಉಸ್ತುವಾರಿಯನ್ನು ಗ್ರಾಮಪಂಚಾಯತಿಯ ಕಾರ್ಯದರ್ಶಿ ಹೊತ್ತಿರುತ್ತಾನೆ.

**3. ತುರ್ತು ಸಭೆ :** ಅಧ್ಯಕ್ಷನು ಯಾವುದಾದರು ವಿಷಯದಲ್ಲಿ ತುರ್ತಾಗಿ ನಿರ್ಣಯ ತೆಗೆದುಕೊಳ್ಳಬೇಕಾಗಿದ್ದು ಸಾಮಾನ್ಯ ಸಭೆಯ ಕರೆಯಲು ಬೇಕಾಗುವ ಕಾಲಾವಕಾಶ ನೀಡಲು ಸಾಧ್ಯವಿಲ್ಲದಿದ್ದ ಪಕ್ಷದಲ್ಲಿ ಮತ್ತು ನಿರ್ಣಯವನ್ನು ಕೂಡಲೇ ತೆಗೆದುಕೊಳ್ಳಬೇಕಾದ ಸಂದರ್ಭದಲ್ಲಿ ಮಾತ್ರ ಕೇವಲ 24ಗಂಟೆಗಳ ನೋಟಿಸನ್ನು ನೀಡಿ ತುರ್ತು ಸಭೆ ಕರೆಯಬಹುದು. ಇದರ ಕೋರಂ ಸಹ ಸಾಮಾನ್ಯ ಸಭೆಯ ಕಾರ್ಯ ವಿಧಾನವೇ ಆಗಿರುತ್ತದೆ.[50]

## ಗ್ರಾಮಸಭೆಗಳು

1959ರ ಬಾಂಬೇ ಗ್ರಾಮಪಂಚಾಯತ್ ಕಾಯ್ದೆಯಲ್ಲಿ ಮಹಾರಾಷ್ಟ್ರ ಸರ್ಕಾರವು ಗ್ರಾಮಸಭೆಗೆ ಗುರುತರವಾದ ಸ್ಥಾನವನ್ನು ನೀಡಿ ಈಡೀ ರಾಷ್ಟ್ರದಲ್ಲಿ ಇದೇ ರಾಜ್ಯವು ಪ್ರಥಮ ಬಾರಿಗೆ ಕಾಯ್ದೆಯ ಮೂಲಕ ಗ್ರಾಮಸಭೆಯನ್ನು ಪರಿಚಯಿಸಿತು. ಕರ್ನಾಟಕದಲ್ಲಿ ಈ ವೇಳೆಯಲ್ಲಿ 1959ರ ಕಾಯ್ದೆಯಲ್ಲಿ ಗ್ರಾಮಸಭೆಯ ಪ್ರಸ್ತಾಪವಿರಲಿಲ್ಲ. ಆದರೆ ಪ್ರತಿವರ್ಷ ಒಮ್ಮೆ ಅಥವಾ ಎರಡು ಬಾರಿ ಗ್ರಾಮದ ವಯಸ್ಕರೆಲ್ಲಾ ಸೇರಿ ಸಭೆ ಸೇರುತಿತ್ತು. ಆ ನಂತರ ಕರ್ನಾಟಕದಲ್ಲಿ ಸ್ಥಳೀಯ ಸಂಸ್ಥೆಗಳನ್ನು ಬಲಪಡಿಸುವ ಪ್ರಯತ್ನಗಳಿಗೆ ಚಾಲನೆ ದೊರೆತಿದ್ದು 1983ರ ಪಂಚಾಯತ್ ರಾಜ್ ಕಾಯ್ದೆಯಲ್ಲಿ ಎರಡು ಹಂತದ ಪಂಚಾಯತ್ ವ್ಯವಸ್ಥೆಯನ್ನು ಜಾರಿಗೆ ತಂದು ಗ್ರಾಮಸಭೆಯ ಪರಿಕಲ್ಪನೆಯನ್ನು ಪರಿಚಯಿಸಿತು. ಈ ಕಾಯ್ದೆಯು ಗ್ರಾಮಸಭೆಗೆ ನಿಗದಿತ ಕಾರ್ಯಸೂಚಿಯನ್ನು ವಿಧಿಸಿತು. ಗ್ರಾಮಗಳಲ್ಲಿ ಅಭಿವೃದ್ಧಿಯೋಜನೆಯ ತಯಾರಿ ಹಾಗೂ ಅನುಷ್ಠಾನ ಮತ್ತು ಉದ್ಯೋಗ ಕಾರ್ಯಕ್ರಮಗಳು ಇದರಲ್ಲಿ ಸೇರಿದ್ದವು.[51]

1983ರ ಪಂಚಾಯತ್‌ರಾಜ್ ಕಾಯ್ದೆಯು ಪ್ರಜಾತಂತ್ರದ ನೆಲೆಯಲ್ಲಿ ಗ್ರಾಮಸಭೆಯನ್ನು ಪರಿಚಯಿಸಿದರೂ ಗ್ರಾಮಸಭೆಗಳನ್ನು ಕಡ್ಡಾಯವಾಗಿ ನಡೆಸಬೇಕೆಂದು ಸ್ಪಷ್ಟವಾಗಿ ತಿಳಿಸಿರಲಿಲ್ಲ. ಆ ನಂತರ 1993ರಲ್ಲಿ 73ನೇ ಸಂವಿಧಾನ ತಿದ್ದುಪಡಿ ಅನ್ವಾಯ ಸಂವಿಧಾನದ 243ಎ ಪರಿಚ್ಛೇದದ ಅನ್ವಯ ಗ್ರಾಮಸಭೆಗಳಿಗೆ ಸಂವಿಧಾನದ ಮಾನ್ಯತೆಯನ್ನು ನೀಡಲಾಯಿತು. ಈ ಅಧಿನಿಯಮದ ಮೂರನೇ ಪ್ರಕರಣವು ಗ್ರಾಮಸಭೆಯ ಕಾರ್ಯವ್ಯಾಪ್ತಿಯನ್ನು ಸೂಕ್ತವಾಗಿ ಸೂಚಿಸಿ ಅದರ ಕಾರ್ಯವೈಖರಿಯನ್ನು ಖಚಿತವಾಗಿ ನಿಗದಿಪಡಿಸಲಾಗಿದೆ. ಹಾಗಾಗಿ ಗ್ರಾಮೀಣ ಮಟ್ಟದಲ್ಲಿ ಸ್ಥಳೀಯ ಜನತೆಯನ್ನು ನೇರವಾಗಿ ಭಾಗವಹಿಸುವಂತೆ ಮಾಡಿದೆ. ಜೊತೆಗೆ ಅಭಿವೃದ್ಧಿ ಚಟುವಟಿಕೆಗಳಲ್ಲಿ ಸ್ಥಳೀಯರನ್ನು ಪಾಲ್ಗೊಳ್ಳುವಂತೆ ಮಾಡಲಾಗಿದೆ.

73ನೇ ಸಂವಿಧಾನದ ತಿದ್ದುಪಡಿ ಅನ್ವಯ ಸಂವಿಧಾನದ ಪರಿಚ್ಛೇದ 243ಎ ಅನ್ವಯ ರಾಜ್ಯ ಶಾಸಕಾಂಗವು ಕಾನೂನಿನ ಆದೇಶಕ್ಕೊಳಪಟ್ಟ ಗ್ರಾಮಸಭೆಗೆ ಎಲ್ಲಾ ಅಧಿಕಾರ ಮತ್ತು ಕಾರ್ಯಗಳನ್ನು ಚಲಾಯಿಸಬಹುದು. ಹಾಗಾಗಿ ಆಯಾ ರಾಜ್ಯಗಳು ಎಲ್ಲಾ ಗ್ರಾಮಪಂಚಾಯತಿ ಗಳು ಗ್ರಾಮಸಭೆಯ ಅಧಿಕಾರ, ಕಾರ್ಯಗಳು ಮತ್ತು ಕರೆಯುವ ವಿಧಾನವನ್ನು ಬೇರೆ ಬೇರೆಯಾಗಿ ಅಳವಡಿಸಿಕೊಂಡಿವೆ. ಹೀಗೆ ಗ್ರಾಮಸಭೆಗಳು ಕಾಯ್ದೆಯ ಮೂಲಕ ಸಂವಿಧಾನಿಕ ಸ್ಥಾನಮಾನವನ್ನು ಹೊಂದಿವೆ.

## ಗ್ರಾಮಸಭೆಯ ರಚನೆ ಮತ್ತು ಕಾರ್ಯಗಳು

ಕರ್ನಾಟಕ ಪಂಚಾಯತ್‌ರಾಜ್ ಕಾಯ್ದೆ ಅಧಿನಿಯಮ 1993ರ ಮೂರನೇ ಪ್ರಕರಣದ ಅನ್ವಯ ಗ್ರಾಮಸಭೆಯನ್ನು ರಚಿಸಲಾಗಿದೆ. ಈ ಕಾಯ್ದೆಯ ಪ್ರಕಾರ ಜಿಲ್ಲಾ ಪಂಚಾಯತ್ ಪಟ್ಟಿಯಲ್ಲಿರುವ ಎಲ್ಲಾ ವಯಸ್ಕರು ಗ್ರಾಮಸಭೆಯ ಸದಸ್ಯರಾಗಿರುತ್ತಾರೆ. ಪ್ರತಿ ವರ್ಷ ಎರಡು ಬಾರಿ ಗ್ರಾಮಸಭೆಗಳನ್ನು ಈ ಹಿಂದೆ ಕರೆಯಲಾಗುತ್ತಿದ್ದು, ಪ್ರಸ್ತುತ ಪ್ರತಿವರ್ಷ ನಾಲ್ಕು ಬಾರಿ ಗ್ರಾಮಸಭೆಗಳನ್ನು ಕರೆಯಬೇಕಾಗಿದೆ. ಗ್ರಾಮಸಭೆಯ ಬಗ್ಗೆ ಪಂಚಾಯತಿ ಕಾರ್ಯದರ್ಶಿ ಅಧ್ಯಕ್ಷರೊಡನೆ ಸಮಾಲೋಚಿಸಿ ಸಭೆಯ ದಿನಾಂಕ, ಸ್ಥಳ ಮತ್ತು

ವೇಳೆಯನ್ನು ನಿಗದಿಪಡಿಸಬೇಕು. ಸಭೆಯ ತಿಳುವಳಿಕೆಯನ್ನು ಗ್ರಾಮಪಂಚಾಯತಿಯ ನೋಟಿಸ್ ಬೋರ್ಡ್‌ನಲ್ಲಿ ಮತ್ತು ಸಾರ್ವಜನಿಕ ಸ್ಥಳಗಳಲ್ಲಿ ಪ್ರಚಾರಪಡಿಸಬೇಕು. ಗ್ರಾಮದ ಜನತೆಯ ಗಮನಕ್ಕೆತರಲು ಟಾಂ ಟಾಂ ಮೂಲಕ ಆಥವಾ ಕರಪತ್ರಗಳ ಮೂಲಕ ಗ್ರಾಮದಲ್ಲಿ ಹೆಚ್ಚು ಪ್ರಚಾರಪಡಿಸಬೇಕು. ಸಮರ್ಪಕವಾಗಿ ಗ್ರಾಮಸಭೆ ನಡೆಸುವುದು, ಗ್ರಾಮಸ್ಥರನ್ನು ಹೆಚ್ಚು ಭಾಗವಹಿಸುವಂತೆ ಮಾಡುವುದು, ಸರ್ಕಾರ ಇಲಾಖೆಗಳ ಪ್ರತಿನಿಧಿಗಳು ಬರುವಂತೆ ಗ್ರಾಮಪಂಚಾಯತಿ ನೋಡಿಕೊಳ್ಳಬೇಕು. ಗ್ರಾಮಪಂಚಾಯತಿ ಕಾರ್ಯದರ್ಶಿ ಪ್ರತಿಯೊಂದು ಗ್ರಾಮಸಭೆಯ ನಡಾವಳಿಗಳನ್ನು ಬರೆಯತಕ್ಕದ್ದು.[52] ಹೀಗೆ ಗ್ರಾಮಸಭೆ ತನ್ನ ರಚನೆ ಹೊಂದಿದೆ.

## ಗ್ರಾಮಸಭೆಯ ಕಾರ್ಯಗಳು

ಕರ್ನಾಟಕ ಪಂಚಾಯತ್‌ರಾಜ್ ಕಾಯ್ದೆ 1993ರ ಅನ್ವಯ ಪ್ರತಿಯೊಂದು ಗ್ರಾಮಸಭೆಗಳು ಈ ಕೆಳಗಿನ ಕಾರ್ಯಗಳನ್ನು ನಿರ್ವಹಿಸತಕ್ಕದ್ದು.

1. ಗ್ರಾಮಸಭೆಯನ್ನು ಕಾಲಕಾಲಕ್ಕೆ ಕರೆಯಬೇಕು ಎರಡು ಗ್ರಾಮಸಭೆಗಳ ನಡುವಿನ ಅಂತರ ತಿಂಗಳಿಗಿಂತ ಹೆಚ್ಚಿರಬಾರದು.

2. ಗ್ರಾಮಪಂಚಾಯತ್ ಗ್ರಾಮಸಭೆಯನ್ನು ಕರೆಯಲು ತಪ್ಪಿದಲ್ಲಿ ಕಾರ್ಯನಿರ್ವಾಹಕ ಅಧಿಕಾರಿ ಗ್ರಾಮಸಭೆಯನ್ನು ಕರೆಯತಕ್ಕದ್ದು.

3. ಅಭಿವೃದ್ಧಿ ಯೋಜನೆಯನ್ನು ಗ್ರಾಮದಲ್ಲಿ ರೂಪಿಸುವುದು.

4. ಗ್ರಾಮಸಭೆಯಲ್ಲಿ ಈ ಕೆಳಗಿನ ವಿಚಾರಗಳನ್ನು ಚರ್ಚಿಸಿ ಗ್ರಾಮಪಂಚಾಯತಿಗೆ ಶಿಫಾರಸ್ಸುಗಳನ್ನು ಮತ್ತು ಸಲಹೆಗಳನ್ನು ನೀಡಬಹುದು.

   ಅ. ಗ್ರಾಮಪಂಚಾಯತಿಗಳ ವಾರ್ಷಿಕ ಲೆಕ್ಕಪತ್ರಗಳ ವಿವರಣೆ ಹಿಂದಿನ ಹಣಕಾಸು ವರ್ಷದ ಆಡಳಿತ ವರದಿ, ವಾರ್ಷಿಕ ಆಯವ್ಯಯ ಲೆಕ್ಕ ಪರಿಶೋಧನೆ ಟಿಪ್ಪಣಿ.

   ಆ. ಹಿಂದಿನ ವರ್ಷಕ್ಕೆ ಸಂಬಂಧಪಟ್ಟ ಅಭಿವೃದ್ಧಿ ಕಾರ್ಯಕ್ರಮಗಳ ಬಗ್ಗೆ ವರದಿ ಮತ್ತು ಪ್ರಸಕ್ತ ವರ್ಷದಲ್ಲಿ ಕೈಗೊಳ್ಳಬೇಕೆಂದು ಉದ್ದೇಶಿಸಿದ ಅಭಿವೃದ್ಧಿ ಕಾರ್ಯಕ್ರಮಗಳು.

   ಇ. ಗ್ರಾಮದಲ್ಲಿರುವ ಎಲ್ಲಾ ವರ್ಗಗಳ ಜನರಲ್ಲಿ ಏಕತೆ, ಹಾಗೂ ಸೌಹಾರ್ದತೆಯನ್ನು ಬೆಳೆಸಿಕೊಂಡು ಬರುವುದು.

   ಈ. ಗ್ರಾಮದಲ್ಲಿ ವಯಸ್ಕರ ಶಿಕ್ಷಣ ಕಾರ್ಯಕ್ರಮ.

4. ಗ್ರಾಮಗಳಲ್ಲಿನ ಶಿಕ್ಷಣ, ಆರೋಗ್ಯ, ಕುಡಿಯುವ ನೀರಿನ ಬಗ್ಗೆ ಸಂಬಂಧಿಸಿದ ಅಧಿಕಾರಿಗಳನ್ನು ಕರೆಸಿ ಕುಂದುಕೊರತೆಗಳನ್ನು ಚರ್ಚಿಸಿ ಪರಿಹಾರ ಕಂಡುಕೊಳ್ಳುವುದು.

5. ಗ್ರಾಮದ ನೈರ್ಮಲ್ಯ ಮತ್ತು ಚರಂಡಿ ವ್ಯವಸ್ಥೆಯನ್ನು ಕಾರ್ಯಗತಗೊಳಿಸುವುದು.

6. ಗ್ರಾಮಪಂಚಾಯತಿಯು ಗ್ರಾಮಸಭೆಯ ಶಿಫಾರಸ್ಸುಗಳನ್ನು ಮತ್ತು ಸಲಹೆಗಳನ್ನು ಸೂಕ್ಷ್ಮವಾಗಿ ಪರಿಶೀಲಿಸತಕ್ಕದ್ದು.

7. ಗ್ರಾಮಸಭೆಯ ಅಧ್ಯಕ್ಷತೆಯನ್ನು ಆಯಾ ಗ್ರಾಮಪಂಚಾಯತಿಯ ಅಧ್ಯಕ್ಷರು ವಹಿಸತಕ್ಕದ್ದು. ಆತನ ಗೈರುಹಾಜರಿಯಲ್ಲಿ ಪಂಚಾಯತಿಯ ಉಪಾಧ್ಯಕ್ಷನು ಅಥವಾ ಯಾರೇ ಸದಸ್ಯನು ವಹಿಸಬೇಕು.

8. ಸಮುದಾಯ ಕಲ್ಯಾಣ ಕಾರ್ಯಕ್ರಮಗಳಿಗಾಗಿ ಸ್ವಯಂಸೇವೆ ಹಾಗೂ ವಸ್ತುರೂಪದ ಮತ್ತು ಹಣದ ರೂಪದ ಕೊಡುಗೆಗಳನ್ನು ಸಂಗ್ರಹಿಸುವುದು.

9. ಗ್ರಾಮಕ್ಕೆ ಸಂಬಂಧಪಟ್ಟ ಅಭಿವೃದ್ಧಿ ಯೋಜನೆಗಳನ್ನು ಕಾರ್ಯಗತಗೊಳಿಸುವ ಸಲುವಾಗಿ ಫಲಾನುಭವಿಗಳನ್ನು ಗುರುತಿಸುವುದು. (ಗ್ರಾಮಸಭೆ ಫಲಾನುಭವಿಗಳನ್ನು ಗುರುತಿಸಲು ತಪ್ಪಿದ ಪಕ್ಷದಲ್ಲಿ ಕಾರ್ಯನಿರ್ವಾಹಕ ಅಧಿಕಾರಿಯು ಗ್ರಾಮಪಂಚಾಯತಿಯೊಂದಿಗೆ ಸಮಾಲೋಚಿಸಿ ಫಲಾನುಭವಿಗಳನ್ನು ಗುರುತಿಸಬೇಕು.)

10. ಗ್ರಾಮಕ್ಕೆ ಸಂಬಂಧಪಟ್ಟ ಅಭಿವೃದ್ಧಿ ಯೋಜನೆಗಳನ್ನು ಕಾರ್ಯಗತಗೊಳಿಸುವಲ್ಲಿ ನೆರವಾಗುವುದು. ಹೀಗೆ ಗ್ರಾಮಸಭೆಯು ಮುಖ್ಯ ಕಾರ್ಯಗಳನ್ನು ಕಾನೂನಿನ ಮೂಲಕ ನಿರ್ವಹಿಸಬೇಕಾಗಿದೆ.[53]

## 1.7. ಕೇಂದ್ರ ಮತ್ತು ರಾಜ್ಯ ಸರಕಾರದ ಅನುದಾನಗಳು

ಪ್ರತಿ ವರ್ಷ ಗ್ರಾಮಪಂಚಾಯತಿಗಳಿಗೆ ಕೇಂದ್ರ ಮತ್ತು ರಾಜ್ಯ ಸರ್ಕಾರಗಳು ಸಂಪನ್ಮೂಲ ಗಳನ್ನು ಒದಗಿಸುತ್ತಿವೆ. ಕೇಂದ್ರವು ಜವಾಹರ್ ರೋಜ್‌ಗಾರ್ ಯೋಜನೆಯಡಿಯಲ್ಲಿ ಪ್ರತಿ ವರ್ಷ 1.5 ಲಕ್ಷ ಮೂರುಲಕ್ಷದವರೆಗೆ ಮತ್ತು 10ನೇ ಹಣಕಾಸು ಯೋಜನೆಯಡಿಯಲ್ಲಿ ಪ್ರತಿವರ್ಷ ಕನಿಷ್ಠ ಐವತ್ತು ಸಾವಿರದಿಂದ ಒಂದು ಲಕ್ಷ ರೂಪಾಯಿಗಳ ಅನುದಾನವನ್ನು ಕೊಡುತ್ತಿವೆ. ಕೇಂದ್ರ ಮತ್ತು ರಾಜ್ಯ ಸರ್ಕಾರಗಳು ಈ ಸಂಪನ್ಮೂಲಗಳನ್ನು ಬಳಸುವ ಕ್ರಮದಲ್ಲಿ ಪ್ರತಿ ಗ್ರಾಮಪಂಚಾಯತಿಗಳು ಖರ್ಚು ಮಾಡತಕ್ಕದ್ದು. ಈ ಅನುದಾನಗಳನ್ನು ಸದಸ್ಯರ ಸಂಭಾವನೆ ಮತ್ತು ನೌಕರರ ಸಂಬಳಕ್ಕೆ ಬಳಸಕೂಡದು. ಸರ್ಕಾರದ ನಿಯಾಮಾವಳಿ ಪ್ರಕಾರ ವೆಚ್ಚ ಮಾಡತಕ್ಕದ್ದು. ಹೀಗೆ ರಾಜ್ಯದ ಗ್ರಾಮಪಂಚಾಯತಿಗಳು ಸ್ಥಳೀಯ ಸಂಪನ್ಮೂಲಗಳ ಜೊತೆಗೆ ಸರ್ಕಾರದ ಅನುದಾನಗಳನ್ನು ಅಭಿವೃದ್ಧಿ ಚಟುವಟಿಕೆಗಳಿಗೆ ಹೊಂದಿವೆ. ಪಂಚಾಯತ್ ಸಂಸ್ಥೆಗಳ ಹಣಕಾಸು ಪರಿಸ್ಥಿತಿಯನ್ನು ಸುಧಾರಿಸಲು ಕೈಗೊಳ್ಳಬೇಕಾದ ಕಾರ್ಯಕ್ರಮಗಳ ಬಗ್ಗೆ ವರದಿ ಮಾಡಲು ಡಾ.ಜಿ.ತಿಮ್ಮಯ್ಯನವರು ಅಧ್ಯಕ್ಷತೆಯಲ್ಲಿ ಹಣಕಾಸು ಆಯೋಗವನ್ನು ರಚಿಸಲಾಯಿತು. ಆಯೋಗವು ಅಧ್ಯಯನ ನಡೆಸಿ 1995ರಲ್ಲಿ ವರದಿಯನ್ನು ಸಲ್ಲಿಸಿತು. ಸ್ಥಳೀಯ ಸಂಪನ್ಮೂಲ ಹೆಚ್ಚಳದ ಬಗ್ಗೆ ಸಮಿತಿಯು ವರದಿಯಲ್ಲಿ ಹೇಳಿತು.[54] ಗ್ರಾಮದಲ್ಲಿನ ದೈನಂದಿನ ತೀವ್ರ ಅಗತ್ಯಗಳು ಹಾಗೂ ಸ್ಥಳೀಯ ಪರಿಸ್ಥಿತಿಗಳ ನಡುವೆ ಹೆಚ್ಚು ಸಾದೃಶ್ಯವಿರುವುದರಿಂದ ಗ್ರಾಮಮಟ್ಟದಲ್ಲಿ ಯೋಜನೆಯನ್ನು ವಿಕೇಂದ್ರೀಕರಣಗೊಳಿಸಬೇಕು. ಇದಕ್ಕಾಗಿ ಉನ್ನತ ಪಂಚಾಯತ್‌ರಾಜ್ ಸಂಸ್ಥೆಗಳಿಗೆ ನೀಡಿರುವ ಸ್ವಾಯತ್ತತೆಯನ್ನು ಗ್ರಾಮಗಳಿಗೂ ನೀಡಬೇಕು. ಹಣಕಾಸು ವರ್ಷದಲ್ಲಿ ಕನಿಷ್ಠ ಎರಡು ಗ್ರಾಮಸಭೆಗಳನ್ನು

ಕರೆಯಬೇಕು. ಇದರಲ್ಲಿ ನೊಂದಾಯಿತ ಮತದಾರರ ಶೇ.10ರಷ್ಟು ಕೋರಂ ಇರತಕ್ಕದ್ದು. ಪ್ರತಿಯೊಂದು ಹಳ್ಳಿಯಿಂದ ಆಯ್ಕೆಯಾದ ಗ್ರಾಮ ಪಂಚಾಯತಿ ಸದಸ್ಯರನ್ನೊಳಗೊಂಡ ಸ್ಥಾಯಿ ಸಮಿತಿಯನ್ನು ಹೊಂದಿರಬೇಕೆಂದು ಪಿ. ಆರ್. ನಾಯಕ್ ವರದಿಯಲ್ಲಿ ಹೇಳಲಾಗಿದೆ.[55]

ರಾಜ್ಯ ಸರ್ಕಾರವು ಆಯಾ ಪಂಚಾಯತಿ ಪ್ರದೇಶದ ವ್ಯಾಪ್ತಿಯಲ್ಲಿ ಬರುವ ಸ್ಥಿರ ಮತ್ತು ಚರ ಆಸ್ತಿಯನ್ನು ಅರ್ಜಿಸುವ, ಖರೀದಿ ಮಾಡುವ, ಮಾರಾಟ ಮಾಡುವ, ವರ್ಗಾವಣೆ ಮಾಡುವ ಎಲ್ಲಾ ಅಧಿಕಾರಗಳು ಗ್ರಾಮಪಂಚಾಯತಿಗೆ ಇರುತ್ತದೆ. ಗ್ರಾಮಪಂಚಾಯತಿ ನಿಧಿಯಿಂದ ಮಾಡಿಸಿದ ಪ್ರತಿಯೊಂದು ಕಾಮಗಾರಿಯು ಮತ್ತು ಸೃಷ್ಟಿಸಿದ ಆಸ್ತಿಯು ಗ್ರಾಮಪಂಚಾಯತಿಯ ಸ್ವತ್ತು ಆಗತಕ್ಕದ್ದು. ಪಂಚಾಯತ್ ವ್ಯಾಪ್ತಿಯಲ್ಲಿರುವ ಮರಗಳ, ಕಟ್ಟಡಗಳು ಮತ್ತು ಸಾರ್ವಜನಿಕ ಆಸ್ತಿಗಳು ಪಂಚಾಯತಿಯ ಸ್ವತ್ತಾಗತಕ್ಕದ್ದು. ಈ ಸ್ವತ್ತುಗಳ ರಕ್ಷಣೆ, ನಿರ್ವಹಣೆ ಮತ್ತು ಹಣಕಾಸಿನ ಎಲ್ಲಾ ಅಧಿಕಾರಗಳನ್ನು ಗ್ರಾಮಪಂಚಾಯತಿ ಹೊಂದಿರುತ್ತದೆ. ಪಂಚಾಯತ್ ಕಾಯ್ದೆಯ 213ರ ಸೆಕ್ಷನ್ ಅನ್ವಯ ಗ್ರಾಮಪಂಚಾಯತಿ ಸೃಷ್ಟಿಸಿದ ಮತ್ತು ಇತರೆ ಮೂಲಗಳಿಂದ ಬರುವ ಆದಾಯವನ್ನು ಗ್ರಾಮಪಂಚಾಯತಿಗೆ ಸೇರತಕ್ಕದ್ದು. ಈ ಆದಾಯದಿಂದ ಗ್ರಾಮಪಂಚಾಯತಿಗೆ ನಿಧಿಯನ್ನು ಸ್ಥಾಪಿಸತಕ್ಕದ್ದು. ಸರ್ಕಾರ ನಿರ್ದಿಷ್ಟಪಡಿಸುವ ಉದ್ದೇಶಗಳಿಗೆ ಬಳಸತಕ್ಕದ್ದು. ಗ್ರಾಮ ಪಂಚಾಯತಿಯ ನಿಧಿಯನ್ನು ಅಧ್ಯಕ್ಷ, ಉಪಾಧ್ಯಕ್ಷ ಮತ್ತು ಸಿಬ್ಬಂದಿ ವೇತನಗಳಾಗಿ ಮತ್ತು ತಿಂಗಳ ಸಭೆಗಳಿಗೆ, ಸದಸ್ಯರ ಪ್ರಯಾಣ,ಭತ್ಯೆ, ದಿನ ಭತ್ಯೆಗಳಿಗೆ ಬಳಸಬಹುದಾಗಿದೆ. ಈ ರೀತಿ ಪ್ರತಿಯೊಂದು ಗ್ರಾಮಪಂಚಾಯತಿಗಳು ಸ್ವತ್ತುಗಳು ಮತ್ತು ನಿಧಿಗಳನ್ನು ಹೊಂದಿವೆ. ಪ್ರಸ್ತುತ ಗ್ರಾಮಪಂಚಾಯತಿಗಳು ಸ್ವತ್ತುಗಳನ್ನು ಮತ್ತು ನಿಧಿಗಳ ವಿವರವನ್ನು ಮುಂದಿನ ಅಧ್ಯಾಯಗಳಲ್ಲಿ ನೋಡಬಹುದು.

ಹೀಗೆ 1993ರ ಪಂಚಾಯತ್‌ರಾಜ್ ಕಾಯ್ದೆ ಅನ್ವಯ ತನ್ನದೇ ಅಧಿಕಾರ, ಕಾರ್ಯಗಳು ಮತ್ತು ಸಂಪನ್ಮೂಲಗಳನ್ನು ಪ್ರತಿಯೊಂದು ಗ್ರಾಮಪಂಚಾಯತಿಗಳು ಹೊಂದಿವೆ. ಈ ಗ್ರಾಮಪಂಚಾಯತಿಗಳ ಮೂಲಕ ಹಲವಾರು ಅಭಿವೃದ್ಧಿ ಕಾರ್ಯಕ್ರಮಗಳು ಅನುಷ್ಠಾನ ಗೊಳ್ಳುತ್ತಿವೆ. ಕೇಂದ್ರ ಸರಕಾರ ಜಿ.ಆರ್.ವೈ ಹಣದ ಮೂಲಕ ಹಲವಾರು ಉದ್ಯೋಗ ಭರವಸೆ ಯೋಜನೆಗಳು ಜಾರಿಗೆ ಬರುತ್ತಿವೆ. ಪರಿಶಿಷ್ಟ ಜಾತಿ/ ವರ್ಗ ಕಲ್ಯಾಣಕ್ಕಾಗಿ ಶೇ.22.5, ಸಾಮಾಜಿಕ ಅರಣ್ಯ ನಿರ್ಮಾಣಕ್ಕೆ ಶೇ.25ರಷ್ಟು ಮತ್ತು ಕಾಮಗಾರಿಗಳಿಗೆ ಶೇ.52ರಷ್ಟು ಅನುದಾನವನ್ನು ಮೀಸಲಿಡಲಾಗಿದೆ. ಕುಡಿಯುವ ನೀರು ಮತ್ತು ನೈರ್ಮಲ್ಯೀಕರಣಕ್ಕಾಗಿ ಹತ್ತನೇ ಹಣಕಾಸು ಯೋಜನೆಯಿಂದ ಸಂಪನ್ಮೂಲಗಳನ್ನು ಒದಗಿಸಲಾಗಿದೆ.[56] ಪ್ರಸ್ತುತ ಗ್ರಾಮ ಪಂಚಾಯತಿಗಳು ತನ್ನದೇ ಆದ ನಿರ್ದಿಷ್ಟ ಕಾರ್ಯಗಳನ್ನು ಹೊಂದಿದೆ. ರಾಜ್ಯ ಸರ್ಕಾರ ಪ್ರತಿ ವರ್ಷ ಎರಡು ಲಕ್ಷ ಅನುದಾನದಲ್ಲಿ ಮೂಲಭೂತ ಸೌಕರ್ಯಗಳನ್ನು ಗ್ರಾಮಗಳಲ್ಲಿ ಅನುಷ್ಠಾನಗೊಳಿಸ ಬಹುದಾಗಿದೆ. ಗ್ರಾಮೀಣ ಪ್ರದೇಶದಲ್ಲಿ ಹಲವಾರು ಕಾಮಗಾರಿಗಳಿಗೆ ಖರ್ಚು ಮಾಡತಕ್ಕದ್ದು. ಈ ಅನುದಾನದಲ್ಲಿ ಯಾವುದೇ ಹಣವನ್ನು ಗ್ರಾಮಪಂಚಾಯತಿ ಸಿಬ್ಬಂದಿ ವೇತನಕ್ಕೆ ಖರ್ಚು ಮಾಡದೇ ಗ್ರಾಮದ ಅಭಿವೃದ್ಧಿಗಾಗಿ ವೆಚ್ಚ ಮಾಡತಕ್ಕದ್ದು ಎಂದು ಹೇಳಲಾಗಿದೆ. ಸ್ಥಳೀಯ ಸಂಪನ್ಮೂಲ ಕ್ರೋಢೀಕರಣದಿಂದ ಸಿಬ್ಬಂದಿ ವೇತನ, ಸದಸ್ಯರ ಗೌರವ ಧನಕ್ಕೆ ಬಳಸತಕ್ಕದ್ದು. ಹೀಗೆ ಹಲವಾರು ಅಭಿವೃದ್ಧಿ ಕಾರ್ಯಕ್ರಮಗಳನ್ನು ತಳಮಟ್ಟದಲ್ಲಿ ಅನುಷ್ಠಾನಗೊಳಿಸುವ ಮತ್ತು ವಿತರಿಸುವ ಸಂಸ್ಥೆಯಾಗಿದೆ. ಜಿಲ್ಲಾ ಪಂಚಾಯತ್ ಮತ್ತು ತಾಲ್ಲೂಕ್

ಪಂಚಾಯತ್ ಯೋಜನೆಗಳಾದ ಆಶ್ರಯ, ಆಂಬೇಡ್ಕರ್ ವಸತಿ ಯೋಜನೆಗಳನ್ನು ಉದ್ದೇಶಿತ ವರ್ಗಕ್ಕೆ ತಲುಪಿಸುವ ಸಲುವಾಗಿ ಗ್ರಾಮಸಭೆಗಳನ್ನು ತಳಮಟ್ಟದಲ್ಲಿ ಕರೆಯಬೇಕಾಗಿದೆ. ಈ ಗ್ರಾಮಸಭೆಗಳ ಮುಖ್ಯ ಉದ್ದೇಶ ಯೋಜನೆ ಫಲಗಳು ಆಯಾ ಸಮುದಾಯಗಳಿಗೆ ಸಿಗಬೇಕು ಎಂಬುದಾಗಿದೆ. ಗ್ರಾಮಪಂಚಾಯತಿ ತನ್ನ ಯೋಜನೆಗಳ ಸರಿಯಾದ ವಿತರಣೆಗೆ ಗ್ರಾಮಸಭೆ, ತಿಂಗಳ ಸಭೆ, ಬಜೆಟ್ ಮತ್ತು ಯೋಜನೆಗಳನ್ನು ಹೊಂದಿವೆ. ಈ ಎಲ್ಲಾ ಸಂಸ್ಥೆಗಳ ಉದ್ದೇಶ ಅಭಿವೃದ್ಧಿ ಯೋಜನೆಗಳನ್ನು ಉದ್ದೇಶಿತ ವರ್ಗಕ್ಕೆ ತಲುಪಿಸುವುದೇ ಆಗಿದೆ.

ರಾಜ್ಯದಲ್ಲಿ ಒಟ್ಟು 26826 ಗ್ರಾಮಗಳಿಗೆ 5640 ಗ್ರಾಮಪಂಚಾಯತಿಗಳು, 175 ತಾಲೂಕ್ ಪಂಚಾಯತ್‌ಗಳು ಮತ್ತು 27 ಜಿಲ್ಲಾ ಪಂಚಾಯತ್‌ಗಳು ಇವೆ. ಈ ಸಂಸ್ಥೆಗಳಿಗೆ 1993ರ ಕಾಯ್ದೆ ನಂತರ ಎರಡು ಸಲ ಯಶಸ್ವಿಯಾಗಿ ಚುನಾವಣೆಗಳು ನಡೆದಿವೆ. ಈ ವ್ಯವಸ್ಥೆಗೆ ಸಂಬಂಧಿಸಿದಂತೆ ಅತ್ಯಂತ ಹೆಚ್ಚಿನ ಉತ್ಸಾಹ ಉಂಟಾಗಿದ್ದು ಕಳೆದ 2000ನೇ ವರ್ಷದ ಅವಧಿಯಲ್ಲಿ ನಡೆದ ಚುನಾವಣೆಯಲ್ಲಿ ಶೇ. 70ರಷ್ಟು ಮತದಾನದ ಮೂಲಕ ಸಾಬೀತಾಗಿದೆ. ಪ್ರಸ್ತುತ ಗ್ರಾಮಪಂಚಾಯತಿಗಳು ಸಂವಿಧಾನದ 73ನೇ ತಿದ್ದುಪಡಿಯ ಅನುಗುಣವಾಗಿ ರಚಿತಗೊಂಡಿವೆ. ಈ ಪಂಚಾಯತಿಗಳು ಸ್ಥಳೀಯ ಜನಸಮುದಾಯಗಳ ಪ್ರತಿನಿಧಿ ಸಂಸ್ಥೆಗಳಂತಿವೆ. ಸ್ಥಳೀಯ ಜನತೆಗೆ ತಳಮಟ್ಟದಲ್ಲಿ ಪ್ರಜಾಪ್ರಭುತ್ವ ಪ್ರಕ್ರಿಯೆಯ ವಿಸ್ತರಣೆ ಯನ್ನು ಒದಗಿಸುತ್ತವೆ. ಇಂದು ಗ್ರಾಮಪಂಚಾಯತಿಗಳು ಸ್ಥಳೀಯ ಮಟ್ಟದ ಕಾರ್ಯಾಂಗದಂತೆ ಕಾರ್ಯನಿರ್ವಹಿಸುವುದರಿಂದ ಸ್ಥಳೀಯ ಜನತೆಯ ಹಿತಾಸಕ್ತಿ, ಅನುಕೂಲ ಮತ್ತು ಆದ್ಯತೆಗಳನ್ನು ಪೂರೈಸಬೇಕೆಂಬ ಧ್ಯೇಯೋದ್ದೇಶಗಳನ್ನು ಇಟ್ಟುಕೊಂಡು ರಚನೆಗೊಂಡಿವೆ. ಆಧುನಿಕ ಪಂಚಾಯತಿಗಳು ಕೆಳವರ್ಗಗಳ ಉದ್ಧಾರಕ್ಕಾಗಿಯೆ ರಚನೆಗೊಂಡಿವೆ ಎಂಬ ಸೈದ್ಧಾಂತಿಕ ಗ್ರಹಿಕೆ ಇಲ್ಲಿದೆ. ಪ್ರಸ್ತುತ ಅಧ್ಯಯನದಲ್ಲಿ ಈ ಧ್ಯೇಯೋದ್ದೇಶಗಳು ತಳಮಟ್ಟದಲ್ಲಿ ಎಷ್ಟರ ಮಟ್ಟಿಗೆ ಕಾರ್ಯರೂಪಕ್ಕೆ ಬಂದಿವೆ? ಕೆಳವರ್ಗಗಳ ಆಸಕ್ತಿ ಪಂಚಾಯತಿಯಿಂದ ರಕ್ಷಿತವಾಗಿದೆಯೇ? ಕೆಳವರ್ಗಗಳ ಸಬಲೀರಣ ಆಗಿದೆಯೇ? ಒಂದು ವೇಳೆ ಉದ್ದೇಶಿತ ರೂಪದಲ್ಲಿ ಪಂಚಾಯತಿಗಳಿಗೆ ಕಾರ್ಯನಿರ್ವಹಿಸಲು ಸಾಧ್ಯವಾಗದಿದ್ದರೆ ಯಾಕೆ ಸಾಧ್ಯವಾಗಿಲ್ಲ? ಇತ್ಯಾದಿ ಪ್ರಶ್ನೆಗಳಿಗೆ ಉತ್ತರಿಸಲು ಈ ಅಧ್ಯಯನ ಪ್ರಯತ್ನಿಸುತ್ತದೆ. ಇದು ಒಂದು ರೀತಿಯಲ್ಲಿ ಗ್ರಾಮಪಂಚಾಯತಿಗಳ ಕಾರ್ಯಕ್ಷಮತೆಯನ್ನು ಮಾಪನ ಮಾಡುವ ಕೆಲಸವೂ ಆಗಿದೆ. ಬಳ್ಳಾರಿ ಜಿಲ್ಲೆಯ ಎರಡು ತಾಲ್ಲೂಕುಗಳ - ಹೊಸಪೇಟೆ ಮತ್ತು ಕೂಡ್ಲಿಗಿಯ - ನಾಲ್ಕು ಗ್ರಾಮಪಂಚಾಯತಿಗಳನ್ನು ಅಧ್ಯಯನ ಮಾಡುವ ಮೂಲಕ ಮೇಲಿನ ಪ್ರಶ್ನೆಗಳಿಗೆ ಉತ್ತರಿಸಲು ಪ್ರಯತ್ನಿಸಲಾಗಿದೆ. ಅಧ್ಯಯನದ ಕ್ಷೇತ್ರ ಪರಿಚಯ ಪ್ರಬಂಧದ ಮುಂದಿನ ಅಧ್ಯಾಯದಲ್ಲಿದೆ.

**ಅಡಿ ಟಿಪ್ಪಣಿಗಳು**

1. ಭುವನಹಳ್ಳಿ ನಾಗರಾಜ್, ''ವಿಕೇಂದ್ರೀಕರಣ: ಪಂಚಾಯತ್‌ರಾಜ್ ಸಂಸ್ಥೆಗಳು ನಡೆದು ಬಂದ ದಾರಿ : ಒಂದು ಅವಲೋಕನ'', *ಕರ್ನಾಟಕ ವಿಕಾಸ*, ಸಂಪುಟ 40, ಸಂಖ್ಯೆ 2, ಜನವರಿ 2000, ಪುಟ 9
2. ನರಸಿಂಹರಾವ್ ಪಿ. ಮತ್ತು ವೆಂಕಟರಾವ್, ''ರೂರಲ್ ಡೆವೆಲಪ್‌ಮೆಂಟ್ ಇನ್ ಇಂಡಿಯಾ'', *ಕುರುಕ್ಷೇತ್ರ*, ಸಂಚಿಕೆ 48, ಸಂಖ್ಯೆ 5, ಆಗಸ್ಟ್ 2000, ಪುಟ 2

3. ಮಹಿಪಾಲ್, ''ಇನ್ಮ್ಯಲೋಷನ್ ಆಫ್ ಡಿಸೆಂಟ್ರಲೇಜಷನ್ ಪ್ಲಾ ನಿಂಗ್ ಇನ್ ಇಂಡಿಯಾ:'', ಕುರುಕ್ಷೇತ್ರ, ಸಂಚಿಕೆ 45, ಸಂಖ್ಯೆ 9, ಜೂನ್ 1997, ಪುಟ 15.

4. ಅದೇ ಪುಟ. 16

5. ಜಾರ್ಜ್ ಮಾಥ್ಯೂ "ಪೀಠಿಕೆ" ಕೆ.ಶುಭ(ಸಂ), *ಕರ್ನಾಟಕದ ಪಂಚಾಯತ್ ಚುನಾವಣೆಗಳು- 1995*, ಬೆಂಗಳೂರು: ಇನ್ಸ್ಟಿಟ್ಯೂಟ್ ಆಫ್ ಸೋಷಿಯಲ್ ಸೈನ್ಸ್, 1996 ಪುಟ 3

6. ಥಾಮಸ್ ಐಸಕ್ ಟಿ. ಎಮ್. *ಲೋಕಲ್ ಡೆಮಾಕ್ರಸಿ ಅಂಡ್ ಡೆವೆಲಪ್‌ಮೆಂಟ್: ಪೀಪಲ್ ಕಾಂಪೈನ್ ಫಾರ್ ಡೆಸೆಂಟ್ರಲೈಜಡ್ ಪ್ಲಾನಿಂಗ್ ಇನ್ ಕೇರಳ*, ನ್ಯೂಡೆಲ್ಲಿ: ಲೆಫ್ಟ್ ವರ್ಡ್, 2000, ಪುಟ 17

7. ರಾಜಶೇಖರ ಎಚ್. ಎಂ., *ಭಾರತ ಸರ್ಕಾರದ ಮತ್ತು ರಾಜಕೀಯ*, ಬೆಂಗಳೂರು: ಪ್ರಮೋದ, 1994, ಪುಟ. 265

8. ಬಲವಂತರಾಯ್ ಮೆಹತಾ, *ರಿಪೋರ್ಟ್ ಆಫ್ ದಿ ಟೀಮ್ ಫಾರ್ ದಿ ಸ್ಟಡಿ ಆಫ್ ಕಮಿಟಿ, ಪ್ರೋಜೆಕ್ಟ ಆಂಡ್ ನೇಶನಲ್ ಎಕ್ಸಟೆನ್ಷನ್ ಸರ್ವಿಸಸ್, ವಾಲ್ಯುಮ್ ಒನ್*, ನ್ಯೂಡೆಲ್ಲಿ: ಪ್ಲಾನಿಂಗ್ ಕಮಿಷನ್ 1959.

9. ಮನ್ನಿಕಟ್ಟೆ ಎಲ್.ಬಿ., ''ಗ್ರಾಮಾಭಿವೃದ್ಧಿ: ಪಂಚಾಯತ್‌ರಾಜ್ ಸಂಸ್ಥೆಗಳ ಸಹಬಾಗಿತ್ವ'', *ಕರ್ನಾಟಕ ವಿಕಾಸ*, ಸಂಪುಟ 40, ಸಂಚಿಕೆ 8, ಜುಲೈ 2000, ಪುಟ. 21

10. ಬಲವಂತರಾಯ್ ಮೆಹತಾ, *ಪೂರ್ವೋಕ್ತ*

11. ಬಲವಂತರಾಯ್ ಮೆಹತಾ, *ಪೂರ್ವೋಕ್ತ*

12. ಮಹಿಪಾಲ್, *ಪೂರ್ವೋಕ್ತ*, ಪುಟ. *16*

13. ಅದೇ, ಪುಟ. 16

14. ಅಶೋಕ್ ಮೆಹ್ತಾ, *ರಿಪೋರ್ಟ ಆಫ್ ದಿ ಕಮಿಟಿ ಆನ್ ಪಂಚಾಯತ್ ರಾಜ್ ಇನ್‌ಸ್ಟಿಟ್ಯೂಶನ್ಸ್*, ನ್ಯೂಡೆಲ್ಲಿ: ಮಿನಿಸ್ಟ್ರಿ ಆಫ್ ಅಗ್ರಿಕಲ್ಚರ್ ಆ್ಯಂಡ್ ಇರಿಗೇಷನ್, 1978

15. ಅಶೋಕ್ ಮೆಹ್ತಾ, *ಪೂರ್ವೋಕ್ತ*

16. ಗವರ್ನ್‌ಮೆಂಟ್ ಆಫ್ ಇಂಡಿಯಾ, *ಪಂಚಾಯತ್‌ರಾಜ್ ಸ್ಟೇಟಸ್ ರಿಪೋರ್ಟ 1999*, ನ್ಯೂಡೆಲ್ಲಿ: ರಾಜೀವ್‌ಗಾಂಧಿ ಫೌಂಢೇಶನ್, 1999, ಪುಟ. 5-6

17. ಮಹಿಪಾಲ್, *ಪೂರ್ವೋಕ್ತ*, ಪುಟ.17

18. ಅದೇ, ಪುಟ 17

19. ಅದೇ, ಪುಟ. 18

20. ಬಡ್ಡಿ ಎಮ್. ಎಮ್., *ಕರ್ನಾಟಕ ಪಂಚಾಯತ್ ಕಾಯ್ದೆ 1993* , ಧಾರವಾಡ: ಆಕಳವಾಡಿ ಬುಕ್ ಡಿಪೋ, 1994

21. ಶೇಷಾದ್ರಿ, ಬಿ., ''ವಿಕೇಂದ್ರೀಕರಣ: ತತ್ವ ಮತ್ತು ಆಚರಣೆ'', ಟಿ. ಆರ್.ಚಂದ್ರಶೇಖರ್ (ಸಂ.) *ವಿಕೇಂದ್ರೀಕರಣ: ತತ್ವ-ಆಚರಣೆ*, ಹಂಪಿ: ಕನ್ನಡ ವಿಶ್ವವಿದ್ಯಾಲಯ, 2000, ಪುಟ. 25

22. ಮಹಿಪಾಲ್, ಪೂರ್ವೋಕ್ತ, ಪುಟ.17

23. ಅದೇ, ಪುಟ. 18

24. ಮೆಹಬೂಬ ಹುಲ್-ಹಕ್, *ರಿಫ್ಲೇಕ್ಷನ್ಸ್ ಆನ್ ಹ್ಯೂಮನ್ ಡೆವಲಪ್‌ಮೆಂಟ್*, ಆಕ್ಸ್‌ಫರ್ಡ್: ಯುನಿರ್ವಸಿಟಿ ಪ್ರೆಸ್, 1996, ಪುಟ. 20

25. ನಂಜುಂಡಪ್ಪ ಡಿ. ಎಂ., *ರಾಜ್ಯಮಟ್ಟದ ಮತ್ತು ರಾಜ್ಯ ಕೆಳ ಹಂತಗಳ ಯೋಜನೆ*, ಬೆಂಗಳೂರು: ರಾಜ್ಯ ಯೋಜನಾ ಮಂಡಳಿ, ಕರ್ನಾಟಕ ಸರ್ಕಾರ 1996, ಪುಟ.30

26. ಶ್ರೀಧರ ಎ., *ಕರ್ನಾಟಕದಲ್ಲಿ ಪಂಚಾಯತ್‌ರಾಜ್ ಕಾಯ್ದೆಗಳು*, ಹಂಪಿ: ಕನ್ನಡ ವಿಶ್ವವಿದ್ಯಾಲಯ, 2000, ಪುಟ. 3

27. ಕಾಮತ್ ಸೂರ್ಯನಾಥ್ , *ಕರ್ನಾಟಕ ರಾಜ್ಯ ಗ್ಯಾಜೆಟಿಯರ್, ಭಾಗ-2,* ಬೆಂಗಳೂರು: ಕರ್ನಾಟಕ ರಾಜ್ಯ ಸರ್ಕಾರ, ಲೋಟಸ್, ಪುಟ. 539

28. ಶ್ರೀಧರ ಎ., ಪೂರ್ವೋಕ್ತ, ಪುಟ 3

29. ಅದೇ, ಪುಟ 3

30. ಉಮಾಪತಿ ಎಮ್., *ಲೊಕಲ್ ಸೆಲ್ಫ್ ಗವರ್ನಮೆಂಟ್ ಇನ್ ಕರ್ನಾಟಕ*, ಮೈಸೂರು: ಮೈಸೂರು ವಿಶ್ವವಿದ್ಯಾಲಯ, 1938

31. ಭುವನಹಳ್ಳಿ ನಾಗರಾಜ್, ಪೂರ್ವೋಕ್ತ, *ಪು.10*

32. ಶ್ರೀಧರ ಎ., ಪೂರ್ವೋಕ್ತ, ಪುಟ. 8-9

33. ಅದೇ, ಪುಟ.14

34. ಗವರ್ನ್‌ಮೆಂಟ್ ಆಫ್ ಕರ್ನಾಟಕ, *ಕರ್ನಾಟಕ ಆಕ್ಟ್ ನಂ.20 ಆಫ್ 1985: ದಿ ಕರ್ನಾಟಕ್ ಜಿಲ್ಲಾ ಪರಿಷತ್, ತಾಲೂಕು ಪಂಚಾಯತ್ ಸಮಿತಿಸ್ ಮಂಡಲ್ ಪಂಚಾಯತ್ಸ್ ಆಕ್ಟ್, 1983*, ಬೆಂಗಳೂರು: ಗವರ್ನ್‌ಮೆಂಟ್ ಆಫ್ ಕರ್ನಾಟಕ, 1987

35. ಶ್ರೀಧರ ಎ., ಪೂರ್ವೋಕ್ತ, ಪುಟ. 14

36. ಜಾರ್ಜ್ ಮಾಥ್ಯೂ, ಪೂರ್ವೋಕ್ತ ಪುಟ. 5

37. ಮೀನಾಕ್ಷಿ ಸುಂದರಂ ಎಸ್. ಎಸ್., ''ಗ್ರಾಮಸಭಾ ಲೈಸೆನ್ಸ್ ಫ್ರಮ್ ಕರ್ನಾಟಕ'', ಕುರುಕ್ಷೇತ್ರ ಸಂಚಿಕೆ 68, ಸಂಖ್ಯೆ 1 , ಅಕ್ಟೋಬರ್ 1999 ಪುಟ. 55-60

38. ಶ್ರೀಧರ್ ಎ., ಪೂರ್ವೋಕ್ತ ಪುಟ.28

39. ಅದೇ, ಪುಟ. 30

40. ಮನ್ನಿಕಟ್ಟಿ, ಪೂರ್ವೋಕ್ತ, ಪುಟ. 26

41. ಹಿರೇಮಠ್ ಬಿ. ಎಸ್., ''ಪಂಚಾಯತ್‌ರಾಜ್ ಸಂಸ್ಥೆಗಳು ಯೋಜನೆಗಳು'', *ಕರ್ನಾಟಕ ವಿಕಾಸ*, ಸಂಪುಟ 40, ಸಂಚಿಕೆ 19, ನವೆಂಬರ್ 2000, ಪುಟ. 14

42. ಶ್ರೀಧರ ಎ., *ಪೂರ್ವೋಕ್ತ*, ಪುಟ. 30-31

43. ಶ್ರೀಧರ ಎ., *ಪೂರ್ವೋಕ್ತ*, ಪುಟ. 33

44. ನಾಯಕ್ ಪಿ.ಆರ್., *ಕರ್ನಾಟಕ ಪಂಚಾಯತ್‌ರಾಜ್ ಕಾಯ್ದೆ -1993, ತಜ್ಞರ ಸಮಿತಿ ವರದಿ*, ಬೆಂಗಳೂರು: ಕರ್ನಾಟಕ ಸರ್ಕಾರ, 1996

45. ಹಿರೇಮಠ್ ಬಿ.ಎಸ್., *ಪೂರ್ವೋಕ್ತ*, ಪುಟ. 27

46. ಬಡ್ಡಿ ಎಂ. ಎಂ., ಪೂರ್ವೋಕ್ತ, 1993

47. ಬಡ್ಡಿ ಎಂ. ಎಂ., ಪೂರ್ವೋಕ್ತ, 1993

48. ಕರ್ನಾಟಕ ಸರ್ಕಾರ, *ಗ್ರಾಮಪಂಚಾಯತಿ ಆಡಳಿತ ಕಿರು ಟಿಪ್ಪಣಿ*, ಮೈಸೂರು: ಅಬ್ದುಲ್ ನಜೀರ್‌ಸಾಬ್ ರಾಜ್ಯ ಗ್ರಾಮೀಣ ಅಭಿವೃದ್ಧಿ ಸಂಸ್ಥೆ, 1994

49. ಬಡ್ಡಿ ಎಂ. ಎಂ., ಪೂರ್ವೋಕ್ತ, 1993

50. ಬಡ್ಡಿ ಎಂ. ಎಂ., ಪೂರ್ವೋಕ್ತ, 1993

51. ಶ್ರೀಧರ್ ಎ., ''ಗ್ರಾಮಸಭೆ: ತತ್ವ ಮತ್ತು ಆಚರಣೆ'', ಚಂದ್ರಶೇಖರ ಟಿ. ಆರ್.(ಸಂ), *ವಿಕೇಂದ್ರೀಕರಣ: ತತ್ವ ಮತ್ತು ಆಚರಣೆ* ಹಂಪಿ: ಕನ್ನಡ ವಿಶ್ವವಿದ್ಯಾಲಯ, ಪುಟ. 35.

52. ಭುವನಹಳ್ಳಿ ನಾಗರಾಜ್, ''ಕರ್ನಾಟಕದಲ್ಲಿ ಗ್ರಾಮಸಭೆಗಳ ವಿಕಾಸ'', *ಕರ್ನಾಟಕ ವಿಕಾಸ*, ಸಂಚಿಕೆ 40, ಸಂಪುಟ.10, ಸೆಪ್ಟೆಂಬರ್ 2000, ಪುಟ.15

53. ಶ್ರೀಧರ ಎ., ಪೂರ್ವೋಕ್ತ, 2000, ಪುಟ. 40-41

54. ಶ್ರೀಧರ ಎ., ಪೂರ್ವೋಕ್ತ, *2000*, ಪುಟ. 42

55. ನಾಯಕ್ ಪಿ. ಆರ್., ಪೂರ್ವೋಕ್ತ, 1996

56. ಗ್ರಾಮಪಂಚಾಯತಿ ಕಿರುಟಿಪ್ಪಣಿ, ಪೂರ್ವೋಕ್ತ, 1994

ಪ್ರಬಂಧದ ಮೊದಲ ಅಧ್ಯಾಯದಲ್ಲಿ ಭಾರತದಲ್ಲಿ ಸ್ವಾತಂತ್ರ್ಯಾ ನಂತರ ಆದ ಅಭಿವೃದ್ಧಿ, ಈ ಅಭಿವೃದ್ಧಿ ವಿಫಲತೆಯನ್ನು ಸರಿದೂಗಿಸುವಲ್ಲಿ ವಿಕೇಂದ್ರೀಕರಣವನ್ನು ಬಲಯುತಗೊಳಿಸುವಲ್ಲಿ ಕೈಗೊಂಡ ಪ್ರಯತ್ನಗಳನ್ನು ವಿವರಿಸಲಾಗಿದೆ. ಕೇಂದ್ರದ ಕ್ರಮಗಳನ್ನು ರಾಜ್ಯವು ಅನುಸರಿಸಿ ಪಂಚಾಯತ್‌ರಾಜ್ ಸುಧಾರಣೆಗಳನ್ನು ಜಾರಿಗೆ ತಂದ ಬಗೆಯನ್ನು ನೋಡಿದ್ದೇವೆ. ಅಧ್ಯಯನ ಕ್ಷೇತ್ರ ಪರಿಚಯವನ್ನು ಮಾಡಿಸುವ ಉದ್ದೇಶವಿಟ್ಟುಕೊಂಡಿರುವ ಪ್ರಸ್ತುತ ಪರಿಚಯ ಅಧ್ಯಾಯದಲ್ಲಿ ಅಧ್ಯಯನ ಕ್ಷೇತ್ರದ ಜಿಲ್ಲೆ, ತಾಲೂಕುಗಳ ಮತ್ತು ಗ್ರಾಮಪಂಚಾಯತಿಗಳ ಸಾಮಾಜಿಕ, ಆರ್ಥಿಕ ಮತ್ತು ರಾಜಕೀಯ ವಿವರಗಳನ್ನು ಕೊಡಲಾಗಿದೆ. ತಾಲೂಕು ಮತ್ತು ಪಂಚಾಯತಿಗಳ ಆಯ್ಕೆಯ ನಮೂನೆಯನ್ನು ಅಂಕಿ-ಅಂಶಗಳ ಮೂಲಕ ವಿವರವಾಗಿ ವಿಶ್ಲೇಷಿಸಲಾಗಿದೆ. ಪ್ರಸ್ತುತ ಅಧ್ಯಾಯವು ಅಧ್ಯಯನ ಕ್ಷೇತ್ರದ ಒಟ್ಟು ಚಿತ್ರಣವನ್ನು ಕೊಡುತ್ತದೆ.

## 2.1 ಜಿಲ್ಲೆಯ ಭೌಗೋಳಿಕ ಮತ್ತು ಚಾರಿತ್ರಿಕ ಹಿನ್ನೆಲೆ

ಬಳ್ಳಾರಿ ಜಿಲ್ಲೆಯು ನೈರುತ್ಯ ಮತ್ತು ಈಶಾನ್ಯ ದಿಕ್ಕುಗಳ ನಡುವೆ ಚಾಚಿಕೊಂಡಂತಿದೆ. ಇದು ಸರಿಯಾಗಿ ಕರ್ನಾಟಕದ ಮಧ್ಯೆ ಭಾಗದಲ್ಲಿದೆ. ಪ್ರಸ್ತುತ ಬಳ್ಳಾರಿ ಜಿಲ್ಲೆಯ ವ್ಯಾಪ್ತಿಯನ್ನು ಗಮನಿಸಿದಾಗ ನೈರುತ್ಯ ದಿಕ್ಕಿನ ಹಗರಿಬೊಮ್ಮನಹಳ್ಳಿ ತಾಲೂಕು ಕಲ್ಲಹಳ್ಳಿ ಎಂಬ ಗ್ರಾಮದಿಂದ ಈಶಾನ್ಯ ದಿಕ್ಕಿನ ಶಿರಗುಪ್ಪ ತಾಲೂಕಿನ ಸಲ್ಲಕುದಲೂರು ಎಂಬ ಗ್ರಾಮದವರೆಗೆ 187 ಕಿ.ಮೀ ಉದ್ದವಾಗಿ, ಪೂರ್ವ ಪಶ್ಚಿಮವಾಗಿ ಬಳ್ಳಾರಿ ತಾಲೂಕಿನ ಕಾರೇಕಲ್ಲು ವೀರಾಪುರದಿಂದ ಹಡಗಲಿ ತಾಲೂಕಿನ ಹಿರೇಬನ್ನಿಹಟ್ಟಿಯವರೆಗೆ 161 ಕಿ.ಮೀ ಅಗಲವಾಗಿ ಹರಡಿಕೊಂಡಿದೆ. ಜಿಲ್ಲೆಯು ಬ್ರಿಟಿಷ್‌ರ ಆಳ್ವಿಕೆಯ ಕಾಲದಲ್ಲಿ ಮದ್ರಾಸ್ ಪ್ರಾಂತ್ಯದ ಬಹುದೊಡ್ಡ ಜಿಲ್ಲೆಯಾಗಿತ್ತು.[1] 1953 ಕ್ಕೆ ಮೊದಲು ಜಿಲ್ಲೆಯು 12 ತಾಲೂಕುಗಳನ್ನು ಹೊಂದಿದ್ದು, ಅವುಗಳಲ್ಲಿ ಬಳ್ಳಾರಿ, ಶಿರಗುಪ್ಪ, ಸಂಡೂರು, ಹೊಸಪೇಟೆ, ಹರಪನಹಳ್ಳಿ, ಹಡಗಲಿ, ಕೂಡ್ಲಿಗಿ, ಮಲ್ಲಾಪುರ ಮತ್ತು ಈಗಿನ ಆಂಧ್ರಪ್ರದೇಶದ ಆಲೂರು, ಆದೋನಿ, ರಾಯದುರ್ಗ ತಾಲೂಕುಗಳನ್ನು ಹೊಂದಿತ್ತು. 1953ರ ರಾಜ್ಯ ಪುನರ್‌ವಿಂಗಡಣೆ ಸಂದರ್ಭದಲ್ಲಿ ಪ್ರಾಂತ್ಯವಾಗಿ ಪ್ರತ್ಯೇಕಗೊಂಡಾಗ ಬಳ್ಳಾರಿ ಜಿಲ್ಲೆಗೆ ಸೇರಿದ್ದ ಆಲೂರು, ಆದೋನಿ ಮತ್ತು ರಾಯದುರ್ಗ ತಾಲೂಕುಗಳು ಆಂಧ್ರಪ್ರದೇಶ ರಾಜ್ಯಕ್ಕೆ ಸೇರಿಸಲಾಯಿತು. ಕರ್ನಾಟಕದಲ್ಲಿ 1997 ರಲ್ಲಿ ಹೊಸಜಿಲ್ಲೆಗಳ ರಚನೆಯ ಸಂದರ್ಭದಲ್ಲಿ ಜಿಲ್ಲೆಗೆ ಸೇರಿದ್ದ ಮತ್ತೊಂದು ತಾಲೂಕು ಹರಪನಹಳ್ಳಿಯನ್ನು ದಾವಣಗೆರೆ ಜಿಲ್ಲೆಗೆ ಸೇರಿಸಲಾಯಿತು. ಹಾಗಾಗಿ ಪ್ರಸ್ತುತ ಬಳ್ಳಾರಿ ಜಿಲ್ಲೆಯು 7 ತಾಲೂಕುಗಳನ್ನು ಹೊಂದಿದೆ. ಜಿಲ್ಲೆಯ ಭೌಗೋಳಿಕ ವಿಸ್ತೀರ್ಣ 8447.00 ಚ.ಕಿ.ಮೀ ಇದ್ದು ರಾಜ್ಯದ ವಿಸ್ತೀರ್ಣದಲ್ಲಿ ಶೇ. 4.40 ರಷ್ಟು ಪಾಲನ್ನು ಹೊಂದಿದೆ. ವಿಸ್ತೀರ್ಣದಲ್ಲಿ ರಾಜ್ಯದಲ್ಲಿ 8ನೇ ಸ್ಥಾನದಲ್ಲಿದೆ.[2] ಜಿಲ್ಲೆಯ ಉತ್ತರಕ್ಕೆ ಕೊಪ್ಪಳ, ದಕ್ಷಿಣಕ್ಕೆ ಚಿತ್ರದುರ್ಗ, ಪಶ್ಚಿಮಕ್ಕೆ ಧಾರವಾಡ ಜಿಲ್ಲೆ ಮತ್ತು ಪೂರ್ವಕ್ಕೆ ಆಂಧ್ರಪ್ರದೇಶ ರಾಜ್ಯವಿದೆ. ಜಿಲ್ಲೆಯ ಪೂರ್ವಭಾಗವು ಸಮತಟ್ಟಾದ ಭೂಮಿಯನ್ನು ಹೊಂದಿದ್ದು, ಕೃಷಿಗೆ

ಅನುಕೂಲಕರ ವಾಗಿದೆ. ಜಿಲ್ಲೆಯ ಹವಮಾನ ದೃಷ್ಟಿಯಿಂದ ಅತಿ ಉಷ್ಣವಲಯ ವಾಗಿದೆ. ಮಳೆಯ ಪ್ರಮಾಣವು ತೀರಾ ಕಡಿಮೆ, ಶುಷ್ಕ ವಾತಾವರಣದಿಂದ ಕೂಡಿದ ಪೂರ್ವಭಾಗದಲ್ಲಿ ಹೆಚ್ಚು ಅರಣ್ಯಪ್ರದೇಶವಿದೆ. ಈ ಭಾಗದಲ್ಲಿ ತುಂಗಾಭದ್ರ ನದಿ ಇರುವುದರಿಂದ ಪೂರ್ವ ತಾಲೂಕುಗಳಿಗೆ ಪ್ರಮುಖ ನೀರಾವರಿಯ ಮೂಲವಾಗಿದೆ. ಈ ನದಿಯು ಜಿಲ್ಲೆಯಲ್ಲಿ 320 ಕಿ.ಮೀ ನಷ್ಟು ದೂರ ಹರಿಯುತ್ತದೆ.[3] ನೀರಾವರಿ ಕೃಷಿ ಅಭಿವೃದ್ಧಿಗೆ ಈ ನದಿಯು ಬೆನ್ನಲುಬು ಆಗಿದೆ. ಈ ನದಿಯನ್ನು ಬಿಟ್ಟರೆ ಜಿಲ್ಲೆಯ ಪಶ್ಚಿಮ ಭಾಗದಲ್ಲಿ ಕೆಲವು ಸಣ್ಣ ಪುಟ್ಟ ಜಲಾಶಯ, ಕೆರೆ ಮತ್ತು ಕಟ್ಟೆಗಳಿವೆ.

2001ರ ಜನಗಣತಿಯ ಪ್ರಕಾರ ಜಿಲ್ಲೆಯ ಒಟ್ಟು ಜನಸಂಖ್ಯೆ 2025242 ಇದ್ದು ರಾಜ್ಯದ ಜನಸಂಖ್ಯೆಯಲ್ಲಿ ಶೇ. 3.84ರಷ್ಟು ಪ್ರಮಾಣವನ್ನು ಹೊಂದಿದೆ. ಜನಸಂಖ್ಯೆಯಲ್ಲಿ ರಾಜ್ಯದ 7ನೇ ಸ್ಥಾನದಲ್ಲಿದೆ. ಜಿಲ್ಲೆಯ ಒಟ್ಟು ಜನಸಂಖ್ಯೆಯಲ್ಲಿ ಗ್ರಾಮೀಣ ಜನಸಂಖ್ಯೆಯು 13,19,239(65.13) ರಷ್ಟು, 706003(34.87)ರಷ್ಟು ನಗರ ಜನಸಂಖ್ಯೆ ಹೊಂದಿದೆ (ಕೋಷ್ಟಕ-1).[4] 1991ರ ಜನಗಣತಿಯ ಪ್ರಕಾರ ಶೇ. 27.72 ರಷ್ಟು ರಾಜ್ಯದ ಒಟ್ಟು ಪರಿಶಿಷ್ಟರಲ್ಲಿ ಜಿಲ್ಲೆಯ ಪಾಲು 4.94ರಷ್ಟಿದೆ. ಈ ಪ್ರಮಾಣವನ್ನು ರಾಜ್ಯಕ್ಕೆ ಹೋಲಿಸಿದರೆ ಪರಿಶಿಷ್ಟರ ಜನಸಂಖ್ಯೆಯಲ್ಲಿ ಶೇ 8.3ರಷ್ಟು ಪರಿಶಿಷ್ಟರನ್ನು ಹೊಂದಿದೆ.[5]

## 2.2 ಜಿಲ್ಲೆಯ ಸಾಮಾಜಿಕ, ಆರ್ಥಿಕ ಮತ್ತು ರಾಜಕೀಯ ವಿವರಗಳು

ಸಾಮಾಜಿಕವಾಗಿ ಜಿಲ್ಲೆಯನ್ನು ನೋಡುವುದಾದರೆ, ಜಿಲ್ಲೆಯು ವಿವಿಧ ಜಾತಿ ವರ್ಗಗಳನ್ನು ಹೊಂದಿದೆ. ಇವುಗಳಲ್ಲಿ ಮುಖ್ಯವಾಗಿ ಲಿಂಗಾಯತ, ಕುರುಬ, ಮುಸ್ಲಿಂ, ವಾಲ್ಮೀಕಿ ಮತ್ತು ಮಾದಿಗ ಜನಾಂಗಗಳನ್ನು ಹೊಂದಿದೆ. 1991ರ ಜನಗಣತಿಯ ಪ್ರಕಾರ ಜಿಲ್ಲೆಯಲ್ಲಿ 2,88,292 ಕುಟುಂಬಗಳಿದ್ದಾವೆ. ರಾಜ್ಯದ ಒಟ್ಟು ಕುಟುಂಬಗಳಲ್ಲಿ ಜಿಲ್ಲೆಯ ಪಾಲು ಶೇ 3.62 ರಷ್ಟಿದೆ. 2001 ರ ಜನಗಣತಿ ಅನ್ವಯ ಜಿಲ್ಲೆಯ ಸಾಕ್ಷರರ ಸಂಖ್ಯೆ 1000602 (58.04) ರಷ್ಟಿದೆ. ಇದನ್ನು ರಾಜ್ಯದ ಸಾಕ್ಷರತೆಗೆ ಹೋಲಿಸಿದರೆ ಶೇ 9 ರಷ್ಟು ಕಡಿಮೆ ಇದೆ (ಕೋಷ್ಟಕ-1).[6] ಹೀಗಾಗಿ ಸಾಕ್ಷರತೆಯಲ್ಲಿ ಹಿಂದುಳಿದಿರುವ ಜಿಲ್ಲೆಗಳಲ್ಲಿ ಬಳ್ಳಾರಿಯು ಒಂದಾಗಿದೆ. ಸಾಕ್ಷರತೆಯನ್ನು ಹೆಚ್ಚಿಸುವ ಸಲುವಾಗಿ ಜಿಲ್ಲೆಯಲ್ಲಿ ಜಿಲ್ಲಾ ಪ್ರಾಥಮಿಕ ಶಿಕ್ಷಣ ಯೋಜನೆ ಮತ್ತು ನಿರಂತರ ಶಿಕ್ಷಣ ಕೇಂದ್ರಗಳನ್ನು ಸ್ಥಾಪಿಸಿ ಸಾಕ್ಷರತೆಗಾಗಿ ವಿವಿಧ ಕಾರ್ಯಕ್ರಮಗಳನ್ನು ರೂಪಿಸಿದೆ.

ಯಾವುದೇ ಒಂದು ಪ್ರದೇಶದ ಅಭಿವೃದ್ಧಿಯಲ್ಲಿ ಆರ್ಥಿಕ ಚಟುವಟಿಕೆಗಳು ಬಹಳ ಮುಖ್ಯ ಪಾತ್ರವಹಿಸುತ್ತದೆ. ಬಳ್ಳಾರಿ ಜಿಲ್ಲೆಯಲ್ಲಿನ ಖನಿಜ ಸಂಪತ್ತು ಔದ್ಯೋಗಿಕ ಪ್ರಗತಿಗೆ ಬೆನ್ನಲುಬಾಗಿದೆ. ಜಿಲ್ಲೆಯು ಉತ್ಕೃಷ್ಟ ಕಬ್ಬಿಣ ಮತ್ತು ಮ್ಯಾಂಗನೀಸ್ ಖನಿಜಗಳಿಗೆ ವಿಶ್ವವಿಖ್ಯಾತಿ ಗಳಿಸಿದೆ. ಕಬ್ಬಿಣ ನಿಕ್ಷೇಪದ ಪ್ರಮಾಣ 1032.40 ದಶಲಕ್ಷ ಟನ್ ಲಭ್ಯವಿದ್ದು ಮತ್ತು ಮ್ಯಾಂಗನೀಸ್ ಅದಿರಿನ ನಿಕ್ಷೇಪದ ಪ್ರಮಾಣ 18.81 ದಶಲಕ್ಷ ಟನ್ ಎಂದು ಅಂದಾಜು ಮಾಡಲಾಗಿದೆ. 1991ರ ಮಧ್ಯಭಾಗದಲ್ಲಿ ಜಾರಿಗೆ ಬಂದ ಹೊಸ ಆರ್ಥಿಕ ನೀತಿಯ ಖಾಸಗೀಕರಣ ಪ್ರಕ್ರಿಯೆಯ ಪರಿಣಾಮವಾಗಿ ಜಿಲ್ಲೆಯಲ್ಲಿ ಬೃಹತ್ ಕಂಪನಿಗಳು ಕಬ್ಬಿಣ ಮತ್ತು ಉಕ್ಕು ಉದ್ದಿಮೆ ಮೇಲೆ ಬಂಡವಾಳ ತೊಡಗಿಸಿವೆ. ಜಿಲ್ಲೆಯಲ್ಲಿ ಪ್ರಸ್ತುತ ನಾಲ್ಕು ಕಬ್ಬಿಣ ಮತ್ತು ಉಕ್ಕು ಉದ್ದಿಮೆಗಳು

ಉತ್ಪಾದನೆಯಲ್ಲಿ ತೊಡಗಿವೆ.[7] ಹೀಗಾಗಿ ರಾಷ್ಟ್ರದ ಉಕ್ಕು ಉತ್ಪಾದನೆ ಯಲ್ಲಿ ಬಳ್ಳಾರಿ ಜಿಲ್ಲೆಯು ವಿಶಿಷ್ಟ ಸ್ಥಾನವನ್ನು ಪಡೆದುಕೊಂಡಿದೆ. ಜಿಲ್ಲೆಯಲ್ಲಿ ಜರುಗುತ್ತಿರುವ ಈ ಔದ್ಯೋಗಿಕರಣ ಪ್ರಕ್ರಿಯೆಯು ಜಿಲ್ಲೆಯ ಕೆಲವೇ ಭಾಗಗಳಲ್ಲಿ ನೆಲೆಗೊಂಡಿದೆ. ಈಗಾಗಲೇ ಪ್ರಾದೇಶಿಕವಾಗಿ ಜಿಲ್ಲೆಯನ್ನು ಪೂರ್ವ ಮತ್ತು ಪಶ್ಚಿಮ ತಾಲೂಕುಗಳೆಂದು ವಿಂಗಡಿಸಲಾಗಿದೆ. ಪೂರ್ವ ಭಾಗದ ತಾಲೂಕುಗಳಾದ ಬಳ್ಳಾರಿ, ಹೊಸಪೇಟೆ, ಶಿರಗುಪ್ಪ ಮತ್ತು ಸಂಡೂರು ತಾಲೂಕುಗಳಾಗಿವೆ. ಔದ್ಯೋಗಿಕ ಪ್ರಕ್ರಿಯೆಯಿಂದ ಪೂರ್ವ ತಾಲೂಕುಗಳು ಸಮೃದ್ಧಿಯಾಗಿವೆ. ಪಶ್ಚಿಮ ಭಾಗದ ತಾಲೂಕುಗಳು ಔದ್ಯೋಗಿಕ ಪ್ರಕ್ರಿಯೆಯಿಂದ ಹೊರಗೆ ಉಳಿದಿವೆ. ಅಭಿವೃದ್ಧಿಯ ಔದ್ಯೋಗಿಕ ಸವಲತ್ತುಗಳನ್ನು ಪೂರ್ತಿಯಾಗಿ ಪೂರ್ವಭಾಗದ ತಾಲೂಕುಗಳಲ್ಲಿ ನೆಲೆಗೊಂಡಿವೆ. ಹೀಗಾಗಿ ಈ ಎರಡು ಭಾಗಗಳ ನಡುವೆ ಆರ್ಥಿಕ ಅಸಮಾನತೆ ಹೆಚ್ಚು ಕಂಡುಬಂದಿದೆ. ಇದರಿಂದ ಪೂರ್ವ ಭಾಗದ ತಾಲೂಕುಗಳನ್ನು ಅಭಿವೃದ್ಧಿ ಪ್ರದೇಶಗಳೆಂದು ಪಶ್ಚಿಮ ಭಾಗದ ತಾಲೂಕುಗಳನ್ನು ಹಿಂದುಳಿದ ಪ್ರದೇಶಗಳೆಂದು ಗುರುತಿಸಲಾಗಿದೆ.

ಜಿಲ್ಲೆಯಲ್ಲಿ ದುಡಿಮೆ ವರ್ಗವನ್ನು ನೋಡಿದಾಗ ಹೆಚ್ಚು ಕೃಷಿಯನ್ನು ಅವಲಂಬಿಸಿದ್ದಾರೆ. ಒಟ್ಟು ಜನಸಂಖ್ಯೆಯಲ್ಲಿ ಶೇ.73 ರಷ್ಟು ಕೃಷಿಯನ್ನು ಅವಲಂಬಿಸಿದ್ದಾರೆ. ಈ ಪ್ರಮಾಣವನ್ನು ರಾಜ್ಯಕ್ಕೆ ಹೋಲಿಸಿದರೆ ಶೇ. 10 ರಷ್ಟು ಕೃಷಿ ಅವಲಂಬಿತ ಸಂಖ್ಯೆ ಹೆಚ್ಚಿದೆ. ವಲಯವಾರು ದುಡಿಮೆವರ್ಗವನ್ನು ನೋಡಿದಾಗ ಪ್ರಾಥಮಿಕ ವಲಯ ಶೇ 76.18ರಷ್ಟು, ದ್ವಿತೀಯ ವಲಯ ಶೇ 7.43 ರಷ್ಟು ಮತ್ತು ತೃತೀಯ ವಲಯ ಶೇ 16.09 ರಷ್ಟಿದೆ. ಈ ಪ್ರಮಾಣವು ರಾಜ್ಯಕ್ಕೆ ಹೋಲಿಸಿದರೆ ಕ್ರಮವಾಗಿ 13,16 ಮತ್ತು 12ನೇ ಸ್ಥಾನವನ್ನು ಪಡೆದಿವೆ. ರಾಜ್ಯದ ದುಡಿಮೆಗಾರ ವರ್ಗಕ್ಕೆ ಹೋಲಿಸಿದರೆ ಪ್ರಾಥಮಿಕ ವಲಯದಲ್ಲಿ ಶೇ 9ರಷ್ಟು ಹೆಚ್ಚು, ದ್ವಿತೀಯ ವಲಯದಲ್ಲಿ ಶೇ 5.7 ರಷ್ಟು ಮತ್ತು ತೃತೀಯ ವಲಯದಲ್ಲಿ ಶೇ 2.5 ರಷ್ಟು ಕಡಿಮೆ ಇರುವುದನ್ನು ಗಮನಿಸಬಹುದು (ಕೋಷ್ಟಕ-2).[8] ಜಿಲ್ಲೆಯ ಒಟ್ಟು ಶ್ರಮಶಕ್ತಿಯ ವಲಯವಾರು ವಿತರಣೆ ಮತ್ತು ಆ ವಿತರಣೆಯಲ್ಲಿ 1981 ರಿಂದ 1991 ರಲ್ಲಿ ಉಂಟಾದ ಬದಲಾವಣೆ ಅಭಿವೃದ್ಧಿ ದೃಷ್ಟಿಯಿಂದ ಅನುಕೂಲಕರವಾಗಿಲ್ಲ. ಪ್ರಾಥಮಿಕ ವಲಯ ಅಂದರೆ ಕೃಷಿ, ಗಣಿಗಾರಿಕೆ ಮತ್ತು ಮೀನುಗಾರಿಕೆ ಮುಂತಾದ ಕಸಬುಗಳನ್ನು ಅವಲಂಬಿಸಿಕೊಂಡಿರುವ ಜನರ ಪ್ರಮಾಣ ಶೇ 87.01 ರಿಂದ ಶೇ 87.87 ಕ್ಕೆ ಏರಿದೆ. ಇದನ್ನು ಅಭಿವೃದ್ಧಿಯ ವಿಮುಖಚಲನೆ ಎಂದು ಹೇಳಲಾಗಿದೆ. ಇದೇ ಸಮಯದಲ್ಲಿ ಅಂದರೆ ಕೈಗಾರಿಕೆ, ಯಂತ್ರೋದ್ಯಮ ಇತ್ಯಾದಿಯನ್ನು ಅವಲಂಬಿಸಿಕೊಂಡಿರು ವವರ ಪ್ರಮಾಣವು ಶೇ 7.11 ರಿಂದ ಶೇ 4.86 ಕ್ಕೆ ಇಳಿದಿದೆ. ಅತ್ಯಂತ ಆತಂಕಕಾರಿ ಸಂಗತಿಯೆಂದರೆ ಗಣಿಗಾರಿಕೆ ಬಳ್ಳಾರಿ ಜಿಲ್ಲೆಯ ಮುಖ್ಯ ಕಸಬು. ಆದರೆ ಈ ವೃತ್ತಿಯನ್ನು ಅವಲಂಬಿಸಿ ಕೊಂಡಿರುವ ಶ್ರಮಶಕ್ತಿಯ ಪ್ರಮಾಣ ಇದೇ ಅವಧಿಯಲ್ಲಿ ಶೇ 2.44 ರಿಂದ ಶೇ 1.68 ಕ್ಕೆ ಇಳಿದಿದೆ. 1981-1991ರ ಅವಧಿಯಲ್ಲಿ ಬಳ್ಳಾರಿ ಜಿಲ್ಲೆಯಲ್ಲಿ ದ್ವಿತೀಯ ವಲಯ ಬೆಳೆದಿದೆ. ಆದರೆ ಹೆಚ್ಚಿನ ಸಂಖ್ಯೆಯಲ್ಲಿ ಶ್ರಮಶಕ್ತಿಯನ್ನು ತೊಡಗಿಸಿಕೊಂಡಿಲ್ಲ.[9] ಈ ಎಲ್ಲಾ ಅಂಕಿ-ಅಂಶಗಳು ಜಿಲ್ಲೆಯು ಹಿಂದುಳಿದಿರುವುದನ್ನು ಸೂಚಿಸುತ್ತದೆ. ಯಾವ ಪ್ರದೇಶ ಪ್ರಾಥಮಿಕ ವಲಯವನ್ನು ಹೆಚ್ಚು ಅವಲಂಬಿಸಿರುತ್ತದೆಯೋ ಆ ಪ್ರದೇಶವನ್ನು ಹಿಂದುಳಿದಿರುವ ಪ್ರದೇಶ ಎಂದು ಗ್ರಹಿಸಲಾಗಿದೆ. ಅಭಿವೃದ್ಧಿ ದೃಷ್ಟಿಯಿಂದ ದ್ವಿತೀಯ ಮತ್ತು ತೃತೀಯ ವಲಯದಲ್ಲಿ ಹೆಚ್ಚು

ಅವಲಂಬಿತವಾಗಿದ್ದರೆ ಉತ್ತಮ ಬೆಳವಣಿಗೆ ಎಂದು ಹೇಳಬಹುದು. ಹೀಗೆ ಬಳ್ಳಾರಿ ಜಿಲ್ಲೆಯು ರಾಜ್ಯದ ಹಿಂದುಳಿದಿರುವ ಜಿಲ್ಲೆಗಳಲ್ಲಿ ಒಂದಾಗಿದೆ.

ಜಿಲ್ಲೆಯ ಕೃಷಿಗೆ ತುಂಗಭದ್ರಾ ನದಿಯು ಪ್ರಮುಖವಾದ ನೀರಾವರಿಯ ಮೂಲವಾಗಿದೆ. ಈ ನದಿಯು ಜಿಲ್ಲೆಯ ಪಶ್ಚಿಮ ಮತ್ತು ಉತ್ತರ ದಿಕ್ಕುಗಳ ಮೇರೆಯಾಗಿದೆ. ಈ ನದಿಯಿಂದ ಇಡಿ ಜಿಲ್ಲೆಯು ನೀರಾವರಿ ಸಮಸ್ಯೆಗೆ ಪರಿಹಾರವಾಗಿಲ್ಲ. ಜಿಲ್ಲೆಯ ಕೆಲವೆ ತಾಲೂಕುಗಳಿಗೆ ನೀರಾವರಿ ದೊರಕಿದೆ. ಇದು ಜಿಲ್ಲೆಯ ಪೂರ್ವ ತಾಲೂಕುಗಳಿಗೆ ಮಾತ್ರ ಸೀಮಿತವಾಗಿದೆ. ಈ ತಾಲೂಕುಗಳು ಕೃಷಿಯಿಂಗ ಅಭಿವೃದ್ಧಿಯ ಪಥದಲ್ಲಿವೆ. ಪಶ್ಚಿಮ ಭಾಗದ ತಾಲೂಕುಗಳು ಪೂರ್ತಿ ಒಣಭೂಮಿ ಕೃಷಿಯನ್ನು ಅವಲಂಬಿಸಿವೆ. ಆರ್ಥಿಕವಾಗಿ ಜಿಲ್ಲೆಯ ವರಮಾನವು 1995-96ರ ಅವಧಿಯಲ್ಲಿ ಶೇ 8,544 ರೂಗಳಿದ್ದು ರಾಜ್ಯದ ಸರಾಸರಿಗಿಂತ ರೂ. 840 ಕಡಿಮೆ ಇದೆ. ವರಮಾನದಲ್ಲಿ ಜಿಲ್ಲೆಯು ರಾಜ್ಯದಲ್ಲಿ 8ನೇ ಸ್ಥಾನವನ್ನು ಹೊಂದಿದೆ.[10]

ರಾಜ್ಯ ರಾಜಕೀಯದಲ್ಲಿ ಬಳ್ಳಾರಿ ಜಿಲ್ಲೆಗೆ ವಿಶಿಷ್ಟ ಸ್ಥಾನಮಾನವಿದೆ. ಸ್ವಾತಂತ್ರ್ಯಾನಂತರ ನಡೆದ ಎಲ್ಲಾ ಲೋಕಸಭೆ ಚುನಾವಣೆ ಗಳಲ್ಲಿ ಕಾಂಗ್ರೇಸ್ ಪಕ್ಷ ಗೆಲ್ಲುತ್ತಾ ಬಂದಿದೆ. ಇದೊಂದು ಐತಿಹಾಸಿಕ ದಾಖಲೆ ಯಾಗಿದೆ. ಜಿಲ್ಲೆಯ ಮೂವರು ಶಾಸಕರು ಪ್ರಸಕ್ತ ರಾಜ್ಯ ಸರ್ಕಾರದಲ್ಲಿ ಪ್ರಮುಖ ಖಾತೆಗಳನ್ನು ಹೊಂದಿದ್ದಾರೆ. ಈ ಜಿಲ್ಲೆಯು ಒಟ್ಟು 8 ವಿಧಾನಸಭಾ ಕ್ಷೇತ್ರಗಳನ್ನು, ಒಂದು ಲೋಕಸಭಾ ಕ್ಷೇತ್ರವನ್ನು ಹೊಂದಿದೆ. ಜಿಲ್ಲೆಯ ಹೊಸಪೇಟೆ ತಾಲೂಕು ಕೊಪ್ಪಳ ಲೋಕಸಭಾ ಕ್ಷೇತ್ರಕ್ಕೆ ಸೇರಿದೆ. ಜಿಲ್ಲೆಯನ್ನು ಆಡಳಿತಾತ್ಮಕವಾಗಿ 2 ಉಪವಿಭಾಗಗಳಾಗಿ ವಿಂಗಡಿಸಲಾಗಿದೆ. ಒಂದು ಬಳ್ಳಾರಿ, ಇನ್ನೊಂದು ಹೊಸಪೇಟೆಯಾಗಿದೆ. ಬಳ್ಳಾರಿ ವಿಭಾಗವು ಮೂರು ತಾಲೂಕುಗಳನ್ನು ಹೊಸಪೇಟೆ ವಿಭಾಗವು 4 ತಾಲೂಕುಗಳನ್ನು ಹೊಂದಿದೆ.

## ಜಿಲ್ಲೆಯಲ್ಲಿ ಪಂಚಾಯತ್‌ರಾಜ್ ವ್ಯವಸ್ಥೆ

1993ರಲ್ಲಿ ಕರ್ನಾಟಕ ರಾಜ್ಯದಲ್ಲಿ ಪಂಚಾಯತ್‌ರಾಜ್ ಕಾಯ್ದೆ ಅನ್ವಯ ಜಿಲ್ಲೆಯಲ್ಲಿ ಮೂರು ಹಂತದ ಪಂಚಾಯತ್‌ರಾಜ್ ವ್ಯವಸ್ಥೆ ಜಾರಿಯಲ್ಲಿದೆ. ಪ್ರಸ್ತುತ ಬಳ್ಳಾರಿ ಜಿಲ್ಲಾ ಪಂಚಾಯತಿಯಲ್ಲಿ 32 ಜನ ಸದಸ್ಯರಿದ್ದಾರೆ. ಇದರಲ್ಲಿ ತಾಲೂಕುವಾರು ಸದಸ್ಯರ ವಿವರಗಳನ್ನು ನೋಡಿದಾಗ ಬಳ್ಳಾರಿ 07(21.88), ಕೂಡ್ಲಿಗಿ 05(16.63), ಹೊಸಪೇಟೆ, ಸಂಡೂರು ಶಿರಗುಪ್ಪ, ಹಗರಿಬೊಮ್ಮನಹಳ್ಳಿ ಮತ್ತು ಹೂವಿನ ಹಡಗಲಿ ತಾಲೂಕುಗಳು ತಲಾ 04(12.5) ಸದಸ್ಯರನ್ನು ಹೊಂದಿವೆ. ಜಿಲ್ಲೆಯಲ್ಲಿ ಅತಿ ಹೆಚ್ಚು ಸದಸ್ಯರನ್ನು ಬಳ್ಳಾರಿ ತಾಲೂಕು ಹೊಂದಿದೆ. ಜಿಲ್ಲಾ ಪಂಚಾಯತ್ ಸದಸ್ಯರ ಜಾತಿವಾರು ಸಂಖ್ಯೆಯನ್ನು ಗಮನಿಸಿದಾಗ ಪರಿಶಿಷ್ಟ ಜಾತಿ, 07(21.88), ಪರಿಶಿಷ್ಟ ಪಂಗಡ 03(9.37), ಹಿಂದುಳಿದ ವರ್ಗ 10(31.25) ಮತ್ತು ಸಾಮಾನ್ಯ 12(37.5) ರಷ್ಟಿದ್ದಾರೆ. ಲಿಂಗವಾರು ಪ್ರಮಾಣದಲ್ಲಿ ಪುರುಷರು 20(62.5), ಮಹಿಳೆಯರು 12(37.5) ರಷ್ಟಿದ್ದಾರೆ. ಪಕ್ಷವಾರು ನೋಡಿದಾಗ ಕಾಂಗ್ರೆಸ್ ಪಕ್ಷ 23(71.88) ಬಿ.ಜೆ.ಪಿ. 05(15.6) ಮತ್ತು ಜೆ.ಡಿ.ಯು 04(12.3) ರಷ್ಟು ಸದಸ್ಯರು ಪಕ್ಷವಾರು ಸ್ಥಾನವನ್ನು ಪಡೆದಿದ್ದಾರೆ.[11] ಜಿಲ್ಲಾ ಪಂಚಾಯತ್ ಆಡಳಿತ ಚುಕ್ಕಾಣಿ ಕಾಂಗ್ರೆಸ್ ಪಕ್ಷದ ಪಾಲಾಗಿದೆ. ಈ ಸದಸ್ಯರು ಹೊರತುಪಡಿಸಿ ತಾಲೂಕು ಪಂಚಾಯತಿ ಅಧ್ಯಕ್ಷರು 7 ಜನ, ಇಬ್ಬರು

ಲೋಕಸಭಾ ಸದಸ್ಯರು, 8 ಜನ ವಿಧಾನಸಭಾ ಶಾಸಕರು ಮತ್ತು ಒಬ್ಬರು ವಿಧಾನ ಪರಿಷತ್ ಸದಸ್ಯರು ಪದನಿಮಿತ್ತ ಜಿಲ್ಲಾ ಪಂಚಾಯತಿಯ ಸದಸ್ಯರಾಗಿರುತ್ತಾರೆ. ಹೀಗೆ ಜಿಲ್ಲಾ ಪಂಚಾಯತ್ ಸದಸ್ಯರು ಪ್ರಾತಿನಿಧ್ಯವನ್ನು ಹೊಂದಿದ್ದಾರೆ.

ಪಂಚಾಯತ್‌ರಾಜ್ ವ್ಯವಸ್ಥೆಯ ಮಧ್ಯದ ಸ್ತರವಾದ ತಾಲೂಕು ಪಂಚಾಯತ್‌ನಲ್ಲಿ ಸ್ಥಳೀಯ ಶಾಸಕರು ಮತ್ತು ಲೋಕಸಭಾ ಸದಸ್ಯರು ಪದನಿಮಿತ್ತ ಸದಸ್ಯರಾಗಿರುತ್ತಾರೆ. ತಾಲೂಕುಗಳಲ್ಲಿರುವ ಗ್ರಾಮ ಪಂಚಾಯತಿಯ ಅಧ್ಯಕ್ಷರನ್ನು ಆವರ್ತನೆಯ ಮಾದರಿ ಮೂಲಕ 1/5 ಭಾಗದಷ್ಟು ಸದಸ್ಯರನ್ನು ಆಯ್ಕೆಮಾಡಿದವರು ನಾಮ ನಿಮಿತ್ತ ಸದಸ್ಯರಾಗಿರುತ್ತಾರೆ. ಜಿಲ್ಲೆಯ ಒಟ್ಟು ತಾಲೂಕು ಪಂಚಾಯತ್‌ಗಳ ಸದಸ್ಯರ ಸಂಖ್ಯೆ 112 ಇದ್ದು ಲಿಂಗವಾರು ನೋಡಿದಾಗ ಪುರುಷ ಸದಸ್ಯರು 65(58.04), ಮಹಿಳೆ ಸದಸ್ಯರು, 47(41.96)ರಷ್ಟು ಪ್ರತಿನಿಧಿಕರಣ ಗೊಂಡಿದ್ದಾರೆ. ಜಾತಿವಾರು ಪ್ರಾತಿನಿಧ್ಯವನ್ನು ನೋಡಿದಾಗ ಪರಿಶಿಷ್ಟ ಜಾತಿಯಿಂದ 24(21.42), ಪರಿಶಿಷ್ಟ ಪಂಗಡದಿಂದ 14(12.5), ಹಿಂದುಳಿದ ವರ್ಗ 37(33.04) ಸಾಮಾನ್ಯ ವರ್ಗದಿಂದ 37(33.04) ರಷ್ಟು ಪ್ರತಿನಿಧಿಕಗೊಂಡಿದ್ದಾರೆ.[12] ಹೀಗೆ ತಾಲೂಕು ಪಂಚಾಯತ್ ಸದಸ್ಯರ ಪ್ರಾತಿನಿಧ್ಯವಾಗಿದೆ.

## ಗ್ರಾಮಪಂಚಾಯತಿ

ಪ್ರಸ್ತುತ ಅಧ್ಯಯನವು ಗ್ರಾಮಪಂಚಾಯತಿಗಳ ಬಗ್ಗೆ ಕೈಗೊಂಡಿರುವುದರಿಂದ ಜಿಲ್ಲೆಯಲ್ಲಿ ಗ್ರಾಮಪಂಚಾಯತಿಗಳ ಬೆಳವಣಿಗೆ ಕುರಿತು ಸಂಕ್ಷಿಪ್ತವಾಗಿ ಚರ್ಚಿಸಲಾಗಿದೆ. ಜಿಲ್ಲೆಯಲ್ಲಿ ಸ್ವಾತಂತ್ರ್ಯಾನಂತರ 1950 ರ ಮದ್ರಾಸ್ ವಿಲೇಜ್ ಪಂಚಾಯತ್ ಆ್ಯಕ್ಟ್ ಅನ್ವಯ 155 ಪಂಚಾಯತಿಗಳಿದ್ದವು. ಜಿಲ್ಲೆಯಲ್ಲಿ ಒಟ್ಟು 155 ಪಂಚಾಯತಿಗಳಲ್ಲಿ 8 ವರ್ಗ 1 ಮತ್ತು 147 ವರ್ಗ 2 ಪಂಚಾಯತಿಗಳಿದ್ದವು. 1971 ರ ಮೈಸೂರು ವಿಲೇಜ್ ಪಂಚಾಯತ್ ಮತ್ತು ಲೋಕಲ್ ಬೋರ್ಡ್ಸ್ ಕಾಯ್ದೆಯ ಅನ್ವಯ ಬಳ್ಳಾರಿ ಜಿಲ್ಲೆಯಲ್ಲಿ 334 ಗ್ರಾಮಪಂಚಾಯತಿಗಳಿದ್ದವು. ಗ್ರಾಮಪಂಚಾಯತಿಯ ಸದಸ್ಯರನ್ನು ಚುನಾವಣೆ ಮತ್ತು ನೇರ ಆಯ್ಕೆಯ ಮೂಲಕ ನೇಮಿಸಲಾಗುತ್ತಿತ್ತು. ಜಿಲ್ಲೆಯ 334 ಪಂಚಾಯತಿಗಳಲ್ಲಿ 4279 ಸದಸ್ಯರು ಪ್ರಾತಿನಿಧ್ಯ ಹೊಂದಿದ್ದಾರೆ. ಈ ಸದಸ್ಯರಲ್ಲಿ ಪರಿಶಿಷ್ಟ ಜಾತಿ/ಪಂಗಡದ ಸದಸ್ಯರು 613(14.33) ಮತ್ತು 691(16.15)ಜನ ಮಹಿಳೆಯರು ಆಯ್ಕೆಗೊಂಡಿದ್ದರು.[13] ಈ ಕಾಯ್ದೆಯ ಅನ್ವಯ ಗ್ರಾಮಪಂಚಾಯತಿಗಳಿಗೆ ಕೆಲವು ಕಾರ್ಯಗಳನ್ನು ವಹಿಸಲಾಗಿತ್ತು. ಗ್ರಾಮದ ರಸ್ತೆಗಳು, ಬೀದಿದೀಪ, ಸಾರ್ವಜನಿಕ ಕಟ್ಟಡಗಳ ನಿರ್ಮಾಣ, ಅರಣ್ಯಭೂಮಿಯ ಸಂರಕ್ಷಣೆ ಕುಡಿಯುವ ನೀರು, ಚರಂಡಿ ನಿರ್ಮಾಣ, ಸಾರ್ವಜನಿಕ ಬಾವಿಗಳ ನಿರ್ಮಾಣ ಮುಂತಾದ ನಾಗರಿಕ ಸೌಲಭ್ಯಗಳನ್ನು ಆ ವೇಳೆಗಾಗಲೇ ಗ್ರಾಮ ಪಂಚಾಯತಿಗಳಿಗೆ ವಹಿಸಲಾಗಿತ್ತು. ಶೇ 30 ರಷ್ಟು ಭೂಕಂದಾಯ, ಮನೆಕಂದಾಯ ಮತ್ತು ನೀರಿನ ಕರಗಳನ್ನು ಪಂಚಾಯತಿಗಳು ಸಂಗ್ರಹಿಸುತ್ತಿದ್ದವು.[14] ಗ್ರಾಮಪಂಚಾಯತಿ ಕಾರ್ಯವ್ಯಾಪ್ತಿ ಮತ್ತು ಆದಾಯಗಳು ಬಹಳ ಸೀಮಿತವಾಗಿದ್ದವು. ಅಭಿವೃದ್ಧಿ ಕಾಮಗಾರಿಗಳಿಗೆ ಅನುದಾನ ಕೊಡುವುದು ಮತ್ತು ಅವುಗಳನ್ನು ಕಾರ್ಯರೂಪಕ್ಕೆ ತರುವುದು ತಾಲೂಕು ಬೋರ್ಡ್ಸ್ ಮತ್ತು ಜಿಲ್ಲಾ

ಬೋರ್ಡುಗಳ ವ್ಯಾಪ್ತಿಯಲ್ಲಿತ್ತು. ಗ್ರಾಮ ಪಂಚಾಯತಿಗಳಿಗೆ ಹಣವನ್ನು ಬಳಸುವ ಸಂಪೂರ್ಣ ಸ್ವಾತಂತ್ರ್ಯವಿರಲಿಲ್ಲ. ಹಾಗಾಗಿ ಗ್ರಾಮಪಂಚಾಯತಿಗಳ ಎಲ್ಲಾ ಹಿಡಿತ ಮೇಲಿನ ಸ್ತರಗಳಾದ ತಾಲೂಕ್ ಮತ್ತು ಜಿಲ್ಲಾ ಬೋರ್ಡುಗಳ ಹಿಡಿತಲ್ಲಿದ್ದವು. ಗ್ರಾಮಪಂಚಾಯತಿ ಸ್ಥಳೀಯ ಯೋಜನೆಗಳನ್ನು ತಲುಪಿಸುವ ಸಂಸ್ಥೆಯಾಗಿತ್ತು. ಪಂಚಾಯತಿಗಳಿಗೆ ನಿಶ್ಚಿತ ಅನುದಾನಗಳಾಗಲಿ ಅಥವಾ ಇತರೆ ಆದಾಯದ ಮೂಲಗಳಾಗಲಿ ಇರಲಿಲ್ಲ. ಈ ಲೋಪದೋಷಗಳನ್ನು ನಿವಾರಿಸಿ 1985 ರಲ್ಲಿ ದೇಶಾದ್ಯಂತ ಎರಡು ಹಂತದ ಪಂಚಾಯತ್‌ರಾಜ್ ವ್ಯವಸ್ಥೆಯನ್ನು ಜಾರಿಗೆ ತರಲಾಯಿತು. ಈ ಕಾಯ್ದೆ ಅನ್ವಯ ಜಿಲ್ಲಾಮಟ್ಟದಲ್ಲಿ ಜಿಲ್ಲಾ ಪಂಚಾಯತ್ ಮತ್ತು ಗ್ರಾಮಮಟ್ಟದಲ್ಲಿ ಮಂಡಲ ಪಂಚಾಯತ್‌ಗಳನ್ನು ಸ್ಥಾಪಿಸಲಾಯಿತು. ಆಗ ಜಿಲ್ಲೆಯಲ್ಲಿ ಒಟ್ಟು 91 ಮಂಡಲಪಂಚಾಯತ್ ಗಳಿದ್ದವು.[15] ಈ ಮಂಡಲ ಪಂಚಾಯತ್‌ಗಳಿಗೆ ಹೆಚ್ಚು ಅಧಿಕಾರಗಳನ್ನು ಮತ್ತು ಸಂಪನ್ಮೂಲಗಳನ್ನು ಒದಗಿಸಲಾಯಿತು. ಹತ್ತು ವರ್ಷಗಳ ಕಾಲ ಜಿಲ್ಲೆಯ ಮಂಡಲ ಪಂಚಾಯತ್‌ಗಳು ಪ್ರಗತಿಪರ ಕಾರ್ಯಗಳನ್ನು ಕೈಗೊಂಡವು.

1993ರಲ್ಲಿ 73ನೇ ಸಂವಿಧಾನದ ತಿದ್ದುಪಡಿ ಅನ್ವಯ ಈ ಸಂಸ್ಥೆಗಳನ್ನು ಸಂವಿಧಾನಿಕ ಗೊಳಿಸಲಾಯಿತು. ಈ ಸಂವಿಧಾನ ತಿದ್ದುಪಡಿ ಅನ್ವಯ ಗ್ರಾಮಪಂಚಾಯತಿಗಳು ರಚನೆಗೊಂಡಿವೆ. ಬಳ್ಳಾರಿ ಜಿಲ್ಲೆಯಲ್ಲಿ ಈಗ ಒಟ್ಟು 188 ಗ್ರಾಮಪಂಚಾಯತಿಗಳಿವೆ. ತಾಲೂಕುವಾರು ಗ್ರಾಮಪಂಚಾಯತಿಗಳ ಸಂಖ್ಯೆಯನ್ನು ನೋಡಿದಾಗ ಬಳ್ಳಾರಿ 40, ಹಡಗಲಿ 24, ಹಗರಿಬೊಮ್ಮನಹಳ್ಳಿ 22, ಹೊಸಪೇಟೆ 22, ಕೂಡ್ಲಿಗಿ 33, ಸಂಡೂರು 21, ಮತ್ತು ಶಿರುಗುಪ್ಪ 26 ಗ್ರಾಮಪಂಚಾಯತಿಗಳನ್ನು ಹೊಂದಿದೆ.[16] ಜಿಲ್ಲೆಯಲ್ಲಿ ಅತಿ ಹೆಚ್ಚು ಗ್ರಾಮ ಪಂಚಾಯತಿಗಳನ್ನು ಬಳ್ಳಾರಿ ತಾಲೂಕು ಹೊಂದಿದ್ದು, ಅತಿ ಕಡಿಮೆ ಗ್ರಾಮಪಂಚಾಯತಿಗಳನ್ನು ಸಂಡೂರು ತಾಲೂಕು ಹೊಂದಿದೆ. 1999ರ ಚುನಾವಣೆಗಳಲ್ಲಿ ಜಿಲ್ಲೆಯಲ್ಲಿ ಒಟ್ಟು 188 ಗ್ರಾಮ ಪಂಚಾಯತಿಗಳಿದ್ದು ಆಯ್ಕೆಗೊಂಡ ಪ್ರತಿನಿಧಿಗಳ ವಿವರ ಇಂತಿದೆ. ಒಟ್ಟು ಸದಸ್ಯರು 2714, ಇದರಲ್ಲಿ ಲಿಂಗವಾರು ಸಂಖ್ಯೆಯನ್ನು ನೋಡಿದಾಗ ಪುರುಷರು 1516(55.86) ಮತ್ತು ಮಹಿಳೆಯರು 1198(44.14) ರಷ್ಟು ಪ್ರಾತಿನಿಧ್ಯವನ್ನು ಹೊಂದಿದ್ದಾರೆ. ಮಹಿಳೆಯರ ಪ್ರಾತಿನಿಧ್ಯದಲ್ಲಿ ಶೇ 10 ರಷ್ಟು ಮೀಸಲಾತಿಗಿಂತ ಹೆಚ್ಚು ಆಯ್ಕೆ ಆಗಿದ್ದಾರೆ. ಇನ್ನೂ ಸದಸ್ಯರ ಜಾತಿವಾರು ಪ್ರಾತಿನಿಧ್ಯವನ್ನು ನೋಡಿದಾಗ, ಪರಿಶಿಷ್ಟ ಜಾತಿ 566(20.85), ಪರಿಶಿಷ್ಟ ಪಂಗಡ 371(13.66), ಹಿಂದುಳಿದ ವರ್ಗದಿಂದ 891(32.83)ರಷ್ಟು ಮತ್ತು ಇವರೇ ವರ್ಗದಿಂದ 885(32.61) ರಷ್ಟು ಸದಸ್ಯರು ಪ್ರತಿನಿಧಿಕರಣ ಗೊಂಡಿದ್ದಾರೆ (ಕೋಷ್ಟಕ- 6).[17] ಚುನಾಯಿತ ಸದಸ್ಯರ ಪ್ರಾತಿನಿಧ್ಯದ ಅಂಕಿ- ಅಂಶಗಳನ್ನು ಗಮನಿಸಿದಾಗ ಪರಿಶಿಷ್ಟ ಜಾತಿ/ಪಂಗಡ ಸದಸ್ಯರು ಜನಸಂಖ್ಯೆಗೆನುಗುಣವಾಗಿ ಆಯ್ಕೆಗೊಂಡಿದ್ದಾರೆ.

ಹೀಗೆ ಬಳ್ಳಾರಿ ಜಿಲ್ಲೆಯ ಆರ್ಥಿಕ, ಸಾಮಾಜಿಕ ಮತ್ತು ರಾಜಕೀಯ ವಿವರಗಳನ್ನು ನೋಡಿದಾಗ ಆರ್ಥಿಕವಾಗಿ ಮತ್ತು ಸಾಮಾಜಿಕವಾಗಿ ಜಿಲ್ಲೆಯು ರಾಜ್ಯದ ಹಿಂದುಳಿದಿರುವ ಜಿಲ್ಲೆಗಳಲ್ಲಿ ಒಂದಾಗಿದೆ. ಈ ಜಿಲ್ಲೆಯಲ್ಲಿ ವಿಕೇಂದ್ರೀಕರಣ ವ್ಯವಸ್ಥೆಯ ಕೆಳಸ್ಥರವಾದ ಗ್ರಾಮ ಪಂಚಾಯತಿಗಳ ಕಾರ್ಯಕ್ಷಮತೆಯನ್ನು ಅಧ್ಯಯನ ಮಾಡಲು ಬಳ್ಳಾರಿ ಜಿಲ್ಲೆಯನ್ನು ಆಯ್ಕೆ ಮಾಡಿಕೊಳ್ಳಲಾಗಿದೆ. ಹಾಗೆಯೇ ಜಿಲ್ಲೆಯಲ್ಲಿ ತಾಲೂಕುಗಳ ಮತ್ತು ಗ್ರಾಮಪಂಚಾಯತಿಗಳ ವಿವರಣೆ ಮತ್ತು ಆಯ್ಕೆ ಮಾದರಿಯನ್ನು ಕುರಿತು ಮುಂದೆ ಚರ್ಚಿಸಲಾಗಿದೆ.

## 2.3 ಜಿಲ್ಲೆಯ ತಾಲೂಕುಗಳ ಸಾಮಾಜಿಕ, ಆರ್ಥಿಕ ಮತ್ತು ರಾಜಕೀಯ ವಿವರಗಳು

ಜಿಲ್ಲೆಯ ವಿವರಣೆ ಮತ್ತು ಆಯ್ಕೆ ನಂತರ ತಾಲೂಕುಗಳ ವಿವರಣೆಯನ್ನು ಅಂಕಿ-ಅಂಶಗಳ ಮೂಲಕ ನೋಡಲಾಗಿದೆ. ಪ್ರಸ್ತುತ ಜಿಲ್ಲೆಯು 7 ತಾಲೂಕುಗಳನ್ನು ಹೊಂದಿದ್ದು ಪ್ರಾದೇಶಿಕ ವಾಗಿ ಈ ತಾಲೂಕುಗಳನ್ನು ಪೂರ್ವ ಮತ್ತು ಪಶ್ಚಿಮ ತಾಲೂಕುಗಳೆಂದು ವಿಭಾಗಿಸಲಾಗಿದೆ. ಬಳ್ಳಾರಿ, ಶಿರುಗುಪ್ಪ, ಹೊಸಪೇಟೆ ಮತ್ತು ಸಂಡೂರು ತಾಲೂಕುಗಳನ್ನು ಪೂರ್ವ ತಾಲೂಕುಗಳೆಂದು ಮತ್ತು ಕೂಡ್ಲಿಗಿ, ಹಗರಿಬೊಮ್ಮನಹಳ್ಳಿ ಮತ್ತು ಹೂವಿನಹಡಗಲಿಯನ್ನು ಪಶ್ಚಿಮ ತಾಲೂಪುಗಳೆಂದು ಕರೆಯುವುದು ವಾಡಿಕೆಯಲ್ಲಿದೆ.[18] ಪ್ರಾಕೃತಿಕವಾಗಿ ಮತ್ತು ಆರ್ಥಿಕವಾಗಿ ಪೂರ್ವ ತಾಲೂಕುಗಳು ಸಮೃದ್ಧಿಯಾದ ಪ್ರದೇಶಗಳಾಗಿದ್ದು ಈ ತಾಲೂಕುಗಳು ಅಭಿವೃದ್ಧಿಯ ಎಲ್ಲಾ ಸವಲತ್ತುಗಳನ್ನು ಅಧಿಕವಾಗಿ ಪಡೆದುಕೊಂಡಿವೆ. ಜಿಲ್ಲೆಯ ಪಶ್ಚಿಮ ಭಾಗದ ತಾಲೂಕುಗಳು ಪೂರ್ತಿ ಬಯಲು ಪ್ರದೇಶ ಮತ್ತು ಒಣಭೂಮಿ ಕೃಷಿಯನ್ನು ಹೊಂದಿದ ಪ್ರದೇಶಗಳಾಗಿವೆ. ಪೂರ್ವ ತಾಲೂಕುಗಳು ಜಿಲ್ಲಾ ಕೇಂದ್ರಕ್ಕೆ ಹತ್ತಿರವಾಗಿದ್ದು ಮತ್ತು ಹೆಚ್ಚು ನೀರಾವರಿ ಕೃಷಿಯನ್ನು ಹೊಂದಿವೆ. ಇದಕ್ಕೆ ವಿರುದ್ದವಾಗಿ ಪಶ್ಚಿಮ ತಾಲೂಕುಗಳು ಜಿಲ್ಲೆಯಿಂದ ದೂರವಿದ್ದು, ಹೆಚ್ಚು ಒಣಭೂಮಿ ಕೃಷಿಯನ್ನು ಹೊಂದಿವೆ. ದೊಡ್ಡ ಮತ್ತು ಮಧ್ಯಮ ಗಾತ್ರದ ಉದ್ದಿಮೆಗಳು ಪೂರ್ವ ಭಾಗದ ತಾಲೂಕುಗಳಲ್ಲಿ 19 ಘಟಕಗಳನ್ನು ಹೊಂದಿದ್ದರೆ, ಪಶ್ಚಿಮ ಭಾಗದ ತಾಲೂಕುಗಳಲ್ಲಿ ಒಂದೇ ಒಂದು ಘಟಕವಿದೆ. ಗಣಿಗಾರಿಕೆ ಚಟುವಟಿಕೆಗಳೂ ಸಹ ಪೂರ್ವಭಾಗಕ್ಕೆ ಸೀಮಿತವಾಗಿವೆ.[19] ಪಶ್ಚಿಮ ತಾಲೂಕುಗಳಲ್ಲಿ ಯಾವುದೇ ಗಣಿಗಾರಿಕೆ ಚಟುವಟಿಕೆಗಳು ಇರುವುದಿಲ್ಲ. ಅಂದರೆ ಪಶ್ಚಿಮ ತಾಲೂಕುಗಳಲ್ಲಿ ಹೆಚ್ಚು ಕೃಷಿಯನ್ನು ಅವಲಂಬಿಸಿದ್ದಾರೆ. ಈ ಎಲ್ಲಾ ವಿವರಗಳನ್ನು ನೋಡಿದಾಗ ಪೂರ್ವಭಾಗದ ತಾಲೂಕುಗಳು ಅಭಿವೃದ್ಧಿಯ ಪ್ರದೇಶಗಳೆಂದು, ಪಶ್ಚಿಮ ಭಾಗದ ತಾಲೂಕುಗಳನ್ನು ಹಿಂದುಳಿದ ಪ್ರದೇಶಗಳೆಂದು ಗುರುತಿಸಬಹುದು. ಆದ್ದರಿಂದ ಪ್ರಸ್ತುತ ಅಧ್ಯಯನಕ್ಕೆ ಪೂರ್ವಭಾಗದ ಹೊಸಪೇಟೆ ತಾಲೂಕನ್ನು ಮತ್ತು ಪಶ್ಚಿಮಭಾಗದ ಕೂಡ್ಲಿಗಿ ತಾಲೂಕನ್ನು ಆಯ್ಕೆ ಮಾಡಿಕೊಳ್ಳಲಾಗಿದೆ.

### ತಾಲೂಕುಗಳಲ್ಲಿ ದುಡಿಮೆ ವರ್ಗ

ಒಂದು ಪ್ರದೇಶದ ಅಭಿವೃದ್ಧಿಯು ಅಲ್ಲಿ ವಾಸಿಸುತ್ತಿರುವ ಜನತೆಯ ದುಡಿಮೆಯ ಮೇಲೆ ನಿರ್ಧರಿತವಾಗುತ್ತದೆ. ಜಿಲ್ಲೆಯ ಹೆಚ್ಚು ಶ್ರಮ ಶಕ್ತಿಯು ಪ್ರಾಥಮಿಕ ವಲಯವನ್ನು ಅವಲಂಬಿಸಿರುವುದರಿಂದ ರಾಜ್ಯದ ಹಿಂದುಳಿದಿರುವ ಜಿಲ್ಲೆಗಳಲ್ಲಿ ಇದು ಒಂದಾಗಿದೆ ಎಂಬುದನ್ನು ಈಗಾಗಲೇ ನೋಡಿದ್ದೇವೆ. ಹಾಗೆಯೇ ಜಿಲ್ಲೆಯ ತಾಲೂಕುಗಳಲ್ಲಿ ಶ್ರಮಶಕ್ತಿ ವಲಯವಾರು ರಚನೆ ಮತ್ತು ದುಡಿಮೆ ವರ್ಗಗಳ ವಿವರಗಳನ್ನು ನೋಡಿದಾಗ ಯಾವ ತಾಲೂಕುಗಳು ಅಭಿವೃದ್ಧಿ ಹೊಂದಿವೆ ಮತ್ತು ಹಿಂದುಳಿದಿವೆ ಎಂಬುದು ಸ್ಪಷ್ಟವಾಗುತ್ತದೆ. ಈ ದುಡಿಮೆ ವರ್ಗವನ್ನು ಅಂಕಿ-ಅಂಶಗಳ ಮೂಲಕ ನೋಡಿದಾಗ ಜಿಲ್ಲೆಯಲ್ಲಿ ಕೃಷಿಯು ಪ್ರಧಾನ ಕಸುಬಾಗಿದೆ. ಜಿಲ್ಲೆಯ ಪಶ್ಚಿಮ ಭಾಗದ ತಾಲೂಕುಗಳಾದ ಹಗರಿಬೊಮ್ಮನಹಳ್ಳಿ, ಕೂಡ್ಲಿಗಿ ಮತ್ತು ಹಡಗಲಿ ತಾಲೂಕುಗಳು ಇಡೀ ರಾಜ್ಯದಲ್ಲಿ ಕ್ರಮವಾಗಿ ಶೇ 93.44, 86.35 ಮತ್ತು 85.11 ಸ್ಥಾನಗಳನ್ನು ಪಡೆದಿವೆ.[20] ಪೂರ್ತಿ ಒಣಭೂಮಿ

ಹೊಂದಿರುವ ಈ ತಾಲೂಕುಗಳು ಕೃಷಿ ಅವಲಂಬನೆಯನ್ನು ನೋಡಿದರೆ ಸ್ಪಷ್ಟವಾಗಿ ಈ ತಾಲೂಕುಗಳ ಜಿಲ್ಲೆಯಲ್ಲಿ ಹಿಂದುಳಿದಿರುವ ತಾಲೂಕುಗಳೆಂದು ಗುರುತಿಸಬಹುದು. ಪೂರ್ವ ತಾಲೂಕುಗಳಲ್ಲಿ ಕೃಷಿ ಅವಲಂಬನೆ ಇದ್ದರೂ ನೀರಾವರಿ ಪ್ರದೇಶವಾಗಿದ್ದರಿಂದ ಹೆಚ್ಚು ಆದಾಯ ಬರುತ್ತದೆ. ತಾಲೂಕುಗಳ ವಲಯವಾರು ಅಂಕಿ-ಅಂಶಗಳನ್ನು ನೋಡಿದಾಗ ಹಗರಿಬೊಮ್ಮನಹಳ್ಳಿ, ಕೂಡ್ಲಿಗಿ, ಶಿರಗುಪ್ಪ, ಹಡಗಲಿ ಮತ್ತು ಸಂಡೂರುಗಳಲ್ಲಿ ಪ್ರಾಥಮಿಕ ವಲಯದಲ್ಲಿಹೆಚ್ಚು ಅವಲಂಬಿತರಾಗಿದ್ದಾರೆ. ಈ ತಾಲೂಕುಗಳಲ್ಲಿ ಶಿರಗುಪ್ಪ ತಾಲೂಕು ಮಾತ್ರ ನೀರಾವರಿ ಪ್ರದೇಶವಾಗಿದ್ದು ಉಳಿದ ನಾಲ್ಕು ತಾಲೂಕುಗಳು ಒಣಭೂಮಿ ಪ್ರದೇಶಗಳಾಗಿವೆ. ಜಿಲ್ಲೆಯ ಸರಾಸರಿಗಿಂತ ಶೇ 10 ರಷ್ಟು ಅಧಿಕ ಪ್ರಮಾಣವನ್ನು ಹಗರಿಬೊಮ್ಮನಹಳ್ಳಿ, ಕೂಡ್ಲಿಗಿ, ಹಡಗಲಿ ಮತ್ತು ಶಿರಗುಪ್ಪ ತಾಲೂಕುಗಳು ಪ್ರಾಥಮಿಕ ವಲಯವನ್ನು ಅವಲಂಬಿಸಿದ್ದಾರೆ. ಬಳ್ಳಾರಿ ಮತ್ತು ಹೊಸಪೇಟೆ ತಾಲೂಕುಗಳು ಜಿಲ್ಲೆಯ ಸರಾಸರಿಗಿಂತ ಕಡಿಮೆ ಪ್ರಮಾಣವನ್ನು ಪ್ರಾಥಮಿಕ ವಲಯವನ್ನು ಅವಲಂಬಿಸಿದ್ದಾರೆ (ಕೋಷ್ಟಕ-2). ದ್ವಿತೀಯ ಮತ್ತು ತೃತೀಯ ವಲಯದಲ್ಲಿ ಬಳ್ಳಾರಿ ಮತ್ತು ಹೊಸಪೇಟೆ ಅಗ್ರ ಸ್ಥಾನದಲ್ಲಿವೆ. ಈ ವಲಯವಾರು ನೋಡಿದಾಗ ತಾಲೂಕುಗಳು ಜಿಲ್ಲೆಯ ಸರಾಸರಿಗಿಂತ ಹೆಚ್ಚು ಉನ್ನತ ಸ್ಥಾನದಲ್ಲಿವೆ. ಉಳಿದ ತಾಲೂಕುಗಳು ಜಿಲ್ಲೆಯ ಸರಾಸರಿಗಿಂತ ಶೇ 10ರಷ್ಟು ಕಡಿಮೆ ಇರುವುದು ಕಂಡುಬರುತ್ತದೆ. ಹೀಗೆ ಹೊಸಪೇಟೆ ಆರ್ಥಿಕವಾಗಿ ಅಭಿವೃದ್ಧಿ ಹೊಂದಿದ ತಾಲೂಕು. ಈ ಎಲ್ಲಾ ಅಂಕಿ-ಅಂಶಗಳ ಹಿನ್ನಲೆಯಲ್ಲಿ ಅಧ್ಯಯನ ದೃಷ್ಟಿಯಿಂದ ಪೂರ್ವಭಾಗದ ಅಭಿವೃದ್ಧಿ ಹೊಂದಿದ ಹೊಸಪೇಟೆ ತಾಲೂಕನ್ನು ಮತ್ತು ಹಿಂದುಳಿದ ಕೂಡ್ಲಿಗಿ ತಾಲೂಕನ್ನು ಅಧ್ಯಯನಕ್ಕೆ ಆರಿಸಿಕೊಳ್ಳಲಾಗಿದೆ.

### ನೀರಾವರಿ ಮತ್ತು ಒಣಭೂಮಿ ಹೊಂದಿದ ತಾಲೂಕುಗಳು

ಜಿಲ್ಲೆಯ ಪ್ರಮುಖ ನೀರಾವರಿ ಮೂಲಗಳೆಂದರೆ ತುಂಗಾಭದ್ರಾ ನದಿ, ನಾರಿಹಳ್ಳಿ ಜಲಾಶಯ, ಮಾಲವಿ ಜಲಾಶಯ, ಕೆರೆ ಮತ್ತು ಕೊಳವೆ ಬಾವಿಗಳಾಗಿವೆ. ಜಿಲ್ಲೆಯ ಕೆಲವೇ ತಾಲೂಕುಗಳು ತುಂಗಾಭದ್ರಾ ಕಾಲುವೆ ನೀರನ್ನು ಸಮೃದ್ಧಿಯಾಗಿ ಪಡೆದುಕೊಂಡಿದ್ದರೆ, ಕೆಲವು ತಾಲೂಕುಗಳು ಈ ನೀರಿನಿಂದ ವಂಚಿತವಾಗಿವೆ. ಈ ನದಿಯ ನೀರಾವರಿ ಸಾಮರ್ಥ್ಯ 13 ಲಕ್ಷ ಎಕರೆಗಳು ಇದ್ದು, ಇದರಲ್ಲಿ ಬಳ್ಳಾರಿ ಜಿಲ್ಲೆಯ ಪಾಲು ಕೇವಲ 3.1 ಲಕ್ಷ ಎಕರೆಗಳು ಮಾತ್ರ. ಇತರೆ ಜಿಲ್ಲೆ ಮತ್ತು ಆಂಧ್ರ ಪ್ರದೇಶ ರಾಜ್ಯದ ಪಾಲು 9.9 ಲಕ್ಷ ಎಕರೆಯಾಗಿದೆ.[21] ಜಿಲ್ಲೆಯ ಪೂರ್ವ ತಾಲೂಕುಗಳಾದ ಬಳ್ಳಾರಿ, ಹೊಸಪೇಟೆ ಮತ್ತು ಶಿರುಗುಪ್ಪ ಪ್ರದೇಶಗಳು ತುಂಗಭದ್ರ ನದಿ ನೀರಿನಿಂದ ಸಮೃದ್ಧಿಯಾಗಿವೆ. ಪಶ್ಚಿಮ ತಾಲೂಕುಗಳಾದ ಹಗರಿಬೊಮ್ಮನಹಳ್ಳಿ ಮಾತ್ರ ಮಾಲವಿ ಜಲಾಶಯದ ಮೂಲಕ 2508 ಹೆಕ್ಟೇರ್‌ಗಳಷ್ಟು ನೀರಾವರಿ ಪ್ರದೇಶವನ್ನು ಹೊಂದಿದೆ. ಕೂಡ್ಲಿಗಿ ಮತ್ತು ಹಡಗಲಿ ತಾಲೂಕುಗಳು ಯಾವ ನದಿ ನೀರನ್ನು ಅವಲಂಬಿಸದೇ ಮಳೆಯನ್ನೇ ಆಶ್ರಯಿಸಿ ಕೃಷಿಯನ್ನು ನಡೆಸುತ್ತಿವೆ. ಸಂಡೂರು ಸ್ವಲ್ಪ ಪ್ರಮಾಣದಲ್ಲಿ ಕಾಲುವೆ ನೀರನ್ನು ಹೊಂದಿದೆ. ಒಟ್ಟು ಜಿಲ್ಲೆಯ 151796(30.40) ಹೆಕ್ಟೇರ್‌ಗಳಷ್ಟು ನೀರಾವರಿ ಪ್ರದೇಶವನ್ನು ಹೊಂದಿದ್ದು, ಇದರಲ್ಲಿ ಅತಿಹೆಚ್ಚು ನೀರಾವರಿ ಪ್ರದೇಶವನ್ನು ಹೊಸಪೇಟೆ ತಾಲೂಕು 23007(58.61) ಹೆಕ್ಟೇರುಗಳಷ್ಟು ಹೊಂದಿದೆ. ಅತಿ ಕಡಿಮೆ ನೀರಾವರಿ ಪ್ರದೇಶವನ್ನು ಕೂಡ್ಲಿಗಿ ತಾಲೂಕು 8501(9.85) ಹೊಂದಿದೆ.[22] ತಾಲೂಕುವಾರು ನೀರಾವರಿ ಪ್ರದೇಶವನ್ನು ನೋಡಿದಾಗ ಪೂರ್ವ

ತಾಲೂಕುಗಳಾದ ಬಳ್ಳಾರಿ, ಹೊಸಪೇಟೆ, ಶಿರಗುಪ್ಪ ಪ್ರದೇಶಗಳು ನೀರಾವರಿ ದೃಷ್ಟಿಯಿಂದ ಉತ್ತಮ ಸ್ಥಿತಿಯಲ್ಲಿದ್ದರೆ, ಪಶ್ಚಿಮ ತಾಲೂಕುಗಳಾದ ಕೂಡ್ಲಿಗಿ, ಹಗರಿಬೊಮ್ಮನಹಳ್ಳಿ, ಹಡಗಲಿ ತಾಲೂಕುಗಳು ಮಳೆಯನ್ನೆ ಆಶ್ರಯಿಸಿದ ಅಭಾವದ ಪ್ರದೇಶಗಳಾಗಿವೆ. ನೀರಾವರಿ ದೃಷ್ಟಿಯಿಂದ ಪೂರ್ವ ತಾಲೂಕುಗಳು ಸಮೃದ್ಧಿಯಾಗಿದ್ದರೆ ಪಶ್ಚಿಮ ತಾಲೂಕುಗಳು ಅಭಾವದ ತಾಲೂಕುಗಳಾಗಿವೆ. ಎರಡು ಭಾಗಗಳಲ್ಲಿ ಕೃಷಿ ಪ್ರಧಾನ ಉದ್ಯೋಗವಾಗಿದ್ದರೂ ನೀರಾವರಿ ಕೃಷಿಯಿಂದ ಬರುವ ವರಮಾನ ಹೆಚ್ಚಾಗಿರುತ್ತದೆ. ಹಾಗಾಗಿ ಒಣಭೂಮಿಯ ಪ್ರದೇಶಗಳಿಂದ ಬರುವ ಆರ್ಥಿಕ ವರಮಾನ ಕಡಿಮೆಯಾಗಿರುತ್ತದೆ. ಅಧ್ಯಯನದ ದೃಷ್ಟಿಯಿಂದ ಜಿಲ್ಲೆಯಲ್ಲಿ ಅತಿ ಹೆಚ್ಚು ನೀರಾವರಿ ಪ್ರದೇಶವನ್ನು ಹೊಂದಿದ ಹೊಸಪೇಟೆ ತಾಲೂಕನ್ನು ಹಾಗೂ ಅತಿ ಹೆಚ್ಚು ಒಣಭೂಮಿ ಪ್ರದೇಶವನ್ನು ಹೊಂದಿದ ಕೂಡ್ಲಿಗಿ ತಾಲೂಕನ್ನು ಅಧ್ಯಯನಕ್ಕೆ ಆಯ್ದುಕೊಳ್ಳಲಾಗಿದೆ.

**ತಾಲೂಕುಗಳ ಸಾಕ್ಷರತಾ ಅಂಕಿ-ಅಂಶಗಳು**

ಒಂದು ಪ್ರದೇಶದ ಅಭಿವೃದ್ಧಿಯನ್ನು ನಿರ್ಧರಿಸುವ ಬಹುಮುಖ್ಯ ಅಂಶವೆಂದರೆ ಸಾಕ್ಷರತೆ ಪ್ರಮಾಣ. ಜಿಲ್ಲೆಯ ತಾಲೂಕುಗಳಲ್ಲಿ ಅತಿ ಹೆಚ್ಚು ಸಾಕ್ಷರತೆಯನ್ನು ಬಳ್ಳಾರಿ ತಾಲೂಕು ಹೊಂದಿದ್ದರೆ, ಅತಿ ಕಡಿಮೆ ಸಾಕ್ಷರತೆಯನ್ನು ಶಿರುಗುಪ್ಪ ತಾಲೂಕು ಹೊಂದಿದೆ. ಶಿರುಗುಪ್ಪ ತಾಲೂಕು ನೀರಾವರಿ ಪ್ರದೇಶವಾದರೂ ಸಾಕ್ಷರತೆಯಲ್ಲಿ ಜಿಲ್ಲೆಯಲ್ಲೆ ಕೊನೆಯ ಸ್ಥಾನದಲ್ಲಿದೆ. ಜಿಲ್ಲೆಯ ಸಾಕ್ಷರತೆ ಪ್ರಮಾಣದ ಸರಾಸರಿಗಿಂತ ಹೊಸಪೇಟೆ ಮತ್ತು ಬಳ್ಳಾರಿ ತಾಲೂಕುಗಳಲ್ಲಿ ಹೆಚ್ಚು ಇದ್ದು, ಸಾಕ್ಷರತೆಯಲ್ಲಿ ಈ ತಾಲೂಕುಗಳು ಉತ್ತಮ ಸ್ಥಿತಿಯಲ್ಲಿವೆ. ಕೂಡ್ಲಿಗಿ ತಾಲೂಕು ಜಿಲ್ಲೆಯ ಸಾಕ್ಷರತಾ ಸರಾಸರಿಗೆ ಸ್ವಲ್ಪ ಕಡಿಮೆ ಹೊಂದಿದೆ. ಉಳಿದ ನಾಲ್ಕು ತಾಲೂಕುಗಳು ಜಿಲ್ಲೆಯ ಸರಾಸರಿಗಿಂತ ಬಹಳ ಕಡಿಮೆ ಹೊಂದಿದೆ. ಸಾಕ್ಷರತೆಯಲ್ಲಿ ಶೇ 15 ರಷ್ಟು ಅಂತರವಿದೆ. 2001 ಜನಗಣತಿ ಅನ್ವಯ ತಾಲೂಕುವಾರು ಸಾಕ್ಷರತೆ ಪ್ರಮಾಣದಲ್ಲಿ, ಹೊಸಪೇಟೆ ಒಂದನೇ ಸ್ಥಾನ, ಬಳ್ಳಾರಿ ಎರಡನೇ ಸ್ಥಾನ, ಹಡಗಲಿ ಮೂರನೇ ಸ್ಥಾನ, ಕೂಡ್ಲಿಗಿ, ನಾಲ್ಕನೇ ಸ್ಥಾನ, ಹಗರಿಬೊಮ್ಮನಹಳ್ಳಿ ಐದನೇ ಸ್ಥಾನ, ಸಂಡೂರು ಆರನೇ ಸ್ಥಾನ ಮತ್ತು ಶಿರುಗುಪ್ಪ ಕೊನೆಯ ಏಳನೇ ಸ್ಥಾನವನ್ನು ಹೊಂದಿದೆ.[23] ಪೂರ್ವ ತಾಲೂಕುಗಳಲ್ಲಿ ಸಾಕ್ಷರತೆ ಪ್ರಮಾಣ ಉತ್ತಮ ವಾಗಿದ್ದರೆ, ಪಶ್ಚಿಮ ತಾಲೂಕುಗಳಲ್ಲಿ ಅತಿ ಹೆಚ್ಚು ಸಾಕ್ಷರತೆಯನ್ನು ಹಡಗಲಿ ಹೊಂದಿದೆ. ಕೂಡ್ಲಿಗಿ 2ನೇ ಸ್ಥಾನದಲ್ಲಿದೆ. ಒಟ್ಟಾರೆ ಜಿಲ್ಲೆಯ ತಾಲೂಕುಗಳ ಸಾಕ್ಷರತೆ ಅಂಕಿ-ಅಂಶಗಳನ್ನು ನೋಡಿದಾಗ ಪೂರ್ವ ತಾಲೂಕುಗಳು ಸಾಕ್ಷರತೆಯ ಪ್ರಮಾಣದಲ್ಲಿ ಸುಸ್ಥಿತಿಯಲ್ಲಿವೆ. ಪಶ್ಚಿಮ ತಾಲೂಕುಗಳು ಸಾಕ್ಷರತೆಯ ದೃಷ್ಟಿಯಿಂದ ಪ್ರಗತಿ ಸಾಧಿಸಬೇಕಾಗಿದೆ. ಸಾಕ್ಷರತೆಯಲ್ಲಿಯು ಪೂರ್ವ ತಾಲೂಕುಗಳು ಉತ್ತಮ ಸ್ಥಿತಿಯಲ್ಲಿವೆ. ಪಶ್ಚಿಮ ತಾಲೂಕುಗಳು ಸಾಕ್ಷರತೆಯಲ್ಲಿ ಹಿಂದುಳಿದಿವೆ. ಆದ್ದರಿಂದ ಅಧ್ಯಯನಕ್ಕೆ ಪೂರ್ವ ಭಾಗದ ತಾಲೂಕುಗಳಲ್ಲಿ ಅಧಿಕ ಸಾಕ್ಷರತೆ ಹೊಂದಿರುವ ಹೊಸಪೇಟೆ ತಾಲೂಕನ್ನು ಪಶ್ಚಿಮ ಭಾಗದ ಕೂಡ್ಲಿಗಿ ತಾಲೂಕನ್ನು ಅಧ್ಯಯನಕ್ಕೆ ಆಯ್ಕೆಮಾಡಿ ಕೊಳ್ಳಲಾಗಿದೆ.

## 2.4 ಅಧ್ಯಯನ ವ್ಯಾಪ್ತಿಯ ತಾಲೂಕುಗಳ ವಿವರಣೆ ಮತ್ತು ಆಯ್ಕೆ

ಹೀಗೆ ಜಿಲ್ಲೆಯ ತಾಲೂಕುಗಳನ್ನು ಭೌಗೋಳಿಕ, ಪ್ರಾದೇಶಿಕ, ಆರ್ಥಿಕ ಮತ್ತು ಸಾಮಾಜಿಕ ಅಂಕಿ-ಅಂಶಗಳ ಮೂಲಕ ಹೊಸಪೇಟೆ ನೀರಾವರಿ ಪ್ರದೇಶ ಹೊಂದಿದ ಅಭಿವೃದ್ಧಿ ತಾಲೂಕು ಮತ್ತು ಕೂಡ್ಲಿಗಿ ಒಣಭೂಮಿ

ಪ್ರದೇಶ ಹೊಂದಿದ ಹಿಂದುಳಿದ ತಾಲೂಕು ಎಂದು ಪರಿಗಣಿಸಿ ಅಧ್ಯಯನಕ್ಕೆ ಎರಡು ತಾಲೂಕುಗಳನ್ನು ಆಯ್ಕೆ ಮಾಡಿಕೊಳ್ಳಲಾಗಿದೆ. ಅಧ್ಯಯನಕ್ಕೆ ಆಯ್ಕೆ ಮಾಡಿಕೊಂಡ ತಾಲೂಕುಗಳ ವಿವರಣೆಯನ್ನು ಕೆಳಗೆ ವಿವರಿಸಲಾಗಿದೆ.

## ಹೊಸಪೇಟೆ ತಾಲೂಕು



ಬಳ್ಳಾರಿ ಜಿಲ್ಲೆಯಲ್ಲಿ ಹೊಸಪೇಟೆ ಪ್ರಮುಖ ತಾಲೂಕು ಹಾಗೂ ಉಪವಿಭಾಗವಾಗಿದೆ. ತಾಲೂಕಿನಲ್ಲಿ ಮುಖ್ಯವಾಗಿ ಗಮನಿಸಬೇಕಾದ ಅಂಶಗಳೆಂದರೆ, ಜಿಲ್ಲೆಯಲ್ಲಿ ಹೆಚ್ಚು ನೀರಾವರಿ ಪ್ರದೇಶವನ್ನು ಹೊಂದಿದ್ದು, ಮಧ್ಯಮ ಗಾತ್ರದ ಕಬ್ಬಿಣ ಮತ್ತು ಉಕ್ಕು ಉದ್ಯಮಗಳನ್ನು ಮತ್ತು ಗಣಿಗಾರಿಕೆಯನ್ನು ಹೊಂದಿದೆ. ತಾಲೂಕಿನ ಪೂರ್ವಭಾಗದ ಗ್ರಾಮಗಳು ಹೆಚ್ಚು ನೀರಾವರಿ ಪ್ರದೇಶಗಳಾಗಿವೆ. ಈ ಭಾಗದಲ್ಲಿ ಬೆಳೆಯುವ ವಾಣಿಜ್ಯ ಬೆಳೆಗಳು ಅಧಿಕವಾಗಿದೆ. ಇದರಿಂದ ಹೊಸಪೇಟೆ ಮಾರುಕಟ್ಟೆ ವ್ಯವಹಾರವನ್ನು ಹೆಚ್ಚಿಸಿದೆ. ತಾಲೂಕಿನಲ್ಲಿ ನೀರಾವರಿ ಪ್ರದೇಶ ಕೆಲವೆ ಪ್ರದೇಶಕ್ಕೆ ಸೀಮಿತವಾಗಿದೆ. ತಾಲೂಕಿನ ಉತ್ತರ ಭಾಗದಲ್ಲಿರುವ ತುಂಗಭದ್ರ ನದಿ ನೀರಾವರಿಯ ಪ್ರಮುಖ ಮೂಲವಾಗಿದೆ. ಹೆಚ್ಚು ವಿಶಾಲವಾಗಿರುವ ಈ ತಾಲೂಕು ಈಶಾನ್ಯದಲ್ಲಿ ಶಿರಗುಪ್ಪ, ಪೂರ್ವದಲ್ಲಿ ಬಳ್ಳಾರಿ, ದಕ್ಷಿಣದಲ್ಲಿ ಸಂಡೂರು, ಪಶ್ಚಿಮದಲ್ಲಿ ಹಗರಿಬೊಮ್ಮನಹಳ್ಳಿ, ಗಂಗಾವತಿ ತಾಲೂಕುಗಳನ್ನು ಸುತ್ತುವರಿದಿದೆ. ಹೊಸಪೇಟೆ ಉಪವಿಭಾಗವು ನಾಲ್ಕು ತಾಲೂಕುಗಳನ್ನು ಹೊಂದಿದೆ. ತಾಲೂಕು ಒಟ್ಟು 78 ಗ್ರಾಮಗಳನ್ನು ಹೊಂದಿದೆ.[24] ಈ ತಾಲೂಕು ಹೊಸಪೇಟೆಗೆ ಸೇರಿದಂತೆ ಮರಿಯಮ್ಮನಹಳ್ಳಿ, ಕಮಲಾಪುರ ಮತ್ತು ಕಂಪ್ಲಿ ಹೋಬಳಿಗಳನ್ನು ಹೊಂದಿದೆ. ಜಿಲ್ಲೆಯ ಪೂರ್ವ ಭಾಗದ ಪ್ರಮುಖ ತಾಲೂಕು ಹಾಗೂ ಅಭಿವೃದ್ಧಿ ಪ್ರದೇಶವಾಗಿದೆ. ಕೃಷಿ ಮತ್ತು ಕೈಗಾರಿಕೆ ವಲಯದಲ್ಲಿ ತಾಲೂಕು ಪ್ರಗತಿ ಪಥದಲ್ಲಿದೆ.

## ಜನಸಂಖ್ಯೆ ಸಾಕ್ಷರತೆ ಇತ್ಯಾದಿ ವಿವರಗಳು



ಹೊಸಪೇಟೆ ತಾಲೂಕು 2001ರ ಜನಗಣತಿಯ ಪ್ರಕಾರ ಒಟ್ಟು ಜನಸಂಖ್ಯೆ 3,73,665 ರಷ್ಟು ಹೊಂದಿದ್ದು ಇದರಲ್ಲಿ ಪುರಷರು 189200 ಮತ್ತು ಮಹಿಳೆಯರು 184465ರಷ್ಟಿದ್ದಾರೆ.[25] ಜಿಲ್ಲೆಯಲ್ಲಿ ತಾಲೂಕಿನ ಪಾಲು ಶೇ.18.45 ರಷ್ಟಿದೆ. ಅತಿ ಹೆಚ್ಚು ಜನಸಂಖ್ಯೆಯನ್ನು ಹೊಂದಿದ್ದು, ಜಿಲ್ಲೆಯ ಎರಡನೇ ತಾಲೂಕಾಗಿದೆ. ಜಾತಿವಾರು ಜನಸಂಖ್ಯೆಯಲ್ಲಿ ಪರಿಶಿಷ್ಟರ ಪ್ರಮಾಣ ಶೇ 32.91 ರಷ್ಟು ಹೊಂದಿದ್ದು, ಜಿಲ್ಲೆಯಲ್ಲಿ 3ನೇ ಸ್ಥಾನದಲ್ಲಿದೆ. ಜಿಲ್ಲೆಯ ಸರಾಸರಿಗಿಂತ ಶೇ 5.19 ರಷ್ಟು ಹೆಚ್ಚಿದೆ. ತಾಲೂಕಿನ ಸಾಕ್ಷರರ ವಿವರವನ್ನು ನೋಡಿದಾಗ ಜಿಲ್ಲೆಯಲ್ಲಿ ಅತಿ ಹೆಚ್ಚು ಎಂದರೆ ಶೇ 61.29ರಷ್ಟು ಸಾಕ್ಷರತೆಯನ್ನು ಹೊಂದಿದೆ.[26] ಜಿಲ್ಲೆಯ ಸರಾಸರಿಗಿಂತ ಶೇ 3ರಷ್ಟು ಹೆಚ್ಚು ಸಾಕ್ಷರರನ್ನು ಹೊಂದಿದೆ. ಸಾಕ್ಷರತೆಯ ದೃಷ್ಟಿಯಿಂದ ತಾಲೂಕು ಜಿಲ್ಲೆಯ ಸರಾಸರಿಗಿಂತ ಉತ್ತಮ ಸ್ಥಿತಿಯಲ್ಲಿದೆ. ತಾಲೂಕು ವಿಸ್ತೀರ್ಣ 934.19 ಚ.ಕಿ.ಮೀ.ಗಳಷ್ಟಿದ್ದು ವಿಸ್ತೀರ್ಣದಲ್ಲಿ ಒಟ್ಟು ಜಿಲ್ಲೆಯ ತಾಲೂಕಿನ ಪಾಲು ಶೇ 11.05ರಷ್ಟು ಪ್ರಮಾಣವನ್ನು ಹೊಂದಿದೆ. ತಾಲೂಕು ಒಟ್ಟು 56256 ಕುಟುಂಬಗಳನ್ನು ಹೊಂದಿದೆ.[27]

ತಾಲೂಕಿನಲ್ಲಿ ಪ್ರಮುಖ ಜಾತಿಗಳೆಂದರೆ ಲಿಂಗಾಯತರು, ನಾಯಕರು, ಮಾದಿಗರು, ಮುಸ್ಲಿಂರು ಮತ್ತು ಕುರುಬರು ಇದ್ದಾರೆ. ರಾಜಕೀಯವಾಗಿ ಹೊಸಪೇಟೆ ತಾಲೂಕನ್ನು ನೋಡುವುದಾದರೆ ತಾಲೂಕು ತನ್ನದೇ ಆದ ವಿಧಾನ ಸಭಾ ಕ್ಷೇತ್ರವನ್ನು ಹೊಂದಿದೆ. ಈ ತಾಲೂಕು ಬಳ್ಳಾರಿ ಜಿಲ್ಲೆಗೆ ಸೇರಿದ್ದರೂ ಸಹ ಕೊಪ್ಪಳ ಲೋಕಸಭಾ ಕ್ಷೇತ್ರಕ್ಕೆ ಸೇರಿದೆ. ಹೊಸಪೇಟೆಯ ನಗರಾಭಿವೃದ್ಧಿ ಪ್ರಾಧಿಕಾರ ಮತ್ತು ಸಿಟಿ ಮುನ್ಸಿಪಲ್ ಕೌನ್ಸಿಲ್‌ನ್ನು ಹೊಂದಿದೆ. ಆಡಳಿತರೂಢ ಕಾಂಗ್ರೇಸ್ ಪಕ್ಷ ಆಡಳಿತವನ್ನು ನಡೆಸುತ್ತಿವೆ. ತಾಲೂಕಿನಲ್ಲಿ ಒಟ್ಟು ಗ್ರಾಮ ಪಂಚಾಯತಿಯ ಸದಸ್ಯರು 323 ಇದ್ದಾರೆ. ಇದರಲ್ಲಿ 193(59.75)ರಷ್ಟು ಪುರಷರು, 136 (40.25)ರಷ್ಟು ಮಹಿಳೆಯರು ಇದ್ದಾರೆ. ಜಾತಿವಾರು ಹಂಚಿಕೆಯನ್ನು ನೋಡಿದಾಗ ಪರಿಶಿಷ್ಟ ಜಾತಿ 83(25.69), ಪರಿಶಿಷ್ಟ ಪಂಗಡ 56(17.34), ಹಿಂದುಳಿದ ವರ್ಗ 104(32.20) ಮತ್ತು ಸಾಮಾನ್ಯವರ್ಗ 102(31.59)ರಷ್ಟು ಪ್ರಾತಿನಿಧ್ಯವನ್ನು ಹೊಂದಿದ್ದಾರೆ.[28] ಗ್ರಾಮಪಂಚಾಯತಿ ಮಹಿಳಾ ಪ್ರಾತಿನಿಧ್ಯದಲ್ಲಿ ಮೀಸಲಾತಿ ಮೀರಿ ಪ್ರತಿನಿಧಿಕರಣ ಗೊಂಡಿದ್ದಾರೆ. ತಾಲೂಕಿನಲ್ಲಿ ಎರಡು ಗ್ರಾಮ ಪಂಚಾಯತಿಗಳನ್ನು ಆಯ್ಕೆ ಮಾಡಿಕೊಳ್ಳಲಾಗಿದ್ದು, ಆಯ್ಕೆಯ ವಿವರ, ಗ್ರಾಮ ಪಂಚಾಯತಿಗಳ ವಿವರ ಮುಂತಾದವುಗಳನ್ನು ಈ ಮುಂದೆ ಚರ್ಚಿಸಲಾಗಿದೆ.

**ಕೂಡ್ಲಿಗಿ ತಾಲೂಕು**

ಕೂಡ್ಲಿಗಿಯು ಜಿಲ್ಲೆಯಿಂದ ಪಶ್ಚಿಮಕ್ಕೆ 80ಕಿ.ಮೀ ದೂರದಲ್ಲಿದೆ. ಬಳ್ಳಾರಿ ಜಿಲ್ಲೆಯಲ್ಲಿ ಕೂಡ್ಲಿಗಿಯು ಹಿಂದುಳಿದ ತಾಲೂಕುಗಳಲ್ಲಿ ಒಂದಾಗಿದೆ. ಹೊಸಪೇಟೆ ಉಪವಿಭಾಗಕ್ಕೆ ಸೇರಿದ ಈ ತಾಲೂಕು ಎರಡು ವಿಧಾನಸಭಾ ಕ್ಷೇತ್ರಗಳನ್ನು ಹೊಂದಿದೆ. ಅವುಗಳಲ್ಲಿ ಕೂಡ್ಲಿಗಿ ಮತ್ತು ಕೊಟ್ಟೂರು. ಜಿಲ್ಲೆಯ ಇನ್ನೊಂದು ತಾಲೂಕಾದ ಹಗರಿಬೊಮ್ಮನಹಳ್ಳಿ ಕೂಡ್ಲಿಗಿ ವಿಧಾನಸಭಾ ಕ್ಷೇತ್ರಕ್ಕೆ ಸೇರಿದೆ. ತಾಲೂಕು ಒಟ್ಟು 98 ಗ್ರಾಮಗಳನ್ನು ಹೊಂದಿದ್ದು, ಒಟ್ಟು 33 ಗ್ರಾಮ ಪಂಚಾಯತಿಗಳನ್ನು, ನಾಲ್ಕು ಹೋಬಳಿಗಳನ್ನು ಹೊಂದಿದೆ. ಈ ತಾಲೂಕು ಪೂರ್ತಿ ಒಣಭೂಮಿ ಪ್ರದೇಶವನ್ನು ಒಳಗೊಂಡಿದೆ. ಶೇ 80ಕ್ಕೂ ಹೆಚ್ಚು ಜನರು ಕೃಷಿಯನ್ನು ಅವಲಂಬಿಸಿದ್ದಾರೆ. ಇನ್ನೂ ಕೃಷಿಯೇತರ ಚಟುವಟಿಕೆಗಳಾದ ಹೈನುಗಾರಿಕೆ, ಕುರಿಸಾಕಾಣಿಕೆ ಮತ್ತು ನೇಕಾರಿಕೆ ಕಸುಬುಗಳು ಪ್ರಾಚೀನ ಕಾಲದಿಂದಲೂ ಬೆಳೆದು ಬಂದಿವೆ. ಇದು ಕೃಷಿಯನ್ನು ಅವಲಂಬಿಸಿರುವ ರಾಜ್ಯದ 3ನೇ ತಾಲೂಕಾಗಿದೆ. ಮಳೆಯನ್ನೇ ನಂಬಿ ಕೃಷಿಯನ್ನು ಇಲ್ಲಿನ ಜನತೆ ಅವಲಂಬಿತರಾಗಿದ್ದಾರೆ. ತಾಲೂಕಿನಾದ್ಯಾಂತ ಅಧಿಕ ಕೆರೆಗಳಿದ್ದು ಇದರ ಮೂಲಕ ಸಹ ಕೃಷಿಯನ್ನು ಕೈಗೊಂಡಿದ್ದಾರೆ. ಕೆರೆಗಳು ಅಲ್ಪ ಸ್ವಲ್ಪ ನೀರಾವರಿ ಕೃಷಿಗೆ ಅನೂಕೂಲವಾಗಿದೆ. ತಾಲೂಕಿನ ಮುಖ್ಯ ಬೆಳೆಗಳೆಂದರೆ ಶೇಂಗಾ, ಹತ್ತಿ, ಜೋಳ ಮತ್ತು ತೊಗರಿ. ಇಡೀ ಜಿಲ್ಲೆಯಲ್ಲಿ ಹೆಚ್ಚು ಹುಣಸೆ ಮರಗಳನ್ನು ಹೊಂದಿದ ತಾಲೂಕಾಗಿದೆ. ಜಿಲ್ಲೆಯಲ್ಲಿ 33.661 ಹೆಕ್ಟೇರುಗಳಷ್ಟು ಅರಣ್ಯ ಪ್ರದೇಶವನ್ನು ಹೊಂದಿದ್ದು, ಜಿಲ್ಲೆಯಲ್ಲೆ ಮೊದಲ ಸ್ಥಾನದಲ್ಲಿದೆ.[29]

**ಜನಸಂಖ್ಯೆ, ಸಾಕ್ಷರತೆ ಇತ್ಯಾದಿ ವಿವರಗಳು**

2001ರ ಜನಗಣತಿಯ ಪ್ರಕಾರ ತಾಲೂಕಿನ ಜನಸಂಖ್ಯೆ 2,71,890ರಷ್ಟಿದ್ದು, ಇದರಲ್ಲಿ ಪುರುಷರು 139170 ಮತ್ತು ಮಹಿಳೆಯರು 132720 ಇದ್ದಾರೆ. ಜಿಲ್ಲೆಯಲ್ಲಿ ತಾಲೂಕಿನ ಪಾಲು ಶೇ 13.42ರಷ್ಟಿದೆ. ಜನಸಂಖ್ಯೆಯಲ್ಲಿ

ಕೂಡ್ಲಿಗಿ ಮೂರನೇ ಸ್ಥಾನದಲ್ಲಿದೆ.[30] ತಾಲೂಕಿನ ವಿಸ್ತೀರ್ಣ 1601.54ರಷ್ಟಿದೆ.[31] ಶೇ 18.96ರಷ್ಟು ಜಿಲ್ಲೆಯ ಒಟ್ಟು ವಿಸ್ತೀರ್ಣದಲ್ಲಿ ಇದರ ಪ್ರಮಾಣವಾಗಿದೆ. ಜಿಲ್ಲೆಯಲ್ಲಿ ಬಳ್ಳಾರಿ ತಾಲೂಕನ್ನು ಬಿಟ್ಟರೆ ಅತಿ ದೊಡ್ಡ ತಾಲೂಕು ಇದಾಗಿದೆ. ಜಾತಿವಾರು ಜನಸಂಖ್ಯೆಯನ್ನು ನೋಡಿದಾಗ ಪರಿಶಿಷ್ಟ ಜಾತಿಯಲ್ಲಿ 44,049 ಇದ್ದು, ಇದರಲ್ಲಿ 22456 ಪುರಷರನ್ನು, 21,593 ಮಹಿಳೆಯರನ್ನು ಹೊಂದಿದೆ. ಒಟ್ಟು ಪರಿಶಿಷ್ಟ ಪಂಗಡ ಜನಸಂಖ್ಯೆ 53969 ಇದ್ದು, ಇದರಲ್ಲಿ 27097 ಪುರುಷರನ್ನು ಮತ್ತು 26872 ಮಹಿಳೆಯರನ್ನು ಹೊಂದಿದೆ (ಕೋಷ್ಟಕ-3).[32] ಈ ತಾಲೂಕು ಪರಿಶಿಷ್ಟಜಾತಿ/ಪಂಗಡ ಜನಸಂಖ್ಯೆಯ ಪ್ರಮಾಣ 94018(42.84)ರಷ್ಟು ಹೊಂದಿದ್ದು, ಜಿಲ್ಲೆಯಲ್ಲಿ ಅತಿಹೆಚ್ಚು ಪರಿಶಿಷ್ಟರನ್ನು ಹೊಂದಿದೆ. ಶೇ. 36.49ರಷ್ಟು ಪರಿಶಿಷ್ಟ ಪಂಗಡದವರನ್ನು ಹೊಂದಿದ್ದು, ಜಿಲ್ಲೆಯಲ್ಲಿ ಅತಿ ಹೆಚ್ಚು ಪರಿಶಿಷ್ಟ ಪಂಗಡ ಜನಸಂಖ್ಯೆಯನ್ನು ಹೊಂದಿದ ತಾಲೂಕು ಇದಾಗಿದೆ. ಅಧ್ಯಯನದ ಆಯ್ಕೆಗೆ ಈ ಅಂಶವು ಸಹ ಒಂದು ಕಾರಣವಾಗಿದೆ. ಸಾಕ್ಷರರ ಸಂಖ್ಯೆ ತಾಲೂಕಿನಲ್ಲಿ 138864 ಇದ್ದು, ಜಿಲ್ಲೆಯಲ್ಲಿ ನಾಲ್ಕನೇ ಸ್ಥಾನದಲ್ಲಿದೆ.[33] ಜಿಲ್ಲೆಗಿಂತ ಶೇ 2.3ರಷ್ಟು ಹೆಚ್ಚು ಇದ್ದು ಸಾಕ್ಷರತೆಯ ದೃಷ್ಟಿಯಿಂದ ಜಿಲ್ಲೆಗಿಂತ ಉತ್ತಮ ಸ್ಥಿತಿಯಲ್ಲಿದೆ. ಒಣಭೂಮಿ ಪ್ರದೇಶವಾದರೂ, ಈ ಸಾಕ್ಷರತೆ ಪ್ರಮಾಣ ಹೆಚ್ಚಿದೆ. 24 ತಾಲೂಕು ಒಟ್ಟು 36804 ಕುಟುಂಬಗಳನ್ನು ಹೊಂದಿದ್ದು, ಜಿಲ್ಲೆಯಲ್ಲಿ ತಾಲೂಕಿನ ಪಾಲು ಶೇ.12ರಷ್ಟಿದೆ. ಹಾಗಾಗಿ ಇದು ಜಿಲ್ಲೆಯಲ್ಲಿನ ತಾಲೂಕಿನಲ್ಲಿ ಮೂರನೇಯ ಸ್ಥಾನವನ್ನು ಹೊಂದಿದೆ. ಈ ತಾಲೂಕಿನಲ್ಲಿ ಲಿಂಗಾಯತರು, ವಾಲ್ಮೀಕಿ, ಕುರುಬ, ಮಾದಿಗರು, ಅಗಸರು ಮತ್ತು ನೇಕಾರ ಈ ಪ್ರಮುಖ ಜಾತಿಗಳನ್ನೊಳಗೊಂಡಿದೆ. ರಾಜಕೀಯವಾಗಿ ಕೂಡ್ಲಿಗಿಯು ತನ್ನದೇ ಆದ ವಿಧಾನ ಸಭಾ ಕ್ಷೇತ್ರವನ್ನು ಒಳಗೊಂಡಿದೆ. ಈ ವಿಧಾನಸಭಾ ಕ್ಷೇತ್ರ ಹಗರಿ ಬೊಮ್ಮನಹಳ್ಳಿ ಸಂಪೂರ್ಣ ತಾಲೂಕು, ಹಡಗಲಿ ತಾಲೂಕಿನ ಕೆಲವು ಗ್ರಾಮಗಳನ್ನು ಮತ್ತು ಹೊಸಪೇಟೆ ತಾಲೂಕಿನ ಕೆಲವು ಗ್ರಾಮಗಳನ್ನು ಒಳಗೊಂಡಿದೆ. ತಾಲೂಕು ಪಟ್ಟಣ ಪಂಚಾಯತಿಯನ್ನು ಹೊಂದಿದೆ. ಈ ತಾಲೂಕಿಗೆ ಸೇರಿದ ಕೊಟ್ಟೂರು ತನ್ನದೇ ಆದ ವಿಧಾನಸಭಾ ಕ್ಷೇತ್ರವನ್ನು ಹೊಂದಿದೆ.

ಕೂಡ್ಲಿಗಿ ತಾಲೂಕು ಒಟ್ಟು 33 ಗ್ರಾಮಪಂಚಾಯತಿಗಳನ್ನು ಹೊಂದಿದ್ದು, ಜಿಲ್ಲೆಯಲ್ಲಿ ಹೆಚ್ಚು ಗ್ರಾಮ ಪಂಚಾಯತಿಗಳನ್ನು ಹೊಂದಿದ ಎರಡನೇ ತಾಲೂಕಾಗಿದೆ. ಒಟ್ಟು ಗ್ರಾಮ ಪಂಚಾಯತಿಯ ಸದಸ್ಯರು 475 ಇದ್ದು, ಇದರಲ್ಲಿ 274(57.68) ಪುರುಷರು, 201 (42.32)ಮಹಿಳಾ ಸದಸ್ಯರು ಇದ್ದಾರೆ. ಜಾತಿವಾರು ಪ್ರಾತಿನಿಧ್ಯವನ್ನು ನೋಡಿದಾಗ ಪರಿಶಿಷ್ಟ ಜಾತಿ 104(21.89), ಪರಿಶಿಷ್ಟ ಪಂಗಡ 127(26.74), ಹಿಂದುಳಿದವರ್ಗ 150(31.59) ಮತ್ತು ಸಾಮಾನ್ಯವರ್ಗ 94(19.75) ಸದಸ್ಯರು ಪ್ರತಿನಿಧಿಕರಣ ಗೊಂಡಿದ್ದಾರೆ.[34] ಮೀಸಲಾತಿಯನ್ನು ಮೀರಿ ಮಹಿಳೆಯರು ಮತ್ತು ಪರಿಶಿಷ್ಟ ಪಂಗಡದವರು ಹೆಚ್ಚು ಆಯ್ಕೆಗೊಂಡಿದ್ದಾರೆ. 1999ರ ಗ್ರಾಮ ಪಂಚಾಯತಿ ಚುನಾವಣೆಗಳಲ್ಲಿ ಕೂಡ್ಲಿಗಿ ತಾಲೂಕಿನ ಒಟ್ಟು 475 ಗ್ರಾಮ ಪಂಚಾಯತಿ ಸದಸ್ಯರಲ್ಲಿ ಚುನಾವಣೆಯ ಮೂಲಕ 367(77.26) ಆಯ್ಕೆಗೊಂಡಿದ್ದು, ಉಳಿದ 108(2273) ಸದಸ್ಯರು ಅವಿರೋಧವಾಗಿ ಆಯ್ಕೆಗೊಂಡಿದ್ದಾರೆ.[35] ತಾಲೂಕಿನ 33 ಗ್ರಾಮ ಪಂಚಾಯತಿಗಳಲ್ಲಿ ಅಧ್ಯಯನಕ್ಕೆ ಎರಡು ಗ್ರಾಮ ಪಂಚಾಯತಿಗಳನ್ನು ಆಯ್ಕೆ ಮಾಡಿಕೊಳ್ಳಲಾಗಿದೆ. ಈ ಗ್ರಾಮ ಪಂಚಾಯತಿಗಳ ವಿವರವನ್ನು ಮುಂದೆ ವಿವರಿಸಲಾಗಿದೆ.

## 2.5 ಅಧ್ಯಯನಕ್ಕೊಳಪಡಿಸಿದ ಗ್ರಾಮಪಂಚಾಯತಿಗಳ ಆಯ್ಕೆ ಮತ್ತು ವಿವರಣೆ

ಹೊಸಪೇಟೆ ತಾಲೂಕು ಜಿಲ್ಲೆಯಲ್ಲಿ ಅತಿ ಹೆಚ್ಚು ನೀರಾವರಿ ಪ್ರದೇಶವನ್ನು ಹೊಂದಿದ್ದು, ಜಿಲ್ಲೆಯ ಅಭಿವೃದ್ಧಿ ತಾಲೂಕುಗಳಲ್ಲಿ ಒಂದಾಗಿದೆ. ಕೂಡ್ಲಿಗಿ ತಾಲೂಕು ಜಿಲ್ಲೆಯಲ್ಲಿ ಅತಿ ಹೆಚ್ಚು ಒಣಭೂಮಿ ಪ್ರದೇಶವನ್ನು ಹೊಂದಿದ್ದು, ಜಿಲ್ಲೆಯ ಹಿಂದುಳಿದ ತಾಲೂಕುಗಳಲ್ಲಿ ಒಂದಾಗಿದೆ. ಹಾಗಾಗಿ ಜಿಲ್ಲೆಯ ನೀರಾವರಿ ಮತ್ತು ಒಣಭೂಮಿ ಪ್ರದೇಶವೆಂದು ವಿಂಗಡಿಸಿ ಅಧ್ಯಯನಕ್ಕೆ ಎರಡು ತಾಲೂಕುಗಳನ್ನು ಆರಿಸಿಕೊಳ್ಳಲಾಗಿದೆ. ಇದೇ ಮಾದರಿಯಲ್ಲಿ ಪ್ರತಿ ತಾಲೂಕಿನಲ್ಲಿ ಎರಡು ಗ್ರಾಮಪಂಚಾಯತಿಗಳನ್ನು ಆಯ್ದುಕೊಳ್ಳಲಾಗಿದೆ. ಹೊಸಪೇಟೆ ತಾಲೂಕು 23 ಗ್ರಾಮ ಪಂಚಾಯತಿಗಳನ್ನು ಹೊಂದಿದ್ದು, ಇದರಲ್ಲಿ ತಾಲೂಕಿಗೆ ಹತ್ತಿರವಿರುವ ನೀರಾವರಿ ಪ್ರದೇಶವಾದ ನಾಗೇನಹಳ್ಳಿ ಗ್ರಾಮಪಂಚಾಯತಿ ಮತ್ತು ತಾಲೂಕಿಗೆ ದೂರವಿರುವ ಒಣಭೂಮಿ ಪ್ರದೇಶವಾದ ಬೈಲುವದ್ದಿಗೆರೆ ಗ್ರಾಮಪಂಚಾಯತಿ ಯನ್ನು ಅಧ್ಯಯನಕ್ಕೆ ಆಯ್ಕೆ ಮಾಡಿಕೊಳ್ಳಲಾಗಿದೆ. ಕೂಡ್ಲಿಗಿ ತಾಲೂಕು 33 ಗ್ರಾಮ ಪಂಚಾಯತಿ ಗಳನ್ನು ಹೊಂದಿದ್ದು, ಈ ತಾಲೂಕು ಸಂಪೂರ್ಣ ಒಣಭೂಮಿ ಪ್ರದೇಶವಾಗಿದೆ. ಆದಕಾರಣ ಹೆಚ್ಚು ಕೆರೆ ನೀರು ಮತ್ತು ಪಂಪ್‌ಸೆಟ್ ಹೊಂದಿರುವ ಹಿರೇಹೆಗ್ಡಾಳ್ ಪಂಚಾಯತಿ ಪ್ರದೇಶವನ್ನು ನೀರಾವರಿ ಎಂದು ಪರಿಗಣಿಸಿದ್ದು, ಇದು ತಾಲೂಕಿಗೆ ಹತ್ತಿರವಿರುವ ಪ್ರದೇಶವಾಗಿದ್ದರಿಂದ ಹಿರೇಹೆಗ್ಡಾಳ್ ಗ್ರಾಮಪಂಚಾಯತಿಯನ್ನು ಮತ್ತು ತಾಲೂಕಿಗೆ ದೂರವಿರುವ ಒಣಭೂಮಿ ಪ್ರದೇಶ ಉಜ್ಜನಿ ಗ್ರಾಮಪಂಚಾಯತಿಯನ್ನು ಆಯ್ಕೆ ಮಾಡಿಕೊಳ್ಳಲಾಗಿದೆ. ಅಧ್ಯಯನಕ್ಕೆ ಆಯ್ಕೆ ಮಾಡಿಕೊಂಡ ನಾಲ್ಕು ಗ್ರಾಮಪಂಚಾಯತಿಗಳು ಬೇರೆ ಬೇರೆ ಅಂಶಗಳಿಂದ ಭಿನ್ನವಾಗಿವೆ. ಆದ್ದರಿಂದ ಇದೊಂದು ಸ್ಪಷ್ಟವಾದ ತುಲನಾತ್ಮಕವಾದ ಅಧ್ಯಯನವಾಗಿದೆ.

ಈ ಅಧ್ಯಯನವು ಸೂಕ್ಷ್ಮ(micro) ಅಧ್ಯಯನವಾಗಿರುವುದರಿಂದ ಅಧ್ಯಯನವನ್ನು ನಾಲ್ಕು ಗ್ರಾಮ ಪಂಚಾಯತಿಗಳಿಗೆ ಸೀಮಿತಗೊಳಿಸಲಾಗಿದೆ. ತಾಲೂಕು ಆಯ್ಕೆಯನ್ನು ಅನುಸರಿಸಿದ ಕ್ರಮವನ್ನು ಗ್ರಾಮ ಪಂಚಾಯತಿಗಳ ಆಯ್ಕೆಯಲ್ಲಿ ಅದೇ ಕ್ರಮವನ್ನು ಅನುಸರಿಸಲಾಗಿದೆ. ಅಧ್ಯಯನಕ್ಕೆ ಮಾಡಿಕೊಂಡ ಗ್ರಾಮ ಪಂಚಾಯತಿಗಳಾದ ನಾಗೇನಹಳ್ಳಿ, ಬೈಲುವದ್ದಿಗೆರೆ, ಹಿರೇಹೆಗ್ಡಾಳ್ ಮತ್ತು ಉಜ್ಜನಿ ಪಂಚಾಯತಿಗಳ ವಿವರಣೆಯನ್ನು ಮುಂದೆ ಚರ್ಚಿಸಲಾಗಿದೆ

### ನಾಗೇನಹಳ್ಳಿ ಗ್ರಾಮಪಂಚಾಯತಿ

ನಾಗೇನಹಳ್ಳಿ ಗ್ರಾಮವು ಹೊಸಪೇಟೆಗೆ ಕೇವಲ 3ಕಿ.ಮೀ ದೂರದಲ್ಲಿದೆ. ಹೊಸಪೇಟೆ ಮತ್ತು ನಾಗೇನಹಳ್ಳಿ ಮಧ್ಯ ತುಂಗಭದ್ರಾ ಕಾಲುವೆ ಮತ್ತು ರೈಲು ಮಾರ್ಗಗಳು ಬೇರ್ಪಡಿಸಿವೆ. ನಗರಕ್ಕೆ ಹತ್ತಿರವಾಗಿದ್ದರೂ ನಗರಸಭೆಗೆ ಸೇರದೆ ಗ್ರಾಮಪಂಚಾಯತಿ ಆಡಳಿತಕ್ಕೆ ಒಳಪಟ್ಟಿದೆ. ನಾಗೇನಹಳ್ಳಿ ಮತ್ತು ಈ ಪಂಚಾಯತಿ ವ್ಯಾಪ್ತಿಗೆ ಸೇರಿದ ಗ್ರಾಮಗಳು ತುಂಗಭದ್ರಾ ನದಿ ನೀರಿನಿಂದ ಸಂಪೂರ್ಣ ನೀರಾವರಿ ಪ್ರದೇಶವಾಗಿವೆ. ಈ ಪ್ರದೇಶದ ಜನತೆ 90ಕ್ಕೂ ಹೆಚ್ಚು ಕೃಷಿಯನ್ನು ಅವಲಂಬಿಸಿದ್ದಾರೆ.

## ಜನಸಂಖ್ಯೆ, ಜಾತಿ ಮತ್ತು ಕುಟುಂಬ ಇತ್ಯಾದಿ ವಿವರಗಳು

ನಾಗೇನಹಳ್ಳಿ ಪಂಚಾಯತಿಯು ಆರು ಕಂದಾಯ ಗ್ರಾಮಗಳನ್ನು ಹೊಂದಿದೆ. ಈ ಗ್ರಾಮಗಳು ಪಂಚಾಯತಿ ಪ್ರದೇಶಕ್ಕೆ ತುಂಬಾ ಹತ್ತಿರದಲ್ಲಿವೆ. ನಾಗೇನಹಳ್ಳಿ, ಬಸವನದುರ್ಗ, ಬೆನಕಾಪುರ, ಬೆಳಗೊಡು, ಕಳ್ಳಿರಾಂಪುರ ಮತ್ತು ಕಾಲಘಟ್ಟ ಇವು ಪಂಚಾಯತಿ ವ್ಯಾಪ್ತಿಯ ಗ್ರಾಮಗಳಾಗಿವೆ. ಈ ಗ್ರಾಮಗಳಲ್ಲಿ ನಾಗೇನಹಳ್ಳಿ ಮತ್ತು ಬಸವನದುರ್ಗ ದೊಡ್ಡ ಗ್ರಾಮಗಳಾಗಿವೆ.[36] ಪಂಚಾಯತಿ ಬೇಡಿಕೆ ರಿಜಿಸ್ಟರ್ ಪ್ರಕಾರ ಗ್ರಾಮ ಪಂಚಾಯತಿಯ ವ್ಯಾಪ್ತಿಯಲ್ಲಿ ಒಟ್ಟು 982 ಕುಟುಂಬಗಳಿವೆ. ಇದರಲ್ಲಿ ನಾಗೇನಹಳ್ಳಿ 516, ಬಸವನದುರ್ಗ 311, ಬೆನಕಾಪುರ 96, ಕಾಳಘಟ್ಟ 30, ಬೆಳಗೊಡು 13 ಮತ್ತು ಕಳ್ಳಿರಾಂಪುರ 16 ಕುಟುಂಬಗಳನ್ನು ಹೊಂದಿವೆ.[37] ಅತಿ ಹೆಚ್ಚು ಕುಟುಂಬಗಳನ್ನು ನಾಗೇನಹಳ್ಳಿ ಹೊಂದಿದ್ದರೆ, ಬೆಳಗೊಡು ಅತಿ ಕಡಿಮೆ ಕುಟುಂಬಗಳನ್ನು ಹೊಂದಿರುವ ಗ್ರಾಮಗಳಾಗಿವೆ. ಬೆಳಗೊಡು ಮತ್ತು ಕಳ್ಳಿರಾಂಪುರದಲ್ಲಿ ಕಡಿಮೆ ಜನವಸತಿ ಕುಟುಂಬಗಳನ್ನು ಹೊಂದಿದ್ದರೂ ಸಹ ಕಂದಾಯ ಗ್ರಾಮಗಳಾಗಿವೆ. ಈ ಕುಟುಂಬಗಳು ಮೂಲತಃ ಹೊಸಪೇಟೆಯವರಾಗಿದ್ದಾರೆ. ಈ ಎರಡು ಗ್ರಾಮಗಳು ಗದ್ದೆಗಳಿಂದ ಆವೃತವಾಗಿವೆ. ಕುಟುಂಬಗಳನ್ನು ಜಾತಿವಾರು ನೋಡಿದಾಗ, 195(19.85)ರಷ್ಟು ಮುಸ್ಲಿಂ, 162(16.49)ರಷ್ಟು ಮಾದಿಗರು, 147(14.96)ರಷ್ಟು ನಾಯಕ,140(14.26)ರಷ್ಟು ವೀರಶೈವರು, ತಮಿಳು ಬೋವಿ ಮತ್ತು ಲಂಬಾಣಿಗಳು ತಲಾ 44(40.42) ಕುಟುಂಬಗಳಿವೆ (ಕೋಷ್ಟಕ- 28).[38] ಇನ್ನೂ ಉಳಿದ ಸಣ್ಣಪುಟ್ಟ ಜಾತಿಯ ಕುಟುಂಬಗಳೆಂದರೇ ಬಾರಿಕರು, ಅಗಸರು ಮತ್ತು ಕ್ಷೌರಿಕರಿದ್ದಾರೆ. ಪಂಚಾಯತಿ ಪ್ರದೇಶದಲ್ಲಿ ಬಹುಸಂಖ್ಯಾತರೆಂದರೆ ಮುಸ್ಲಿಂರು ಮತ್ತು ಪರಿಶಿಷ್ಟರಾಗಿದ್ದಾರೆ. ಅಧಿಕ ಸಂಖ್ಯೆಯಲ್ಲಿ ಮುಸ್ಲಿಂರಿದ್ದರೂ ಚಾರಿತ್ರಿಕವಾಗಿ ಮತ್ತು ರಾಜಕೀಯವಾಗಿ ಅಂಥಹ ಪ್ರಭಾವ ಬೀರಿಲ್ಲ. ಜಾತಿಯ ಲೆಕ್ಕಚಾರದಲ್ಲಿ ಬಹುಸಂಖ್ಯಾತರಾಗಿರುವ ಕೆಳಜಾತಿಗಳು ಅಲ್ಪಸ್ವಲ್ಪ ಭೂಮಿಯನ್ನು ಹೊಂದಿದ್ದು, ಆರ್ಥಿಕವಾಗಿ ಮಧ್ಯಮ ಸ್ಥಿತಿಯಲ್ಲಿದ್ದಾರೆ. ಲಿಂಗಾಯತರೆ ಅಧಿಕ ಭೂಹಿಡುವಳಿಯನ್ನು ಹೊಂದಿದ್ದಾರೆ. ಇವರು ಆರ್ಥಿಕವಾಗಿ ಸಬಲರಾಗಿದ್ದಾರೆ. ಇಲ್ಲಿರುವ ತಮಿಳು ಬೋವಿಗಳು ತುಂಗಭದ್ರಾ ಜಲಾಶಯ ಕಟ್ಟಡ ಕೆಲಸಕ್ಕೆ ವಲಸೆ ಬಂದು, ಖಾಯಾಂಗಿ ಇಲ್ಲಿ ನೆಲೆಯೂರಿದ್ದಾರೆ. ಹೆಚ್ಚು ಕುಟುಂಬಗಳು ಬಸವನದುರ್ಗ ಗ್ರಾಮದಲ್ಲಿವೆ. ಹೆಚ್ಚು ಕುಟುಂಬಗಳು ಗುಡಿಸಲುಗಳಲ್ಲಿ ವಾಸವಾಗಿದ್ದು, ಇವರ ಪ್ರಧಾನ ಕಸಬು ಕೃಷಿಯಾಗಿದೆ. ಈಗ ಒಟ್ಟಾರೆ ಜಾತಿವಾರು ವಿವರಗಳನ್ನು ನೋಡಿದಾಗ,ಪಂಚಾಯತಿ ವ್ಯಾಪ್ತಿಯಲ್ಲಿ ಹೆಚ್ಚು ಕೆಳಜಾತಿ/ವರ್ಗಗಳಿದ್ದಾವೆ. ಆರ್ಥಿಕವಾಗಿ ಈ ಜಾತಿಗಳು ಕೆಳ ತುದಿಯಲ್ಲಿದ್ದರೆ, ಲಿಂಗಾಯತರು ಮೇಲ್ ತುದಿಯಲ್ಲಿದ್ದಾರೆ. ಪಂಚಾಯತಿಯ ಪ್ರಮುಖ ಸಮುದಾಯಗಳೆಂದರೆ ಮುಸ್ಲಿಂರು, ಮಾದಿಗರು ಮತ್ತು ನಾಯಕರಾಗಿದ್ದಾರೆ.

ಒಟ್ಟು ಪಂಚಾಯತಿಯ 982 ಕುಟುಂಬಗಳಲ್ಲಿ ಬಡತನ ರೇಖೆಗಿಂತ ಕೆಳಗಿರುವ ಕುಟುಂಬಗಳ ವಿವರವನ್ನು ನೋಡಿದಾಗ, 431(43.89) ಪರಿಶಿಷ್ಟ ಜಾತಿಯಲ್ಲಿ 157(36.43), ಪರಿಶಿಷ್ಟ ಪಂಗಡ 86(19.55), ಹಿಂದುಳಿದ ವರ್ಗ 158(36.66) ಮತ್ತು ಸಾಮಾನ್ಯವರ್ಗ 30(6.96) ರಷ್ಟು ಕುಟುಂಬಗಳು ಬಡತನ ರೇಖೆಗಿಂತ ಕೆಳಗಿದ್ದಾರೆ.[39] ಈ ಅಂಕಿ-ಅಂಶಗಳನ್ನು ನೋಡಿದಾಗ ಹೆಚ್ಚು ಬಡವರು ಮಾದಿಗರು ಮತ್ತು ಹಿಂದುಳಿದ ವರ್ಗದವರಾಗಿದ್ದಾರೆ. ಹಿಂದುಳಿದ ವರ್ಗದಲ್ಲಿ ಮುಸ್ಲಿಂರು ಸಹ ಸೇರಿದ್ದಾರೆ. ಅತಿ ಕಡಿಮೆ ಬಡವರು ಇತರೇ ಸಾಮಾನ್ಯ ವರ್ಗದಲ್ಲಿ ಇದ್ದಾರೆ(ಕೋಷ್ಟಕ-15).

1991ರ ಜನಗಣತಿಯ ಪ್ರಕಾರ ಗ್ರಾಮ ಪಂಚಾಯತಿ ಒಟ್ಟು ಜನಸಂಖ್ಯೆ 5093 ಇದ್ದು, ಪುರುಷರು 2593(50.91) ಮತ್ತು ಮಹಿಳೆಯರು 2500(49.09) ರಷ್ಟಿದ್ದಾರೆ. ಅದರಲ್ಲಿ ಪರಿಶಿಷ್ಟ ಜಾತಿ 1594 ಮತ್ತು ಪರಿಶಿಷ್ಟ ಪಂಗಡ 931ರಷ್ಟಿದ್ದು, ಒಟ್ಟು ಪರಿಶಿಷ್ಟರು 2525 ಇದ್ದಾರೆ. ಗ್ರಾಮಪಂಚಾಯತಿಯ ಒಟ್ಟು 1661(32.61)ಸಾಕ್ಷರರನ್ನು ಹೊಂದಿದ್ದು, ಇದರಲ್ಲಿ 1155(44.54)ರಷ್ಟು ಪುರುಷರು, 506(20.24)ರಷ್ಟು ಮಹಿಳಾ ಸಾಕ್ಷರರಿದ್ದಾರೆ(ಕೋಷ್ಟಕ-4 ಮತ್ತು 5).[40] ಈ ಪ್ರಮಾಣವನ್ನು ತಾಲೂಕಿಗೆ ಹೋಲಿಸಿ ನೋಡಿದರೆ ತಾಲೂಕು ಶೇ 17.28 ರಷ್ಟು ಕಡಿಮೆಯಿದೆ. ಈ ಪಂಚಾಯತಿಯ ಪ್ರದೇಶದಲ್ಲಿ, ಕೆಳಜಾತಿಗಳು, ಮುಸ್ಲಿಂರೇ ಹೆಚ್ಚು ಇರುವುದೇ ಕಾರಣವಾಗಿರಬಹುದು. ಇಲ್ಲಿ ಈ ವರ್ಗಗಳು ಆರ್ಥಿಕವಾಗಿ ಸಬಲರಾಗಿಲ್ಲ. ಇವರು ಮೂಲತಃ ಕೃಷಿಯನ್ನೇ ಅವಲಂಬಿಸಿದ್ದಾರೆ. ಸಾಕ್ಷರತೆಯಲ್ಲಿ ಹಿಂದುಳಿದಿರುವಿಕೆಗೆ ಈ ಅಂಶಗಳು ಸಹ ಕಾರಣವಾಗಿರಬಹುದು. ಇದು ನೀರಾವರಿ ಪ್ರದೇಶವಾಗಿದ್ದರೂ ಸಹ ಸಾಕ್ಷರರ ಪ್ರಮಾಣ ಕಡಿಮೆ ಇದೆ ಎಂದು ಹೇಳಬಹುದು. ಒಟ್ಟು ಗ್ರಾಮಪಂಚಾಯತಿಯು ವಿಸ್ತೀರ್ಣ 3090.68 ಹೆಕ್ಟೇರ್‌ಗಳಷ್ಟು ವಿಸ್ತೀರ್ಣವನ್ನು ಹೊಂದಿದೆ.[41] ನಾಗೇನಹಳ್ಳಿ ಪಂಚಾಯತಿಯ ಈ ಎಲ್ಲಾ ವಿವರಗಳನ್ನು ನೋಡಿದಾಗ, ಈ ಪಂಚಾಯತಿಯು ಹೊಸಪೇಟೆ ನಗರಕ್ಕೆ ಹತ್ತಿರವಾಗಿದ್ದು. ಪೂರ್ತಿ ನೀರಾವರಿ ಪ್ರದೇಶವನ್ನು ಹೊಂದಿದೆ. ಇಲ್ಲಿ ಹೆಚ್ಚು ಕೆಳಜಾತಿಗಳು ಇವೆ. ಆರ್ಥಿಕ ಅಂಶಗಳ ಪ್ರಕಾರ ಈ ಪ್ರದೇಶ ಅಭಿವೃದ್ಧಿ ಎಂದು ಗುರುತಿಸಿ, ನಾಗೇನಹಳ್ಳಿ ಗ್ರಾಮ ಪಂಚಾಯತಿಯನ್ನು ಆಯ್ಕೆ ಮಾಡಿಕೊಳ್ಳಲಾಗಿದೆ. ಈ ಪಂಚಾಯತಿಯಲ್ಲಿ ಕಾಂಗ್ರೆಸ್ ಪಕ್ಷ ಆಡಳಿತದಲ್ಲಿದೆ. ಇದೊಂದು ಅಂಶವು ಸಹ ಅಧ್ಯಯನಕ್ಕೆ ಸಹಕಾರಿಯಾಗಿದೆ ಎಂದು ನಂಬಲಾಗಿದೆ.

## ಬೈಲುವದ್ದಿಗೆರೆ ಗ್ರಾಮಪಂಚಾಯತಿ

ಹೊಸಪೇಟೆಯಿಂದ ಬಳ್ಳಾರಿಗೆ ಹೋಗುವ ಮಾರ್ಗದಲ್ಲಿ ಬರುವ ಬೈಲುವದ್ದಿಗೆರೆ ಹೊಸಪೇಟೆಯಿಂದ ಸುಮಾರು 15ಕಿ.ಮೀ. ದೂರದಲ್ಲಿದೆ. ಬೈಲುವದ್ದಿಗೆರೆ ಮತ್ತು ಇದರ ವ್ಯಾಪ್ತಿಗೆ ಸೇರಿದ ಗ್ರಾಮಗಳು ಸಂಪೂರ್ಣ ಒಣಭೂಮಿ ಪ್ರದೇಶಗಳಾಗಿವೆ. ಈ ಗ್ರಾಮಗಳು ಪಂಪ್‌ಸೆಟ್ ಮೂಲಕ ತಕ್ಕಮಟ್ಟಿನ ನೀರಾವರಿ ಪ್ರದೇಶವನ್ನು ಇಲ್ಲಿಯ ಜನತೆ ಹೊಂದಿದ್ದಾರೆ. ಮಳೆಯನ್ನೆ ನಂಬಿದ ಇಲ್ಲಿಯ ಜನತೆಯ ಪ್ರಧಾನ ಕಸಬು ಕೃಷಿಯಾಗಿದೆ.

## ಕುಟುಂಬ, ಜನಸಂಖ್ಯೆ ಮತ್ತು ಜಾತಿ ಇತ್ಯಾದಿ ವಿವರಗಳು

ಬೈಲುವದ್ದಿಗೆರೆ ಗ್ರಾಮಪಂಚಾಯತಿಯಲ್ಲಿ ಬೈಲುವದ್ದಿಗೆರೆ, ಕಾಕಬಾಳು, ಧರ್ಮಸಾಗರ ಮತ್ತು ಗುಂಡ್ಲುವದ್ದಿಗೆರೆ ನಾಲ್ಕು ಗ್ರಾಮಗಳನ್ನು ಇವೆಲ್ಲಾ ಕಂದಾಯ ಗ್ರಾಮಗಳಾಗಿವೆ. ಪಂಚಾಯತಿ ವ್ಯಾಪ್ತಿಯ ದೊಡ್ಡ ಗ್ರಾಮಗಳೆಂದರೆ ಬೈಲುವದ್ದಿಗೆರೆ ಮತ್ತು ಕಾಕಬಾಳು. ಒಟ್ಟು ಪಂಚಾಯತಿಯು 1312 ಕುಟುಂಬಗಳನ್ನು ಹೊಂದಿದ್ದು, ಇದರಲ್ಲಿ ಬೈಲುವದ್ದಿಗೆರೆ 400, ಕಾಕಬಾಳು 416, ಧರ್ಮಸಾಗರ 331, ಮತ್ತು ಗುಂಡ್ಲವದ್ದಿಗೆರೆ 120ರಷ್ಟು ಕುಟುಂಬಗಳನ್ನು ಹೊಂದಿದೆ.[42] ಗ್ರಾಮಪಂಚಾಯತಿ ಪ್ರದೇಶದಲ್ಲಿ ಜಾತಿವಾರು ಕುಟುಂಬಗಳನ್ನು ನೋಡಿದಾಗ 544(41.46)ರಷ್ಟು ಕುಟುಂಬಗಳನ್ನು ಹೊಂದಿದ ಲಿಂಗಾಯತರು ಪಂಚಾಯತಿಯ ದೊಡ್ಡ ಸಮುದಾಯುವಾಗಿದೆ. ಗ್ರಾಮವಾರು ನೋಡಿದಾಗ ಬೈಲುವದ್ದಿಗೆರೆ, ಕಾಕಬಾಳು ಮತ್ತು ಧರ್ಮಸಾಗರದಲ್ಲಿ

ಲಿಂಗಾಯತರೇ ಅಧಿಕ ಸಂಖ್ಯೆಯಲ್ಲಿದ್ದಾರೆ. ಗುಂಡ್ಲುವದ್ದಿಗೆರೆ ಗ್ರಾಮದಲ್ಲಿ 80 ಕುಟುಂಬಗಳನ್ನು ಹೊಂದಿದ ಗೊಲ್ಲರು ಬಹುಸಂಖ್ಯಾತರಾಗಿದ್ದಾರೆ. ಲಿಂಗಾಯತರು ಇರುವ ಎಲ್ಲಾ ಗ್ರಾಮಗಳಲ್ಲಿ ಇವರು ಹೆಚ್ಚು ಭೂಹಿಡುವಳಿಯನ್ನು ಹೊಂದಿದ್ದಾರೆ. ಆರ್ಥಿಕವಾಗಿ, ಸಾಮಾಜಿಕವಾಗಿ ಮತ್ತು ರಾಜಕೀಯವಾಗಿ ಲಿಂಗಾಯತರೆ ಪ್ರಭಾವಶಾಲಿಗಳಾಗಿದ್ದಾರೆ. ಪಂಚಾಯತಿಯ ಎರಡನೇ ದೊಡ್ಡ ಸಮುದಾಯವೆಂದರೆ 205(20.84) ಮಾದಿಗರು. ಇವರು ಪಂಚಾಯತಿ ವ್ಯಾಪ್ತಿಗೆ ಸೇರಿದ ಎಲ್ಲಾ ಗ್ರಾಮಗಳಲ್ಲಿ ಪ್ರತ್ಯೇಕ ಕಾಲೋನಿಗಳಲ್ಲಿ ವಾಸವಾಗಿದ್ದಾರೆ. ಕುರುಬರು 181(13.80)ರಷ್ಟು, ವಾಲ್ಮೀಕಿ 139(10.59)ರಷ್ಟು ಮತ್ತು ಗೊಲ್ಲರು 80(6.11) ರಷ್ಟು ಇದ್ದಾರೆ (ಕೋಷ್ಟಕ-28).[43] ಸಣ್ಣಪುಟ್ಟ ಜಾತಿಗಳೆಂದರೆ ಅಗಸರು, ಬಾರಿಕರು, ಈಡಿಗರು ಮತ್ತು ಕೊರವರಾಗಿದ್ದಾರೆ. ಒಟ್ಟಾರೆ ಜಾತಿಯ ಅಂಕಿ-ಅಂಶಗಳನ್ನು ನೋಡಿದಾಗ ಆರ್ಥಿಕವಾಗಿ, ಸಾಮಾಜಿಕವಾಗಿ ಲಿಂಗಾಯತರು ಮೇಲ್ ತುದಿಯಲ್ಲಿದ್ದು, ಕೆಳಜಾತಿಗಳು ಕೆಳ ತುದಿಯಲ್ಲಿದ್ದಾರೆ.

ಒಟ್ಟು 1312 ಕುಟುಂಬಗಳಲ್ಲಿ 573(43.67)ರಷ್ಟು ಕುಟುಂಬಗಳು ಬಡತನ ರೇಖೆಗಿಂತ ಕೆಳಗಿವೆ. 739(56.33) ಕುಟುಂಬಗಳು ಬಡತನ ರೇಖೆಗಿಂತ ಮೇಲೆ ಇವೆ. ಈ ಕುಟುಂಬಗಳನ್ನು ಜಾತಿವಾರು ನೋಡಿದಾಗ, ಪರಿಶಿಷ್ಟ ಜಾತಿ 215(37.52), ಪರಿಶಿಷ್ಟ ಪಂಗಡ 94(16.40), ಹಿಂದುಳಿದ ವರ್ಗ 86(15.00) ಮತ್ತು ಇತರೇ ವರ್ಗ 178(31.06)ರಷ್ಟು ಕುಟುಂಬಗಳನ್ನು ಹೊಂದಿದೆ (ಕೋಷ್ಟಕ-15).[44] ಈ ಅಂಕಿ-ಅಂಶಗಳನ್ನು ನೋಡಿದಾಗ ಹೆಚ್ಚು ಸಂಖ್ಯೆಯಲ್ಲಿ ಬಡವರು ಹಾಗೂ ಪರಿಶಿಷ್ಟ ಜಾತಿಯಲ್ಲಿದ್ದಾರೆ. ಒಟ್ಟು 739 ಬಡತನ ರೇಖೆಗಿಂತ ಮೇಲಿನ ಕುಟುಂಬಗಳಿದ್ದು, ಅದರಲ್ಲಿ 452(61.16)ರಷ್ಟಿರುವ ಇತರೇ ವರ್ಗದವರು ಅತಿ ಹೆಚ್ಚು ಇದ್ದಾರೆ. ಗ್ರಾಮಪಂಚಾಯತಿಯ ಒಟ್ಟು ಆರ್ಥಿಕಮಟ್ಟವನ್ನು ನೋಡಿದಾಗ ಪರಿಶಿಷ್ಟ ಜಾತಿಯವರು ಹೆಚ್ಚು ಬಡವರಾಗಿದ್ದು, ಲಿಂಗಾಯತರು ಉತ್ತಮ ಸ್ಥಿತಿಯಲ್ಲಿದ್ದಾರೆ. ಬಹಳ ಹಿಂದಿನಿಂದಲೂ ಈ ಗ್ರಾಮಗಳಲ್ಲಿ ಹೆಚ್ಚು ಭೂಹಿಡುವಳಿಯನ್ನು ಲಿಂಗಾಯತರೇ ಹೊಂದಿದ್ದಾರೆ. ಇಲ್ಲಿನ ದುರ್ಬಲ ವರ್ಗಗಳೂ ಆರ್ಥಿಕ ಮತ್ತು ಸಾಮಾಜಿಕವಾಗಿ ಹೆಚ್ಚು ಸಂಕಷ್ಟದಲ್ಲಿದ್ದಾರೆ. ಹಿಂದುಳಿದ ವರ್ಗಗಳು ಮಧ್ಯಮ ಸ್ಥಿತಿಯನ್ನು ಕಾಪಾಡಿಕೊಂಡು ಬಂದಿವೆ.

ಬೈಲುವದ್ದಿಗೆರೆ ಪಂಚಾಯತಿ ಪ್ರದೇಶದ ಒಟ್ಟು ವಿಸ್ತೀರ್ಣ 5040.56 ಹೆಕ್ಟೇರ್‌ಗಳಷ್ಟಿದೆ. ಒಟ್ಟು ಪಂಚಾಯತಿ ಜನಸಂಖ್ಯೆ 5885 ಇದ್ದು, ಪುರುಷರು 3048(51.79) ಮತ್ತು ಮಹಿಳೆಯರು 2837(48.20)ರಷ್ಟು ಇದ್ದಾರೆ. ಅದರಲ್ಲಿ ಪರಿಶಿಷ್ಟ ಜಾತಿ 1237(21.88), ಪರಿಶಿಷ್ಟ ಪಂಗಡ 904(15.36) ಇದ್ದು, ಒಟ್ಟು ಪರಿಶಿಷ್ಟರ ಜನಸಂಖ್ಯೆ 2141(36.78)ರಷ್ಟಿದ್ದಾರೆ(ಕೋಷ್ಟಕ-5).[45] ಜನಸಂಖ್ಯೆಯನ್ನು ತಾಲೂಕಿಗೆ ಹೋಲಿಸಿದರೆ ಶೇ 5ರಷ್ಟು ಹೆಚ್ಚು ಪರಿಶಿಷ್ಟರನ್ನು ಹೊಂದಿದೆ. ಹಾಗಾಗಿ ನಾಗೇನಹಳ್ಳಿ ಪಂಚಾಯತಿಗೆ ಹೋಲಿಸಿದರೆ ಪರಿಶಿಷ್ಟರ ಪ್ರಮಾಣ ಕಡಿಮೆ ಇದೆ ಎಂದು ಹೇಳಬಹುದು.

ಗ್ರಾಮಪಂಚಾಯತಿಯ ಸಾಕ್ಷರರ ವಿವರವನ್ನು ನೋಡಿದಾಗ ಒಟ್ಟು ಸಾಕ್ಷರರು 1656(28.14) ಇದ್ದು, ಮಹಿಳೆಯರು 346(12.20), ಪುರುಷರು1310(42.98)ರಷ್ಟಿದ್ದಾರೆ (ಕೋಷ್ಟಕ-4).[46] ಪುರುಷ ಸಾಕ್ಷರತೆ ಮಹಿಳೆಯರಿಗಿಂತ ಶೇ 30 ರಷ್ಟು ಹೆಚ್ಚು ಇದೆ. ಮಹಿಳಾ ಸಾಕ್ಷರತೆ ಬಹಳ ಕಡಿಮೆ ಇದೆ. ಪಂಚಾಯತಿಯ

ಸಾಕ್ಷರತೆಯನ್ನು ತಾಲೂಕಿಗೆ ಹೋಲಿಸಿದರೆ ಶೇ 21ರಷ್ಟು ಕಡಿಮೆ ಇದೆ. ಮಹಿಳಾ ಸಾಕ್ಷರತೆ ಶೇ 24 ರಷ್ಟು ತಾಲೂಕಿಗಿಂತ ಕಡಿಮೆ ಇದೆ. ಇಲ್ಲಿ ಹೆಚ್ಚಿನ ಮಹಿಳೆಯರು ಕೃಷಿಕೂಲಿಕಾರರಾಗಿದ್ದಾರೆ. ಈ ಪ್ರದೇಶ ಪೂರ್ತಿ ಒಣಭೂಮಿ ಪ್ರದೇಶವಾಗಿದೆ. 1960ರಲ್ಲಿ ಗ್ರಾಮಪಂಚಾಯತಿ ಸ್ಥಾಪಿತಗೊಂಡಿದ್ದು ಸಾಂಪ್ರದಾಯಿಕವಾಗಿ ಆ ಊರಿನ ಗೌಡರು ಸ್ಥಳೀಯ ಆಡಳಿತವನ್ನು ನಡೆಸಿಕೊಂಡು ಬಂದಿದ್ದಾರೆ. ಇಂದಿಗೂ ಸಹ ಸ್ಥಳೀಯ ಆಡಳಿತದಲ್ಲಿ ಅವರ ಪಾತ್ರ ಪ್ರಮುಖವಾಗಿದೆ. ಬೈಲುವದ್ದಿಗೆರೆ ಪಂಚಾಯತಿಯ ಸಾಮಾಜಿಕ ಮತ್ತು ಆರ್ಥಿಕ ಅಂಶಗಳು ನಾಗೇನಹಳ್ಳಿ ಪಂಚಾಯತಿಗೆ ವಿರುದ್ಧವಾಗಿದೆ. ಬೈಲುವದ್ದಿಗೆರೆ ಪಂಚಾಯತಿಯು ಪೂರ್ತಿ ಒಣಭೂಮಿ ಪ್ರದೇಶವಾಗಿದ್ದು ತಾಲೂಕು ಕೇಂದ್ರಕ್ಕೆ 15ಕಿ.ಮೀ. ದೂರದಲ್ಲಿದೆ. ಈ ಗ್ರಾಮಪಂಚಾಯತಿಯ ಅಂಕಿ-ಅಂಶಗಳನ್ನು ಗಮನಿಸಿದಾಗ ಹಿಂದುಳಿದ ಪ್ರದೇಶವೆಂದು ಗುರುತಿಸಿ ಅಧ್ಯಯನಕ್ಕೆ ಆಯ್ಕೆಮಾಡಿ ಕೊಳ್ಳಲಾಗಿದೆ. ಈ ಪಂಚಾಯತಿ ಆಡಳಿತವು ಜನತಾದಳದವರ ಕೈಯಲ್ಲಿದೆ. ಹೆಚ್ಚು ಕಡಿಮೆ ಯಾವುದೇ ಅಂಶಗಳನ್ನು ತೆಗೆದುಕೊಂಡಾಗ ನಾಗೇನಹಳ್ಳಿ ಮತ್ತು ಬೈಲುವದ್ದಿಗೆರೆ ಪಂಚಾಯತಿ ಒಂದಕ್ಕೊಂದು ಭಿನ್ನವಾಗಿವೆ. ಈ ಅಧ್ಯಯನ ತುಲನಾತ್ಮಕ ಅಧ್ಯಯನವಾಗಿರುವುದರಿಂದ ತಾಲೂಕಿನಲ್ಲಿ ಒಂದು ನೀರಾವರಿ ಪಂಚಾಯತಿ ಪ್ರದೇಶವನ್ನು, ಮತ್ತೊಂದು ಒಣಭೂಮಿ ಪಂಚಾಯತಿ ಪ್ರದೇಶವನ್ನು ಅಧ್ಯಯನಕ್ಕೆ ಆಯ್ಕೆ ಮಾಡಿಕೊಳ್ಳಲಾಗಿದೆ.

### ಹಿರೇಹೆಗ್ಡಾಳ್ ಗ್ರಾಮಪಂಚಾಯತಿ

ಕೂಡ್ಲಿಗಿಯಿಂದ ಪಶ್ಚಿಮಕ್ಕೆ ಸುಮಾರು 8ಕಿ.ಮೀ. ದೂರದಲ್ಲಿರುವ ಹಿರೇಹೆಗ್ಡಾಳ್ ಗ್ರಾಮವು ಹಗರಿಬೊಮ್ಮನಹಳ್ಳಿಗೆ ಹೋಗುವ ಮಾರ್ಗದಲ್ಲಿ ಬರುತ್ತದೆ. ಹಿರೇಹೆಗ್ಡಾಳ್ ಪಂಚಾಯತಿ ವ್ಯಾಪ್ತಿಯಲ್ಲಿ ಎರಡು ಕೆರೆಗಳು ಮತ್ತು ಸುಮಾರು 200 ಪಂಪ್‌ಸೆಟ್ ಮೂಲಕ ನೀರಾವರಿ ಕೃಷಿಯನ್ನು ಹೊಂದಿದ್ದಾರೆ.ಅಂದಾಜು ಶೇ.70ರಷ್ಟು ಕೆರೆ ಮತ್ತು ಪಂಪ್‌ಸೆಟ್ ಮೂಲಕ ನೀರಾವರಿ ಪ್ರದೇಶವನ್ನು ಇಲ್ಲಿಯ ಜನತೆ ಹೊಂದಿದ್ದಾರೆ. ಈ ಎಲ್ಲಾ ಗ್ರಾಮಗಳಲ್ಲಿ ಶೇಂಗಾ, ಮೆಕ್ಕೆಜೋಳ ಮತ್ತು ಹತ್ತಿಯಂತಹ ಮುಖ್ಯ ವಾಣಿಜ್ಯ ಬೆಳೆಗಳನ್ನು ಬೆಳೆಯುತ್ತಾರೆ. ಈ ಗ್ರಾಮಗಳಲ್ಲಿ ಕೃಷಿಯೇತರ ಚಟುವಟಿಕೆಗಳಾದ ಹೈನುಗಾರಿಕೆ, ಕುರಿಸಾಕಾಣಿಕೆಯನ್ನು ಕಾಣಬಹುದಾಗಿದೆ.

### ಜನಸಂಖ್ಯೆ, ಕುಟುಂಬ ಮತ್ತು ಜಾತಿ, ಇತ್ಯಾದಿ

ಹಿರೇಹೆಗ್ಡಾಳ್ ಗ್ರಾಮಪಂಚಾಯತಿ ಹಿರೇಹೆಗ್ಡಾಳ್, ಸಾಸಲವಾಡ, ಬೊಪ್ಪಲಪುರ ಮತ್ತು ಸಾಣೇಹಳ್ಳಿ ಪಂಚಾಯತಿ ವ್ಯಾಪ್ತಿಯ ಗ್ರಾಮಗಳಾಗಿದ್ದು, ಇವೆಲ್ಲಾ ಕಂದಾಯ ಗ್ರಾಮಗಳಾಗಿವೆ. ಒಟ್ಟು ಗ್ರಾಮಪಂಚಾಯತಿಯು 804 ಕುಟುಂಬಗಳನ್ನು ಹೊಂದಿದ್ದು ಇದರಲ್ಲಿ ಹಿರೇಹೆಗ್ಡಾಳ್ 390, ಸಾಸಲವಾಡ 229, ಬೊಪ್ಪಲಪುರ 127, ಮತ್ತು ಸಾಣೇಹಳ್ಳಿ 58 ಕುಟುಂಬಗಳನ್ನು ಹೊಂದಿವೆ.[47] ಕುಟುಂಬಗಳ ಆರ್ಥಿಕ ಮಟ್ಟವನ್ನು ಪಂಚಾಯತಿಯ 804 ಕುಟುಂಬಗಳಲ್ಲಿ 358(44.52) ಬಡತನ ರೇಖೆಗಿಂತ ಕೆಳಗೆ ಹಾಗೂ ಬಡತನ ರೇಖೆಗಿಂತ ಮೇಲಿನ ಕುಟುಂಬಗಳ ಸಂಖ್ಯೆ 446(55.48)ರಷ್ಟಿದ್ದಾರೆ. ಬಡತನ ರೇಖೆಗಿಂತ ಕೆಳಗಿರುವ 358

ಕುಟುಂಬಗಳನ್ನು ಜಾತಿವಾರು ನೋಡಿದಾಗ ಪರಿಶಿಷ್ಟ ಜಾತಿಯಲ್ಲಿ 145(40.50), ಪರಿಶಿಷ್ಟ ಪಂಗಡದಲ್ಲಿ 17(4.75), ಹಿಂದುಳಿದ ವರ್ಗದಲ್ಲಿ 58(16.20) ಮತ್ತು ಇತರೆ ವರ್ಗದಲ್ಲಿ 138(38.55) ರಷ್ಟಿದ್ದಾರೆ(ಕೋಷ್ಟಕ-15).[48] ಅತಿ ಹೆಚ್ಚು ಬಡವರು ಪರಿಶಿಷ್ಟ ಜಾತಿಯಲ್ಲಿ ಮತ್ತು ಇತರೆ ವರ್ಗದಲ್ಲಿದ್ದಾರೆ. ಪರಿಶಿಷ್ಟ ಪಂಗಡ ಮತ್ತು ಹಿಂದುಳಿದ ವರ್ಗದ ಕುಟುಂಬಗಳು ಮಧ್ಯಮ ಸ್ಥಿತಿಯಲ್ಲಿವೆ.

ಗ್ರಾಮಪಂಚಾಯತಿಯ ಜನಸಂಖ್ಯೆ 1991ರ ಜನಗಣತಿಯ ಪ್ರಕಾರ 3756 ಜನಸಂಖ್ಯೆಯಲ್ಲಿ 1917 (51.04) ರಷ್ಟು ಪುರುಷರು, 1839 (48.96)ರಷ್ಟು ಮಹಿಳೆಯರನ್ನು ಹೊಂದಿದೆ. ಒಟ್ಟು ಪರಿಶಿಷ್ಟ ಜಾತಿ ಜನಸಂಖ್ಯೆ 1336 ಇದ್ದು, ಪರಿಶಿಷ್ಟ ಪಂಗಡದ ಜನಸಂಖ್ಯೆ 257 ಇದೆ. ಒಟ್ಟು ಪಂಚಾಯತಿಯು 1593 (45.41) ಪರಿಶಿಷ್ಟರ ಜನಸಂಖ್ಯೆಯನ್ನು ಹೊಂದಿದೆ(ಕೋಷ್ಟಕ-5).[49] ಈ ಜನಸಂಖ್ಯೆಯನ್ನು ತಾಲೂಕಿಗೆ ಹೋಲಿಸಿದರೆ ಇದರಷ್ಟೇ ಪರಿಶಿಷ್ಟರನ್ನು ಹೊಂದಿದೆ.

ಜಾತಿವಾರು ಕುಟುಂಬಗಳನ್ನು ನೋಡಿದಾಗ ಪಂಚಾಯತಿ ಪ್ರದೇಶದಲ್ಲಿ 439(54.60) ಲಿಂಗಾಯತರ ಕುಟುಂಬಗಳಿದ್ದು, ಪಂಚಾಯತಿಯ ದೊಡ್ಡ ಸಮುದಾಯವಾಗಿದೆ. 122(15.17) ರಷ್ಟಿರುವ ಮಾದಿಗರು ಪಂಚಾಯತಿಯ ಎರಡನೇ ದೊಡ್ಡ ಸಮುದಾಯವಾಗಿದೆ. 58(7.21) ಬೋವಿಗಳು, 52(6.46) ಕುರುಬರು, 47(5.84)ವಾಲ್ಮೀಕಿ ಮತ್ತು 36(4.42) ಉಪ್ಪಾರರ ಕುಟುಂಬಗಳಿದ್ದಾವೆ(ಕೋಷ್ಟಕ-50).[50] ಉಳಿದಂತೆ ಅಗಸರು, ವಿಶ್ವಕರ್ಮ, ಮುಸ್ಲಿಂ ಕುಟುಂಬಗಳು ಕಡಿಮೆ ಪ್ರಮಾಣದಲ್ಲಿವೆ. ಅಧಿಕ ಸಂಖ್ಯೆಯಲ್ಲಿರುವ ಲಿಂಗಾಯತರು ಸಾಮಾಜಿಕವಾಗಿ, ಮತ್ತು ರಾಜಕೀಯವಾಗಿ ಪ್ರತಿಷ್ಟಿತರಾಗಿದ್ದಾರೆ. ಮೇಲ್ವರ್ಗದ ಕುಟುಂಬಗಳು ಹೆಚ್ಚಿದ್ದರೂ ಗ್ರಾಮಗಳಲ್ಲಿ ಯಾವುದೇ ಜಾತಿ, ವೈಷಮ್ಯಗಳಿಲ್ಲದೇ ಉತ್ತಮ ಸಂಬಂಧಗಳನ್ನು ಹೊಂದಿದ್ದಾರೆ.

ಪಂಚಾಯತಿಯ ಒಟ್ಟು ವಿಸ್ತೀರ್ಣ 3463.00 ಹೆಕ್ಟೇರ್‌ಗಳಷ್ಟಿದೆ. ಪಂಚಾಯತಿಯ ಸಾಕ್ಷರರ ವಿವರವನ್ನು ನೋಡಿದಾಗ, 1991ರ ಜನಗಣತಿ ಅನ್ವಯ ಒಟ್ಟು ಸಾಕ್ಷರರು 1995ರಿದ್ದು (49.96) ಇದ್ದು, ಇವರಲ್ಲಿ ಪುರುಷರು 1207(59.93), ಮಹಿಳೆಯರು 788(39.81)ರಷ್ಟಿದ್ದಾರೆ.[51] ಈ ಸಾಕ್ಷರತೆಯನ್ನು ತಾಲೂಕಿಗೆ ಹೋಲಿಸಿದರೆ ಶೇ.4ರಷ್ಟು ಹೆಚ್ಚಿದೆ. ಇಲ್ಲಿ ಲಿಂಗಾಯತರೆ ಹೆಚ್ಚು ಇರುವುದರಿಂದ ಸಾಕ್ಷರತೆಯ ಹೆಚ್ಚಿರಬಹುದೆಂದು ಗ್ರಹಿಸಲಾಗಿದೆ. ಹಿರೇಹೆಗ್ಡಾಳ್, ಸಾಸಲವಾಡ ಮತ್ತು ಬೊಪ್ಪಲಪುರಗಳಲ್ಲಿ ಲಿಂಗಾಯತರೆ ಹೆಚ್ಚು ಸಂಖ್ಯೆಯಲ್ಲಿದ್ದಾರೆ. ಸಾಣೇಹಳ್ಳಿಯಲ್ಲಿರುವ ಕುಟುಂಬಗಳೆಲ್ಲ ಬೋವಿ ಜನಾಂಗಕ್ಕೆ ಸೇರಿವೆ. ಗ್ರಾಮಗಳಲ್ಲಿ ಚಾರಿತ್ರಿಕವಾಗಿ ಲಿಂಗಾಯತರು ಸ್ಥಳೀಯ ಆಡಳಿತವನ್ನು ನಡೆಸಿಕೊಂಡು ಬಂದಿದ್ದಾರೆ. ಈಗಲೂ ಸಹ ಗ್ರಾಮದ ಆಡಳಿತದಲ್ಲಿ ಇವರೇ ಪ್ರಭಾವಶಾಲಿಯಾಗಿದ್ದಾರೆ. ಇವರು ಸಾಮಾಜಿಕವಾಗಿ ಮತ್ತು ರಾಜಕೀಯವಾಗಿ ಹಿಂದಿನಿಂದಲೂ ಪ್ರಭಾವಶಾಲಿಗಳಾಗಿದ್ದಾರೆ. ಇವರು ಆರ್ಥಿಕವಾಗಿ ಹೆಚ್ಚು ಭೂಹಿಡುವಳಿಯನ್ನು ಹೊಂದಿದ್ದಾರೆ. ಪಂಚಾಯತಿ ವ್ಯಾಪ್ತಿಯ ಎಲ್ಲಾ ಗ್ರಾಮಗಳಲ್ಲಿ ಪರಿಶಿಷ್ಟ ಜಾತಿಯ ಕುಟುಂಬಗಳು ಪ್ರತ್ಯೇಕ ಕಾಲೋನಿಗಳಲ್ಲಿ ವಾಸವಾಗಿದ್ದಾರೆ.

ಪಂಚಾಯತಿಗೆ ಸೇರಿದ ಹಿರೇಹೆಗ್ಡಾಳ್, ಸಾಸಲವಾಡ ಮತ್ತು ಬೊಪ್ಪಲಪುರ ಗ್ರಾಮಗಳಲ್ಲಿ ಒಟ್ಟು ಎರಡು ಕೆರೆಗಳಿವೆ. ಸುಮಾರು 200ಕ್ಕೂ ಹೆಚ್ಚು ಪಂಪ್‌ಸೆಟ್‌ಗಳಿಂದ ವಾಣಿಜ್ಯ ಬೆಳೆಗಳನ್ನು ಬೆಳೆಯಲಾಗುತ್ತದೆ.

ಗ್ರಾಮಪಂಚಾಯತಿ ಸದಸ್ಯರೆಲ್ಲರೂ ಕಾಂಗ್ರೆಸ್ ಪಕ್ಷದವರಾಗಿದ್ದಾರೆ. ಹೀಗಾಗಿ ಗ್ರಾಮಪಂಚಾಯತಿ ಆಡಳಿತ ಕಾಂಗ್ರೆಸ್ ಪಕ್ಷದವರ ಪಾಲಾಗಿದೆ. ಗ್ರಾಮಪಂಚಾಯತಿ ಪಕ್ಷಾತೀತ ಚುನಾವಣೆಗಳಿಂದಲೂ ಸ್ಥಳೀಯ ಮಟ್ಟದಲ್ಲಿ ಅವರ ಪ್ರತಿಷ್ಠಿತೆಗಾಗಿ ತಮ್ಮ ಪಕ್ಷವನ್ನು ಗುರುತಿಸಿಕೊಳ್ಳುತ್ತಾರೆ. ಗ್ರಾಮದ ಅಭಿವೃದ್ಧಿಯಲ್ಲಿ ಪಕ್ಷರಾಜಕಾರಣವು ಮಹತ್ತರ ಪಾತ್ರವಹಿಸುತ್ತಿದೆ ಎಂದು ಹೇಳಬಹುದು.

ಗ್ರಾಮಪಂಚಾಯತಿಯ ಸಾಮಾಜಿಕ, ಆರ್ಥಿಕ, ಮತ್ತು ರಾಜಕೀಯ ವಿವರಗಳನ್ನು ನೋಡಿದಾಗ ಈ ಪ್ರದೇಶ ಅಭಿವೃದ್ಧಿ ಹೊಂದುತ್ತಿರುವ ಪ್ರದೇಶವೆಂದು ಗುರುತಿಸಿ ಅಧ್ಯಯನಕ್ಕೆ ಆಯ್ಕೆ ಮಾಡಿಕೊಳ್ಳಲಾಗಿದೆ. ಹಿರೇಹೆಗ್ಡಾಳ್ ಗ್ರಾಮಪಂಚಾಯತಿಯು ತಾಲೂಕು ಕೇಂದ್ರಕ್ಕೆ ಹತ್ತಿರವಿದ್ದು; ಕೆರೆ ಮತ್ತು ಪಂಪ್‌ಸೆಟ್‌ಗಳ ಮೂಲಕ ನೀರಾವರಿ ಕೃಷಿಯನ್ನು ಒಳಗೊಂಡಿದೆ. ಗ್ರಾಮಪಂಚಾಯತಿ ಆಡಳಿತ ಕಾಂಗ್ರೆಸ್ ಪಕ್ಷದವರ ಕೈಯಲ್ಲಿದೆ. ಶೈಕ್ಷಣಿಕವಾಗಿ ತಾಲೂಕಿಗಿಂತ ಉತ್ತಮ ಸ್ಥಿತಿಯಲ್ಲಿದೆ. ಹಾಗಾಗಿ ಗ್ರಾಮಗಳ ಅಭಿವೃದ್ಧಿಯಲ್ಲಿ ಪಂಚಾಯತಿ ಕಾರ್ಯಕ್ಷಮತೆ ಯಾವ ರೀತಿ ಪರಿಣಾಮ ಬೀರಿದೆ ಎಂಬುದನ್ನು ಅಧ್ಯಯನ ಮಾಡಲಾಗುತ್ತದೆ. ಈ ಗ್ರಾಮ ಪಂಚಾಯತಿ ವ್ಯಾಪ್ತಿಯಲ್ಲಿ ಮೇಲ್ವರ್ಗದವರು ಅಧಿಕ ಸಂಖ್ಯೆಯಲ್ಲಿದ್ದರೂ, ಸಹ ಪರಿಶಿಷ್ಟರ ಪ್ರಮಾಣ ತಾಲೂಕಿಗಿಂತ ಹೆಚ್ಚಿದೆ. ಈ ಎಲ್ಲಾ ಅಂಶಗಳನ್ನು ಗಮನದಲ್ಲಿಟ್ಟುಕೊಂಡು ಹಿರೇಹೆಗ್ಡಾಳ್ ಗ್ರಾಮಪಂಚಾಯತಿಯನ್ನು ಅಧ್ಯಯನಕ್ಕೆ ಆಯ್ಕೆ ಮಾಡಿಕೊಳ್ಳಲಾಗಿದೆ.

## ಉಜ್ಜಿನಿ ಗ್ರಾಮಪಂಚಾಯತಿ

ಭಾರತೀಯ ಧಾರ್ಮಿಕ ಕ್ಷೇತ್ರದಲ್ಲಿ ಮಹತ್ವ ಪಡೆದುಕೊಂಡ ವೀರಶೈವಧರ್ಮದ ಪಂಚಪೀಠಗಳಲ್ಲಿ ಒಂದಾಗಿರುವ ಉಜ್ಜನಿಯು ಆಡುಭಾಷೆ ಮತ್ತು ಸರಕಾರಿ ದಾಖಲೆಗಳಲ್ಲಿ ಉಜ್ಜಿನಿಯಾಗಿ ಬಳಕೆಯಾಗುತ್ತಿದೆ. ಧರ್ಮದೇವರು ಜನತೆಯ ನಾಡಿ ಮಿಡಿತದ ಭಾಗವಾಗಿದೆ. ಶ್ರೀ ಮರುಳುಸಿದ್ದೇಶ್ವರ ಭಕ್ತರಾಗಿರುವ ಈ ಜನರು ತಮ್ಮ ದೈನಂದಿನ ಕ್ರಿಯೆಗಳಲ್ಲಿ ಆದಿಪುರುಷನನ್ನಾಗಿ ಮಾಡಿಕೊಂಡಿದ್ದಾರೆ. ಕ್ರಿ.ಶ. 1026 ರಲ್ಲಿ ಕ್ಷೇತ್ರದ ಇತಿಹಾಸ ಲಭ್ಯವಿದ್ದು, ಇಲ್ಲಿ ಮಧ್ಯಪ್ರದೇಶದ ಕಾಳಿಕಾ ಉಜ್ಜಯನಿ ಧರ್ಮಪ್ರವರ್ತಕರು ಬಂದು ನೆಲೆಸಿದ ದಾಖಲೆಗಳಿವೆ. ಅಂದಿನಿಂದ ಅವ್ಯಾಹತವಾಗಿ ಸಾಗಿರುವ ದೇವರ ಆರಾಧನೆ ಇಂದಿಗೂ ಅಸ್ತಿತ್ವದಲ್ಲಿದೆ. ಇದು ತಾಲೂಕು ಕೇಂದ್ರದಿಂದ ಸುಮಾರು 35 ಕಿ.ಮೀ ದೂರದಲ್ಲಿದೆ. ಜಿಲ್ಲೆಯ ಗಡಿಭಾಗದಲ್ಲಿರುವ ಈ ಗ್ರಾಮ ಹೆಚ್ಚಿನ ವ್ಯವಹಾರ ಮತ್ತು ಮಾರುಕಟ್ಟೆಗಳಿಗೆ ಚಿತ್ರದುರ್ಗ ಹಾಗೂ ದಾವಣಗೆರೆಯನ್ನು ಅವಲಂಬಿಸಿದ್ದಾರೆ. ಕೊಟ್ಟೂರು ಮಾರುಕಟ್ಟೆಯು ತುಂಬಾ ಹತ್ತಿರ ವಾಗಿದ್ದೂ ಸಣ್ಣಪುಟ್ಟ ವ್ಯವಹಾರಗಳೆಲ್ಲಾ ಇಲ್ಲಿಯೇ ನಡೆಯುತ್ತವೆ. ಸಾರಿಗೆಯ ವ್ಯವಸ್ಥೆಯು ಬಳ್ಳಾರಿಗಿಂತಲೂ ಚಿತ್ರದುರ್ಗ, ದಾವಣಗೆರೆಗೆ ಹೆಚ್ಚು ಸೌಲಭ್ಯವಿದೆ. ಕೊಟ್ಟೂರಿನಿಂದ ಜಗಳೂರಿಗೆ ಹೋಗುವ ಮಾರ್ಗದಲ್ಲಿ ಉಜ್ಜನಿ ಗ್ರಾಮ ಸಿಗುತ್ತದೆ. ಈ ಪ್ರದೇಶವು ಪೂರ್ತಿ ಒಣಭೂಮಿಯನ್ನು ಹೊಂದಿದ್ದು ಕೃಷಿಯನ್ನೇ ಹೆಚ್ಚು ಅವಲಂಬಿಸಿದ್ದರೂ ಸಹ ತಮ್ಮ ತಮ್ಮ ಜಾತಿಗಳು ಸಾಂಪ್ರದಾಯಿಕವಾಗಿ ನಡೆಸಿಕೊಂಡು ಬಂದ ಕಸಬುಗಳನ್ನು ನಡೆಸಿಕೊಂಡು ಬಂದಿದ್ದಾರೆ. ಉದಾಹರಣೆಗೆ ಕುರುಬರು ಕಂಬಳಿ ತಯಾರಿಕೆ, ನೇಕಾರರು ಬಟ್ಟೆ ತಯಾರಿಕೆ, ಶೆಟ್ಟರು ವ್ಯಾಪಾರವನ್ನು, ಮಾದಿಗರು ಚಪ್ಪಲಿ

ಹೊಲೆಯುವುದು ಹಾಗೂ ಚಾಪೆಮಾರುವುದು ಹೀಗೆ ಗ್ರಾಮದಲ್ಲಿನ ಜನರು ಕೃಷಿ ಮತ್ತು ಕೃಷಿಯೇತರ ಚಟುವಟಿಕೆಗಳಲ್ಲಿ ತೊಡಗಿಸಿಕೊಂಡಿದ್ದಾರೆ.

## ಜಾತಿ, ಕುಟುಂಬ ಮತ್ತು ಜನಸಂಖ್ಯೆ ವಿವರಗಳು

ಕೃಷಿಯನ್ನೇ ಹೆಚ್ಚು ಅವಲಂಬಿಸಿಕೊಂಡಿರುವ ಜನತೆ ತಮ್ಮ ಜನಾಂಗದ ಮೂಲ ಕಸುಬನ್ನು ಮರೆತಿಲ್ಲ. ವೀರಶೈವ ಜನಾಂಗದ ತವರುಮನೆಯಂತಿರುವ ಈ ಗ್ರಾಮದಲ್ಲಿ ವೀರಶೈವರ ಕುಟುಂಬಗಳೇ ಹೆಚ್ಚಾಗಿವೆ. ವೀರಶೈವರೆಂದು ಗುರುತಿಸಿಕೊಂಡಿರುವ ಇವರಲ್ಲಿ ಲಿಂಗಾಯತ, ಜಂಗಮ, ಸಾಧುಲಿಂಗಾಯತ ಎಂಬ ಉಪಜಾತಿಗಳಿವೆ. ಶೇ 26ರಷ್ಟಿರುವ ಇವರು ಉದ್ಯೋಗಕ್ಕೆ ಹೆಚ್ಚು ಕೃಷಿಯನ್ನೇ ಅವಲಂಬಿಸಿದ್ದಾರೆ. ಈ ಜನಾಂಗವು ಸ್ವಾತಂತ್ರ್ಯ ಹೋರಾಟದಲ್ಲಿ ನೇರವಾಗಿ ಪಾಲ್ಗೊಂಡಿದ್ದು, ಈಗಲೂ ಈ ಕ್ಷೇತ್ರ ಪ್ರತಿಷ್ಠಿತ ಸ್ಥಾನದಲ್ಲಿದೆ. ಅದೇ ರೀತಿ ವೀರಶೈವರ ನಂತರದ ಸ್ಥಾನದಲ್ಲಿರುವವರು ಕುರುಬರು. ಇವರೂ ಸಹ ಕೃಷಿಯನ್ನೇ ಹೆಚ್ಚು ಅವಲಂಬಿಸಿಕೊಂಡಿದ್ದಾರೆ. ಕೃಷಿಯ ಬಿಡುವಿನ ವೇಳೆಯಲ್ಲಿ ಕಂಬಳಿ ನೇಯುವಿಕೆಯಲ್ಲಿ ತೊಡಗಿಸಿಕೊಂಡಿದ್ದಾರೆ. ಕುರಿಸಾಕಾಣಿಕೆ ಮತ್ತು ಪಶುಪಾಲನೆ ಇವರ ಇನ್ನೊಂದು ಉಪ ಕಸುಬಾಗಿದೆ. ಶಿಕ್ಷಣದಲ್ಲೂ ಸಹ ವೀರಶೈವರ ಸಮಾಜದೊಂದಿಗೆ ಸಮಾನ ಪೈಪೋಟಿ ಹೊಂದಿದ್ದಾರೆ. ಅಂತೆಯೇ ಗ್ರಾಮದ ರಾಜಕೀಯದಲ್ಲಿ ಸಮಾನ ಸ್ಥಾನಮಾನವನ್ನು ಹೊಂದಿದ್ದಾರೆ. ಗ್ರಾಮಪಂಚಾಯತಿಯಲ್ಲಿ ಬರುವ ಮೂರನೇ ಪ್ರಮುಖ ಜನಾಂಗ ನೇಕಾರ. ಇವರು ಕೃಷಿಯನ್ನೆ ಉಪಕಸುಬನ್ನಾಗಿ, ನೇಕಾರಿಕೆಯನ್ನು ಮುಖ್ಯ ಕಸುಬನ್ನಾಗಿ ಮಾಡಿಕೊಂಡಿದ್ದಾರೆ. ಹತ್ತಿ, ಖಾದಿ ಮತ್ತು ರೇಷ್ಮೆ ಬಟ್ಟೆಗಳ ತಯಾರಿಕೆಯಲ್ಲಿ ಈ ಜನರು ಶೇ 90 ರಷ್ಟು ಭಾಗಿಗಳಾಗಿದ್ದಾರೆ. ಈ ಜನಾಂಗವು ಶಿಕ್ಷಣ ಮತ್ತು ಸರಕಾರಿ ಉದ್ಯೋಗಗಳಲ್ಲಿ ಗಣನೀಯ ಬೆಳವಣಿಗೆ ಹೊಂದಿರುವುದು ಇತ್ತೀಚಿನ ದಿನಗಳಲ್ಲಿ ಕಂಡುಬಂದಿದೆ. ನೇಕಾರ ಮತ್ತು ನೇವ್ವಾರ್ ಎಂಬ ಎರಡು ತೆರನಾದ ಸಾಮಾಜಿಕ ಗುಂಪುಗಳನ್ನು ಗುರುತಿಸಿಕೊಂಡ ಇವರು ಹೆಚ್ಚು ಕಡಿಮೆ ಒಂದೆ ತೆರನಾದ ಸ್ಥಾನಮಾನಗಳನ್ನು ಹೊಂದಿದ್ದಾರೆ. ಗ್ರಾಮದ ದೊಡ್ಡ ನಾಲ್ಕನೇ ಸಮುದಾಯವೆಂದರೆ ಮುಸ್ಲಿಂರು. ಶೇ 10ರಷ್ಟಿರುವ ಮುಸ್ಲಿಮರು ಕೃಷಿಯನ್ನಲ್ಲದೆ ಬೀಡಿಕಟ್ಟುವುದು ಮತ್ತು ವ್ಯಾಪಾರವನ್ನು ಕಸಬುಗಳನ್ನಾಗಿ ಅವಲಂಬಿಸಿದ್ದಾರೆ. ಇದರಲ್ಲಿ ಗುಜರಿ ವ್ಯಾಪಾರ, ಟೈಲರಿಂಗ್, ಚರ್ಮ ವ್ಯಾಪಾರ ಮತ್ತು ಕಟ್ಟಿಗೆ ವ್ಯಾಪಾರವನ್ನು ಸಹ ಮಾಡುತ್ತಿದ್ದಾರೆ. ಶಿಕ್ಷಣದಲ್ಲಿ ಆಂಶಿಕ ಸುಧಾರಣೆ ಇದೆಯಾದರೂ ರಾಜ್ಯಭಾಷೆಯಾದ ಕನ್ನಡ ಮುಖ್ಯವಾಹಿನಿಯಲ್ಲಿ ಬರದಿದ್ದರೂ ಉರ್ದುವಿನಲ್ಲಿ ಗುರುತಿಸಿಕೊಂಡಿದ್ದಾರೆ. ಮಾದಿಗರು ಉಜ್ಜನಿ ಗ್ರಾಮಪಂಚಾಯತಿಯಲ್ಲಿ ಐದನೇ ಸ್ಥಾನವನ್ನು ಹೊಂದಿದ್ದಾರೆ. ವೃತ್ತಿಯಲ್ಲಿ ಚರ್ಮಗಾರಿಕೆ, ಕೂಲಿ ಮತ್ತು ಕೃಷಿ ಚಟುವಟಿಕೆಗಳಲ್ಲಿ ಅವಲಂಬಿತರಾಗಿದ್ದಾರೆ. ರಾಜಕೀಯ ಪ್ರತಿನಿಧಿಕರಣ ಮತ್ತು ನೌಕರಿ ಮೀಸಲಾತಿಯಿಂದ ಗಮನಾರ್ಹ ಬೆಳವಣಿಗೆಯಾಗಿದೆ. ಶೇ ಎರಡರಷ್ಟು ಕೊರವರು ಇದ್ದಾರೆ. ಉಜ್ಜನಿಯ ಕೆಲವು ಜನಾಂಗಗಳಲ್ಲಿ ಶೆಟ್ಟರು ವ್ಯಾಪಾರವನ್ನು, ವಿಶ್ವಕರ್ಮಿಗಳು ಬಡಗಿತನ, ಅಕ್ಕಸಾಲಿಕೆ, ಕಮ್ಮಾರಿಕೆಯ ಕೆಲಸಗಳನ್ನು ಮತ್ತು ವಾಲ್ಮೀಕಿ ಜನಾಂಗವು ಕೃಷಿಯನ್ನು ಅವಲಂಬಿಸಿದ್ದಾರೆ. ಶೆಟ್ಟರು ಬಟ್ಟೆ, ಕಿರಾಣಿ ಹಾಗೂ ದಳ್ಳಾಲಿ ವ್ಯಾಪಾರವನ್ನು ಮಾಡುತ್ತಾರೆ. ಆರ್ಥಿಕವಾಗಿ ಸಬಲರಾಗಿದ್ದರೂ, ರಾಜಕೀಯ ಪ್ರಾತಿನಿಧ್ಯದಲ್ಲಿ ಶೂನ್ಯವಾಗಿರುವುದು ಗಮನಾರ್ಹವಾಗಿದೆ. ಈ ಜನಾಂಗವು

ಗ್ರಾಮದಲ್ಲಿ ಒಂದೇ ಭಾಗದಲ್ಲಿ ವಾಸಿಸದೇ ವಿವಿಧ ವಾರ್ಡುಗಳಲ್ಲಿ ಹಂಚಿಹೋಗಿದ್ದಾರೆ.

ಗ್ರಾಮಪಂಚಾಯತಿಯ ಒಟ್ಟು ಜನಸಂಖ್ಯೆ 8470 ಇದ್ದು, ಇದರಲ್ಲಿ ಪುರುಷರು 43154 ಮತ್ತು ಮಹಿಳೆಯರು 4155ರಷ್ಟಿದ್ದಾರೆ. ಒಟ್ಟು ಜನಸಂಖ್ಯೆಯಲ್ಲಿ ಪರಿಶಿಷ್ಟ ಜಾತಿ 1,233(18.18), ಪರಿಶಿಷ್ಟ ಪಂಗಡ 817(12.05) ರಷ್ಟಿದ್ದು ಒಟ್ಟು ಪರಿಶಿಷ್ಟರು 2050(30.24) ರಷ್ಟಿದ್ದಾರೆ (ಕೋಷ್ಠಕ-5).[52] ಈ ಪ್ರಮಾಣವನ್ನು ತಾಲೂಕಿಗೆ ಹೋಲಿಸಿದರೆ ಶೇ 12.5 ರಷ್ಟು ಕಡಿಮೆ ಪರಿಶಿಷ್ಟರನ್ನು ಹೊಂದಿದೆ. ಒಟ್ಟು ಗ್ರಾಮಪಂಚಾಯತಿ ವಿಸ್ತೀರ್ಣ 1128.86 ಹೆಕ್ಟೇರು ಇದೆ. ಅಧ್ಯಯನಕ್ಕೆ ಆಯ್ಕೆ ಮಾಡಿಕೊಂಡ ಗ್ರಾಮಪಂಚಾಯತಿಗಳಲ್ಲಿ ಅತಿ ದೊಡ್ಡ ಗ್ರಾಮಪಂಚಾಯತಿಯಾಗಿದೆ. ಗ್ರಾಮಪಂಚಾಯತಿಯ ಸಾಕ್ಷರರ ವಿವರ ನೋಡಿದಾಗ ಒಟ್ಟು 4325(51.06) ರಷ್ಟಿದ್ದು, ಪುರುಷರು 2635(61.06) ಮತ್ತು ಮಹಿಳೆಯರು 1690(40.67)ರಷ್ಟಿದ್ದಾರೆ (ಕೋಷ್ಠಕ-4).[53] ತಾಲೂಕಿಗೆ ಅಂಕಿ-ಅಂಶಗಳನ್ನು ಹೋಲಿಸಿದರೆ ಸಾಕ್ಷರತೆಯ ದೃಷ್ಟಿಯಿಂದ ಉತ್ತಮ ಸ್ಥಿತಿಯಲ್ಲಿದೆ.

ಗ್ರಾಮಪಂಚಾಯತಿಯಲ್ಲಿ ಒಟ್ಟು 1,661 ಕುಟುಂಬಗಳಿದ್ದು, ಇದರಲ್ಲಿ 539(32.45) ಬಡತನರೇಖೆಗಿಂತ ಕೆಳಗಿನ ಕುಟುಂಬಗಳಿವೆ. ಇದರಲ್ಲಿ ಪರಿಶಿಷ್ಟ ಜಾತಿ 146(27.09), ಪರಿಶಿಷ್ಟ ಪಂಗಡ 51(9.46), ಹಿಂದುಳಿದ ವರ್ಗ 241(44.71) ಮತ್ತು ಸಾಮಾನ್ಯವರ್ಗ 101(18.74) ರಷ್ಟಿದ್ದಾರೆ.[54] ಇಲ್ಲಿ ಹಿಂದುಳಿದ ವರ್ಗ ಮತ್ತು ಪರಿಶಿಷ್ಟ ಜಾತಿ ಯವರು ಹೆಚ್ಚು ಬಡವರಿದ್ದಾರೆ. ಬಡತನ ರೇಖೆಗಿಂತ ಮೇಲಿರುವ ಕುಟುಂಬಗಳಲ್ಲಿ ಶೇ 55 ರಷ್ಟು ಸಾಮಾನ್ಯವರ್ಗಕ್ಕೆ ಸೇರಿದವರಿದ್ದಾರೆ. ಇದರಲ್ಲಿ ಲಿಂಗಾಯತರು, ಶೆಟ್ಟರು ಮತ್ತು ಜಂಗಮರು ಸೇರಿದ್ದಾರೆ. ಬಡತನ ರೇಖೆಗಿಂತ ಮೇಲಿರುವ ಕುಟುಂಬಗಳಲ್ಲಿ ಪರಿಶಿಷ್ಟಜಾತಿಯವರು ಕಡಿಮೆ ಸಂಖ್ಯೆಯಲ್ಲಿದ್ದಾರೆ(ಕೋಷ್ಟಕ-15). ಗ್ರಾಮಪಂಚಾಯತಿಯ ಸಾಮಾಜಿಕ, ಆರ್ಥಿಕ ಮತ್ತು ರಾಜಕೀಯ ವಿವರಗಳನ್ನು ನೋಡಿದಾಗ ಈ ಪ್ರದೇಶವು ಪೂರ್ತಿ ಒಣಭೂಮಿ ಕೃಷಿಯನ್ನು ಹೊಂದಿದ್ದು ಅಧಿಕ ಕೃಷಿಯೇತರ ಚಟುವಟಿಕೆಗಳು ಇಲ್ಲಿ ಉಜ್ಜನಿಯು ತಾಲೂಕು ಕೇಂದ್ರಕ್ಕೆ ದೂರವಿದ್ದು, ಅಧ್ಯಯನ ಕೈಗೊಂಡ ಪಂಚಾಯತಿ ಗಳಲ್ಲಿ ದೊಡ್ಡ ಗ್ರಾಮಪಂಚಾಯತಿಯಾಗಿದೆ. ಉಜ್ಜನಿಯು ತಾಲೂಕು ಮತ್ತು ಜಿಲ್ಲಾ ಪಂಚಾಯತಿ ಕ್ಷೇತ್ರವಾಗಿದೆ. ವಿಧಾನಸಭಾ ಶಾಸಕರು ಸಹ ಸ್ಥಳೀಯರೇ ಆಗಿದ್ದು ಗ್ರಾಮದ ಅಭಿವೃದ್ಧಿಯಲ್ಲಿ ತಾಲೂಕು ಪಂಚಾಯತ್ ಸದಸ್ಯರು, ಜಿಲ್ಲಾ ಪಂಚಾಯತ್ ಸದಸ್ಯರು ಮತ್ತು ಶಾಸಕರ ಪಾತ್ರವನ್ನು ಇಲ್ಲಿ ಗಮನಿಸಲಾಗಿದೆ. ಉಜ್ಜನಿ ಗ್ರಾಮಪಂಚಾಯತಿಯ ಆಡಳಿತವನ್ನು ಜನತಾದಳ ನಡೆಸುತ್ತಿದೆ. ಈ ಪ್ರದೇಶ ಅಭಿವೃದ್ಧಿ ಹೊಂದುತ್ತಿರುವ ಪ್ರದೇಶವಾಗಿದೆ. ಹಾಗಾಗಿ ಈ ಪಂಚಾಯತಿಯು ಅಧ್ಯಯನಕ್ಕೆ ಆಯ್ಕೆ ಮಾಡಿಕೊಂಡ ಗ್ರಾಮಪಂಚಾಯತಿಗಳಲ್ಲಿ ಇದು ಭಿನ್ನವಾಗಿದೆ. ಜಿಲ್ಲೆ, ತಾಲೂಕು ಮತ್ತು ಗ್ರಾಮಪಂಚಾಯತಿಗಳ ಆರ್ಥಿಕ, ಸಾಮಾಜಿಕ ಮತ್ತು ರಾಜಕೀಯ ವಿವರಗಳನ್ನು ಅಂಕಿ-ಅಂಶಗಳ ಮೂಲಕ ಚರ್ಚಿಸಲಾಗಿದೆ. ಪ್ರಸ್ತುತ ಅಧ್ಯಯನಕ್ಕೆ ಜಿಲ್ಲೆಯ ಆಯ್ಕೆ, ಜಿಲ್ಲೆಯಲ್ಲಿ ತಾಲೂಕುಗಳ ಆಯ್ಕೆ, ತಾಲೂಕುಗಳಲ್ಲಿ ಗ್ರಾಮಪಂಚಾಯತಿಗಳು ಆಯ್ಕೆಯ ನಮೂನೆಯ ವಿವರವನ್ನು ನೋಡಲಾಗಿದೆ. ರಾಜ್ಯದಲ್ಲಿ ಬಳ್ಳಾರಿಯು ಹಿಂದುಳಿದಿರುವ ಜಿಲ್ಲೆಗಳಲ್ಲಿ ಒಂದಾಗಿದೆ. ಈ ಹಿಂದುಳಿದಿರುವ ಜಿಲ್ಲೆಯಲ್ಲಿ ತಳಮಟ್ಟದ ವ್ಯವಸ್ಥೆಯಾದ ಗ್ರಾಮಪಂಚಾಯತಿಗಳು

ಕಾರ್ಯಕ್ಷಮತೆಯನ್ನು ಗುರುತಿಸುವುದು ಅಧ್ಯಯನದ ಮುಖ್ಯ ಉದ್ದೇಶವಾಗಿದೆ. ಈ ಹಿಂದುಳಿದಿರುವ ಜಿಲ್ಲೆಯಲ್ಲಿ ಒಂದು ನೀರಾವರಿ ಪ್ರದೇಶವನ್ನು ಹೊಂದಿರುವ ತಾಲೂಕಾದ ಹೊಸಪೇಟೆಯನ್ನು, ಜಿಲ್ಲೆಯ ಒಣಭೂಮಿ ಪ್ರದೇಶವನ್ನು ಹೊಂದಿರುವ ತಾಲೂಕಾದ ಕೂಡ್ಲಿಗಿ ತಾಲೂಕನ್ನು ಆರಿಸಿಕೊಳ್ಳಲಾಗಿದೆ. ಹೀಗೆ ಆಯ್ಕೆ ಮಾಡಿಕೊಂಡ ತಾಲೂಕುಗಳಲ್ಲಿ ತಲಾ ಎರಡು ಗ್ರಾಮಪಂಚಾಯತಿಗಳನ್ನು ಅಧ್ಯಯನಕ್ಕೆ ಇದೇ ಮಾದರಿಯಲ್ಲಿ ಆಯ್ಕೆ ಮಾಡಿಕೊಳ್ಳಾಲಾಗಿದೆ. ಹೊಸಪೇಟೆ ತಾಲೂಕಿನಲ್ಲಿ ನೀರಾವರಿ ಪ್ರದೇಶವಾದ ನಾಗೇನಹಳ್ಳಿ ಗ್ರಾಮಪಂಚಾಯತಿಯನ್ನು, ಒಣಭೂಮಿ ಪ್ರದೇಶವಾದ ಬೈಲುವದ್ದಿಗೆರೆ ಗ್ರಾಮಪಂಚಾಯತಿಯನ್ನು ಆಯ್ಕೆಮಾಡಿಕೊಳ್ಳಲಾಗಿದೆ. ಆದೇ ರೀತಿಯಾಗಿ ಕೂಡ್ಲಿಗಿ ತಾಲೂಕಿನ ನೀರಾವರಿ ಪ್ರದೇಶವಾದ ಹಿರೇಹೆಗ್ಡಾಳ್ ಗ್ರಾಮಪಂಚಾಯತಿಯನ್ನು ಮತ್ತು ಒಣಭೂಮಿ ಹಾಗೂ ಅಧಿಕ ಕೃಷಿಯೇತರ ಚಟುವಟಿಕೆಗಳನ್ನು ಹೊಂದಿರುವ ಉಜ್ಜನಿ ಗ್ರಾಮಪಂಚಾಯತಿಯನ್ನು ಆಯ್ಕೆಮಾಡಿಕೊಳ್ಳಲಾಗಿದೆ. ಈ ಅಧ್ಯಯನವು ಮೊದಲೇ ತಿಳಿಸಿರುವಂತೆ ಸೂಕ್ಷ್ಮ ಅಧ್ಯಯನವಾಗಿರುವುದರಿಂದ ಪ್ರಸ್ತುತ ಅಧ್ಯಯನವನ್ನು ನಾಲ್ಕು ಗ್ರಾಮಪಂಚಾಯತಿಗಳಿಗೆ ಸೀಮಿತಗೊಳಿಸಿಕೊಳ್ಳಲಾಗಿದೆ. ಈ ಅಧ್ಯಯನವು ನೀರಾವರಿ ಮತ್ತು ಒಣಭೂಮಿ ಪ್ರದೇಶವನ್ನು ಹೊಂದಿರುವ ಗ್ರಾಮಪಂಚಾಯತಿಗಳನ್ನು ಅಧ್ಯಯನಕ್ಕೆ ಆಯ್ಕೆ ಮಾಡಿಕೊಂಡಿರುವುದರಿಂದ ಇದೊಂದು ತುಲಾನಾತ್ಮಕ ಅಧ್ಯಯನವಾಗಿದೆ. ಒಟ್ಟಾರೆ ಈ ಅಧ್ಯಾಯವು ಕ್ಷೇತ್ರ ಪರಿಚಯದ ಒಟ್ಟು ಚಿತ್ರಣವನ್ನು ಇಲ್ಲಿ ವಿವರಿಸಲಾಗಿದೆ. ಅಧ್ಯಯನಕ್ಕೆ ಆಯ್ಕೆಮಾಡಿಕೊಂಡ ಈ ನಾಲ್ಕು ಗ್ರಾಮಪಂಚಾಯತಿಗಳು ಮೂಲಭೂತ ಅವಶ್ಯಕತೆಗಳನ್ನು ತಳಮಟ್ಟದಲ್ಲಿ ಎಷ್ಟರ ಮಟ್ಟಿಗೆ ಉದ್ದೇಶಿತ ವರ್ಗಕ್ಕೆ ಪೂರೈಸಿದೆ ಎಂಬುದನ್ನು ಮುಂದಿನ ಅಧ್ಯಾಯದಲ್ಲಿ ವಿಶ್ಲೇಷಿಸಲಾಗಿದೆ.

## ಅಡಿಟಿಪ್ಪಣಿಗಳು

1. ಚಂದ್ರಶೇಖರ್ ಟಿ.ಆರ್., *ಬಳ್ಳಾರಿ ಜಿಲ್ಲೆಯ ನಿಸರ್ಗ ಸಂಪತ್ತು*, ಗದಗ: ಪ್ರಭು ಪ್ರಿಟಿಂಗ್ ಪ್ರೆಸ್, 1994 ಪುಟ. 9
2. ಚಂದ್ರಶೇಖರ್ ಟಿ.ಆರ್(ಸಂ)., *ಜಿಲ್ಲಾ ಅಭಿವೃದ್ಧಿ ಮಾಹಿತಿಕೋಶ*, ಹಂಪಿ: ಕನ್ನಡ ವಿಶ್ವವಿದ್ಯಾಲಯ, 1999, ಪುಟ. 6
3. ಚಂದ್ರಶೇಖರ್ ಟಿ. ಆರ್., *ಪೂರ್ವೋಕ್ತ*, 1994, ಪು.15
4. ಗವರ್ನ್‌ಮೆಂಟ್ ಆಫ್ ಕರ್ನಾಟಕ, *ಹೈ ಪವರ್ ಕಮಿಟಿ ಫಾರ್ ರಿ ಆಡ್ರೆಸೆಲ್ ಆಫ್ ರೀಜನಲ್ ಇಂಬ್ಯಾಲೆನ್ಸ್ ಫೈನಲ್ ರಿಪೋರ್ಟ್, ಪಾರ್ಟ್ 3. ಜೂನ್-2002*, ಬೆಂಗಳೂರು: ಪುಟ.130
5. *ಡೈರೆಕ್ಟರ್ ಆಫ್ ಸೆನ್ಸಸ್, ಆಪರೇಷನ್, ಡಿಸ್ಟ್ರಿಕ್ಟ್ ಸೆನ್ಸಸ್ ಹ್ಯಾಂಡ್‌ಬುಕ್ ಬಳ್ಳಾರಿ ಡಿಸ್ಟ್ರಿಕ್ಟ್*, ಬೆಂಗಳೂರು: ಗವರ್ನ್‌ಮೆಂಟ್ ಆಫ್ ಕರ್ನಾಟಕ-1991
6. ಗವರ್ನ್‌ಮೆಂಟ್ ಆಫ್ ಕರ್ನಾಟಕ, *ಪೂರ್ವೋಕ್ತ*

7. ಶೇಷಾದ್ರಿ ಬಿ., ಬಳ್ಳಾರಿ ಜಿಲ್ಲೆಯಲ್ಲಿ ಕೈಗಾರಿಕರಣ ಮತ್ತು ಜನಾಂದೋಲನ, ಹಂಪಿ: ಕನ್ನಡ ವಿಶ್ವವಿದ್ಯಾಲಯ 1998 ಪುಟ. 1

8. ಚಂದ್ರಶೇಖರ್ ಟಿ. ಆರ್., ಪೂರ್ವೋಕ್ತ, 1999, ಪುಟ. 49

9. ಶೇಷಾದ್ರಿ, ಬಿ., ಪೂರ್ವೋಕ್ತ, ಪುಟ.11

10. ಅದೇ, ಪುಟ. 15

11. ಮುಖ್ಯ ಯೋಜನಾಧಿಕಾರಿಗಳು, ಜಿಲ್ಲಾ ಪಂಚಾಯತ್ ಸದಸ್ಯರ ಪಟ್ಟಿ, ಬಳ್ಳಾರಿ: ಜಿಲ್ಲಾ ಪಂಚಾಯತ್ ಕಛೇರಿ, 2001

12. ಮುಖ್ಯ ಯೋಜನಾಧಿಕಾರಿಗಳು, ತಾಲೂಕು ಪಂಚಾಯತ್ ಸದಸ್ಯರ ಪಟ್ಟಿ, ಬಳ್ಳಾರಿ: ಜಿಲ್ಲಾ ಪಂಚಾಯತ್ ಕಛೇರಿ, 2001

13. ಮೈಸೂರು ಸ್ಟೇಟ್ ಗ್ಯಾಜಟಿಯರ್, ಬಳ್ಳಾರಿ ಡಿಸ್ಟ್ರಿಕ್ಟ್ ಗ್ಯಾಜಿಟೆಯರ್, ಬೆಂಗಳೂರು: ಮೈಸೂರು ಸರಕಾರ, 1972, ಪುಟ. 495

14. ಅದೇ, ಪುಟ. 497

15. ಚಂದ್ರಶೇಖರ್ ಟಿ. ಆರ್., ಪೂರ್ವೋಕ್ತ, 1994, ಪುಟ.14

16. ಮುಖ್ಯ ಯೋಜನಾಧಿಕಾರಿಗಳು, ಗ್ರಾಮಪಂಚಾಯತಿ ಸದಸ್ಯರ ಪಟ್ಟಿ, ಬಳ್ಳಾರಿ: ಜಿಲ್ಲಾ ಪಂಚಾಯತ್ ಕಛೇರಿ, 2001

17. ಗ್ರಾಮಪಂಚಾಯತಿ ಸದಸ್ಯರ ಪಟ್ಟಿ, ಬಳ್ಳಾರಿ, ಪೂರ್ವೋಕ್ತ, 2001

18. ಶೇಷಾದ್ರಿ, ಬಿ., ಪೂರ್ವೋಕ್ತ, ಪುಟ.24

19. ಅದೇ, ಪುಟ.27

20. ಗವರ್ನ್‌ಮೆಂಟ್ ಆಫ್ ಕರ್ನಾಟಕ, ಪೂರ್ವೋಕ್ತ, ಪುಟ. *106*

21. ಚಂದ್ರಶೇಖರ್ ಟಿ. ಆರ್., ಪೂರ್ವೋಕ್ತ, 1994, ಪುಟ.36

22. ಗವರ್ನ್‌ಮೆಂಟ್ ಆಫ್ ಕರ್ನಾಟಕ, ಪೂರ್ವೋಕ್ತ, ಪುಟ. *22*

*23. ಅದೇ, ಪುಟ.106*

24. ಚಂದ್ರಶೇಖರ್ ಟಿ. ಆರ್., ಪೂರ್ವೋಕ್ತ, 1994, ಪುಟ.13

25. ಗವರ್ನ್‌ಮೆಂಟ್ ಆಫ್ ಕರ್ನಾಟಕ, ಪೂರ್ವೋಕ್ತ, ಪುಟ.*126*

*25. ಅದೇ,* ಪುಟ.106

27. ಬಳ್ಳಾರಿ ಡಿಸ್ಟ್ರಿಕ್ಟ್ ಹ್ಯಾಂಡ್‌ಬುಕ್, ಪೂರ್ವೋಕ್ತ

28. ಕಾರ್ಯನಿರ್ವಾಹಕ ಅಧಿಕಾರಿಗಳು, *ಗ್ರಾಮಪಂಚಾಯತಿ ಸದಸ್ಯರ ಪಟ್ಟಿ, 1999,* ಹೊಸಪೇಟೆ: ತಾಲೂಕು ಪಂಚಾಯತಿ ಕಾರ್ಯಾಲಯ, 2001

29. ಚಂದ್ರಶೇಖರ್ ಟಿ. ಆರ್., *ಪೂರ್ವೋಕ್ತ,* 1994, ಪುಟ.24

30. ಗವರ್ನ್‌ಮೆಂಟ್ ಆಫ್ ಕರ್ನಾಟಕ, *ಪೂರ್ವೋಕ್ತ, ಪುಟ.126*

31. ಬಳ್ಳಾರಿ ಡಿಸ್ಟ್ರಿಕ್ಟ್ ಹ್ಯಾಂಡ್‌ಬುಕ್, ಪೂರ್ವೋಕ್ತ

32. ಬಳ್ಳಾರಿ ಡಿಸ್ಟ್ರಿಕ್ಟ್ ಹ್ಯಾಂಡ್‌ಬುಕ್, ಪೂರ್ವೋಕ್ತ

33. ಗವರ್ನ್‌ಮೆಂಟ್ ಆಫ್ ಕರ್ನಾಟಕ, *ಪೂರ್ವೋಕ್ತ, ಪುಟ.106*

34. ಕಾರ್ಯನಿರ್ವಾಹಕ ಅಧಿಕಾರಿಗಳು, *ಗ್ರಾಮಪಂಚಾಯತಿ ಸದಸ್ಯರ ಪಟ್ಟಿ, 1999,* ಕೂಡ್ಲಿಗಿ : ತಾಲೂಕು ಪಂಚಾಯತಿ ಕಾರ್ಯಾಲಯ, 2001

35. ಕಾರ್ಯನಿರ್ವಾಹಕ ಅಧಿಕಾರಿಗಳು, *ಗ್ರಾಮಪಂಚಾಯತಿ ಸದಸ್ಯರ ಆಯ್ಕೆ ಪಟ್ಟಿ, 1999,* ಕೂಡ್ಲಿಗಿ : ತಾಲೂಕು ಪಂಚಾಯತಿ ಕಾರ್ಯಾಲಯ, 2001

36. ಬಸವನದುರ್ಗದ ಹಿಂದಿನ ಹೆಸರು ಗುಡಿ ಒಬಳಾಪುರ ಜನಗಣತಿಯಲ್ಲಿ ಗುಡಿ ಒಬಳಾಪುರ ಎಂದು ಹೇಳಲಾಗಿದೆ. ಇತ್ತೀಚಿಗೆ ಈ ಗ್ರಾಮವನ್ನು ಬಸವನದುರ್ಗ ಎಂದು ಕರೆಯಲಾಗುತ್ತಿದೆ.

37. ಪಂಚಾಯತಿ ಕಾರ್ಯದರ್ಶಿಗಳು, *ಗ್ರಾಮಪಂಚಾಯತ್ ಬೇಡಿಕೆ ರಿಜಿಸ್ಟರ್,* ನಾಗೇನಹಳ್ಳಿ: ಗ್ರಾಮಪಂಚಾಯತಿ ಕಛೇರಿ, 2001

38. ಗ್ರಾಮಪಂಚಾಯತ್ ಬೇಡಿಕೆ ರಿಜಿಸ್ಟರ್, ನಾಗೇನಹಳ್ಳಿ, ಪೂರ್ವೋಕ್ತ

39. ಪಂಚಾಯತ್ ಕಾರ್ಯದರ್ಶಿಗಳು, *ಗ್ರಾಮೀಣ ಕುಟುಂಬಗಳ ಆರ್ಥಿಕ ಸಮೀಕ್ಷೆಯ ಗ್ರಾಮವಾರು ಯಾದಿ 1997-98.* ನಾಗೇನಹಳ್ಳಿ : ಗ್ರಾಮಪಂಚಾಯತಿ ಕಛೇರಿ, 2001

40. ಪಂಚಾಯತ್ ಕಾರ್ಯದರ್ಶಿಗಳು, *ಗ್ರಾಮಪಂಚಾಯತಿ ಸಾಮಾನ್ಯ ಮಾಹಿತಿ ಪುಸ್ತಕ,* ನಾಗೇನಹಳ್ಳಿ: ಗ್ರಾಮಪಂಚಾಯತಿ ಕಛೇರಿ, 2001

41. *ಸಾಮಾನ್ಯ ಮಾಹಿತಿ ಪುಸ್ತಕ,* ನಾಗೇನಹಳ್ಳಿ, ಪೂರ್ವೋಕ್ತ

42. ಪಂಚಾಯತಿ ಕಾರ್ಯದರ್ಶಿಗಳು, *ಗ್ರಾಮಪಂಚಾಯತಿ ಬೇಡಿಕೆ ರಿಜಿಸ್ಟರ್,* ಬೈಲುವದ್ದಿಗೆರೆ : ಗ್ರಾಮಪಂಚಾಯತ್ ಕಛೇರಿ, 2001

43. *ಗ್ರಾಮಪಂಚಾಯತಿ ಬೇಡಿಕೆ ರಿಜಿಸ್ಟರ್,* ಬೈಲುವದ್ದಿಗೆರೆ, ಪೂರ್ವೋಕ್ತ

44. ಪಂಚಾಯತಿ ಕಾರ್ಯದರ್ಶಿಗಳು, *ಗ್ರಾಮೀಣ ಕುಟುಂಬಗಳ ಆರ್ಥಿಕ ಸಮೀಕ್ಷೆಯ ಗ್ರಾಮವಾರು ಯಾದಿ 1997-98.* ಬೈಲುವದ್ದಿಗೆರೆ : ಗ್ರಾಮಪಂಚಾಯತಿ ಕಛೇರಿ, 2001

45. ಪಂಚಾಯತಿ ಕಾರ್ಯದರ್ಶಿಗಳು, *ಗ್ರಾಮಪಂಚಾಯತಿ ಸಾಮಾನ್ಯ ಮಾಹಿತಿ ಪುಸ್ತಕ,* ಬೈಲುವದ್ದಿಗೆರೆ : ಗ್ರಾಮಪಂಚಾಯತಿ ಕಛೇರಿ, 2001

46. *ಗ್ರಾಮಪಂಚಾಯತಿ ಸಾಮಾನ್ಯ ಮಾಹಿತಿ ಪುಸ್ತಕ,* ಬೈಲುವದ್ದಿಗೆರೆ, ಪೂರ್ವೋಕ್ತ

47. ಪಂಚಾಯತಿ ಕಾರ್ಯದರ್ಶಿಗಳು, *ಗ್ರಾಮಪಂಚಾಯತಿ ಬೇಡಿಕೆ ರಿಜಿಸ್ಟರ್,* ಹಿರೇಹೆಗ್ಡಾಳ್: ಗ್ರಾಮಪಂಚಾಯತಿ ಕಛೇರಿ, 2001

48. ಪಂಚಾಯತಿ ಕಾರ್ಯದರ್ಶಿಗಳು, *ಗ್ರಾಮೀಣ ಕುಟುಂಬಗಳ ಆರ್ಥಿಕ ಸಮೀಕ್ಷೆಯ ಗ್ರಾಮವಾರು ಯಾದಿ 1997-98.* ಹಿರೇ ಹೆಗ್ಡಾಳ್: ಗ್ರಾಮಪಂಚಾಯತಿ ಕಛೇರಿ, 2001

49. ಪಂಚಾಯತಿ ಕಾರ್ಯದರ್ಶಿಗಳು, *ಗ್ರಾಮಪಂಚಾಯತಿ ಸಾಮಾನ್ಯ ಮಾಹಿತಿ ಪುಸ್ತಕ,* ಹಿರೇಹೆಗ್ಡಾಳ್: ಗ್ರಾಮಪಂಚಾಯತಿ ಕಛೇರಿ, 2001

50. ಪಂಚಾಯತಿ ಕಾರ್ಯದರ್ಶಿಗಳು, *ಗ್ರಾಮಪಂಚಾಯತಿ ಬೇಡಿಕೆ ರಿಜಿಸ್ಟರ್,* ಹಿರೇಹೆಗ್ಡಾಳ್: ಗ್ರಾಮಪಂಚಾಯತಿ ಕಛೇರಿ, 2001

51. ಪಂಚಾಯತಿ ಕಾರ್ಯದರ್ಶಿಗಳು, *ಗ್ರಾಮಪಂಚಾಯತಿ ಸಾಮಾನ್ಯ ಮಾಹಿತಿ ಪುಸ್ತಕ,* ಹಿರೇಹೆಗ್ಡಾಳ್: ಗ್ರಾಮಪಂಚಾಯತಿ ಕಛೇರಿ, 2001

52. ಪಂಚಾಯತಿ ಕಾರ್ಯದರ್ಶಿಗಳು, *ಗ್ರಾಮಪಂಚಾಯತಿ ಸಾಮಾನ್ಯ ಮಾಹಿತಿ ಪುಸ್ತಕ* ಉಜ್ಜನಿ : ಗ್ರಾಮಪಂಚಾಯತಿ ಕಛೇರಿ, 2001

53. ·ಗ್ರಾಮಪಂಚಾಯತಿ ಸಾಮಾನ್ಯ ಮಾಹಿತಿ ಪುಸ್ತಕ, ಉಜ್ಜನಿ, ಪೂರ್ವೋಕ್ತ

54. ಪಂಚಾಯತಿ ಕಾರ್ಯದರ್ಶಿಗಳು, *ಗ್ರಾಮೀಣ ಕುಟುಂಬಗಳ ಆರ್ಥಿಕ ಸಮೀಕ್ಷೆಯ ಗ್ರಾಮವಾರು ಯಾದಿ 1997-98.* ಉಜ್ಜನಿ: ಗ್ರಾಮಪಂಚಾಯತಿ ಕಛೇರಿ, 2001

**ಕೋಷ್ಟಕ -1**

**ಬಳ್ಳಾರಿ ಜಿಲ್ಲೆಯ ತಾಲೂಕುವಾರು ಜನಸಂಖ್ಯೆ ಮತ್ತು ಸಾಕ್ಷರರ ಲಿಂಗವಾರು ವಿವರ 2001**

| ಕ್ರ. ಸಂ. | ತಾಲೂಕುಗಳು | ಒಟ್ಟು ಜನಸಂಖ್ಯೆ | | | ಒಟ್ಟು ಸಾಕ್ಷರರು | | |
|---|---|---|---|---|---|---|---|
| | | ಪುರುಷರು | ಮಹಿಳೆಯರು | ಒಟ್ಟು | ಪುರುಷರು | ಮಹಿಳೆಯರು | ಒಟ್ಟು |
| 01 | ಬಳ್ಳಾರಿ | 3,18,342 | 3,07,087 | 6,25,429 | 1,96,235 (71.86) | 1,29,675 (49.04) | 3,25,910 (60.64) |
| 02 | ಹಡಗಲಿ | 84,975 | 83,045 | 1,68,020 | 52,342 (71.69) | 34,850 (48.59) | 87,192 (60.43) |
| 03 | ಹಗರಿಬೊಮ್ಮನಹಳ್ಳಿ | 80,793 | 79,107 | 1,59,900 | 48,313 (71.25) | 30,599 (45.74) | 78,912 (58.58) |
| 04 | ಹೊಸಪೇಟೆ | 1,89,200 | 1,84,465 | 3,73,665 | 1,16,599 (71.68) | 80,596 (50.62) | 1,97,195 (61.29) |
| 05 | ಕೂಡ್ಲಿಗಿ | 1,39,170 | 1,32,720 | 2,71,890 | 85,366 (72.58) | 53,498 (47.65) | 1,38,864 (60.42) |
| 06 | ಸಂಡೂರು | 98,244 | 92,915 | 1,91,159 | 53,211 (64.66) | 32,881 (42.24) | 86,092 (53.76) |
| 07 | ಶಿರುಗುಪ್ಪ | 1,17,757 | 1,17,422 | 2,35,179 | 56,099 (57.58) | 30.338 (30.83) | 86,437 (44.14) |
| | ಬಳ್ಳಾರಿ ಜಿಲ್ಲೆ | 10,28,481 | 9,96,761 | 20,25,242 | 6,08,165 (69.59) | 3,92,437 (46.16) | 10,00,602 (58.04) |
| | ಕರ್ನಾಟಕ ರಾಜ್ಯ | 2,68,56,343 | 2,58,77,615 | 5,27,33,958 | 17817682 (76.29) | 12957306 (57.45) | 30774988 (67.04) |

ಸೂಚನೆ : 0-6 ವಯೋಮಾನದ ಜನಸಂಖ್ಯೆ ಹೊರತುಪಡಿಸಿ ಗಣನೆ ಮಾಡಿದ ಸಾಕ್ಷರತೆ, ಆವರಣದಲ್ಲಿರುವುದು ಒಟ್ಟು ಜನಸಂಖ್ಯೆಯ ಸಾಕ್ಷರತೆಯನ್ನು ಶೇಕಡವಾರು ಪ್ರಮಾಣದಲ್ಲಿ ಸೂಚಿಸುತ್ತದೆ.

ಮೂಲ : *ಗವರ್ನ್‌ಮೆಂಟ್ ಆಫ್ ಕರ್ನಾಟಕ, ಹೈ ಪವರ್ ಕಮಿಟಿ ಫಾರ್ ರಿ ಅಡ್ರೆಸೆಲ್ ಆಫ್ ರೀಜನಲ್ ಇಂಬ್ಯಾಲೆನ್ಸ್ ಫೈನಲ್ ರಿಪೋರ್ಟ್, ಪಾರ್ಟ್-VII ಅಪೆಂಡಿಕ್ಸ್,* ಜೂನ್ 2002 ಬೆಂಗಳೂರು : 2001

## ಕೋಷ್ಟಕ -2

## ಬಳ್ಳಾರಿ ಜಿಲ್ಲೆಯ ತಾಲೂಕುವಾರು ಶ್ರಮಶಕ್ತಿಯ ವಲಯಗಳ ಲಿಂಗವಾರು ವಿವರ 1991

| ಕ್ರ. ಸಂ. | ಪ್ರದೇಶ | ಪ್ರಾಥಮಿಕ ವಲಯ | | | ದ್ವಿತೀಯ ವಲಯ | | | ತೃತೀಯ ವಲಯ | | | ಮುಖ್ಯ ಕೆಲಸಗಾರರು | | |
|---|---|---|---|---|---|---|---|---|---|---|---|---|---|
| | | ಪುರುಷರು | ಮಹಿಳೆಯರು | ಒಟ್ಟು | ಪುರುಷರು | ಮಹಿಳೆಯರು | ಒಟ್ಟು | ಪುರುಷರು | ಮಹಿಳೆಯರು | ಒಟ್ಟು | ಪುರುಷರು | ಮಹಿಳೆಯರು | ಒಟ್ಟು |
| 01 | ಬಳ್ಳಾರಿ | 69991<br>(52.87) | 59805<br>(81.78) | 129796<br>(63.16) | 20212<br>(15.27) | 4535<br>(6.20) | 24747<br>(12.04) | 42174<br>(3.43) | 8788<br>(12.02) | 50962<br>(24.80) | 132377<br>(100) | 73128<br>(100) | 205505<br>(100) |
| 02 | ಹಡಗಲಿ | 32551<br>(82.31) | 24021<br>(93.46) | 56572<br>(86.70) | 2003<br>(5.09) | 649<br>(2.53) | 2652<br>(4.06) | 4991<br>(12.68) | 1032<br>(4.02) | 6023<br>(9.24) | 39345<br>(100) | 25702<br>(100) | 65247<br>(100) |
| 03 | ಹ.ಬೊ.ಹಳ್ಳಿ | 30242<br>(81.83) | 22312<br>(93.64) | 52554<br>(86.46) | 2221<br>(6.01) | 568<br>(2.38) | 2729<br>(4.49) | 4490<br>(12.25) | 948<br>(3.99) | 5438<br>(8.95) | 36953<br>(100) | 23828<br>(100) | 60781<br>(100) |
| 04 | ಹೊಸಪೇಟೆ | 50492<br>(59.95) | 37146<br>(86.68) | 87638<br>(68.97) | 11233<br>(13.33) | 1213<br>(2.83) | 12446<br>(9.80) | 22493<br>(26.71) | 4493<br>(10.48) | 26987<br>(21.23) | 84218<br>(100) | 42853<br>(100) | 127071<br>(100) |
| 05 | ಕೂಡ್ಲಿಗಿ | 48444<br>(82.03) | 29538<br>(91.32) | 77982<br>(85.32) | 3254<br>(5.51) | 1215<br>(3.76) | 4469<br>(4.89) | 7357<br>(12.46) | 1593<br>(4.92) | 8950<br>(9.79) | 59055<br>(100) | 32346<br>(100) | 91401<br>(100) |
| 06 | ಸಂಡೂರು | 34541<br>(80.96) | 24790<br>(91.57) | 59331<br>(85.08) | 1913<br>(4.48) | 351<br>(1.30) | 2264<br>(3.25) | 6212<br>(14.56) | 1931<br>(7.13) | 8143<br>(11.67) | 42666<br>(100) | 27072<br>(100) | 69738<br>(100) |
| 07 | ಸಿರುಗುಪ್ಪ | 43957<br>(83.14) | 33849<br>(94.84) | 77806<br>(87.86) | 2670<br>(5.05) | 564<br>(1.58) | 3234<br>(3.65) | 6240<br>(11.80) | 1276<br>(3.58) | 7516<br>(8.49) | 52867<br>(100) | 35689<br>(100) | 88556<br>(100) |
| | ಬಳ್ಳಾರಿ ಜಿಲ್ಲೆ | 310218<br>(69.29) | 231461<br>(88.81) | 541679<br>(76.48) | 43506<br>(9.71) | 9095<br>(3.49) | 52.601<br>(7.43) | 93957<br>(20.99) | 20062<br>(7.70) | 114019<br>(16.09) | 447681<br>(100) | 260618<br>(100) | 708299<br>(100) |
| | ಕರ್ನಾಟಕ ರಾಜ್ಯ | 7699223<br>(62.67) | 3948344<br>(78.86) | 11647970<br>(67.36) | 1740833<br>(14.16) | 539731<br>(10.78) | 2279101<br>(13.18) | 2845284<br>(23.17) | 518702<br>(10.36) | 3365046<br>(19.46) | 12285340<br>(100) | 5006777<br>(100) | 17292117<br>(100) |

ಮೂಲ : ಆವಣದಲ್ಲಿರುವುದು ಜನಸಂಖ್ಯೆಯ ಲಿಂಗವಾರು, ವಲಯವಾರು ಅವಲಂಬನೆಯನ್ನು ಶೇಕಡವಾರು ಪ್ರಮಾಣದಲ್ಲಿ ತಿಳಿಸುತ್ತದೆ.

ಮೂಲ : ಡೈರೆಕ್ಟರ್ ಆಫ್ ಸೆನ್ಸೆಸ್ ಆಪರೇಷನ್, *ಡಿಸ್ಟ್ರಿಕ್ಟ್ ಸೆನ್ಸಸ್ ಹ್ಯಾಂಡ್ ಬುಕ್, ಬಳ್ಳಾರಿ ಡಿಸ್ಟ್ರಿಕ್ಟ್,* ಬೆಂಗಳೂರು : ಗವರ್ನಮೆಂಟ್ ಆಫ್ ಕರ್ನಾಟಕ, 1991

## ಕೋಷ್ಟಕ -3

## ರಾಜ್ಯಕ್ಕೆ ಹೋಲಿಸಿ ಜಿಲ್ಲೆ, ತಾಲೂಕುಗಳ ಕೆಲವು ಸಾಮಾನ್ಯ ಅಂಕಿ ಅಂಶಗಳು 1991 ಮತ್ತು 2001

| ಕ್ರ. ಸಂ. | ವಿವರಗಳು | ತಾಲೂಕುಗಳು | | | | | | | ಜಿಲ್ಲೆ | ರಾಜ್ಯ |
|---|---|---|---|---|---|---|---|---|---|---|
| | | ಬಳ್ಳಾರಿ | ಹಡಗಲಿ | ಹ.ಬೋ.ಹಳ್ಳಿ | ಹೊಸಪೇಟೆ | ಕೂಡ್ಲಿಗಿ | ಸಂಡೂರು | ಸಿರುಗುಪ್ಪ | ಬಳ್ಳಾರಿ | ಕರ್ನಾಟಕ |
| 01 | ವಿಸ್ತೀರ್ಣ (ಚ.ಕಿ.ಮೀ) (1991ರ ಜನಗಣತಿ) | 1688.83 (19.19) | 947.85 (11.22) | 973.92 (11.53) | 934.19 (11.05) | 1601.54 (18.96) | 1231.15 (14.57) | 1041.85 (12.35) | 8447.00 (4.40) | 191791.00 |
| 02 | ಗ್ರಾಮಗಳ ಸಂಖ್ಯೆ (1991ರ ಜನಗಣತಿ) | 100 (19.34) | 53 (10.25) | 52 (10.15) | 71 (13.73) | 82 (15.86) | 76 (14.70) | 83 (16.05) | 517 (100.00) | 27084 |
| 03 | ಕುಟುಂಬಗಳ ಸಂಖ್ಯೆ (1991ರ ಜನಗಣತಿ) | 86242 (30.08) | 25393 (8.50) | 22440 (7.78) | 56256 (19.51) | 36804 (12.77) | 27159 (9.42) | 33498 (11.61) | 288.292 (3.62) | 7963054 |
| 04 | ಪರಿಶಿಷ್ಟರ ಪ್ರಮಾಣ (1991ರ ಜನಗಣತಿ) | 95539 (18.86) | 35282 (23.95) | 26238 (19.43) | 102966 (32.91) | 98018 (44.66) | 54798 (35.04) | 48280 (25.93) | 459121 (27.72) | 9284970 (20.64) |
| 05 | ಸಾಕ್ಷರತೆ ಪ್ರಮಾಣ | 325910 (60.64) | 87192 (60.43) | 78912 (58.58) | 197195 (61.29) | 138864 (60.42) | 86092 (53.76) | 86437 (44.14) | 1000602 (58.04) | 30774988 (67.04) |
| 06 | ಲಿಂಗಪರಿಮಾಣ | 965 | 977 | 979 | 975 | 954 | 946 | 997 | 969 | 964 |
| 07 | ಕೃಷಿ ಅವಲಂಬಿತ ವರ್ಗ | 126000 (24.35) | 55747 (10.77) | 51674 (9.98) | 79649 (15.39) | 66070 (12.77) | 51051 (9.87) | 76977 (14.88) | 517268 (4.74) | 10915592 |
| 08 | ಸಾಗುವಳಿ ಪ್ರದೇಶ (ಹೆಕ್ಟೇರುಗಳಲ್ಲಿ) | 139200 (113.38) | 76150 (111.21) | 77429 (132.85) | 49216 (125.28) | 92571 (107.28) | 41798 (108.52) | 107232 (125.21) | 583596 (116.89) | 12311547 (117.47) |
| 09 | ನೀರಾವರಿ ಪ್ರದೇಶ (ಹೆಕ್ಟೇರುಗಳಲ್ಲಿ) | 61952 (50.46) | 11980 (17.50) | 18852 (32.35) | 23007 (58.61) | 8501 (9.85) | 4237 (11.00) | 23267 (27.17) | 151796 (30.40) | 2491821 (23.76) |
| 10 | ಕೈಗಾರಿಕ ಘಟಕಗಳು | 3139 (31.50) | 587 (5.89) | 836 (8.39) | 2864 (28.74) | 755 (7.58) | 811 (8.14) | 972 (9.76) | 9964 (100.00) | 254159 |

| ಕ್ರ. ಸಂ. | ವಿವರಗಳು | ತಾಲೂಕುಗಳು | | | | | | | ಜಿಲ್ಲೆ | ರಾಜ್ಯ |
|---|---|---|---|---|---|---|---|---|---|---|
| | | ಬಳ್ಳಾರಿ | ಹಡಗಲಿ | ಹ.ಬೋ.ಹಳ್ಳಿ | ಹೊಸಪೇಟೆ | ಕೂಡ್ಲಿಗಿ | ಸಂಡೂರು | ಸಿರುಗುಪ್ಪ | ಬಳ್ಳಾರಿ | ಕರ್ನಾಟಕ |
| 11 | ಸಣ್ಣ ಉದ್ದಿಮೆಗಳು | 2973 | 574 | 819 | 2823 | 740 | 803 | 938 | 9670 | 244068 |
| 12 | ಬ್ಯಾಂಕ್‌ಗಳ ಸಂಖ್ಯೆ | 52 (33.12) | 14 (8.92) | 12 (7.64) | 32 (20.38) | 16 (10.19) | 15 (9.55) | 16 (10.19) | 157 (100.00) | 4607 |
| 13 | ಅಂಚೆ ಕಚೇರಿಗಳು | 96 (24.42) | 37 (9.41) | 38 (9.66) | 56 (14.25) | 76 (19.34) | 37 (9.41) | 53 (13.49) | 393 (100.00) | 9888 |
| 14 | ರಸ್ತೆಗಳು ಪ್ರತಿ 100 ಕಿ.ಮೀ | 54 | 74 | 56 | 59 | 53 | 44 | 55 | 395 | 17444 |
| 15 | ವೈದ್ಯರ ಸಂಖ್ಯೆ (ಪ್ರತಿ 10,000 ಜನಸಂಖ್ಯೆಗೆ) | 04 | 02 | 02 | 01 | 01 | 01 | 02 | 03 | 03 |
| 16 | ಹಾಸಿಗೆಗಳ ಸಂಖ್ಯೆ(ಪ್ರತಿ 10,000 ಜನಸಂಖ್ಯೆಗೆ) | 18 | 05 | 03 | 05 | 06 | 03 | 04 | 08 | 08 |
| 17 | ಕುಡಿಯುವ ನೀರು(ಪ್ರತಿ ದಿನ ತಲಾ ಮಾನವನಿಗೆ ದೊರೆಯುವ ನೀರು) | 43 | 51 | 52 | 51 | 35 | 58 | 38 | 45 | 56 |

ಸೂಚನೆ : ಕುಟುಂಬಗಳ ಸಂಖ್ಯೆ, ಪರಿಶಿಷ್ಟರ ಸಂಖ್ಯೆ, ಕೃಷಿ ಅವಲಂಬಿತ ವರ್ಗ ಇವುಗಳಿಗೆ ಸಂಬಂಧಿಸಿದಂತೆ 2001ನೇ ಜನಗಣತಿಯ ಅಂಕಿ ಅಂಶಗಳು ಲಭ್ಯವಿಲ್ಲದ ಕಾರಣ 1991ರ ಜನಗಣತಿಯ ಅಂಕಿ ಅಂಶಗಳನ್ನು ಬಳಸಿಕೊಳ್ಳಲಾಗಿದೆ. ಆವರಣದಲ್ಲಿರುವುದು ಶೇಕಡವಾರು ಪ್ರಮಾಣವನ್ನು ಸೂಚಿಸುತ್ತದೆ.

ಮೂಲ : 1. ಡೈರೆಕ್ಟರ್ ಆಫ್ ಸೆನ್ಸಸ್ ಆಪರೇಷನ್, *ಡಿಸ್ಟ್ರಿಕ್ಟ್ ಸೆನ್ಸಸ್ ಹ್ಯಾಂಡ್ ಬುಕ್, ಬಳ್ಳಾರಿ ಡಿಸ್ಟ್ರಿಕ್ಟ್*, ಬೆಂಗಳೂರು : ಗವರ್ನಮೆಂಟ್ ಆಫ್ ಕರ್ನಾಟಕ, 1991

2. ಗವರ್ನ್‌ಮೆಂಟ್ ಆಫ್ ಕರ್ನಾಟಕ, *ಹೈ ಪವರ್ ಕಮಿಟಿ ಫಾರ್ ರಿ ಅಡ್ರೆಸೆಲ್ ಆಫ್ ರೀಜನಲ್ ಇಂಬ್ಯಾಲೆನ್ಸ್ ಫೈನಲ್ ರಿಪೋರ್ಟ್, ಪಾರ್ಟ್-VII ಅಪೆಂಡಿಕ್ಸ್*, ಜೂನ್ 2002, ಬೆಂಗಳೂರು : 2001

## ಕೋಷ್ಟಕ -4

## ಗ್ರಾಮಪಂಚಾಯತಿ, ತಾಲೂಕು, ಜಿಲ್ಲೆಯ ಲಿಂಗವಾರು ಜನಸಂಖ್ಯೆ ಮತ್ತು ಸಾಕ್ಷರರ ವಿವರ 1991

| ಕ್ರ. ಸಂ. | ಜಿಲ್ಲೆ, ತಾಲೂಕು ಮತ್ತು ಗ್ರಾಮ ಪಂಚಾಯತಿ | ವಿಸ್ತೀರ್ಣ | ಕುಟುಂಬಗಳ ಸಂಖ್ಯೆ | ಒಟ್ಟು ಜನಸಂಖ್ಯೆ | | | ಒಟ್ಟು ಸಾಕ್ಷರರು | | |
|---|---|---|---|---|---|---|---|---|---|
| | | | | ಪುರುಷರು | ಮಹಿಳೆಯರು | ಒಟ್ಟು | ಪುರುಷರು | ಮಹಿಳೆಯರು | ಒಟ್ಟು |
| 01 | ಬಳ್ಳಾರಿ ಜಿಲ್ಲೆ | 08447 (4.40) | 288292 (3.62) | 842300 | 813700 | 1656000 | 401043 (59.61) | 211844 (32.20) | 612887 (45.89) |
| 02 | ಹೊಸಪೇಟೆ ತಾಲೂಕು | 934.19 (11.05) | 56256 (19.51) | 159357 (18.92) | 153540 (18.86) | 312897 (18.89) | 79538 (61.25) | 46215 (36.89) | 1,25,763 (49.89) |
| 03 | ನಾಗೇನಹಳ್ಳಿ | 3090.68 (ಹೆಕ್ಟೇರುಗಳಲ್ಲಿ) | 982 (1.75) | 2593 (1.63) | 2500 (1.63) | 5093 (1.63) | 1155 (44.54) | 506 (20.24) | 1661 (32.61) |
| 04 | ಬೈಲುವದ್ದಿಗೆರೆ | 5040.56 (ಹೆಕ್ಟೇರುಗಳಲ್ಲಿ) | 1312 (2.33) | 3048 (1.91) | 2837 (1.86) | 5885 (1.88) | 1310 (42.89) | 346 (12.20) | 1656 (28.14) |
| 05 | ಕೂಡ್ಲಿಗಿ ತಾಲೂಕು | 1601.54 (18.96) | 36804 (12.77) | 111819 (13.28) | 107661 (13.23) | 219480 (13.25) | 53139 (59.78) | 26242 (30.51) | 79381 (45.39) |
| 06 | ಹಿರೇಹೆಗ್ಡಾಳ್ | 3463.00 (ಹೆಕ್ಟೇರುಗಳಲ್ಲಿ) | 804 (2.18) | 2014 (1.80) | 1979 (1.84) | 3756 (1.82) | 1207 (59.93) | 788 (39.81) | 1995 (49.96) |
| 07 | ಉಜ್ಜಿನಿ | 11288.86 (ಹೆಕ್ಟೇರುಗಳಲ್ಲಿ) | 1661 (4.51) | 4315 (3.05) | 4155 (3.08) | 8470 (3.09) | 2635 (61.06) | 1690 (40.67) | 4325 (51.06) |

ಸೂಚನೆ : 2001ರ ಜನಗಣತಿಯಲ್ಲಿ ಗ್ರಾಮವಾರು ಜನಸಂಖ್ಯೆ ಲಭ್ಯವಿಲ್ಲದ ಕಾರಣ, ಪಂಚಾಯಿತಿಯ ಅಂಕಿ ಅಂಶಗಳನ್ನು 1991ರ ಜನಗಣತಿಯಿಂದ, ತಾಲೂಕು, ಜಿಲ್ಲೆ ಅಂಕಿ ಅಂಶಗಳಿಗೆ ಹೋಲಿಸಲಾಗಿದೆ. ತಾಲ್ಲೂಕು, ಜಿಲ್ಲೆಯ ವಿವರಗಳನ್ನು 1991ರ ಜನಗಣತಿಯಿಂದ ಪಡೆಯಲಾಗಿದೆ. ಜಿಲ್ಲೆ ಮತ್ತು ತಾಲೂಕು ವಿಸ್ತೀರ್ಣವನ್ನು ಚ.ಕಿ.ಮೀ.ಗಳಲ್ಲಿ ತಿಳಿಸಲಾಗಿದೆ. ಆವರಣದಲ್ಲಿರುವ ಶೇಕಡವಾರು ಪ್ರಮಾಣವು ಕುಟುಂಬಗಳ ಸಂಖ್ಯೆ ಮತ್ತು ಸಾಕ್ಷರರ ಸಂಖ್ಯೆಯನ್ನು ತಿಳಿಸುತ್ತದೆ.

ಮೂಲ : ಡೈರೆಕ್ಟರ್ ಆಫ್ ಸೆನ್ಸೆಸ್ ಆಪರೇಷನ್, *ಡಿಸ್ಟ್ರಿಕ್ಟ್ ಸೆನ್ಸಸ್ ಹ್ಯಾಂಡ್ ಬುಕ್, ಬಳ್ಳಾರಿ ಡಿಸ್ಟ್ರಿಕ್ಟ್*, ಬೆಂಗಳೂರು : ಗವರ್ನಮೆಂಟ್ ಆಫ್ ಕರ್ನಾಟಕ, 1991

## ಕೋಷ್ಟಕ -5

### ತಾಲೂಕು, ಜಿಲ್ಲೆ ಮತ್ತು ರಾಜ್ಯಕ್ಕೆ ಹೋಲಿಸಿ ಗ್ರಾಮಪಂಚಾಯತಿಗಳ ಕೆಲವು ಸಾಮಾನ್ಯ ಅಂಕಿ ಅಂಶಗಳು 1991

| ಕ್ರ. ಸಂ. | ವಿವರಗಳು | ಗ್ರಾಮ ಪಂಚಾಯತಿಗಳು | | ಹೊಸಪೇಟೆ | ಗ್ರಾಮ ಪಂಚಾಯತಿಗಳು | | ಕೂಡ್ಲಿಗಿ | ಬಳ್ಳಾರಿ | ಕರ್ನಾಟಕ |
|---|---|---|---|---|---|---|---|---|---|
| | | ನಾಗೇನಹಳ್ಳಿ | ಬೈಲುವದ್ದಿಗೆರೆ | ತಾಲ್ಲೂಕು | ಹಿರೇಹೆಗ್ಡಾಳ್ | ಉಜ್ಜನಿ | ತಾಲ್ಲೂಕು | ಜಿಲ್ಲೆ | ರಾಜ್ಯ |
| 01 | ಪರಿಶಿಷ್ಟ ಜಾತಿ | 1594 | 1237 | 62441 | 7959 | 1233 | 44049 | 311252 | 7369279 |
| 02 | ಪರಿಶಿಷ್ಟ ಪಂಗಡ | 931 | 904 | 40525 | 222 | 817 | 53969 | 147869 | 1915691 |
| 03 | ಪರಿಶಿಷ್ಟರು | 2525 | 2141 | 102969 | 1181 | 2050 | 98018 | 459121 | 9284970 |
| 04 | ಸಾಕ್ಷರರು | 1661 | 1656 | 125763 | 1995 | 3490 | 79381 | 612887 | 21013193 |
| 05 | ಸಾಗುವಳಿದಾರರು | 398 | 1938 | 28025 | 815 | 1064 | 35278 | 227663 | 5915633 |
| 06 | ಕೃಷಿಕಾರ್ಮಿಕರು | 2036 | 1379 | 51624 | 434 | 1457 | 30792 | 289605 | 4999959 |
| 07 | ಪಶುಸಂಗೋಪನೆ | 14 | 22 | 1232 | 84 | 128 | 1842 | 8690 | 616733 |
| 08 | ಆಧುನಿಕ ಕೈಗಾರಿಕೆ | 20 | 29 | 8243 | 90 | 130 | 1665 | 33447 | 1528975 |
| 09 | ಗಣಿಗಾರಿಕೆ | 35 | 06 | 6757 | ---- | 32 | 76 | 15721 | 116369 |
| 10 | ಕಟ್ಟಡ ನಿರ್ಮಾಣ | 02 | 32 | 2768 | 21 | 65 | 751 | 12706 | 427972 |
| 11 | ವ್ಯಾಪಾರ ವಾಣಿಜ್ಯ | 90 | 80 | 12197 | 36 | 148 | 3702 | 28462 | 1379654 |
| 12 | ಸಾರಿಗೆ ಸಂಪರ್ಕ | 05 | 11 | 4575 | 03 | 26 | 693 | 17294 | 454964 |
| 13 | ಇತರೆ ಸೇವೆಗಳು | 54 | 99 | 10215 | 49 | 203 | 4575 | 46969 | 1529407 |
| 14 | ಮುಖ್ಯ ಕೆಲಸಗಾರರು | 3153 | 3039 | 127071 | 1532 | 3253 | 91401 | 708299 | 17292117 |

ಸೂಚನೆ : 1. ಪರಿಶಿಷ್ಟರು = ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ಪಂಗಡ ಜನಸಂಖ್ಯೆಯನ್ನು ಒಳಗೊಂಡಿರುತ್ತದೆ. 2. 2001ರ ಜನಗಣತಿಯಲ್ಲಿ ಗ್ರಾಮವಾರು ಜನಸಂಖ್ಯೆ ಲಭ್ಯವಿಲ್ಲದ ಕಾರಣ, ಗ್ರಾಮಪಂಚಾಯತಿ, ತಾಲ್ಲೂಕು ಮತ್ತು ಜಿಲ್ಲೆಯ ವಿವರಗಳನ್ನು 1991ರ ಜನಗಣತಿಯಿಂದ ಪಡೆಯಲಾಗಿದೆ.

ಮೂಲ : ಡೈರೆಕ್ಟರ್ ಆಫ್ ಸೆನ್ಸೆಸ್ ಆಪರೇಷನ್, *ಡಿಸ್ಟ್ರಿಕ್ಟ್ ಸೆನ್ಸಸ್ ಹ್ಯಾಂಡ್ ಬುಕ್, ಬಳ್ಳಾರಿ ಡಿಸ್ಟ್ರಿಕ್ಟ್,* ಬೆಂಗಳೂರು : ಗವರ್ನಮೆಂಟ್ ಆಫ್ ಕರ್ನಾಟಕ, 1991

**ಕೋಷ್ಟಕ -6**

**ಜಿಲ್ಲೆ, ತಾಲೂಕಿಗೆ ಹೋಲಿಸಿ ಗ್ರಾಮಪಂಚಾಯತಿ ಚುನಾಯಿತ ಪ್ರತಿನಿಧಿಗಳ ಜಾತಿವಾರು ಲಿಂಗವಾರು ಪ್ರಾತಿನಿಧ್ಯ**

| ಜಿಲ್ಲೆ, ತಾಲೂಕು ಗ್ರಾಮಪಂಚಾಯತಿ | ಗ್ರಾ.ಪ | ಪರಿಶಿಷ್ಟ ಜಾತಿ | | | ಪರಿಶಿಷ್ಟ ಪಂಗಡ | | | ಹಿಂದುಳಿದ ವರ್ಗ | | | ಸಾಮಾನ್ಯ ವರ್ಗ | | | ಒಟ್ಟು ಚುನಾಯಿತ ಪ್ರತಿನಿಧಿಗಳು | | |
|---|---|---|---|---|---|---|---|---|---|---|---|---|---|---|---|---|
| | | ಪುರುಷ | ಮಹಿಳೆ | ಒಟ್ಟು | ಪುರುಷ | ಮಹಿಳೆ | ಒಟ್ಟು | ಪುರುಷ | ಮಹಿಳೆ | ಒಟ್ಟು | ಪುರುಷ | ಮಹಿಳೆ | ಒಟ್ಟು | ಪುರುಷ | ಮಹಿಳೆ | ಒಟ್ಟು |
| ಬಳ್ಳಾರಿ | 188 | 314 (11.56) | 252 (9.28) | 566 (20.85) | 148 (5.45) | 223 (8.22) | 371 (13.66) | 530 (19.53) | 361 (13.30) | 891 (32.82) | 524 (19.30) | 361 (13.30) | 885 (32.61) | 1516 (55.86) | 1198 (44.14) | 2714 (100) |
| ಹೊಸಪೇಟೆ | 23 | 47 (14.55) | 36 (11.15) | 83 (25.70) | 29 (8.98) | 27 (8.36) | 56 (17.34) | 62 (19.20) | 42 (13.00) | 104 (32.20) | 49 (15.17) | 31 (9.60) | 80 (24.77) | 187 (57.89) | 136 (42.11) | 323 (100) |
| ನಾಗೇನಹಳ್ಳಿ | 01 | 02 (15.38) | 02 (15.38) | 04 (30.76) | 02 (15.38) | 01 (7.69) | 03 (23.07) | 01 (7.69) | 03 (23.08) | 04 (30.77) | 02 (15.38) | 01 (----) | 02 (15.38) | 07 (53.84) | 06 (46.16) | 13 (100) |
| ಬೈಲುವದ್ದಿಗೆರೆ | 01 | 02 (13.33) | 01 (6.67) | 03 (20.00) | 01 (6.67) | 02 (13.33) | 03 (20.00) | 02 (13.33) | 02 (13.33) | 04 (26.66) | 04 (26.66) | 01 (6.67) | 05 (33.33) | 09 (60.00) | 06 (40.00) | 15 (100) |
| ಕೂಡ್ಲಿಗಿ | 33 | 57 (12.00) | 47 (9.89) | 104 (21.89) | 71 (14.95) | 56 (11.80) | 127 (26.74) | 93 (19.58) | 57 (12.00) | 150 (31.59) | 53 (11.16) | 41 (8.63) | 94 (19.79) | 274 (57.68) | 201 (42.32) | 475 (100) |
| ಉಜ್ಜಿನಿ | 01 | 03 (17.65) | 01 (5.88) | 04 (23.53) | 01 (5.88) | 01 (5.88) | 02 (11.76) | 05 (29.41) | 02 (11.76) | 07 (41.18) | 03 (17.65) | 01 (5.88) | 04 (23.53) | 12 (70.59) | 5 (29.41) | 17 (100) |
| ಹಿರೇಹೆಗ್ನಾಳ್ | 01 | 03 (30.00) | 01 (10.00) | 04 (40.00) | ---- ----- | 01 (10.00) | 01 (10.00) | 01 (10.00) | 01 (10.20) | 02 (20.00) | 02 (20.00) | 01 (10.00) | 03 (30.00) | 16 (60.00) | 04 (40.00) | 10 (100) |

ಸೂಚನೆ : ಆವರಣದಲ್ಲಿರುವುದು ಚುನಾಯಿತ ಪ್ರತಿನಿಧಿಗಳ ಜಾತಿವಾರು ಲಿಂಗವಾರು ಪ್ರಾತಿನಿಧ್ಯವನ್ನು ಶೇಕಡವಾರು ಪ್ರಮಾಣವನ್ನು ಸೂಚಿಸುತ್ತದೆ.

ಮೂಲ : ಮುಖ್ಯಯೋಜನಾಧಿಕಾರಿಗಳು, *ಗ್ರಾಮಪಂಚಾಯತ್ ಸದಸ್ಯರ ಪಟ್ಟಿ,* ಬಳ್ಳಾರಿ : ಜಿಲ್ಲಾಪಂಚಾಯತ್ ಕಚೇರಿ, 2001

ಪಂಚಾಯತ್ ಕಾರ್ಯದರ್ಶಿಗಳು, *ಪಂಚಾಯತ್ ಸದಸ್ಯರ ಪಟ್ಟಿಗಳು* ನಾಗೇನಹಳ್ಳಿ, ಬೈಲವದ್ದಿಗೆರೆ, ಹಿರೇಹೆಗ್ನಾಳ್ ಮತ್ತು ಉಜ್ಜಿನಿ: ಗ್ರಾಮಪಂಚಾಯತಿ ಕಚೇರಿಗಳು, 2001

ಗ್ರಾಮ ಪಂಚಾಯತಿಯ ಕಾರ್ಯಕ್ಷಮತೆಯನ್ನು ಅಳೆಯುವ ಮುಖ್ಯ ಉದ್ದೇಶ ಇಟ್ಟುಕೊಂಡು ಈ ಮಹಾಪ್ರಬಂಧ ಆರಂಭವಾಗಿದೆ. ಕಾರ್ಯಕ್ಷಮತೆಯನ್ನು ಗುರುತಿಸಲು ಗ್ರಾಮ ಪಂಚಾಯತಿ ನಿರ್ವಹಿಸುವ ಮುಖ್ಯ ಕಾರ್ಯಗಳನ್ನು ಕೂಲಂಕಷವಾಗಿ ಪರೀಕ್ಷಿಸಬೇಕಾಗಿದೆ. ನೀರು ಪೂರೈಕೆ, ಗ್ರಾಮೀಣ ನೈರ್ಮಲೀಕರಣ, ವಸತಿ, ಉದ್ಯೋಗ ಭರವಸೆ, ಯೋಜನೆ ಮತ್ತು ಶಿಕ್ಷಣ ಗ್ರಾಮ ಪಂಚಾಯತಿ ನಿರ್ವಹಿಸುವ ಮುಖ್ಯ ಕಾರ್ಯಗಳಾಗಿವೆ. ಈ ಕಾರ್ಯಕ್ರಮಗಳನ್ನು ವಿಶ್ಲೇಷಿಸುವ ಮೂಲಕ ಪಂಚಾಯತಿಯ ಕಾರ್ಯಕ್ಷಮತೆಯನ್ನು ಅಳೆಯುವ ಪ್ರಯತ್ನ ಮಾಡಲಾಗಿದೆ. ಈ ಮೂಲಭೂತ ಸೌಲಭ್ಯಗಳ ಪೂರೈಕೆ ಇಂದು ಅತಿಯಾಗಿ ಚರ್ಚೆಯಲ್ಲಿರುವ ಮಾನವ ಅಭಿವೃದ್ಧಿಗೆ ಹೇಗೆ ಸಂಬಂಧಿಸಿವೆ ಎನ್ನುವುದನ್ನು ಒಂದನೇ ಅಧ್ಯಾಯದಲ್ಲಿ ವಿವರಿಸಲಾಗಿದೆ. ಈ ಅಧ್ಯಾಯದಲ್ಲಿ ಆ ಚರ್ಚೆಯನ್ನು ಸಂಕ್ಷಿಪ್ತವಾಗಿ ಪುನರುಚ್ಚರಿಸಿ ಮುಂದುವರಿಯಲಾಗಿದೆ. ಅಧ್ಯಾಯದ ಮುಖ್ಯಭಾಗ ಮೂಲಭೂತ ಸವಲತ್ತುಗಳನ್ನು ಗ್ರಾಮಪಂಚಾಯತಿಯು ತಳಮಟ್ಟದಲ್ಲಿ ಹೇಗೆ ಪೂರೈಸಿದೆ ಎನ್ನುವುದರ ಸುತ್ತಮುತ್ತ ಇದೆ. ಈ ಅಧ್ಯಾಯದಲ್ಲಿ ಕುಡಿಯುವನೀರು ಮತ್ತು ನೈರ್ಮಲೀಕರಣ ಕಾರ್ಯಕ್ರಮಗಳ ಅನುಷ್ಠಾನ, ವಿತರಣೆ ಮತ್ತು ನಿರ್ವಹಣೆಯನ್ನು ಗ್ರಾಮ ಪಂಚಾಯತಿಗಳು ಯಾವ ರೀತಿ ಕೈಗೊಂಡಿವೆ ಎಂಬುದನ್ನು ಅಂಕಿ-ಅಂಶಗಳ ಮೂಲಕ ವಿಶ್ಲೇಷಣೆ ಮಾಡಲಾಗಿದೆ.

## 3.1. ಅಭಿವೃದ್ಧಿ ಮತ್ತು ಮಾನವ ಅಭಿವೃದ್ಧಿ

ಸ್ವಾತಂತ್ರ್ಯಾನಂತರ ಅಭಿವೃದ್ಧಿಯನ್ನು ವಿವಿಧ ರೀತಿಯಲ್ಲಿ ಪರಿಭಾವಿಸಿಕೊಳ್ಳಲಾಗಿದೆ. ಕಲ್ಪನೆಯು ಕಾಲಗತಿಸಿದಂತೆ ಅಭಿವೃದ್ಧಿಯ ವ್ಯಾಖ್ಯಾನ ಸಹ ಬದಲಾಗಿದೆ. ಸ್ವಾತಂತ್ರ್ಯದ ಪ್ರಾರಂಭದ ದಶಕದಲ್ಲಿ ಕೇಂದ್ರ ಸರಕಾರವು ಅಭಿವೃದ್ಧಿಯನ್ನು ಸಾಧಿಸುವ ದೃಷ್ಟಿಯಿಂದ ಹಲವಾರು ಗ್ರಾಮೀಣಾಭಿವೃದ್ಧಿ ಕಾರ್ಯಕ್ರಮಗಳನ್ನು ಜಾರಿಗೆ ತಂದಿತು. ಈ ಕಾರ್ಯಕ್ರಮಗಳ ಮುಖ್ಯ ಉದ್ದೇಶ ಗ್ರಾಮೀಣ ಪ್ರದೇಶದ ಕೆಳಜಾತಿ/ವರ್ಗಗಳ ಮತ್ತು ಬಡವರ, ಆರ್ಥಿಕ, ಸಾಮಾಜಿಕ ಬದಲಾವಣೆ. ಆದರೆ ಈ ಯೋಜನೆಗಳು ನಿರೀಕ್ಷಿತ ಗುರಿಯನ್ನು ಸಾಧಿಸಲಿಲ್ಲ. ಹಾಗೆಯೇ ವರಮಾನ ವರ್ದನೆಯ ನಿಜವಾದ ಅಭಿವೃದ್ಧಿಯು ಹಾಗೂ ಜಿಡಿಪಿಯಲ್ಲಿ ಉಂಟಾಗುವ ವರಮಾನ ಏರಿಕೆಯೇ ಅಭಿವೃದ್ಧಿ ಎಂದು ನಂಬಲಾಗಿತ್ತು. ಆದರೂ ದೇಶದಲ್ಲಿ ಬಡತನ, ನಿರುದ್ಯೋಗ ಮತ್ತು ಅಸಮಾನತೆಗಳು ಯಥಾರೀತಿಯಲ್ಲಿ ಮುಂದುವರಿದವು[1]. ಆ ನಂತರ ಬಡತನ ನಿರ್ಮೂಲನಾ ಮತ್ತು ಉದ್ಯೋಗವಕಾಶಗಳನ್ನು ಒದಗಿಸುವ ಕೆಲವು ಕಾರ್ಯಕ್ರಮಗಳನ್ನು ಕೇಂದ್ರ ಸರ್ಕಾರ ಜಾರಿಗೆ ತಂದಿತು. 70ರ ದಶಕದಲ್ಲಿ ತಲಾ ಆದಾಯ ಏರಿಕೆಯ ಜೊತೆಯಲ್ಲಿ ಸಾಮಾಜಿಕನ್ಯಾಯ ಮತ್ತು ವರಮಾನ ಮರುವಿತರಣೆಯ ಪ್ರಕ್ರಿಯೆಯಿಂದ ಅಭಿವೃದ್ಧಿ ಸಾಧಿಸಲು ಮುಂದಾಯಿತು. ಈ ಹೊತ್ತಿಗೆ ಅಭಿವೃದ್ಧಿ ವಿಫಲತೆಗೆ ಹಲವಾರು ಸಮಿತಿಗಳ ವರದಿಗಳಲ್ಲಿ ಅಭಿವೃದ್ಧಿ ಕೈಗೊಳ್ಳಲು ಸಾಂಸ್ಥಿಕ ರಚನೆಗಳ

ಅವಶ್ಯಕತೆಯನ್ನು ಒತ್ತಿ ಹೇಳಿದವು. ಇದನ್ನು ಅರಿತ ಸರಕಾರಗಳು ಪಂಚಾಯತ್ ವ್ಯವಸ್ಥೆಯನ್ನು ಜಾರಿಗೆ ತಂದವು. ಹಾಗಾಗಿ ವಿಕೇಂದ್ರೀಕರಣ ಅಭಿವೃದ್ಧಿಗೆ ಒತ್ತು ಕೊಡಲಾಯಿತು. 80ರ ದಶಕದಲ್ಲಿ ಜನತೆಯ ಮೂಲ ಅವಶ್ಯಕತೆಗಳಾದ ಮೂಲ ಶಿಕ್ಷಣ, ಕುಡಿಯುವ ನೀರು, ಆರೋಗ್ಯ, ಉದ್ಯೋಗ ಮುಂತಾದ ಸಾರ್ವಜನಿಕ ಸೌಲಭ್ಯಗಳನ್ನು ಒದಗಿಸುವ ಪ್ರಕ್ರಿಯೆಯ ಕಡೆಗೆ ಹೆಚ್ಚು ಗಮನಹರಿಸಲಾಯಿತು.[2] ಆಗ ಈ ಕಾರ್ಯಕ್ರಮಗಳನ್ನು ಕಾರ್ಯಗತಗೊಳಿಸುವ ಜವಬ್ದಾರಿಗಳನ್ನು ಪಂಚಾಯತ್ ಸಂಸ್ಥೆಗಳಿಗೆ ಒದಗಿಸಲಾಯಿತು. ಹೀಗೆ ಅಭಿವೃದ್ಧಿಯು ವರಮಾನ ಏರಿಕೆಗೆ ಪ್ರಾರಂಭದಲ್ಲಿ ಇದ್ದ ನೆಲೆಯನ್ನು ಬದಲಾಯಿಸಿ ವಿಕೇಂದ್ರೀಕರಣ ಅಭಿವೃದ್ಧಿ ಕಡೆಗೆ ಬದಲಾವಣೆ ಹೊಂದಿತ್ತು.[3]

ಇದೇ ಅವಧಿಯಲ್ಲಿ ಸಹಭಾಗಿತ್ವ ಅಭಿವೃದ್ಧಿಯ ಕಡೆಗೆ ಗಮನಹರಿಸಲಾಯಿತು. ಅಭಿವೃದ್ಧಿಯಲ್ಲಿ ತಳಮಟ್ಟದ ಜನತೆಯು ಭಾಗವಹಿಸುವಿಕೆಗೆ ಆದ್ಯತೆ ಕೊಡಲಾಯಿತು. ಅಭಿವೃದ್ಧಿಯನ್ನು ಮಾನವ ಅಭಿವೃದ್ಧಿಯಿಂದ ನಿರ್ಧರಿಸುವ ಹೊಸ ಪರಿಕಲ್ಪನೆ 90ರ ದಶಕದಲ್ಲಿ ಆರಂಭವಾಯಿತು. ಮಾನವ ಕೇಂದ್ರಿತ ಅಭಿವೃದ್ಧಿಯೇ ನಿಜವಾದ ಅಭಿವೃದ್ಧಿ, ಒಂದು ದೇಶದ ಮೌಲ್ಯಾದಾರಿತ ಸಂಪನ್ಮೂಲವೆಂದರೆ ಅಲ್ಲಿಯ ಜನತೆ. ಜನತೆಯೇ ಅಭಿವೃದ್ಧಿಯ ಮೂಲ ಮತ್ತು ಕೊನೆ.[4] ಇಂದು ಜನಕೇಂದ್ರಿತ ಅಭಿವೃದ್ಧಿಯ ಕಡೆಗೆ ಹೆಚ್ಚು ಪ್ರಾಶಸ್ತ್ಯ ನೀಡಲಾಗಿದೆ. ಹಾಗಾಗಿ ಜನತೆಯ ಮೂಲಭೂತ ಅವಶ್ಯಕತೆಗಳನ್ನು ಪೂರೈಸುವ ಕೆಲಸವನ್ನು ಪಂಚಾಯತ್ ಸಂಸ್ಥೆಗಳಿಗೆ ವಹಿಸಲಾಗಿದೆ. ಈ ಮೂಲಭೂತ ಅವಶ್ಯಕತೆಗಳ ಮೇಲೆಯೇ ಮಾನವ ಅಭಿವೃದ್ಧಿ ನಿರ್ಧಾರವಾಗುತ್ತದೆ. ಆರೋಗ್ಯ ಸಾಕ್ಷರತೆ ಮತ್ತು ವರಮಾನ ಇವು ಮೂರನ್ನು ಒಳಗೊಂಡ ಸಂಯುಕ್ತ ಸೂಚಿಯೇ ಮಾನವ ಅಭಿವೃದ್ಧಿ ಸೂಚ್ಯಂಕವಾಗಿದೆ.[5] ಈ ಸೂಚ್ಯಂಕದಿಂದ ಅಭಿವೃದ್ಧಿಯನ್ನು ಮಾಪನ ಮಾಡಲಾಗುವುದು. ಆರೋಗ್ಯವು ಕುಡಿಯುವ ನೀರು, ನೈರ್ಮಲ್ಯ ಮತ್ತು ಉತ್ತಮವಾದ ಆಹಾರದಿಂದ ನಿರ್ಧಾರವಾಗುತ್ತದೆ. ಸಾಕ್ಷರತೆಯು ಆಯಾ ಪ್ರದೇಶದ ಮೂಲ ಶಿಕ್ಷಣ, ವಯಸ್ಕರ ಶಿಕ್ಷಣ ಇವುಗಳಿಂದ ಮಾಪನ ಮಾಡಲಾಗುತ್ತದೆ. ವರಮಾನವು ಜನತೆಯ ಆರ್ಥಿಕ ಮಟ್ಟದ ಮೇಲೆ ನಿರ್ಧರಿಸುತ್ತದೆ. ಇಂದು ಮಾನವ ಅಭಿವೃದ್ಧಿಗೆ ಬೇಕಾಗುವ ಈ ಎಲ್ಲಾ ಅಂಶಗಳು ಪ್ರಸ್ತುತ ಗ್ರಾಮಪಂಚಾಯತಿಗಳ ಕಾರ್ಯಕ್ರಮಗಳಾಗಿವೆ. ತಳಮಟ್ಟದ ಸಾಂಸ್ಥಿಕ ರಚನೆಯಾದ ಗ್ರಾಮಪಂಚಾಯತಿಯು ಮಾನವ ಅಭಿವೃದ್ಧಿಗೆ ಬೇಕಾಗುವ ಮೂಲಭೂತ ಅವಶ್ಯಕತೆಗಳ ಪೂರೈಕೆ, ವಿತರಣೆ ಮತ್ತು ನಿರ್ವಹಣೆಯ ಹೊಣೆಗಾರಿಕೆ ಹಾಗೂ ಕಾರ್ಯಗತಗೊಳಿಸುವ ಜವಾಬ್ದಾರಿಯನ್ನು ಹೊಂದಿವೆ. ಈ ಕಾರ್ಯಕ್ರಮಗಳನ್ನು ಗ್ರಾಮಪಂಚಾಯಿತಿಗಳು ಹೇಗೆ ಕಾರ್ಯಗತಗೊಳಿಸಿವೆ? ಈ ಮೂಲ ಅವಶ್ಯಕತೆಗಳನ್ನು ಪಂಚಾಯತಿಯು ತನ್ನ ವ್ಯಾಪ್ತಿಯಲ್ಲಿ ಬರುವ ಗ್ರಾಮದ ಜನತೆಗೆ ಯಾವ ರೀತಿ ಒದಗಿಸಿವೆ? ಒದಗಿಸುವಲ್ಲಿ ಅಡೆತಡೆಗಳೇನಾದರೂ ಇದ್ದಾವೆಯೇ? ಮಾನವ ಅಭಿವೃದ್ಧಿಗೆ ಪೂರಕವಾದ ಈ ಕಾರ್ಯಕ್ರಮಗಳನ್ನು ಪಂಚಾಯತ್ ಸಂಸ್ಥೆಗಳು ಎಷ್ಟರ ಮಟ್ಟಿಗೆ ನಿರ್ವಹಿಸಿವೆ ಎಂಬುದನ್ನು ನೋಡಲಾಗಿದೆ. ಈ ಅಧ್ಯಾಯದಲ್ಲಿ ಕುಡಿಯುವ ನೀರು ಮತ್ತು ನೈರ್ಮಲೀಕರಣ ಕಾರ್ಯಕ್ರಮಗಳ ಅನುಷ್ಠಾನ, ಪೂರೈಕೆ ಮತ್ತು ನಿರ್ವಹಣೆಗಳನ್ನು ಅಧ್ಯಯನಕ್ಕೆ ಆಯ್ಕೆ ಮಾಡಿಕೊಂಡ ಗ್ರಾಮಪಂಚಾಯತಿಗಳು ಹೇಗೆ ಕೈಗೊಂಡಿವೆ ಎಂಬುದನ್ನು ವಿಶ್ಲೇಷಿಸಲಾಗಿದೆ.

## 3.2 ಗ್ರಾಮ ಪಂಚಾಯತಿ ಮತ್ತು ಕುಡಿಯುವ ನೀರು

ಕುಡಿಯುವ ನೀರು ಪೂರೈಕೆ ಮತ್ತು ನಿರ್ವಹಣೆಗಳು ಗ್ರಾಮಪಂಚಾಯತಿಯ ನಾಗರಿಕ ಜವಾಬ್ದಾರಿಯ ಪ್ರಮುಖ ಪ್ರಕಾರ್ಯವಾಗಿದೆ. 1993ರ ಕರ್ನಾಟಕ ಪಂಚಾಯತ್‌ರಾಜ್ ಕಾಯ್ದೆಯ ಅಧಿನಿಯಮ 77ನೇ ಪ್ರಕರಣವು ಗ್ರಾಮೀಣ ನೀರು ಪೂರೈಕೆ ಕುರಿತು ಗ್ರಾಮಪಂಚಾಯತಿಯ ಕಾರ್ಯಗಳನ್ನು ತಿಳಿಸುತ್ತದೆ.[6]

1. ಪ್ರತಿಯೊಂದು ಗ್ರಾಮಪಂಚಾಯತಿಯು ತನ್ನ ವ್ಯಾಪ್ತಿಯಲ್ಲಿರುವ ಪ್ರದೇಶದ ಜನತೆಗೆ ಸಾಕಷ್ಟು ಶುದ್ಧವಾದ ನೀರನ್ನು ಪೂರೈಕೆ ಮಾಡಬೇಕು. ಆ ಉದ್ದೇಶಕ್ಕಾಗಿ -

    ಅ. ಕೆರೆಗಳು ಅಥವಾ ಬಾವಿಗಳನ್ನು ನಿರ್ಮಿಸುವುದು, ದುರಸ್ಥಿಗೊಳಿಸುವುದು,

    ಆ. ಯಾವುದೇ ಕೆರೆ, ಬಾವಿ ಮತ್ತು ಜಲಮೂಲವನ್ನು ಅದರ ಮಾಲೀಕರ ಸಮ್ಮತಿಯೊಂದಿಗೆ ಉಪಯೋಗಿಸುವುದು,

    ಇ. ನೀರು ಪೂರೈಕೆಗಾಗಿ ಯಾವುದೇ ವ್ಯಕ್ತಿಯೊಂದಿಗೆ ಕರಾರು ಮಾಡಿಕೊಳ್ಳವುದು,

    ಈ. ನೀರು ಸರಬರಾಜು ಉದ್ದೇಶದ ಈಡೇರಿಕೆಗೆ ಅವಶ್ಯವಾದ ಯಾವುದೇ ಕಾರ್ಯವನ್ನು ಕೈಗೊಳ್ಳಬಹುದು.

2. ಗ್ರಾಮಪಂಚಾಯತಿಯ ಕ್ಷೇತ್ರದಲ್ಲಿ ಸಾರ್ವಜನಿಕರಿಗಾಗಿ ಸ್ವಚ್ಛವಾದ ಮತ್ತು ಶುದ್ಧ ನೀರನ್ನು ಸರಬರಾಜು ಮಾಡುವ ಕರ್ತವ್ಯವನ್ನು ಹೊಂದಿದ ಗ್ರಾಮಪಂಚಾಯತಿಯು ಅವಶ್ಯವಾದ ನಿಯಮಾವಳಿಯನ್ನು ಮಾಡುವ ಅಧಿಕಾರವನ್ನು ಹೊಂದಿದೆ.

3. ಪಂಚಾಯತಿ ಪ್ರದೇಶದಲ್ಲಿ ಸಾಂಕ್ರಮಿಕ ರೋಗ ಹರಡಿಕೊಂಡಿರುವ ಸಂದರ್ಭದಲ್ಲಿ ಯಾವುದೇ ಜಲಮೂಲವನ್ನು ಸಾರ್ವಜನಿಕರು ಉಪಯೋಗಿಸದಂತೆ ನಿಷೇಧಿಸಬಹುದು.

4. ಪ್ರಕರಣ 82ರ ಪ್ರಕಾರ ಗ್ರಾಮಪಂಚಾಯತಿ ಕ್ಷೇತ್ರವ್ಯಾಪ್ತಿಯಲ್ಲಿ ಖಾಸಗಿ ಒಡೆತನದಲ್ಲಿರುವ ಎಲ್ಲಾ ಬಾವಿ,ಕೆರೆ, ಕಾಲುವೆ ನೀರು ಸರಬರಾಜಿನ ಮಾಲೀಕತ್ವವನ್ನು ಹೊಂದಿದ ಪ್ರತಿಯೊಬ್ಬ ವ್ಯಕ್ತಿಯನ್ನು ನಿಯಂತ್ರಿಸುವ ಹಕ್ಕು ಗ್ರಾಮಪಂಚಾಯತಿ ಹೊಂದಿದೆ. ಅದಕ್ಕಾಗಿ ಅವಶ್ಯವಾದ ನಿರ್ದೇಶನವನ್ನು ಜಲಮೂಲದ ಅಧಿಕಾರವನ್ನು ಹೊಂದಿರದ ವ್ಯಕ್ತಿಗೆ ನೀಡಿಯಾದ ನಂತರ ಅದು ಸೂಕ್ತವಾಗಿ ಪರಿಪಾಲಿಸದಿದ್ದಲ್ಲಿ ಗ್ರಾಮಪಂಚಾಯತಿಯೆ ಮುಂದುವರೆದು ಅಗತ್ಯವಾದ ಎಲ್ಲಾ ಕ್ರಮಗಳನ್ನು ಕೈಗೊಳ್ಳಬೇಕು.

5. ಗ್ರಾಮ ಪಂಚಾಯತಿಯು ಕೆಲವು ಉದ್ದೇಶಗಳಿಗಾಗಿ ನೀರನ್ನು ಉಪಯೋಗಿಸುವುದಕ್ಕೆ ದಂಡನೆ ವಿಧಿಸಬಹುದು ಎಂದು ಪ್ರಕರಣ 86ರಲ್ಲಿ ಹೇಳಲಾಗಿದೆ.[7] ಈ ಎಲ್ಲಾ ಕಾರ್ಯಗಳ ಜೊತೆಗೆ ಕುಡಿಯುವನೀರು ಪೂರೈಕೆಯ ಜೊತೆಗೆ ದುರಸ್ಥಿ ಕಾರ್ಯಗಳನ್ನು ಪ್ರತಿಯೊಂದು ಗ್ರಾಮಪಂಚಾಯತಿಯು ನಿರ್ವಹಿಸುತ್ತದೆ.

ಗ್ರಾಮಪಂಚಾಯತಿಯು ಮಾಡಬಹುದಾದ ಕಾರ್ಯಗಳನ್ನು ಸಂವಿಧಾನದ 11ನೇ ಅನುಚ್ಛೇದದಲ್ಲಿ ಸೇರಿಸಲಾಗಿದ್ದು ಒಟ್ಟು 29 ಅಂಶಗಳು ಕಾರ್ಯಸೂಚಿಯನ್ನು ಹೊಂದಿದೆ. ಕರ್ನಾಟಕ ಪಂಚಾಯತರಾಜ್ ಕಾಯ್ದೆ ಅನ್ವಯ ಕಲಂ 63 ರಿಂದ 110ರ ವರೆಗೆ ಗ್ರಾಮಪಂಚಾಯತಿ ನಿರ್ವಹಿಸಬೇಕಾದ ಕಾರ್ಯಗಳನ್ನು ಮತ್ತು ಅಧಿಕಾರಿಗಳನ್ನು ಕಾಯ್ದೆಯು ತಿಳಿಸುತ್ತದೆ.[8] ಈ ಕಾಯ್ದೆ ಅನ್ವಯ ರಾಜ್ಯದ ಪ್ರತಿಯೊಂದು ಗ್ರಾಮಪಂಚಾತಿಗಳು ತನ್ನ ಕಾರ್ಯಗಳನ್ನು ಕೈಗೊಳ್ಳಬೇಕಾಗಿದೆ. ಈ ಕಾರ್ಯಗಳನ್ನು ಪ್ರಸ್ತುತ ಗ್ರಾಮಪಂಚಾಯತಿಗಳು ಹೇಗೆ ನಿರ್ವಹಿಸುತ್ತವೆ ಎಂಬುದನ್ನು ಮುಂದೆ ನೋಡಲಾಗಿದೆ.

## 3.3. ಗ್ರಾಮೀಣ ನೀರು ಸರಬರಾಜು ಯೋಜನೆಗಳು

ಕುಡಿಯುವ ನೀರು ಸರಬರಾಜು ಕಾರ್ಯಕ್ರಮಗಳು ಜನರಿಗೆ ವ್ಯವಸ್ಥಿತವಾಗಿ ಪೂರೈಸುವ ಜವಾಬ್ದಾರಿಯನ್ನು ಗ್ರಾಮಪಂಚಾಯತಿಗಳಿಗೆ ವಹಿಸಲಾಗಿದೆ. ಆಯಾ ಪ್ರದೇಶದ ಜನಸಂಖ್ಯೆಯ ಆಧಾರದ ಮೇಲೆ ಕುಡಿಯುವ ನೀರಿನ ಯೋಜನೆಗಳನ್ನು ಅನುಷ್ಠಾನಗೊಳಿಸಬಹುದಾಗಿದೆ. ಪರಿಶಿಷ್ಟ ಜಾತಿ/ವರ್ಗ ಹಾಗೂ ದುರ್ಬಲ ವರ್ಗಗಳಿಗೂ ಕುಡಿಯುವ ನೀರನ್ನು ಸರಿಯಾದ ರೀತಿಯಲ್ಲಿ ಪೂರೈಸಬೇಕಾಗಿದೆ. ಜನಸಂಖ್ಯೆಗೆ ಅನುಗುಣವಾಗಿ ನಲ್ಲಿ ನೀರು ಸರಬರಾಜು ಯೋಜನೆ, ಕಿರು ನೀರು ಸರಬರಾಜು ಯೋಜನೆ ಮತ್ತು ಕೈಪಂಪ್‌ಸಹಿತ ಕೊಳವೆ ಬಾವಿಗಳ ಯೋಜನೆಗಳನ್ನು ಪಂಚಾಯತಿ ಗಳು ಹೊಂದಿರಬಹುದೆಂದು ನಿಯಮಾವಳಿ ತಿಳಿಸುತ್ತದೆ. ಪ್ರತಿಯೊಂದು ಗ್ರಾಮವು 1000ಕ್ಕಿಂತ ಹೆಚ್ಚು ಜನಸಂಖ್ಯೆಯನ್ನು ಹೊಂದಿರುವ ಪ್ರದೇಶಗಳು ನಲ್ಲಿ ನೀರು ಸರಬರಾಜು ಯೋಜನೆಯನ್ನು ಹೊಂದಿರಬಹುದಾಗಿದೆ. ಸಾರ್ವಜನಿಕವಾಗಿ ನಲ್ಲಿಗಳನ್ನು ನಿರ್ಮಿಸುವುದು ಉಪಯುಕ್ತ. ಪ್ರದೇಶ ವಾರು ಜನಸಂಖ್ಯೆಯ ಮೇಲೆ ಅಂದರೆ ಬೀದರ್, ಗುಲಬರ್ಗಾ, ಬಿಜಾಪುರ ಮತ್ತು ಬಳ್ಳಾರಿ ಮುಂತಾದ ಮೈದಾನ ಪ್ರದೇಶಗಳಲ್ಲಿ ಸಾವಿರಕ್ಕೂ ಹೆಚ್ಚಿನ ಜನಸಂಖ್ಯೆಯಿರುವ ಮತ್ತು ಕೊಡಗು, ದಕ್ಷಿಣ ಕನ್ನಡ, ಹಾಸನ, ಚಿಕ್ಕಮಗಳೂರು ಶಿವಮೊಗ್ಗ ಮುಂತಾದ ಮಲೆನಾಡು ಪ್ರದೇಶಗಳಲ್ಲಿ 800ಕ್ಕೂ ಹೆಚ್ಚು ಜನಸಂಖ್ಯೆಯನ್ನು ಹೊಂದಿರುವ ಗ್ರಾಮಗಳು ನಲ್ಲಿ ನೀರು ಸರಬರಾಜು ಯೋಜನೆಯ ಪ್ರಯೋಜನವನ್ನು ಪಡೆದುಕೊಳ್ಳಲು ಅರ್ಹವಾಗಿವೆ. ಈ ನೀರು ಪೂರೈಕೆಯ ನಿರ್ವಹಣೆಗೆ ಗ್ರಾಮಪಂಚಾಯತಿಯು ಪ್ರತಿವರ್ಷ 3500ರೂ.ಗಳನ್ನು ಖರ್ಚು ಮಾಡಲು ಅವಕಾಶವಿದೆ.[9] ಇದರ ನಿರ್ವಹಣೆಯನ್ನು ಆಯಾ ಸಂಬಂಧಪಟ್ಟ ಗ್ರಾಮಪಂಚಾಯತಿ ಹೊಂದಿರುತ್ತದೆ.

500 ರಿಂದ 1000 ಜನಸಂಖ್ಯೆ ಇರುವ ಹಳ್ಳಿಗಳಿಗೆ ಕಿರು ನೀರು ಸರಬರಾಜು ಯೋಜನೆಯನ್ನು ಪೂರೈಸಬೇಕು. ವಾರ್ಡುಗಳಲ್ಲಿ ಟ್ಯಾಂಕುಗಳನ್ನು ನಿರ್ಮಿಸಿ ಅದಕ್ಕೆ ನಲ್ಲಿಗಳನ್ನು ಒದಗಿಸಲಾಗುತ್ತದೆ. ಎಲ್ಲಾ ಸಾರ್ವಜನಿಕರಿಗೂ ಈ ಯೋಜನೆಯಲ್ಲಿ ನೀರು ಪೂರೈಸಬೇಕಾಗಿದೆ. ಮೈದಾನ ಪ್ರದೇಶದಲ್ಲಿ 500 ರಿಂದ 1000 ಜನಸಂಖ್ಯೆ, ಮಲೆನಾಡು ಪ್ರದೇಶಗಳಲ್ಲಿ 350 ರಿಂದ 800 ಜನಸಂಖ್ಯೆಯನ್ನು ಹೊಂದಿರವ ಎಲ್ಲಾ ಗ್ರಾಮಗಳಿಗೆ ಮತ್ತು ಜನವಸತಿ ಇರುವ ಸ್ಥಳಗಳಿಗೆ ಕಿರು ನೀರು ಯೋಜನೆಯನ್ನು ಜಾರಿ ತರಬಹುದಾಗಿದೆ. ವಾರ್ಷಿಕ ದುರಸ್ಥಿಗೆ 2500ರೂ.ಗಳಿಗೆ ಅವಕಾಶವಿದೆ. ಈ ವೆಚ್ಚವನ್ನು ಸಂಬಂಧಿಸಿದ ಗ್ರಾಮಪಂಚಾಯತಿಗಳು ಭರಿಸುವುದು

ಹಾಗೂ ನಿರ್ವಹಣೆಯ ಜವಾಬ್ದಾರಿಯನ್ನು ಹೊಂದಿವೆ. 250 ರಿಂದ 500 ರಷ್ಟು ಜನಸಂಖ್ಯೆಯಿರುವ ಗ್ರಾಮಗಳು, ವಾಸಸ್ಥಳಗಳು ಕೈಪಂಪ್ ಸಹಿತ ಕೊಳವೆ ಬಾವಿ ಯೋಜನೆಯನ್ನು ಹೊಂದಲು ಅರ್ಹವಾಗಿವೆ. ವಾರ್ಷಿಕ ರಿಪೇರಿಗೆ 400 ರೂಗಳನ್ನು ಬಳಸಲು ಅವಕಾಶವಿದೆ.[10] ಸಾರ್ವಜನಿಕವಾಗಿ ನೀರು ಸರಬರಾಜು ಮಾಡಲಾಗುವುದು. ಈ ಯೋಜನೆಯನ್ನು ಎಲ್ಲ ಪ್ರದೇಶಗಳಿಗೂ ಜಾರಿಗೊಳಿಸಲು ಅವಕಾಶ ನೀಡಲಾಗಿದೆ. ಇವುಗಳ ನಿರ್ವಹಣೆಯನ್ನು ಆಯಾ ಗ್ರಾಮಪಂಚಾಯತಿಗಳು ವಹಿಸಬೇಕಾಗಿದೆ.

ನಿಗಧಿತ ಯೋಜನೆಯನ್ನು ಕೈಗೊಳ್ಳುವಾಗ ಮುಖ್ಯವಾಗಿ ವೆಚ್ಚ ಕಡಿಮೆಯಾಗುವಂತೆ ನೋಡಿಕೊಳ್ಳಬೇಕಾಗಿದೆ. ಯೋಜನೆಯನ್ನು ಯಶಸ್ವಿಗೊಳಿಸಲು ವಿದ್ಯುತ್ ವೋಲ್ಟೇಜ್ ಸುಸ್ಥಿತಿಯಲ್ಲಿ ಇರಬೇಕಾದುದು ಪ್ರಥಮ ಆದ್ಯತೆಗಳಲ್ಲಿ ಒಂದಾಗಿದೆ. ಕಾಮಗಾರಿಗಳನ್ನು ನಿಗಧಿತ ಅವಧಿಯಲ್ಲಿ ಪೂರ್ಣಗೊಳಿಸಬೇಕು. ಅವಶ್ಯಕತೆಯುಳ್ಳ ಸಾಮಗ್ರಿಗಳನ್ನು ಖರೀದಿಸಲು ಹಣದ ಅವಶ್ಯಕತೆ ಬಹಳ ಮುಖ್ಯವಾಗಿದ್ದರಿಂದ ಅದರ ಇರುವಿಕೆ ಬಗ್ಗೆ ನಿಗಾವಹಿಸಬೇಕು[11]. ಈ ಕ್ರಮದಲ್ಲಿ ಗ್ರಾಮೀಣ ನೀರು ಸರಬರಾಜಿನ ಕಾರ್ಯಗಳನ್ನು ಗ್ರಾಮಪಂಚಾಯತಿಗಳು ನಿರ್ವಹಿಸಬೇಕಾಗಿದೆ. ಪಂಚಾಯತ್ ಸದಸ್ಯರು ಗ್ರಾಮೀಣ ಮಟ್ಟದಲ್ಲಿ ಈ ಯೋಜನೆಯ ಹಂಚುವಿಕೆ ಬಗ್ಗೆ ತಿಳಿದುಕೊಂಡು ತಮ್ಮ ತಮ್ಮ ಪ್ರದೇಶಗಳಲ್ಲಿ ಯೋಜನೆಗಳನ್ನು ವ್ಯವಸ್ಥಿತವಾಗಿ ಜಾರಿಗೊಳಿಸುವ ಜವಾಬ್ದಾರಿ ಹೊಂದಿದ್ದಾರೆ. ದುರಸ್ಥಿ ಕಾರ್ಯದ ಬಗ್ಗೆ ನಿಗಾವಹಿಸುವುದು, ಗ್ರಾಮೀಣ ಜನರಿಗೆ ನೀರು ಸರಬರಾಜು ಯೋಜನೆಯ ಉದ್ದೇಶ, ಜನ ಸಂಘಟಿತ ಕಾರ್ಯಗಳನ್ನು ಕೈಗೊಳ್ಳುವುದು, ಸರಕಾರೇತರ ಸಂಸ್ಥೆಗಳ ವತಿಯಿಂದ ಸಂಪನ್ಮೂಲಗಳನ್ನು ಮತ್ತು ಮಾನವ ಸಂಪನ್ಮೂಲಗಳನ್ನು ಸಂಗ್ರಹಿಸುವುದು ಕೂಡ ಜನ ಪ್ರತಿನಿಧಿಗಳ ಜವಾಬ್ದಾರಿಯಾಗಿದೆ. ಈ ಎಲ್ಲ ಅಂಶಗಳನ್ನು ಗಮನದಲ್ಲಿಟ್ಟುಕೊಂಡು ಚುನಾಯಿತ ಪ್ರತಿನಿಧಿಗಳು ಪಂಚಾಯತಿ ಅಧಿಕಾರಿಗಳು ಮತ್ತು ಜನರು ಸೇರಿ ಯೋಜನೆಯ ಅನುಷ್ಠಾನಗೊಳಿಸುವಲ್ಲಿ ಪ್ರಯತ್ನಿಸಬೇಕಾಗಿದೆ. ಹೀಗೆ ಕುಡಿಯುವ ನೀರು ಪೂರೈಕೆ ಸಂಬಂಧಿ ಅನೇಕ ಜವಾಬ್ದಾರಿಗಳನ್ನು ಗ್ರಾಮಪಂಚಾಯತಿಗಳಿಗೆ ವಹಿಸಲಾಗಿದೆ. ಇದಲ್ಲದೇ ಕುಡಿಯುವ ನೀರಿನ ಸಮರ್ಪಕ ಪೂರೈಕೆಗಾಗಿ ಪ್ರತಿಯೊಂದು ಪಂಚಾಯತಿಗಳಲ್ಲಿ ಗ್ರಾಮೀಣ ನೀರು ಸರಬರಾಜು ಮತ್ತು ನೈರ್ಮಲ್ಯ ಸಮಿತಿಗಳನ್ನು ರಚಿಸಲಾಗಿದೆ. ಗ್ರಾಮಗಳಲ್ಲಿ ನೀರು ಪೂರೈಕೆ, ದುರಸ್ಥಿ ಕಾರ್ಯ ಮತ್ತು ನಿರ್ವಹಣೆಗಳನ್ನು ಕೈಗೊಳ್ಳುವುದು ಮತ್ತು ಇದರಲ್ಲಿ ಗ್ರಾಮೀಣ ಜನತೆಯನ್ನು ಭಾಗವಹಿಸವಂತೆ ಮಾಡುವುದು ಈ ಸಮಿತಿಯ ಮುಖ್ಯ ಉದ್ದೇಶ ಆಗಿದೆ.

ಗ್ರಾಮೀಣ ಪ್ರದೇಶಗಳಲ್ಲಿ ಗ್ರಾಮೀಣ ಪ್ರದೇಶಗಳಲ್ಲಿ ಕುಡಿಯುವ ನೀರು ಸಮರ್ಪಕವಾಗಿ ಪೂರೈಕೆಯಾಗದೇ ಇರುವ ದೃಷ್ಠಿಯಿಂದ ಇದನ್ನು ಸರಿದೂಗಿಸಲು 1986ರಲ್ಲಿ ರಾಷ್ಟ್ರೀಯ ರಾಜೀವ್‌ಗಾಂಧಿ ಕುಡಿಯುವ ನೀರಿನ ಯೋಜನೆಯನ್ನು ಜಾರಿಗೆ ತರಲಾಯಿತು. ಈ ಯೋಜನೆಯ ಮುಖ್ಯ ಉದ್ದೇಶ ಸುರಕ್ಷಿತವಾದ ಕುಡಿಯುವ ನೀರನ್ನು ಒದಗಿಸುವುದು, ಎಲ್ಲಾ ಜನವಸತಿ ಪ್ರದೇಶಗಳಲ್ಲಿನ ಪ್ರತಿ ಮಾನವನಿಗೂ ಪ್ರತಿದಿನ 40 ಲೀಟರ್ ನೀರನ್ನು ಒದಗಿಸುವುದು ಮತ್ತು 2025ನೇ ಇಸವಿಗೆ ಪ್ರಾಕ್ಷೇಪಿತ ಜನಸಂಖ್ಯೆಯ ಆಧಾರದ ಮೇಲೆ ಪ್ರತಿಯೊಬ್ಬ ವ್ಯಕ್ತಿಗೆ 75 ಲೀಟರ್ ನೀರನ್ನು ಒದಗಿಸುವುದು. ಇದೊಂದು ದೀರ್ಘ

ಯೋಜನೆಯಾಗಿದ್ದು ಜನರ ಸಹಭಾಗಿತ್ವದೊಂದಿಗೆ ಅನುಷ್ಠಾನಗೊಳಿಸಬಹುದಾದ ಹೊಸ ಯೋಜನೆಯಾಗಿದೆ. ಒಟ್ಟು ಬಂಡವಾಳ ವೆಚ್ಚದ ಶೇ 10ರಷ್ಟನ್ನು ಸಂಬಂಧ ಪಟ್ಟ ಗ್ರಾಮದ ಗ್ರಾಮಸ್ಥರೇ ಭರಿಸಬೇಕಾಗಿದೆ.[12] ಗ್ರಾಮದ ಜನತೆಯ ಸಹಭಾಗಿತ್ವ ದೃಷ್ಟಿಯಿಂದ ಈ ಹಣವನ್ನು ಸಂಗ್ರಹಿಸಲಾಗುತ್ತಿದೆ. ಎಲ್ಲಾ ಜಲಮೂಲಗಳ ಗುಣಮಟ್ಟ ಪರೀಕ್ಷಿಸುವುದು, ಕೊಳವೆ ಬಾವಿಗಳ ಜಲಮಟ್ಟವನ್ನು ಹೆಚ್ಚಿಸುವ ದೃಷ್ಟಿಯಿಂದ ಅವಶ್ಯವಿರುವ ಅಡೆತಡೆಗಳನ್ನು ಕಟ್ಟುವುದು, ಪ್ರತಿ ಗ್ರಾಮಪಂಚಾಯತಿಗಳಿಗೆ ಅಗತ್ಯವಿರುವ ಟೂಲ್‌ಕಿಟ್‌ನ್ನು ಒದಗಿಸುವುದು ಇತ್ಯಾದಿ ಅಂಶಗಳೊಂದಿಗೆ ಈ ಯೋಜನೆಯನ್ನು ಜಾರಿಗೊಳಿಸಲಾಗಿದೆ. ರಾಜ್ಯದಲ್ಲಿ ಈ ಯೋಜನೆಯು ಅನುಷ್ಠಾನದಲ್ಲಿದ್ದು ಪ್ರಾಯೋಗಿಕ ಆಧಾರದ ಮೇಲೆ ರಾಜ್ಯದಲ್ಲಿ ಆಯ್ಕೆಯಾದ ಮೂರು ಜಿಲ್ಲೆಗಳಲ್ಲಿ ಬಳ್ಳಾರಿ ಜಿಲ್ಲೆಯು ಒಂದಾಗಿದೆ[13]. ಇವುಗಳ ಜತೆಗೆ ಗ್ರಾಮೀಣ ಜನಸಮುದಾಯಕ್ಕೆ ಕುಡಿಯುವ ನೀರಿನ ಪೂರೈಗಾಗಿ ಕೇಂದ್ರ ಮತ್ತು ರಾಜ್ಯ ಸರಕಾರಗಳು ಇತರ ಹಲವಾರು ಯೋಜನೆಗಳನ್ನು ಗ್ರಾಮಪಂಚಾಯತಿಯ ಮೂಲಕ ಅನುಷ್ಠಾನಗೊಳಿಸಲಾಗುತ್ತಿದೆ. ಅಧ್ಯಯನಕ್ಕೆ ಆಯ್ಕೆ ಮಾಡಿಕೊಂಡ ಗ್ರಾಮಪಂಚಾಯತಿಗಳಲ್ಲಿ ನೀರು ಪೂರೈಕೆಗಾಗಿ ಕೈಗೊಂಡ ಕಾರ್ಯಕ್ರಮಗಳು ಹಾಗೂ ಅವುಗಳ ನಿರ್ವಹಣೆ ಸಂಬಂಧಿಸಿದ ವಿಶ್ಲೇಷಣೆಯನ್ನು ಮುಂದೆ ಮಾಡಲಾಗಿದೆ.

## 3.4. ಗ್ರಾಮಪಂಚಾಯತಿಗಳಲ್ಲಿ ಕುಡಿಯುವ ನೀರು ಪೂರೈಕೆ ಮತ್ತು ನಿರ್ವಹಣೆ

ಕುಡಿಯುವ ನೀರು ಪೂರೈಕೆ ಮತ್ತು ನಿರ್ವಹಣೆ ಕುರಿತು ಗ್ರಾಮ ಪಂಚಾಯತಿ ಹೊಂದಿರುವ ಕಾರ್ಯಗಳನ್ನು, ಜವಾಬ್ದಾರಿಗಳನ್ನು ಮತ್ತು ಗ್ರಾಮೀಣ ನೀರು ಸರಬುರಾಜಿನ ಯೋಜನೆಗಳ ಕುರಿತು ಈಗಾಗಲೇ ನೋಡಿದ್ದೇವೆ. ಅಧ್ಯಯನ ಕೈಗೊಂಡ ನಾಲ್ಕು ಗ್ರಾಮಪಂಚಾಯತಿಗಳು ಎಷ್ಟರಮಟ್ಟಿಗೆ ಕುಡಿಯುವ ನೀರು ಪೂರೈಕೆ ಮತ್ತು ನಿರ್ವಹಣೆಯನ್ನು ಪೂರೈಸಿವೆ ಎಂಬುದನ್ನು ಗ್ರಾಮಪಂಚಾಯತಿವಾರು ಮುಂದೆ ಚರ್ಚಿಸಲಾಗಿದೆ.

### ನಾಗೇನಹಳ್ಳಿ ಗ್ರಾಮಪಂಚಾಯತಿ

ನಾಗೇನಹಳ್ಳಿ ಗ್ರಾಮಪಂಚಾಯತಿ ವ್ಯಾಪ್ತಿಯ ಗ್ರಾಮಗಳಲ್ಲಿ ವಿವಿಧ ಯೋಜನೆಗಳಡಿಯಲ್ಲಿ ನೀರು ಪೂರೈಕೆ ಮಾಡಲಾಗಿದೆ. ಒಟ್ಟು ಪಂಚಾಯತಿ ಪ್ರದೇಶದಲ್ಲಿ ನೀರು ಪೂರೈಕೆ ನೋಡಿದಾಗ, ಮಿನಿಟ್ಯಾಂಕ್‌ಗಳ ಸಂಖ್ಯೆ ಒಟ್ಟು ಪಂಚಾಯತಿ ವ್ಯಾಪ್ತಿಯಲ್ಲಿ 12 ಇದ್ದು, 424 ಜನರಿಗೆ ಒಂದು ಮಿನಿಟ್ಯಾಂಕ್ ಇದೆ. ಪ್ರತಿದಿನ ಒಂದು ಮಿನಿಟ್ಯಾಂಕ್‌ನ ನೀರಿನ ಪೂರೈಕೆ 2500 ಲೀಟರ್ ಆಗುತ್ತಿದ್ದು, ಇವುಗಳಿಂದ ದಿನ ಒಟ್ಟು 30,000 ಲೀಟರ್ ನೀರು ಲಭ್ಯವಿದೆ. ಸಾರ್ವಜನಿಕ ನಳಗಳು ಒಟ್ಟು 17 ಇದ್ದು. 300 ಜನರಿಗೆ ಒಂದು ಸಾರ್ವಜನಿಕ ನಳ ಇದೆ (ಕೋಷ್ಟಕ-8).

ಗ್ರಾಮವಾರು ಮಿನಿಟ್ಯಾಂಕ್‌ಗಳನ್ನು ನೋಡಿದಾಗ ಪಂಚಾಯತಿ ಕೇಂದ್ರಸ್ಥಳವಾದ ನಾಗೇನಹಳ್ಳಿ ಯಲ್ಲಿ ಹೆಚ್ಚು ಇವೆ. 500-1000 ಜನಸಂಖ್ಯೆಗೆ ಒಂದು ಮಿನಿಟ್ಯಾಂಕ್ ಇರಬೇಕು. ಎಲ್ಲಾ ಗ್ರಾಮಗಳಲ್ಲಿ ನಿಯಮಗಳಿಗೆ ಸರಿಯಾಗಿ ಮಿನಿಟ್ಯಾಂಕ್‌ಗಳಿವೆ. ಸರಾಸರಿ ಪ್ರತಿ 424 ಜನಸಂಖ್ಯೆ ಒಂದು ಮಿನಿಟ್ಯಾಂಕ್ ಇದೆ(ಕೋಷ್ಟಕ-7).

ಒಟ್ಟು ಪಂಚಾಯತಿ ವ್ಯಾಪ್ತಿಯಲ್ಲಿ 23 ಕೈಪಂಪ್‌ಗಳಿವೆ. ಪ್ರತಿ 221 ಜನಸಂಖ್ಯೆಗೆ ಒಂದು ಕೈಪಂಪ್ ಇದೆ. ಸರಕಾರದ ನಿಯಮದ ಪ್ರಕಾರ 250 ಜನಸಂಖ್ಯೆಗೆ ಒಂದು ಕೈಪಂಪ್ ಇರಬೇಕಾಗಿದ್ದು. ಗ್ರಾಮಗಳಲ್ಲಿ ಸರಕಾರ ನಿಗಧಿ ಪಡಿಸಿದ ಜನಸಂಖ್ಯೆಗಿಂತ ಕಡಿಮೆ ಜನರಿಗೆ ಒಂದು ಕೈಪಂಪ್ ಇದೆ. ಒಂದು ಕೈಪಂಪಿನ ಸಾಮರ್ಥ್ಯ 5000 ಲೀಟರ್ ನೀರು ಇದ್ದು, ಕೈಪಂಪ್‌ಗಳಿಂದ ಒಟ್ಟು ಪಂಚಾಯತಿ ಪ್ರದೇಶದಲ್ಲಿ 1,15,000 ಲೀಟರ್ ನೀರು ಪೂರೈಕೆಯಾಗುತ್ತಿದೆ. ಗ್ರಾಮವಾರು ಕೈಪಂಪ್‌ಗಳನ್ನು ನೋಡಿದಾಗ ಅತಿ ಹೆಚ್ಚು ಕೈಪಂಪ್‌ಗಳನ್ನು ನಾಗೇನಹಳ್ಳಿ ಗ್ರಾಮ ಹೊಂದಿದೆ. ವೈಯಕ್ತಿಕ ನಳಗಳ ಸಂಖ್ಯೆಯನ್ನು ನೋಡಿದಾಗ ಒಟ್ಟು 128 ನಳಗಳಿದ್ದಾವೆ. ಶೇ 13ರಷ್ಟು ಕುಟುಂಬಗಳು ಮಾತ್ರ ವೈಯಕ್ತಿಕ ನಳಗಳನ್ನು ಹೊಂದಿದ್ದಾರೆ. ವೈಯಕ್ತಿಕ ನಳಗಳ ಸಂಖ್ಯೆ ಕಡಿಮೆ ಇರುವುದಕ್ಕೆ ಕಾರಣ ಪರಿಶಿಷ್ಟರ ಮತ್ತು ಹಿಂದುಳಿದ ವರ್ಗದ ಕುಟುಂಬಗಳು ಹೆಚ್ಚು ಇದ್ದು, ಈ ಕುಟುಂಬಗಳು ಆರ್ಥಿಕವಾಗಿ ಸಬಲರಾಗಿಲ್ಲ. ವೈಯಕ್ತಿಕ ನಳಗಳನ್ನು ಹೆಚ್ಚು ಮೇಲ್ವರ್ಗಗಳೇ ಹೊಂದಿವೆ. ಒಟ್ಟು ಪಂಚಾಯತಿ ವ್ಯಾಪ್ತಿಯಲ್ಲಿ 5 ಬೋರ್‌ವೆಲ್‌ಗಳಿಂದ 10 ಇಂಚ್ ನೀರಿನ ಪೂರೈಕೆ ಇದೆ.

ಪಂಚಾಯತಿ ಪ್ರದೇಶದಲ್ಲಿ ಎಲ್ಲಾ ಮೂಲಗಳಿಂದ ಪ್ರತಿದಿನ ತಲಾ ಮಾನವನಿಗೆ ಸರಾಸರಿ 50.8 ಲೀಟರ್ ನೀರು ಲಭ್ಯವಿದೆ. ತಾಲೂಕಿನ ಸರಾಸರಿಯು 51 ಲೀಟರ್ ನೀರಿನ ಲಭ್ಯತೆ ಇದ್ದು, ತಾಲೂಕಿಗೆ ಹೋಲಿಸಿದರೆ ಆ ಸರಾಸರಿ ಸರಿಯಿದೆ (ಕೋಷ್ಟಕ-8.1). ಹಾಗಾಗಿ ಪಂಚಾಯತಿ ಪ್ರದೇಶದ ನೀರಿನ ಲಭ್ಯತೆಯು ಸರಕಾರ ನಿಗಧಿ ಪಡಿಸಿರುವುದಕ್ಕಿಂತ 10 ಲೀಟರ್ ಹೆಚ್ಚು ಇದೆ. ಅದರಂತೆ ಪಂಚಾಯತಿ ಸರಾಸರಿಗಿಂತ ಹೆಚ್ಚು ಇದೆ. ಹಾಗಾಗಿ ಪಂಚಾಯತಿ ಪ್ರದೇಶದ ನೀರಿನ ಲಭ್ಯತೆಯು ಸರಕಾರ ನಿಗಧಿ ಪಡಿಸಿರುವುದಕ್ಕಿಂತ ಹೆಚ್ಚು ಇದೆ. ಪಂಚಾಯಿತಿ ವ್ಯಾಪ್ತಿಗೆ ಸೇರಿದ ಬಸವನದುರ್ಗ ಗ್ರಾಮದಲ್ಲಿ ವಿಶ್ವಬ್ಯಾಂಕಿನ ಯೋಜನೆಯಡಿಯಲ್ಲಿ ನೀರು ಪೂರೈಕೆ ಮಾಡಲಾಗಿದೆ. 50,000 ಲೀಟರ್ ನೀರಿನ ಟ್ಯಾಂಕ್‌ನ್ನು ನಿರ್ಮಿಸಿ, ಮಿನಿಟ್ಯಾಂಕ್‌ಗಳಿಂದ ಮತ್ತು ಸಾರ್ವಜನಿಕ ನಳಗಳ ಮೂಲಕ ನೀರು ಸರಬುರಾಜು ಮಾಡಲಾಗಿದೆ. ವಿಶ್ವಬ್ಯಾಂಕಿನ ಯೋಜನೆ ಸೌಲಭ್ಯ ಇದೇ ಒಂದು ಗ್ರಾಮಕ್ಕೆ ಮಾತ್ರ ಸೀಮಿತವಾಗಿದೆ. ಪ್ರತಿದಿನ ಮಾನವನಿಗೆ 62 ಲೀಟರ್ ನೀರು ಲಭ್ಯವಿದೆ. ಆದರೆ ಇದರ ಪೈಪ್‌ಲೈನ್, ಕೊಳವೆಬಾವಿ ಮೋಟರ್ ಇವುಗಳ ದುರಸ್ಥಿ ಕಾರ್ಯದಲ್ಲಿ ಹೆಚ್ಚು ವಿಳಂಬವಾಗುತ್ತಿದೆ ಎಂದು ಊರವರು ಅಭಿಪ್ರಾಯಪಟ್ಟಿದ್ದಾರೆ. ಇದರ ನಿರ್ವಹಣೆಯ ಎಲ್ಲಾ ಜವಾಬ್ದಾರಿಯನ್ನು ಗ್ರಾಮಪಂಚಾಯತಿಗೆ ವಹಿಸಲಾಗಿದೆ. ಈ ಯೋಜನೆಯಲ್ಲಿ ಗ್ರಾಮದಲ್ಲಿ 40 ವೈಯಕ್ತಿಕ ನಳಗಳಿವೆ. ಇದರಿಂದ ಸಂಗ್ರಹಿಸಿದ ಮೊತ್ತದಲ್ಲಿ ನಿರ್ವಹಣೆಗೆ ಮಾಡುವ ಕೆಲಸಗಾರರಿಗೆ ವೇತನ ನೀಡಲಾಗುತ್ತಿದೆ. ನೀರಿನ ಅಂತರ್ಜಲ ಚೆನ್ನಾಗಿದ್ದು ಕುಡಿಯುವುದಕ್ಕೆ ಯೋಗ್ಯವಾಗಿದೆ. ಈ ಪಂಚಾಯತಿ ವ್ಯಾಪ್ತಿಯ ಈ ಗ್ರಾಮದಲ್ಲಿ ಕುಡಿಯುವ ನೀರಿನ ದೊಡ್ಡ ಯೋಜನೆ ಇದಾಗಿದೆ.

ಪಂಚಾಯತಿ ವ್ಯಾಪ್ತಿಯೊಳಗೆ ಬರುವ ಗ್ರಾಮವಾರು ನೀರಿನ ಲಭ್ಯತೆಯನ್ನು ನೋಡಿದಾಗ ನಾಗೇನಹಳ್ಳಿಯಲ್ಲಿ 35 ಲೀಟರ್, ಬಸವನದುರ್ಗದಲ್ಲಿ62 ಲೀಟರ್, ಬೆನಕನಹಳ್ಳಿಯಲ್ಲಿ 55 ಲೀಟರ್, ಕಾಳಘಟ್ಟದಲ್ಲಿ 116ಲೀಟರ್, ಕಳ್ಳಿರಾಂಪುರದಲ್ಲಿ 55ಲೀಟರ್ ಮತ್ತು ಬೆಳಗೋಡಿನಲ್ಲಿ 90ಲೀಟರ್, ಪ್ರತಿದಿನ ತಲಾ ಮಾನವನಿಗೆ ನೀರು ಲಭ್ಯವಿದೆ. ಈ ಅಂಕಿ ಅಂಶಗಳ ಪ್ರಕಾರ ಪಂಚಾಯತಿಯ ಕೇಂದ್ರವಾದ

ನಾಗೇನಹಳ್ಳಿ ಗ್ರಾಮದಲ್ಲಿ ಕನಿಷ್ಠ ನೀರು ಲಭ್ಯವಿಲ್ಲ. ಪಂಚಾಯತಿ ವ್ಯಾಪ್ತಿಯ ಇತರ ಎಲ್ಲಾ ಗ್ರಾಮಗಳಲ್ಲಿ 40 ಲೀಟರ್‌ಗಿಂತ ಅಧಿಕ ನೀರು ಲಭ್ಯವಿದೆ(ಕೋಷ್ಟಕ 7). ಜತೆಗೆ ನಾಗೇನಹಳ್ಳಿಯ ನೀರು ಕುಡಿಯುವುದಕ್ಕೆ ಯೋಗ್ಯವಿಲ್ಲ. ಫ್ಲೋರೈಡ್ ಅಂಶಗಳಿಂದ ಕೂಡಿದ್ದು ಮೈಯಲ್ಲಿ ತಿಂಡಿ, ಕಿಡ್ನಿಯ ತೊಂದರೆಗಳು ಇವೆ ಎಂದು ಊರವರು ಅಭಿಪ್ರಾಯಪಟ್ಟಿದ್ದಾರೆ. ನಾಗೇನಹಳ್ಳಿ ಹೊರತುಪಡಿಸಿ ಪಂಚಾಯತಿ ವ್ಯಾಪ್ತಿಯ ಎಲ್ಲಾ ಗ್ರಾಮಗಳಲ್ಲಿ ನೀರಿನ ಗುಣಮಟ್ಟ ಚೆನ್ನಾಗಿದೆ. ಎನ್. ಶಿವಣ್ಣ ಅವರು ಚಿತ್ರದುರ್ಗ ಜಿಲ್ಲೆಯ ಮೂರು ಗ್ರಾಮಪಂಚಾಯತಿಗಳಲ್ಲಿ ಕುಡಿಯುವ ನೀರು ಪೂರೈಕೆ ಕುರಿತು ಅಧ್ಯಯನ ನಡೆಸಿದ್ದು ಪಂಚಾಯತಿ ಕೇಂದ್ರ ಗ್ರಾಮಗಳಲ್ಲಿ ಕುಡಿಯವ ನೀರು ಪೂರೈಕೆ ಸರಿಯಿದ್ದು ಪಂಚಾಯತಿ ವ್ಯಾಪ್ತಿಯ ಇತರೆ ಗ್ರಾಮಗಳಲ್ಲಿ ಗ್ರಾಮಪಂಚಾಯತಿ ಇರುವ ಸ್ಥಳಕ್ಕಿಂತ ಕಡಿಮೆ ನೀರು ಲಭ್ಯವಿದೆ ಎಂದು ಅಭಿಪ್ರಾಯ ಪಟ್ಟಿದ್ದಾರೆ.[14] ಆದರೆ ಪ್ರಸ್ತುತ ಈ ಅಧ್ಯಯನದಲ್ಲಿ ಕೇಂದ್ರ ಸ್ಥಳವಾದ ನಾಗೇನಹಳ್ಳಿಯಲ್ಲಿ ನೀರಿನ ಸಮಸ್ಯೆ ಇದೆ. ಅಲ್ಲಿ ಪಂಚಾಯತಿ ವ್ಯಾಪ್ತಿಯಲ್ಲಿ ಬರುವ ಇತರ ಗ್ರಾಮಗಳಲ್ಲಿ ಹೋಲಿಸಿದರೆ ಕಡಿಮೆ ನೀರು ಲಭ್ಯವಿದೆ. ಜತೆಗೆ ಅದು ಕುಡಿಯಲು ಯೋಗ್ಯವಾಗಿಲ್ಲ. ಇದು ಹೆಚ್ಚು ಪ್ರಚಲಿತದಲ್ಲಿರುವ ವಿವರಣೆಗೆ - ಪಂಚಾಯತಿ ಕೇಂದ್ರ ಸ್ಥಳವು ಎಲ್ಲ ಸೌಲಭ್ಯ ಪಡೆದುಕೊಂಡು ಉಳಿದ ಪ್ರದೇಶಗಳ ಆಸಕ್ತಿಯನ್ನು ಕಡೆಗಣಿಸುತ್ತದೆ ಎನ್ನುವ ವಿವರಣೆಗೆ ವಿರುದ್ಧವಾಗಿದೆ.

ಗ್ರಾಮಪಂಚಾಯತಿಯ ಒಟ್ಟು ವೆಚ್ಚದ ಶೇ 9ರಷ್ಟು ಹಣವನ್ನು ನೀರು ಪೂರೈಕೆಗಾಗಿ ಖರ್ಚು ಮಾಡಲಾಗಿದೆ (ಕೋಷ್ಟಕ-9). 5 ವರ್ಷದಲ್ಲಿ ಪ್ರತಿ ಮಾನವನಿಗೆ ರೂ.10ನ್ನು ಖರ್ಚು ಮಾಡಲಾಗಿದೆ. ಪ್ರತಿವರ್ಷ ಪ್ರತಿ ಮಾನವನಿಗೆ ಕುಡಿಯುವ ನೀರಿನ ವೆಚ್ಚವನ್ನು ನೋಡಿದಾಗ ಕನಿಷ್ಠ 1 ರೂಪಾಯಿಯಿಂದ 5 ರೂಪಾಯಿಗಳವರೆಗೆ ಪಂಚಾಯತಿ ವೆಚ್ಚ ಮಾಡಿದೆ.

ನೀರು ಪೂರೈಕೆ ಕುರಿತು ಗ್ರಾಮೀಣ ಜನತೆಯಿಂದ ಅಭಿಪ್ರಾಯವನ್ನು ಸಂಗ್ರಹಿಸಲಾಗಿದೆ. ಕುಡಿಯುವ ನೀರು ಪೂರೈಕೆಯ ಬಗ್ಗೆ ಶೇ 30ರಷ್ಟು ಕುಟುಂಬಗಳು ತೃಪ್ತಿಕರವೆಂದು ಅಭಿಪ್ರಾಯಪಟ್ಟಿದ್ದಾರೆ. ಶೇ.69ರಷ್ಟು ಜನರು ಅತೃಪ್ತಿ ಸೂಚಿಸಿದ್ದಾರೆ. ಅತೃಪ್ತಿ ಸೂಚಿಸಿದ ಕುಟುಂಬಗಳಲ್ಲಿ ಹೆಚ್ಚು ನಾಗೇನಹಳ್ಳಿ ಗ್ರಾಮದವರಾಗಿದ್ದಾರೆ. ಜಾತಿವಾರು ಅಭಿಪ್ರಾಯವನ್ನು ನೋಡಿದಾಗ ಪರಿಶಿಷ್ಟರು ಮತ್ತು ಹಿಂದುಳಿದ ವರ್ಗದವರು ಹೆಚ್ಚು ಅತೃಪ್ತಿಯನ್ನು ಸೂಚಿಸಿದ್ದಾರೆ (ಕೋಷ್ಟಕ-10). ಗ್ರಾಮಪಂಚಾಯತಿಯು ನೀರಾವರಿ ಪ್ರದೇಶವಾಗಿದ್ದು, ನಾಗೇನಹಳ್ಳಿ ಗ್ರಾಮದ ಪಕ್ಕದಲ್ಲಿ ತುಂಗಭದ್ರಾ ಕಾಲುವೆ ನೀರು ಹರಿದುಹೋಗುತ್ತಿದೆ. ಕಾಲುವೆ ನೀರು ಪಕ್ಕಕ್ಕೆ ಹರಿದರೂ ಸಹ ನಮಗೆ ಕುಡಿಯುವುದಕ್ಕೆ ಕಾಲುವೆ ನೀರು ದೊರೆತಿಲ್ಲ ಎಂದು ಊರವರು ಹೆಚ್ಚಿನ ಅತೃಪ್ತಿ ಸೂಚಿಸಿದ್ದಾರೆ. ನಮ್ಮ ಗ್ರಾಮಕ್ಕೆ ಕಾಲುವೆಯಿಂದ ಕುಡಿಯುವ ನೀರು ಪೂರೈಕೆ ಮಾಡಿದರೆ ನಮಗೆ ಯೋಗ್ಯ ಮತ್ತು ತೃಪ್ತಿಕರ ನೀರು ಸಿಗುತ್ತದೆ ಎಂದು ಹೇಳಿದ್ದಾರೆ. ನಾವು ನಮ್ಮ ಗ್ರಾಮಕ್ಕೆ ತುಂಗಾಭದ್ರಾ ನದಿ ನೀರು ಪೂರೈಕೆ ಕುರಿತು ಅಧಿಕಾರಿಗಳಿಗೆ ಜಿಲ್ಲಾ ಮತ್ತು ತಾಲೂಕು ಪಂಚಾಯತಿ ಸದಸ್ಯರಿಗೆ, ಶಾಸಕರಿಗೆ ಮತ್ತು ಲೋಕಸಭಾ ಸದಸ್ಯರಿಗೆ ಮನವಿಯನ್ನು ಸಲ್ಲಿಸಿದ್ದೇವೆ. ಈ ಯೋಜನೆಯಡಿಯಲ್ಲಿ ಕುಡಿಯುವ ನೀರು ಪೂರೈಕೆಯಾಗುವ ನಿರೀಕ್ಷೆ ಇದೆ ಎಂದು ಹೇಳಿದ್ದಾರೆ. ಒಟ್ಟಾರೆ ಪಂಚಾಯತಿ

ಕೇಂದ್ರಸ್ಥಳವಾದ ನಾಗೇನಹಳ್ಳಿ ಹೊರತುಪಡಿಸಿ ಉಳಿದ ಎಲ್ಲಾ ಗ್ರಾಮಗಳಲ್ಲಿ ಕುಡಿಯುವ ನೀರು ಪೂರೈಕೆ ಚೆನ್ನಾಗಿದೆ. ಆದರೆ ದುರಸ್ಥಿ ಮತ್ತು ನಿರ್ವಹಣಾ ಕಾರ್ಯಗಳು ಪಂಚಾಯತಿ ವ್ಯಾಪ್ತಿಯಲ್ಲಿ ಬರುವ ಎಲ್ಲಾ ಗ್ರಾಮಗಳಲ್ಲೂ ಸರಿಯಿಲ್ಲ.

## ಬೈಲುವದ್ದಿಗೆರೆ ಗ್ರಾಮಪಂಚಾಯತಿ

ಬೈಲುವದ್ದಿಗೆರೆ ಪಂಚಾಯತಿಯ ಗ್ರಾಮಗಳಲ್ಲಿ ನೀರು ಪೂರೈಕೆಗಾಗಿ ಹಲವಾರು ಕಾರ್ಯಕ್ರಮಗಳಡಿಯಲ್ಲಿ ನೀರು ಪೂರೈಕೆಯನ್ನು ಮಾಡಲಾಗಿದೆ. ಒಟ್ಟು ಪಂಚಾಯತಿ ವ್ಯಾಪ್ತಿಯಲ್ಲಿ 16 ಮಿನಿಟ್ಯಾಂಕ್‌ಗಳಿದ್ದು ಪ್ರತಿ 367 ಜನರಿಗೆ ಒಂದು ಮಿನಿಟ್ಯಾಂಕ್ ಇದೆ. ನಿಗಧಿ ಪಡಿಸಿದ ಜನರಿಗಿಂತ ಕಡಿಮೆ ಜನಸಂಖ್ಯೆಗೆ ಮಿನಿಟ್ಯಾಂಕ್ ಸೌಲಭ್ಯವಿದ್ದು, ಪಂಚಾಯತಿ ವ್ಯಾಪ್ತಿಯಲ್ಲಿ ಮಿನಿಟ್ಯಾಂಕ್‌ಗಳ ಸೌಲಭ್ಯ ಚೆನ್ನಾಗಿದೆ. ಪ್ರತಿದಿನ ಒಂದು ಮಿನಿಟ್ಯಾಂಕ್‌ನ ನೀರಿನ ಪೂರೈಕೆ 2500 ಲೀಟರ್ ಇದ್ದು, ಮಿನಿಟ್ಯಾಂಕ್‌ಗಳಿಂದ ದಿನಕ್ಕೆ ಒಟ್ಟು 40,000 ಲೀಟರ್ ನೀರು ಲಭ್ಯವಿದೆ. ಒಟ್ಟು 17 ಸಾನಿರ್ವಜನಿಕ ನಳಗಳಿದ್ದು, 326 ಜನರಿಗೆ ಒಂದು ಸಾರ್ವಜನಿಕ ನಳ ಇದೆ. ಪಂಚಾಯತಿ ವ್ಯಾಪ್ತಿಯ ನಾಲ್ಕು ಗ್ರಾಮಗಳಲ್ಲಿ ನಲ್ಲಿ ನೀರು ಸರಬರಾಜು ಯೋಜನೆಯಡಿ ನೀರು ಪೂರೈಕೆಯಾಗುತ್ತಿದೆ. ಒಟ್ಟು ಪಂಚಾಯತಿ ವ್ಯಾಪ್ತಿಯಲ್ಲಿ 18 ಕೈಪಂಪ್‌ಗಳಿವೆ. ಪ್ರತಿ 326 ಜನಸಂಖ್ಯೆಗೆ ಒಂದು ಕೈಪಂಪ್ ಇದೆ. ಸರಕಾರದ ನಿಯಮದ ಪ್ರಕಾರ 250 ಜನಸಂಖ್ಯೆಗೆ ಒಂದು ಕೈಪಂಪ್ ಇರಬೇಕು. ಆದರೆ ಎಲ್ಲ ಗ್ರಾಮಗಳಲ್ಲೂ ಸರಕಾರ ನಿಗದಿ ಪಡಿಸಿದ ಜನಸಂಖ್ಯೆಗಿಂತ ಹೆಚ್ಚು ಜನರಿಗೆ ಒಂದು ಕೈಪಂಪ್ ಇದೆ(ಕೋಷ್ಠಕ 8). ಒಂದು ಕೈಪಂಪಿನ ಸಾಮರ್ಥ್ಯ 5000 ಲೀಟರ್ ನೀರು ಇದ್ದು ಕೈಪಂಪ್‌ಗಳಿಂದ ಒಟ್ಟು ಪಂಚಾಯತ್ ಪ್ರದೇಶದಲ್ಲಿ 90,000 ಲೀಟರ್ ನೀರು ಪೂರೈಕೆಯಾಗುತ್ತಿದೆ.

ಎಲ್ಲ ಗ್ರಾಮಗಳಲ್ಲಿ ವಾಟರ್‌ಟ್ಯಾಂಕ್‌ಗಳಿವೆ, 7 ಕೊಳವೆ ಬಾವಿಗಳಿದ್ದು ಅದರಿಂದ 12.5 ಇಂಚ್ ನೀರು ಲಭ್ಯವಿದೆ. ಎಲ್ಲಾ ಮೂಲಗಳಿಂದ ಪಂಚಾಯತಿಯ ನೀರು ಪೂರೈಕೆಯನ್ನು ನೋಡಿದಾಗ, ಪ್ರತಿದಿನ ಪ್ರತಿ ಮಾನವನಿಗೆ ತಲಾ 37 ಲೀಟರ್ ನೀರು ಲಭ್ಯವಿದೆ. ಸರಕಾರದ ನಿಯಮದ ಪ್ರಕಾರ ಕನಿಷ್ಟ 40 ಲೀಟರ್ ನೀರು ಒದಗಿಸಬೇಕು. ಆದರೆ ಇಲ್ಲಿ ಪ್ರತಿ ಮಾನವನಿಗೆ ಮೂರು ಲೀಟರ್ ಕಡಿಮೆ ನೀರು ಪೂರೈಕೆ ಆಗುತ್ತಿದೆ. ತಾಲೂಕಿನ ಸರಾಸರಿ 51 ಲೀಟರ್ ಇದ್ದು, ಪಂಚಾಯತಿಯ ನೀರಿನ ಪ್ರಮಾಣವನ್ನು ತಾಲೂಕ್ ಸರಾಸರಿ ಹೋಲಿಸಿದರೆ 13 ಲೀಟರ್ ನೀರು ಕಡಿಮೆ ಲಭ್ಯವಿದೆ(ಕೋಷ್ಠಕ-8.1).

ಗ್ರಾಮವಾರು ನೀರು ಪೂರೈಕೆಯನ್ನು ನೋಡಿದಾಗ ಗ್ರಾಮಪಂಚಾಯತಿಯ ಕೇಂದ್ರ ಸ್ಥಳವಾದ ಬೈಲುವದ್ದಿಗೆರೆಯಲ್ಲಿ ಕುಡಿಯುವ ನೀರಿನ ಪೂರೈಕೆ ಸ್ಥಿತಿ ಉತ್ತಮವಾಗಿದೆ. ಕಿರು ನೀರು ಸರಬರಾಜು ಯೋಜನೆಯಡಿಯಲ್ಲಿ ಮಿನಿಟ್ಯಾಂಕ್‌ಗಳ ಮತ್ತು ಸಾರ್ವಜನಿಕ ನಳಗಳ ಮೂಲಕ ನೀರು ಪೂರೈಕೆ ಮಾಡಲಾಗುತ್ತಿದೆ. 314 ಜನಸಂಖ್ಯೆಗೆ ಒಂದು ಮಿನಿಟ್ಯಾಂಕ್, 471 ಜನಸಂಖ್ಯೆಗೆ ಒಂದು ಕೈಪಂಪ್ ಮತ್ತು 357 ಜನರಿಗೆ ಒಂದು ಸಾರ್ವಜನಿಕ ನಳ ಇದೆ(ಕೋಷ್ಠಕ-8). ಕೊಳವೆ ಬಾವಿಗಳು ಎರಡು ಇದ್ದು ನೀರಿನ ಅಂತರ್ಜಲ ಚೆನ್ನಾಗಿದೆ. ನೀರಿನ ಗುಣಮಟ್ಟ ಸಹ ಕುಡಿಯುವುದಕ್ಕೆ ಯೋಗ್ಯವಾಗಿದೆ. ಪ್ರತಿದಿನ ತಲಾ 52

ಲೀಟರ್ ನೀರು ಲಭ್ಯವಿದೆ. ಕುಡಿಯುವ ನೀರು ಪೂರೈಕೆ ಕುರಿತು ಗ್ರಾಮೀಣ ಜನರಲ್ಲಿ ಉತ್ತಮ ಅಭಿಪ್ರಾಯ ವ್ಯಕ್ತವಾಗಿದೆ. ಸರಕಾರ ನಿಗದಿಪಡಿಸಿರವ ಕನಿಷ್ಠ ನೀರು ಪೂರೈಕೆಯ ಪ್ರಮಾಣಕ್ಕಿಂತ 12 ಲೀಟರ್ ನೀರು ಅಧಿಕ ದೊರೆಯುತ್ತಿದೆ. ಪಂಚಾಯತಿ ಸರಾಸರಿಯು 37ಲೀಟರ್ ಲಭ್ಯವಿದ್ದು, ಈ ಸರಾಸರಿಗಿಂತ 15ಲೀಟರ್ ಮತ್ತು ತಾಲೂಕು ಸರಾಸರಿಗಿಂತ ಒಂದು ಲೀಟರ್ ಹೆಚ್ಚು ನೀರು ಲಭ್ಯವಿದೆ(ಕೋಷ್ಠಕ-7.1).

ಕಾಕಬಾಳು ಗ್ರಾಮದಲ್ಲಿ ವಿಶ್ವಬ್ಯಾಂಕ್ ಯೋಜನೆಯಡಿಯಲ್ಲಿ ಕುಡಿಯುವ ನೀರು ಪೂರೈಕೆ ಮಾಡಲಾಗಿದೆ. 50,000 ಲೀಟರ್ ಸಾಮರ್ಥ್ಯದ ವಾಟರ್ ಟ್ಯಾಂಕ್ ನಿರ್ಮಿಸಿ, ಮಿನಿಟ್ಯಾಂಕ್ ಮತ್ತು ಸಾರ್ವಜನಿಕ ನಳಗಳ ಮೂಲಕ ಕುಡಿಯುವ ನೀರು ಪೂರೈಕೆ ಮಾಡಲಾಗಿದೆ. ಆದರೆ ಈ ಯೋಜನೆಯಡಿಯಲ್ಲಿ ಕೈಗೊಂಡ ಕಾಮಗಾರಿಗಳು ಕಳಪೆ ಮಟ್ಟದಾಗಿದ್ದು ದಿನಕ್ಕೆ ಕೇವಲ ತಲಾ 19 ಲೀಟರ್ ನೀರು ದೊರೆಯುತ್ತಿದೆ. ಪಂಚಾಯತಿ ಸರಾಸರಿ 37 ಲೀಟರ್ ಲಭ್ಯವಿದ್ದು, ಪಂಚಾಯತಿ ಸರಾಸರಿಗಿಂತ 18 ಲೀಟರ್ ಮತ್ತು ತಾಲೂಕು ಸರಾಸರಿಗಿಂತ 32ಲೀಟರ್ ಕಡಿಮೆ ನೀರು ಲಭ್ಯವಿದೆ(ಕೋಷ್ಠಕ-8.1). ಈ ಯೋಜನೆಯ ಬಗ್ಗೆ ಪಂಚಾಯತ್ ಸದಸ್ಯರು ಮತ್ತು ಊರವರು ಹೆಚ್ಚು ಅತೃಪ್ತಿಯನ್ನು ವ್ಯಕ್ತಪಡಿಸಿದ್ದಾರೆ. ಬೋರ್‌ವೆಲ್ ಮೋಟರ್ ಸುಡುವುದು ಮತ್ತು ಅದರ ದುರಸ್ಥಿಕಾರ್ಯದಲ್ಲಿ ಆಗುವ ವಿಳಂಬದಿಂದ ಕನಿಷ್ಠ ನೀರು ಕೂಡ ಪೂರೈಕೆಯಾಗುತ್ತಿಲ್ಲ. ವಿಶ್ವಬ್ಯಾಂಕ್ ಯೋಜನೆಯ ನೀರಿನ ಸಮಿತಿ ಇದ್ದು ಈ ಸಮಸ್ಯೆ ಬಗ್ಗೆ ಅದು ಯಾವುದೇ ಕಾಳಜಿ ವಹಿಸಿಲ್ಲ. ಗ್ರಾಮಪಂಚಾಯತಿ ಆ ಸಮಸ್ಯೆಗಳನ್ನು ಪರಿಹರಿಸಿ ಆ ಗ್ರಾಮದ ಜನರಿಗೆ ಕುಡಿಯುವ ನೀರು ಪೂರೈಕೆ ಮಾಡಬೇಕಿತ್ತು. ಆದರೆ ಅದು ಕೂಡ ಆ ಕಡೆ ವಿಶೇಷ ಗಮನ ಹರಿಸಿಲ್ಲ. ಜತೆಗೆ ಅದು ಗ್ರಾಮ ಪಂಚಾಯತಿಯ ಅಧ್ಯಕ್ಷರ ಗ್ರಾಮ. ಆದರೂ ಕುಡಿಯುವ ನೀರು ಪೂರೈಕೆ ಸರಿಯಿಲ್ಲ. ನೀರಿನ ಅಂತರ್ಜಲ ಕಡಿಮೆ ಇದೆ. ಕುಡಿಯುವುದಕ್ಕೆ ನೀರಿನ ಗುಣಮಟ್ಟ ಯೋಗ್ಯವಾಗಿಲ್ಲ ಎಂದು ಊರವರು ಅಭಿಪ್ರಾಯಪಟ್ಟಿದ್ದಾರೆ. ಒಟ್ಟಾರೆ ಈ ಗ್ರಾಮದಲ್ಲಿ ವಿಶ್ವಬ್ಯಾಂಕ್ ಯೋಜನೆ ಅನುಷ್ಠಾನಗೊಂಡಿದ್ದರೂ ಕನಿಷ್ಠ ತಲಾ ನೀರು ದೊರೆಯುತ್ತಿಲ್ಲ.

ಪಂಚಾಯತಿ ವ್ಯಾಪ್ತಿಯ ಗ್ರಾಮವಾದ ಧರ್ಮಸಾಗರದಲ್ಲಿ ಕಿರು ನೀರು ಸರಬುರಾಜು ಯೋಜನೆಯಡಿಯಲ್ಲಿ ಮಿನಿಟ್ಯಾಂಕ್‌ಗಳ ಮತ್ತುಸಾರ್ವಜನಿಕ ನಳಗಳ ಮೂಲಕ ಕುಡಿಯುವ ನೀರು ಪೂರೈಸಲಾಗುತ್ತಿದೆ. ಗ್ರಾಮದಲ್ಲಿ ಒಟ್ಟು 4 ಕೈಪಂಪ್‌ಗಳು ಇವೆ. ಈ ಗ್ರಾಮದಲ್ಲಿ ಪ್ರತಿದಿನ ತಲಾ 32 ಲೀಟರ್ ನೀರು ಮಾತ್ರ ಲಭ್ಯವಿದೆ. ಪಂಚಾಯತಿ ಸರಾಸರಿಗಿಂತ 5 ಲೀಟರ್ ಮತ್ತು ತಾಲೂಕು ಸರಾಸರಿಗಿಂತ 19 ಲೀಟರ್ ಕಡಿಮೆ ನೀರು ಲಭ್ಯವಿದೆ. ಕಡಿಮೆ ನೀರು ಪೂರೈಕೆಗೆ ಕೆಲವು ಕಾರಣಗಳನ್ನು ಕೊಡಬಹುದು. ನೀರಿನ ಅಂತರ್ಜಲ ಕಡಿಮೆ ಇರುವುದು, ವಿದ್ಯುತ್ ಸಮಸ್ಯೆ ಮತ್ತು ಗ್ರಾಮಪಂಚಾಯತಿಯ ಕಾರ್ಯಕ್ಷಮತೆಯು ಇವೇ ಮುಖ್ಯ ಕಾರಣಗಳು. ಹೀಗಾಗಿ ನೀರಿನ ಸಮಸ್ಯೆಯಾದಾಗ ಈ ಗ್ರಾಮದಲ್ಲಿ ಕೈಪಂಪ್‌ಗಳ ಅವಲಂಬನೆ ಇದೆ. 250 ಜನಸಂಖ್ಯೆಗೆ ಒಂದು ಕೈಪಂಪ್ ಇರಬೇಕು. ಆದರೆ ಇಲ್ಲಿ 310 ಜನಸಂಖ್ಯೆಗೆ ಒಂದು ಕೈಪಂಪ್ ಇದೆ(ಕೋಷ್ಠಕ-7). ಇಲ್ಲೂ ಕೂಡ ಕುಡಿಯುವ ನೀರು ಪೂರೈಕೆಯ ಬಗ್ಗೆ

ಊರವರು ಹೆಚ್ಚು ಅತೃಪ್ತಿಯನ್ನು ಸೂಚಿಸಿದ್ದಾರೆ. ಪಂಚಾಯತಿ ವ್ಯಾಪ್ತಿಯ ಸಣ್ಣ ಗ್ರಾಮವಾದ ಗುಂಡ್ಲವದ್ದಿಗೆರೆಯಲ್ಲಿ ಕಿರು ನೀರು ಸರಬರಾಜು ಯೋಜನೆಯಡಿಯಲ್ಲಿ ಮಿನಿಟ್ಯಾಂಕ್ ಮತ್ತು ಸಾರ್ವಜನಿಕ ನಳಗಳ ಮೂಲಕ ನೀರು ಪೂರೈಕೆಯಾಗುತ್ತಿದೆ. ನೀರಿನ ಅಂತರ್ಜಲ ಮತ್ತು ನೀರಿನ ಗುಣಮಟ್ಟ ಚೆನ್ನಾಗಿದೆ. ಪ್ರತಿ ದಿನ ತಲಾ 54 ಲೀಟರ್ ನೀರು ಪೂರೈಕೆಯಾಗುತ್ತದೆ. ಪಂಚಾಯಿತಿ ಸರಾಸರಿಗಿಂತ 17ಲೀಟರ್ ಮತ್ತು ತಾಲೂಕು ಸರಾಸರಿಗಿಂತ 3ಲೀಟರ್ ಹೆಚ್ಚು ನೀರು ಲಭ್ಯವಿದೆ. ಇಲ್ಲಿಯ ಜನತೆಯಲ್ಲಿ ಕುಡಿಯುವ ನೀರಿನ ಪೂರೈಕೆ ಕುರಿತು ಉತ್ತಮ ಅಭಿಪ್ರಾಯ ವ್ಯಕ್ತವಾಗಿದೆ. ದುರಸ್ಥಿ ಕಾರ್ಯದಲ್ಲಿ ಹೆಚ್ಚು ವಿಳಂಬವಿದೆ ಎಂದು ಜನತೆ ಅಭಿಪ್ರಾಯ ಪಟ್ಟಿದ್ದಾರೆ.

ಪಂಚಾಯತಿ ವ್ಯಾಪ್ತಿಯಲ್ಲಿ ಬರುವ ನಾಲ್ಕು ಗ್ರಾಮಗಳಲ್ಲಿ ಬೈಲುವದ್ದಿಗೆರೆ ಮತ್ತು ಗುಂಡ್ಲವದ್ದಿಗೆರೆಯಲ್ಲಿ ಕುಡಿಯುವ ನೀರು ಪೂರೈಕೆ ತಲಾ 40 ಲೀಟರ್‌ಗಿಂತ ಅಧಿಕವಾಗಿದೆ. ಕಾಕಬಾಳು ಮತ್ತು ಧರ್ಮಸಾಗರದಲ್ಲಿ ಕನಿಷ್ಠ ನೀರು ಲಭ್ಯವಿಲ್ಲ. ಕಳೆದ ಐದು ವರ್ಷದಲ್ಲಿ ನೀರಿನ ತಲಾ ವೆಚ್ಚ ರೂ.11. ಅದೇ ರೀತಿ ಐದು ವರ್ಷದ ಸರಾಸರಿಯನ್ನು ನೋಡಿದರೆ ಪಂಚಾಯತಿಯ ಒಟ್ಟು ವೆಚ್ಚದಲ್ಲಿ ಶೇ 11ರಷ್ಟು ಕುಡಿಯುವ ನೀರಿಗೆ ಖರ್ಚು ಮಾಡಲಾಗಿದೆ(ಕೋಷ್ಠಕ-9). ನೀರಾವರಿ ಪ್ರದೇಶಕ್ಕೆ ಹೋಲಿಸಿದರೆ ಹೆಚ್ಚು ಹಣವನ್ನು ಕುಡಿಯುವ ನೀರು ಪೂರೈಕೆಗೆ ವೆಚ್ಚ ಮಾಡಲಾಗಿದೆ. ನೀರಾವರಿ ಪ್ರದೇಶಕ್ಕಿಂತ ಹೆಚ್ಚು ಹಣವನ್ನು ವೆಚ್ಚ ಮಾಡಿದರೂ ಸಹ ಕನಿಷ್ಠ ತಲಾ ಕುಡಿಯುವ ನೀರು ಪೂರೈಕೆ ಆಗಿಲ್ಲ.

ನೀರು ಪೂರೈಕೆಯ ಬಗ್ಗೆ ಊರವರ ಅಭಿಪ್ರಾಯವನ್ನು ನೋಡಿದಾಗ ಶೇ 22 ರಷ್ಟು ತೃಪ್ತಿಕರವೆಂದು ಶೇ 71ರಷ್ಟು ಕುಟುಂಬಗಳು ಅತೃಪ್ತಿಯನ್ನು ಸೂಚಿಸಿವೆ(ಕೋಷ್ಠಕ-10). ಹೆಚ್ಚು ಅತೃಪ್ತಿ ಕಾಕಬಾಳು ಮತ್ತು ಧರ್ಮಸಾಗರ ಗ್ರಾಮಗಳಲ್ಲಿ ವ್ಯಕ್ತವಾಗಿದೆ. ಜಾತಿವಾರು ಜನತೆಯ ಅಭಿಪ್ರಾಯವನ್ನು ನೋಡಿದಾಗ ಹೆಚ್ಚು ಅತೃಪ್ತಿ ಪರಿಶಿಷ್ಟ ಮತ್ತು ಹಿಂದುಳಿದ ವರ್ಗದ ಕುಟುಂಬಗಳಿಂದ ವ್ಯಕ್ತವಾಗಿದೆ. ಪಂಚಾಯತಿ ವ್ಯಾಪ್ತಿಯ ಎಲ್ಲಾ ಗ್ರಾಮಗಳಲ್ಲಿ ನಿರ್ವಹಣೆ ಮತ್ತು ದುರಸ್ಥಿ ಕಾರ್ಯದ ಬಗ್ಗೆ ಅತೃಪ್ತಿಯನ್ನು ವ್ಯಕ್ತಪಡಿಸಿದ್ದಾರೆ. ನೀರಾವರಿ ಪ್ರದೇಶ ನಾಗೇನಹಳ್ಳಿ ಪಂಚಾಯತಿಗೆ ಹೋಲಿಸಿದರೆ ಬೈಲುವದ್ದಿಗೆರೆ ಪಂಚಾಯತಿಯಲ್ಲಿ ನೀರು ಪೂರೈಕೆ ಸರಿಯಿಲ್ಲ. ಗ್ರಾಮಪಂಚಾಯತಿಯ ಎಲ್ಲಾ ಗ್ರಾಮಗಳಲ್ಲಿ ನಿರ್ವಹಣಾ ಮತ್ತು ದುರಸ್ಥಿ ಕಾರ್ಯಗಳು ಉತ್ತಮವಾಗಿಲ್ಲವೆಂದು ಹೇಳಬಹುದು.

## ಹಿರೇಹೆಗ್ಡಾಳ್ ಗ್ರಾಮಪಂಚಾಯತಿ

ಪಂಚಾಯತಿ ವ್ಯಾಪ್ತಿಯ ಗ್ರಾಮಗಳಲ್ಲಿ ಕಿರು ನೀರು ಸರಬರಾಜು ಯೋಜನೆ ಮತ್ತು ಕೈಪಂಪ್‌ಗಳ ಮೂಲಕ ನೀರು ಪೂರೈಕೆ ಮಾಡಲಾಗಿದೆ. ಹಿರೇಹೆಗ್ಡಾಳ್ ಗ್ರಾಮಪಂಚಾಯತಿ ಚಿಕ್ಕ ಪಂಚಾಯತಿಯಾಗಿದ್ದು ಕೇವಲ 804 ಕುಟುಂಬಗಳನ್ನು ಹೊಂದಿದೆ. ಕಿರು ನೀರು ಸರಬರಾಜು ಯೋಜನೆಯಡಿಯಲ್ಲಿ ಪ್ರತಿ ಗ್ರಾಮದಲ್ಲಿ ಕೊಳುವೆ ಬಾವಿ ಇದ್ದು ಇದರ ಮೂಲಕ ವಾಟರ್ ಟ್ಯಾಂಕ್‌ಗಳಲ್ಲಿ ನೀರು ಸಂಗ್ರಹಿಸಿ, ಮಿನಿಟ್ಯಾಂಕ್‌ಗಳ ಮತ್ತು ಸಾರ್ವಜನಿಕ ನಳಗಳ ಮೂಲಕ ನೀರು ಪೂರೈಸಲಾಗುತ್ತಿದೆ. ಒಟ್ಟು ಪಂಚಾಯತಿ ವ್ಯಾಪ್ತಿಯಲ್ಲಿ

10 ಮಿನಿ ಟ್ಯಾಂಕ್‌ಗಳಿದ್ದು ಹಿರೇಹೆಗ್ಡಾಳ್ ಗ್ರಾಮಪಂಚಾಯತಿಯು ಪ್ರತಿ 375 ಜನಸಂಖ್ಯೆಗೆ ಒಂದು ಮಿನಿಟ್ಯಾಂಕ್‌ನ್ನು ಹೊಂದಿದೆ(ಕೋಷ್ಟಕ-8). ಸರಕಾರ ನಿಗದಿಪಡಿಸಿರುವುದಕ್ಕಿಂತ ಕಡಿಮೆ ಜನರಿಗೆ ಮಿನಿಟ್ಯಾಂಕ್‌ಗಳಿದ್ದು,ಪ್ರತಿದಿನ ಮಿನಿಟ್ಯಾಂಕ್‌ಗಳಿಂದ 25,000ಲೀಟರ್ ನೀರು ಪೂರೈಕೆಯಾಗುತ್ತಿದೆ. ಪಂಚಾಯತಿ ವ್ಯಾಪ್ತಿಯ ಎಲ್ಲಾ ಗ್ರಾಮಗಳಲ್ಲಿ ನೀರಿನ ಅಂತರ್ಜಲ ಮತ್ತು ನೀರಿನ ಗುಣಮಟ್ಟ ಚೆನ್ನಾಗಿದೆ.

ಪಂಚಾಯತಿ ವ್ಯಾಪ್ತಿಯಲ್ಲಿ ಒಟ್ಟು10 ಕೈಪಂಪ್‌ಗಳು ಇದ್ದು ಇದರಿಂದ ದಿನಕ್ಕೆ 50,000 ಲೀಟರ್ ನೀರು ಲಭ್ಯವಿದೆ. ನಿಯಮ ಪ್ರಕಾಗ 250 ಜನರಿಗೆ ಒಂದು ಕೈಪಂಪ್ ಇರಬೇಕು ಆದರೆ 375 ಜನಸಂಖ್ಯೆಗೆ ಒಂದು ಕೈಪಂಪ್ ಇದೆ. ಕೈಪಂಪ್‌ಗಳ ಸಂಖ್ಯೆ ಕಡಿಮೆ ಇದೆ. ಎಲ್ಲಾ ಮೂಲಗಳಿಂದ ತಲಾ 42 ಲೀಟರ್ ನೀರು ಲಭ್ಯವಿದೆ. ಪ್ರತಿದಿನ ತಲಾ ಮಾನವನಿಗೆ ಸರಕಾರ ನಿಗದಿಪಡಿಸಿರುವಂತೆ ನೀರಿನ ಲಭ್ಯತೆ 40ಲೀಟರ್ ಇದ್ದು,ಪಂಚಾಯತಿಯ ಸರಾಸರಿ ನೀರಿನ ಲಭ್ಯತೆ 42 ಲೀಟರ್ ಪೂರೈಕೆಯಾಗುತ್ತಿದ್ದು, ಸರಕಾರ ನಿಗದಿ ಪಡಿಸಿರುವುದಕ್ಕಿಂತ ಎರಡು ಲೀಟರ್ ಅಧಿಕ ನೀರು ಪೂರೈಕೆಯಾಗುತ್ತದೆ. ತಾಲೂಕಿನ ಸರಾಸರಿ 35 ಲೀಟರ್ ಇದ್ದು, ಗ್ರಾಮ ಪಂಚಾಯತಿಯ ನೀರಿನ ಲಭ್ಯತೆಯನ್ನು ತಾಲೂಕಿಗೆ ಹೋಲಿಸಿದರೆ, ಏಳು ಲೀಟರ್ ನೀರು ಅಧಿಕ ಪೂರೈಕೆಯಾಗುತ್ತಿದೆ(ಕೋಷ್ಟಕ-8.1). ಈ ಪ್ರದೇಶ ನೀರಾವರಿ ಪ್ರದೇಶ, ಪಂಚಾಯತಿ ವ್ಯಾಪ್ತಿಯಲ್ಲಿ ಎರಡು ಕೆರೆಗಳಿದ್ದು ಇಲ್ಲಿ ಬೋರ್‌ವೆಲ್‌ಗಳಲ್ಲಿ ನೀರಿನ ಅಂತರ್ಜಲ ಉತ್ತಮವಾಗಿದೆ. ಗ್ರಾಮ ಪಂಚಾಯತಿಯು ಕುಡಿಯುವ ನೀರು ಪೂರೈಕೆಗೆ ಹೆಚ್ಚು ಆದ್ಯತೆಯನ್ನು ಕೊಟ್ಟಿದೆ ಎಂದು ಅದರ ವಾರ್ಷಿಕ ಬಜೆಟ್‌ನಿಂದ ತಿಳಿಯಬಹುದು. ಐದು ವರ್ಷದ ಸರಾಸರಿಯಲ್ಲಿ ಪ್ರತಿ ಮಾನವನಿಗೆ 32 ರೂ. ಮಾಡಿದ್ದು, ಇತರ ಗ್ರಾಮಪಂಚಾಯತಿಗೆ ಹೋಲಿಸಿದರೆ ಇಲ್ಲಿ ಕುಡಿಯುವ ನೀರಿನ ಪೂರೈಕೆಗೆ ಹೆಚ್ಚು ಹಣವನ್ನು ಖರ್ಚುಮಾಡಲಾಗಿದೆ.

ಗ್ರಾಮಪಂಚಾಯತಿಯ ವೈಯಕ್ತಿಕ ನಳಗಳ ವಿವರಗಳನ್ನು ನೋಡಿದಾಗ ಪಂಚಾಯತಿಯು ಒಟ್ಟು 89 ಕುಟುಂಬಗಳು ವೈಯಕ್ತಿಕ ನಳಗಳನ್ನು ಹೊಂದಿವೆ. ಪಂಚಾಯತಿಯ ಶೇ 15 ರಷ್ಟು ಕುಟುಂಬಗಳು ವೈಯಕ್ತಿಕ ನಳಗಳನ್ನು ಹೊಂದಿದ್ದಾವೆ. ಆದರೆ ಇದು ಕೇವಲ ಎರಡು ಗ್ರಾಮಗಳಿಗೆ ಮಾತ್ರ ಸೀಮಿತವಾಗಿದೆ. ಹಿರೇಹೆಗ್ಡಾಳ್ ಮತ್ತು ಸಾಸಲವಾಡ ಗ್ರಾಮಗಳಲ್ಲಿ ಮಾತ್ರ ವೈಯಕ್ತಿಕ ನಳಗಳಿದ್ದಾವೆ. ಹಿರೇಹೆಗ್ಡಾಳ್‌ನಲ್ಲಿ 54 ಮತ್ತು ಸಾಸಲವಾಡದಲ್ಲಿ 35 ಕುಟುಂಬಗಳು ವೈಯಕ್ತಿಕ ನಳಗಳನ್ನು ಹೊಂದಿವೆ(ಕೋಷ್ಟಕ-7). ಪಂಚಾಯತಿಯ ಇತರೆ ಗ್ರಾಮಗಳಾದ ಬೊಪ್ಪಲಪುರ ಮತ್ತು ಸಾಣೆಹಳ್ಳಿಯಲ್ಲಿ ವೈಯಕ್ತಿಕ ನಳಗಳನ್ನು ಹೊಂದಿಲ್ಲ. ಈ ಎರಡು ಗ್ರಾಮಗಳು ಸಣ್ಣ ಗ್ರಾಮಗಳಾಗಿದ್ದು ಇಲ್ಲಿ ಹೆಚ್ಚು ಕೆಳಜಾತಿಗಳು ಮತ್ತು ಹಿಂದುಳಿದ ವರ್ಗಗಳು ಇದ್ದು ಆರ್ಥಿಕವಾಗಿ ದುರ್ಬಲರಾಗಿದ್ದಾರೆ.

ಪಂಚಾಯತಿ ವ್ಯಾಪ್ತಿಯಲ್ಲಿ ಒಟ್ಟು 9 ಮಿನಿಟ್ಯಾಂಕ್‌ಗಳಿದ್ದು, ಗ್ರಾಮದ ಜನಸಂಖ್ಯೆವಾರು ನೋಡಿದಾಗ ಹಿರೇಹೆಗ್ಡಾಳ್‌ನಲ್ಲಿ 417 ಜನರಿಗೆ, ಸಾಸಲವಾಡದಲ್ಲಿ 404, ಬೊಪ್ಪಲಪುರದಲ್ಲಿ 662 ಮತ್ತು ಸಾಂಗೇಹಳ್ಳಿಯಲ್ಲಿ 237 ಜನಸಂಖ್ಯೆಗೆ ಒಂದು ಮಿನಿಟ್ಯಾಂಕ್ ಇದೆ. ಅಂಕಿ-ಅಂಶಗಳನ್ನು ಗಮನಿಸಿದಾಗ ಬೊಪ್ಪಲಪುರದಲ್ಲಿ ಹೆಚ್ಚು ಜನಸಂಖ್ಯೆ ಇದ್ದರೂ ಒಂದೇ ಮಿನಿಟ್ಯಾಂಕ್ ಇದೆ(ಕೋಷ್ಟಕ-7). ಗ್ರಾಮವಾರು ಕೈಪಂಪ್‌ಗಳಲ್ಲಿ ಹೆಚ್ಚು

ಕೈಪಂಪ್‌ಗಳನ್ನು ಹಿರೇಹೆಗ್ಡಾಳ್ ಮತ್ತು ಸಾಸಲವಾಡ ಗ್ರಾಮಗಳು ಹೊಂದಿವೆ. ವಿದ್ಯುತ್ ಅಭಾವ ಮತ್ತು ಮೋಟರ್ ದುರಸ್ಥಿಯಾದಾಗ ಹೆಚ್ಚು ಕೈಪಂಪ್‌ಗಳು ಉಪಯೋಗದಲ್ಲಿವೆ. ಗ್ರಾಮವಾರು ತಲಾ ನೀರಿನ ಲಭ್ಯವನ್ನು ನೋಡಿದಾಗ ಹಿರೇಹೆಗ್ಡಾಳ್ 42ಲೀಟರ್, ಸಾಸಲವಾಡ 41 ಲೀಟರ್, ಬೊಪ್ಪಲಪುರದಲ್ಲಿ 40.2 ಲೀಟರ್‌ಮತ್ತು ಸಾಣೇಹಳ್ಳಿಯಲ್ಲಿ ತಲಾ 40 ಲೀಟರ್ ನೀರು ಲಭ್ಯವಿದೆ. ತಾಲೂಕಿನ ಸರಾಸರಿ 35 ಲೀಟರ್ ಇದ್ದು, ಗ್ರಾಮಗಳ ನೀರಿನ ಲಭ್ಯತೆಯನ್ನು ತಾಲೂಕಿಗೆ ಹೋಲಿಸಿದರೆ, ಪಂಚಾಯತಿ ವ್ಯಾಪ್ತಿಯ ಎಲ್ಲಾ ಗ್ರಾಮಗಳ ನೀರಿನ ಲಭ್ಯತೆ ತಾಲೂಕಿನ ಸರಾಸರಿಗಿಂತ ಐದು ಲೀಟರ್‌ನಿಂದ ಏಳು ಲೀಟರ್ ಅಧಿಕ ನೀರು ಪೂರೈಕೆಯಾಗುತ್ತಿದೆ(ಕೋಷ್ಟಕ-7 ಮತ್ತು 8.1). ಹಾಗೂ ಸರಕಾರ ನಿಗದಿಪಡಿಸಿರುವ ಹಾಗೇ 40ಲೀಟರ್ ನೀರು ಎಲ್ಲಾ ಗ್ರಾಮಗಳಲ್ಲಿ ಪೂರೈಕೆಯಾಗುತ್ತಿದೆ.

ನೀರಿನ ಐದು ವರ್ಷದ ಸರಾಸರಿ ವೆಚ್ಚವನ್ನು ನೋಡಿದಾಗ ಶೇ 16ರಷ್ಟು ಹಣವನ್ನು ವೆಚ್ಚ ಮಾಡಿದೆ. ಕಳೆದ ಐದು ವರ್ಷದಲ್ಲಿ ತಲಾ ರೂ. 32 ವೆಚ್ಚ ಮಾಡಿದೆ(ಕೋಷ್ಟಕ-9). ಅಧ್ಯಯನಕ್ಕೆ ಆಯ್ಕೆ ಮಾಡಿಕೊಂಡ ಇತರ ಗ್ರಾಮಪಂಚಾಯತಿಗಳಿಗೆ ಹೋಲಿಸಿದರೆ ಈ ಪಂಚಾಯತಿಯು ಅಧಿಕ ಹಣ ಕುಡಿಯುವ ನೀರು ಪೂರೈಕೆಗೆ ವೆಚ್ಚ ಮಾಡಿದೆ. ಈ ಅಂಶವು ಸಹ ಅಧಿಕ ಕುಡಿಯುವ ನೀರಿನ ಪೂರೈಕೆ ಕಾರಣವಾಗಿದೆ. ಗ್ರಾಮಪಂಚಾಯತಿಯಲ್ಲಿ ಗ್ರಾಮೀಣ ನೀರು ಸರಬರಾಜು ಸಮಿತಿ ಇದ್ದು ಈ ಸಮಿತಿಯು ಸರಕಾರದ ನಿಯಮಾವಳಿ ಪ್ರಕಾರ ಸದಸ್ಯತ್ವವನ್ನು ಹೊಂದಿದೆ. ಆದರೆ ಇದು ಕೇವಲ ದಾಖಲೆಯಲ್ಲಿ ಮಾತ್ರ ಇದ್ದು ಯಾವುದೇ ಕಾರ್ಯದಲ್ಲಿ ಸಮಿತಿ ತೊಡಗಿಲ್ಲ. ಕುಡಿಯುವ ನೀರು ಪೂರೈಕೆ ಮತ್ತು ನಿರ್ವಹಣೆಯ ಬಗ್ಗೆ ಗ್ರಾಮೀಣ ಜನರಿಂದ ಅಭಿಪ್ರಾಯವನ್ನು ಸಂಗ್ರಹಿಸಲಾಗಿದೆ. ಸಂದರ್ಶಿಸಿದ ಕುಟುಂಬಗಳಲ್ಲಿ ಶೇ 80 ರಷ್ಟು ಕುಟುಂಬಗಳು ತೃಪ್ತಿಕರವೆಂದು ಶೇ 15 ಅತೃಪ್ತಿಯನ್ನು ಮತ್ತು ಶೇ 4ರಷ್ಟು ಕುಟುಂಬಗಳು ಗೊತ್ತಿಲ್ಲವೆಂದು ಅಭಿಪ್ರಾಯ ಪಟ್ಟಿದ್ದಾರೆ(ಕೋಷ್ಟಕ-10). ಒಟ್ಟಾರೆ ಪೂರೈಕೆ ಬಗ್ಗೆ ಎಲ್ಲಾ ಜಾತಿಗಳು ತೃಪ್ತಿಕರವೆಂದು ಉತ್ತರಿಸಿದ್ದಾರೆ. ಆದರೆ ನಿರ್ವಹಣೆ ಮತ್ತು ದುರಸ್ಥಿಕಾರ್ಯದ ಬಗ್ಗೆ ಗ್ರಾಮಪಂಚಾಯತಿ ಹೆಚ್ಚು ವಿಳಂಬ ಮಾಡುತ್ತದೆ ಎಂದು ಹೇಳಿದ್ದಾರೆ.

ಪಂಚಾಯತಿ ವ್ಯಾಪ್ತಿಯ ಎಲ್ಲಾ ಗ್ರಾಮಗಳಲ್ಲಿ ಕುಡಿಯುವ ನೀರು ತಲಾ 40 ಲೀಟರ್ ಲಭ್ಯವಿದ್ದು, ತಾಲೂಕಿನ ಪ್ರಮಾಣ 35 ಲೀಟರ್ ಇದೆ. ತಾಲೂಕಿಗೆ ಹೋಲಿಸಿದರೆ ಕುಡಿಯುವ ನೀರಿನ ಪೂರೈಕೆ ಉತ್ತಮವಾಗಿದೆ. ಇಲ್ಲಿ ಕೈಪಂಪ್‌ಗಳು ಸಂಖ್ಯೆ ಕಡಿಮೆ ಇದೆ. ವಿದ್ಯುತ್‌ನ ಸಮಸ್ಯೆ ಆದಾಗ ಕೈಪಂಪ್‌ಗಳು ಹೆಚ್ಚು ಉಪಯೋಗವಾಗುತ್ತಿವೆ. ತಾಲೂಕು ಒಣಭೂಮಿ ಪ್ರದೇಶವಾಗಿದ್ದು, ಜಿಲ್ಲೆಯಲ್ಲಿ ಹಿಂದುಳಿದ ತಾಲೂಕಾಗಿದ್ದು, ಪಂಚಾಯತಿಯು ನೀರಾವರಿ ಪ್ರದೇಶವಾಗಿರುವುದರಿಂದ ಕುಡಿಯುವ ನೀರಿನ ಪೂರೈಕೆ ತೃಪ್ತಿದಾಯಕವಾಗಿದೆ.

### ಉಜ್ಜಿನಿ ಗ್ರಾಮಪಂಚಾಯತಿ

ಪಂಚಾಯಿತಿ ವ್ಯಾಪ್ತಿಯ ಮೂರು ಗ್ರಾಮಗಳಲ್ಲಿ ವಿವಿಧ ಯೋಜನೆಗಳ ಅಡಿಯಲ್ಲಿ ನೀರು ಪೂರೈಕೆ ಮಾಡಲಾಗಿದೆ. ಒಟ್ಟು ಪಂಚಾಯತಿ ಪ್ರದೇಶದಲ್ಲಿ ಕುಡಿಯುವ ನೀರು ಪೂರೈಕೆ ನೋಡಿದಾಗ, ಮಿನಿಟ್ಯಾಂಕ್‌ಗಳ

ಸಂಖ್ಯೆ ಒಟ್ಟು ಪಂಚಾಯತಿ ವ್ಯಾಪ್ತಿಯಲ್ಲಿ 12 ಇದ್ದು, ಪ್ರತಿ 705 ಜನರಿಗೆ ಒಂದು ಮಿನಿಟ್ಯಾಂಕ್ ಇದೆ. ಪ್ರತಿದಿನ ಒಂದು ಮಿನಿಟ್ಯಾಂಕ್‌ನ ನೀರಿನ ಪೂರೈಕೆ 2500 ಲೀಟರ್ ಇದ್ದು, ಮಿನಿಟ್ಯಾಂಕ್‌ಗಳಿಂದ ದಿನ ಒಟ್ಟು 30,000 ಲೀಟರ್ ನೀರು ಪೂರೈಕೆಯಾಗುತ್ತಿವೆ. ಸಾರ್ವಜನಿಕ ನಳಗಳು ಒಟ್ಟು 26 ಇದ್ದು, 300 ಜನರಿಗೆ ಒಂದು ಸಾರ್ವಜನಿಕ ನಳ ಇದೆ. ಪಂಚಾಯತಿ ವ್ಯಾಪ್ತಿ ಯಲ್ಲಿ ಸಾರ್ವಜನಿಕ ನಳಗಳು ಅಧಿಕವಾಗಿವೆ. ಮೂರು ಗ್ರಾಮಗಳಲ್ಲಿ ಕಿರು ನೀರು ಸರಬರಾಜು ಯೋಜನೆಯಡಿ ನೀರು ಪೂರೈಕೆಯಾಗುತ್ತಿದೆ. ಒಟ್ಟು ಪಂಚಾಯತಿ ವ್ಯಾಪ್ತಿಯಲ್ಲಿ 11 ಕೈಪಂಪ್‌ಗಳಿದ್ದು, ಪ್ರತಿ 770 ಜನಸಂಖ್ಯೆಗೆ ಒಂದು ಕೈಪಂಪ್ ಇದೆ(ಕೋಷ್ಟಕ 8). ಸರಕಾರದ ನಿಯಮದ ಪ್ರಕಾರ 250 ಜನಸಂಖ್ಯೆಗೆ ಒಂದು ಕೈಪಂಪ್ ಇರಬೇಕಾಗಿದೆ. ಗ್ರಾಮಗಳಲ್ಲಿ ಸರಕಾರ ನಿಗದಿಪಡಿಸಿದ ಜನಸಂಖ್ಯೆಗಿಂತ ಹೆಚ್ಚು ಜನರಿಗೆ ಒಂದು ಕೈಪಂಪ್ ಇದೆ. ಒಂದು ಕೈಪಂಪ್ ದಿನ ಒಂದಕ್ಕೆ ಸುಮಾರು 5000 ಲೀಟರ್ ನೀರು ಪೂರೈಸುತ್ತಿದೆ. ಕೈಪಂಪ್‌ಗಳಿಂದ ಒಟ್ಟು ಪಂಚಾಯತ್ ಪ್ರದೇಶದಲ್ಲಿ 55,000 ಲೀಟರ್ ನೀರು ಪೂರೈಕೆಯಾಗುತ್ತಿದೆ. ಪಂಚಾಯತಿ ವ್ಯಾಪ್ತಿಯಲ್ಲಿ ಎಲ್ಲಾ ಮೂಲಗಳಿಂದ ಕನಿಷ್ಠ ಪ್ರತಿದಿನ ತಲಾ 23 ಲೀಟರ್ ನೀರು ಮಾತ್ರ ಲಭ್ಯವಿದೆ. ಸರಕಾರ ನಿಗದಿಪಡಿಸಿದ ತಲಾ 40 ಲೀಟರ್ ಇದ್ದು, ಪಂಚಾಯತಿಯ ನೀರಿನ ಲಭ್ಯತೆ ಸರಕಾರ ನಿಗದಿಪಡಿಸಿರುವುದಕ್ಕಿಂತ ಕಡಿಮೆ ನೀರು ಪೂರೈಕೆಯಾಗುತ್ತಿದೆ. ತಾಲೂಕು ಸರಾಸರಿಯು 35 ಲೀಟರ್ ಇದ್ದು, ತಾಲೂಕಿನಲ್ಲಿ ಸಹ ಸರಕಾರ ನಿಗದಿಪಡಿಸಿರುವುದಕ್ಕಿಂತ 5 ಲೀಟರ್ ನೀರು ಕಡಿಮೆ ಪೂರೈಕೆಯಾಗುತ್ತಿದೆ(ಕೋಷ್ಟಕ-8.1). ಪಂಚಾಯತಿಯ ಸರಾಸರಿ 23.8ಲೀಟರ್ ನೀರು ಪೂರೈಕೆಯಾಗುತ್ತಿದ್ದು,ತಾಲೂಕ್ ಸರಾಸರಿಗೆ ಹೋಲಿಸಿದರೆ 11ಲೀಟರ್ ನೀರು ಪೂರೈಕೆಯಾಗುತ್ತಿದೆ. ಪಂಚಾಯತಿ ವ್ಯಾಪ್ತಿಯಲ್ಲಿ ನೀರಿನ ಕೊರತೆ ಹೆಚ್ಚು ಇರುವುದು ಸ್ಪಷ್ಟವಾಗಿದೆ. ಇದರ ಬಗ್ಗೆ ಗ್ರಾಮಪಂಚಾಯತಿ ಯಾವುದೇ ಕ್ರಮ ತೆಗೆದುಕೊಂಡಿಲ್ಲ. ಪಂಚಾಯತಿ ವ್ಯಾಪ್ತಿಯ ಉಜ್ಜನಿ ಗ್ರಾಮದಲ್ಲಿ ಮಾತ್ರ ವೈಯಕ್ತಿಕ ನಳಗಳಿವೆ. ವೈಯಕ್ತಿಕ ನಳಗಳು 227 ಇದ್ದು, ಶೇ 13ರಷ್ಟು ಕುಟುಂಬಗಳು ವೈಯಕ್ತಿಕ ನಳಗಳನ್ನು ಹೊಂದಿವೆ. ಹೆಚ್ಚು ಮೇಲ್ವರ್ಗ ಕುಟುಂಬಗಳು ವೈಯಕ್ತಿಕ ನಳಗಳನ್ನು ಹೊಂದಿವೆ.

ಪಂಚಾಯತಿ ವ್ಯಾಪ್ತಿಯ ಗ್ರಾಮವಾರು ನೀರು ಪೂರೈಕೆ ನೋಡಿದಾಗ ಉಜ್ಜನಿ ಮತ್ತು ಬೆನಕನಹಳ್ಳಿಯಲ್ಲಿ ವಿಶ್ವಬ್ಯಾಂಕ್ ಕುಡಿಯುವ ನೀರಿನ ಯೋಜನೆ ಅನುಷ್ಠಾನಗೊಂಡಿದೆ. ಪಂಚಾಯತ್ ವ್ಯಾಪ್ತಿಯಲ್ಲಿ ಮುಖ್ಯ ಕುಡಿಯುವ ನೀರಿನ ಯೋಜನೆ ಇದಾಗಿದೆ. ಉಜ್ಜನಿ ಮತ್ತು ಬೆನಕನಹಳ್ಳಿ ಗ್ರಾಮಗಳಿಗೆ ಒಂದು ಲಕ್ಷ ಲೀಟರ್ ಕುಡಿಯುವ ನೀರಿನ ಪೂರೈಕೆಯ ಗುರಿಯನ್ನು ಈ ಯೋಜನೆ ಹೊಂದಿದೆ. ಮಿನಿಟ್ಯಾಂಕ್ ಮತ್ತು ಸಾನಿರ್ವಜನಿಕ ನಳಗಳ ಮೂಲಕ ಉಜ್ಜನಿ ಮತ್ತು ಬೆನಕನಹಳ್ಳಿ ಗ್ರಾಮಗಳಿಗೆ ಕುಡಿಯುನ ನೀರು ಪೂರೈಕೆ ಮಾಡಲಾಗಿದೆ. ಇಷ್ಟಾದರೂ ಕುಡಿಯುವ ನೀರಿನ ಕೊರತೆ ಇದೆ. ಈ ಯೋಜನೆ ಕಾಮಗಾರಿ ಮತ್ತು ನಿರ್ವಹಣೆಯ ಬಗ್ಗೆ ಜನತೆಯಲ್ಲಿ ಮತ್ತು ಪಂಚಾಯತಿ ಸದಸ್ಯರಲ್ಲಿ ಹೆಚ್ಚು ಅತೃಪ್ತಿ ಕಂಡು ಬಂದಿದೆ. ಯಾವುದೇ ವಿಶ್ವಬ್ಯಾಂಕ್ ಯೋಜನೆ ಗ್ರಾಮ ಮಟ್ಟದಲ್ಲಿ ಅನುಷ್ಠಾನಗೊಂಡರೆ ಅದು ಗ್ರಾಮಪಂಚಾಯತಿಯ ಸಹಯೋಗದೊಂದಿಗೆ ಜಾರಿಗೊಳ್ಳಬೇಕು. ಆದರೆ ವಿಶ್ವಬ್ಯಾಂಕ್‌ನ ಯಾವುದೇ ದಾಖಲೆಗಳು ಗ್ರಾಮಪಂಚಾಯತಿಯಲ್ಲಿಲ್ಲ. ಗ್ರಾಮಸಭೆಯಲ್ಲಿ ಹಲವಾರು ಬಾರಿ ಕುಡಿಯುವ ನೀರು ಪೂರೈಕೆ ಬಗ್ಗೆ, ದುರಸ್ತಿ ಕಾರ್ಯದ ಬಗ್ಗೆ ಚರ್ಚೆಯಾಗಿವೆ. ಆದರೆ ಸಮಸ್ಯೆ ಪರಿಹಾರವಾಗಿಲ್ಲ . ಇದಕ್ಕೆ ಮುಖ್ಯ ಕಾರಣ

ರಾಜಕೀಯ ಪ್ರೇರಣೆ ಎಂದು ಗ್ರಾಮಸ್ಥರ ಮತ್ತು ಪಂಚಾಯತಿ ಸದಸ್ಯರ ಅಭಿಪ್ರಾಯ. ಈಗ ಗ್ರಾಮಪಂಚಾಯತಿ ಆಡಳಿತ ಜನತಾದಳದವರ ಕೈಯಲ್ಲಿದೆ. ಉಜ್ಜನಿಯ ಜಿಲ್ಲಾಪಂಚಾಯತ್, ತಾಲೂಕು ಪಂಚಾಯತ್ ಸದಸ್ಯರು ಮತ್ತು ಈ ಕ್ಷೇತ್ರದ ಶಾಸಕರು ಕಾಂಗ್ರೆಸ್ ಪಕ್ಷಕ್ಕೆ ಸೇರಿದ್ದಾರೆ. ಸ್ಥಳೀಯ ಶಾಸಕರನ್ನು ಹೊಂದಿದ ಉಜ್ಜನಿ ಕೊಟ್ಟೂರು ವಿಧಾನಸಭಾ ಕ್ಷೇತ್ರಕ್ಕೆ ಸೇರಿದೆ. ಇಲ್ಲಿಯ ಶಾಸಕರು, ಜಿಲ್ಲಾ ಮತ್ತು ತಾಲೂಕು ಪಂಚಾಯತಿ ಸದಸ್ಯರು ಪಕ್ಷ ರಾಜಕಾರಣದಿಂದ ಗ್ರಾಮಪಂಚಾಯತಿಗೆ ವಿಶ್ವಬ್ಯಾಂಕ್ ಯೋಜನೆಯ ದಾಖಲೆಗಳನ್ನು ಮತ್ತು ಹೊಣೆಗಾರಿಕೆಯನ್ನು ವಹಿಸಿಲ್ಲ. ವಿಶ್ವಬ್ಯಾಂಕ್ ನೀರು ಸರಬರಾಜು ಪ್ರತ್ಯೇಕ ಸಮಿತಿ ಗ್ರಾಮದಲ್ಲಿ ರಚಿಸಿದ್ದು, ಈ ಸಮಿತಿ ನೀರು ಪೂರೈಕೆ ಬಗ್ಗೆ ಯಾವುದೇ ಕಾಳಜಿ ವಹಿಸಿಲ್ಲ. ಈ ಯೋಜನೆಯಲ್ಲಿ ಕೈಗೊಂಡಿರುವ ಕಾಮಗಾರಿಗಳು ಕಳಪೆ ಮಟ್ಟದ್ದಾಗಿದ್ದು, ನೆಲದಲ್ಲಿ ಹಾಕಿರುವ ಪೈಪ್‌ಲೈನ್ ವಾರಕ್ಕೆ ಒಂದು ಸಲ ಹೊಡೆದು ಹೋಗುತ್ತವೆ. ನೀರಿನ ಪ್ರಮಾಣ ಚೆನ್ನಾಗಿದ್ದರೂ ಸರಿಯಾದ ಪೂರೈಕೆ ಇಲ್ಲ. ಈ ಯೋಜನೆಯ ಕಾಮಗಾರಿಯ ಬಗ್ಗೆ ಜನತೆಯಲ್ಲಿ ಹೆಚ್ಚು ಅತೃಪ್ತಿ ಇದೆ. 10 ಲಕ್ಷ ರೂ. ವೆಚ್ಚದಲ್ಲಿ ವಿಶ್ವಬ್ಯಾಂಕ್ ಯೋಜನೆ ಕೈಗೊಂಡಿದ್ದರು ತಲಾ 40 ಲೀಟರ್ ನೀರು ಲಭ್ಯವಿಲ್ಲ.

ಉಜ್ಜನಿ ಗ್ರಾಮದಲ್ಲಿ 10 ಮಿನಿ ಟ್ಯಾಂಕ್‌ಗಳು, 20 ಸಾರ್ವಜನಿಕ ನಳಗಳು, 8 ಕೈಪಂಪ್‌ಗಳು ಮತ್ತು ವಿಶ್ವಬ್ಯಾಂಕ್ ಯೋಜನೆಯಿಂದ ಕುಡಿಯುವ ನೀರು ಪೂರೈಕೆ ಮಾಡಲಾಗಿದೆ. ಪಂಚಾಯಿತಿ ವ್ಯಾಪ್ತಿಯಲ್ಲಿ ಈ ಗ್ರಾಮವು ದೊಡ್ಡ ಗ್ರಾಮವಾಗಿದ್ದು ಇಲ್ಲಿಯೇ ಕುಡಿಯುವ ನೀರಿನ ಯೋಜನೆಗಳು ಹೆಚ್ಚು ಅನುಷ್ಠಾನದಲ್ಲಿವೆ. ಇಷ್ಟೆಲ್ಲಾ ಯೋಜನೆಗಳಿದ್ದರೂ ಇಲ್ಲಿ ಪೂರೈಕೆಯಾಗುವ ತಲಾ ನೀರು ಕೇವಲ 22ಲೀಟರ್. ಬೆನಕನಹಳ್ಳಿ ಮತ್ತು ಬೈರದೇವರಗುಡ್ಡ ಪಂಚಾಯತಿ ವ್ಯಾಪ್ತಿಯ ಸಣ್ಣ ಗ್ರಾಮಗಳಾಗಿದ್ದು, ಇಲ್ಲಿ ಕಿರು ನೀರು ಸರಬರಾಜು ಮತ್ತು ಕೈಪಂಪ್‌ಗಳ ಮೂಲಕ ನೀರು ಸರಬರಾಜು ಮಾಡಲಾಗಿದೆ. ಕ್ರಮವಾಗಿ ತಲಾ 25 ಮತ್ತು 35 ಲೀಟರ್ ನೀರು ಲಭ್ಯವಿದೆ(ಕೋಷ್ಟಕ-7). ಪಂಚಾಯತಿ ಕೇಂದ್ರವಾದ ಉಜ್ಜನಿಗೆ ಹೋಲಿಸಿದರೆ ನೀರು ಪೂರೈಕೆ ಈ ಹಳ್ಳಿಗಳಲ್ಲಿ ಉತ್ತಮವಾಗಿದೆ.

ಕಳೆದ ಐದು ವರ್ಷದಿಂದ ನೀರಿನ ವೆಚ್ಚವನ್ನು ನೋಡಿದಾಗ ಐದು ವರ್ಷದಲ್ಲಿ ತಲಾ ರೂ.7ನ್ನು ವೆಚ್ಚ ಮಾಡಲಾಗಿದೆ. ಒಟ್ಟು ವೆಚ್ಚದಲ್ಲಿ ಶೇ 7 ರಷ್ಟು ಹಣವನ್ನು ನೀರಿನ ಪೂರೈಕೆಗೆ ಖರ್ಚು ಮಾಡಲಾಗಿದೆ(ಕೋಷ್ಟಕ-9). ಇದೇ ತಾಲೂಕಿನ ನೀರಾವರಿ ಪ್ರದೇಶವಾದ ಹಿರೇಹೆಗ್ಡಾಳ್ ಹೋಲಿಸಿದರೆ ಈ ಪಂಚಾಯತ್‌ಲ್ಲಿ ಕುಡಿಯುವ ನೀರಿಗೆ ತುಂಬಾ ಕಡಿಮೆ ವೆಚ್ಚ ಮಾಡಲಾಗಿದೆ. ಇದು ಪಂಚಾಯಿತ್ ಕುಡಿಯುವ ನೀರು ಪೂರೈಕೆಗೆ ಹೆಚ್ಚು ಆದ್ಯತೆಯನ್ನು ಕೊಟ್ಟಿಲ್ಲ ಎಂಬುದನ್ನು ಸೂಚಿಸುತ್ತದೆ. ಕುಡಿಯುವ ನೀರಿನ ಬಗ್ಗೆ ಊರವರಿಂದ ಅಭಿಪ್ರಾಯ ಸಂಗ್ರಹಿಸಲಾಗಿದೆ. ಶೇ 13ರಷ್ಟು ಕುಟುಂಬಗಳು ತೃಪ್ತಿಕರವೆಂದು, ಶೇ 80ರಷ್ಟು ಕುಟುಂಬಗಳು ಅತೃಪ್ತಿಯನ್ನು ಸೂಚಿಸಿವೆ(ಕೋಷ್ಟಕ-10). ಒಟ್ಟು ಪಂಚಾಯತ್ ವ್ಯಾಪ್ತಿಯ ಗ್ರಾಮದಲ್ಲಿ ಕನಿಷ್ಠ ಕುಡಿಯುವ ನೀರು ಲಭ್ಯವಿಲ್ಲ. ವಿಶ್ವಬ್ಯಾಂಕ್ ಯೋಜನೆಯಲ್ಲಿ ನೀರು ಪೂರೈಕೆ ಕೈಗೊಂಡಿದ್ದರೂ ಸಹ ನೀರಿನ ಕೊರತೆ ಇದೆ. ಗ್ರಾಮಪಂಚಾಯಿತಿಯ ಕಾರ್ಯಕ್ಷಮತೆ ಬಗ್ಗೆ, ನೀರಿನ ನಿರ್ವಹಣೆ ಮತ್ತು ದುರಸ್ತಿ ಕಾರ್ಯದ ಬಗ್ಗೆ ಹೆಚ್ಚು ಅತೃಪ್ತಿಯನ್ನು ವ್ಯಕ್ತಪಡಿಸಿದ್ದಾರೆ. ಉಜ್ಜನಿಯು ಒಣಭೂಮಿ

ಪ್ರದೇಶವಾಗಿದ್ದು ಇಲ್ಲಿ ಕುಡಿಯುವ ನೀರಿಗೆ ಆದ್ಯತೆಯನ್ನು ನೀಡಬೇಕಾಗಿತ್ತು. ಆದರೆ ಆ ರೀತಿ ಆಗಿಲ್ಲ. ಗ್ರಾಮಪಂಚಾಯತಿ ಸದಸ್ಯರು ಈ ಕುರಿತು ವಿಶೇಷ ತಲೆ ಕೆಡಿಸಿ ಕೊಂಡದ್ದು ಕಂಡುಬರಲಿಲ್ಲ. ನೀರಿನ ಪೂರೈಕೆ ಮತ್ತು ನಿರ್ವಹಣೆ ಉಜ್ಜನಿ ಗ್ರಾಮಪಂಚಾಯತಿಯಲ್ಲಿ ಸರಿಯಿಲ್ಲ ಎಂದು ಹೇಳಬಹುದು.

## 3.5 ಗ್ರಾಮಪಂಚಾಯತಿಗಳ ತೌಲನಿಕ ವಿವರಣೆ

ಅಧ್ಯಯನ ಕೈಗೊಂಡ ಗ್ರಾಮಪಂಚಾಯತಿಗಳಲ್ಲಿ ಕುಡಿಯುವ ನೀರಿನ ಸೌಲಭ್ಯ ಮತ್ತು ನಿರ್ವಹಣೆಯ ಕಿರು ಪರಿಚಯವನ್ನು ಮೇಲಿನ ವಿವರಗಳಿಂದ ತಿಳಿಯಬಹುದು. ಈ ಗ್ರಾಮಪಂಚಾಯತಿಗಳ ಒಂದು ತುಲನಾತ್ಮಕ ಚಿತ್ರಣ ಮೇಲಿನ ವಿವರಣೆಗಳಲ್ಲಿ ಸಿಗುವುದಿಲ್ಲ. ಅಧ್ಯಾಯದ ಈ ಭಾಗದಲ್ಲಿ ವಿವಿಧ ಗ್ರಾಮ ಪಂಚಾಯತಿಗಳು ನೀರು ಪೂರೈಕೆ ಮತ್ತು ನಿರ್ವಹಣೆಗಾಗಿ ಕೈಗೊಂಡ ಕಾರ್ಯಕ್ರಮಗಳ ತೌಲನಿಕ ಚಿತ್ರಣವಿದೆ.

ಅಧ್ಯಯನ ಕೈಗೊಂಡ ನಾಲ್ಕು ಗ್ರಾಮಪಂಚಾಯತಿಗಳಲ್ಲಿ ಕುಡಿಯುವ ನೀರಿನ ವಿವಿಧ ಯೋಜನೆಯಡಿಯಲ್ಲಿ ನೀರು ಪೂರೈಕೆ ಮಾಡಲಾಗಿದೆ. ಅದರಲ್ಲಿ ಮುಖ್ಯವಾಗಿ ಕಿರು ನೀರು ಸರಬುರಾಜು ಯೋಜನೆ, ವಿಶ್ವಬಾಂಕ್ ಯೋಜನೆಯಡಿಯಲ್ಲಿ ನಲ್ಲಿ ನೀರು ಸರಬುರಾಜು ಯೋಜನೆ ಮತ್ತು ಕೈಪಂಪ್‌ಗಳ ಮೂಲಕ ನೀರು ಪೂರೈಕೆ ಮಾಡಲಾಗಿದೆ. ಪ್ರತಿ ದಿನ ತಲಾ ಮಾನವನಿಗೆ ನೀರಿನ ಪೂರೈಕೆಯನ್ನು ಪಂಚಾಯತಿವಾರು ನೋಡಿದಾಗ, ನಾಗೇನಹಳ್ಳಿ ಪಂಚಾಯತಿ ಪ್ರದೇಶದಲ್ಲಿ 50.8ಲೀಟರ್, ಬೈಲುವದ್ದಿಗೆರೆ ಪಂಚಾಯತಿ ಪ್ರದೇಶದಲ್ಲಿ 37ಲೀಟರ್, ಹಿರೇಹೆಗ್ಡಾಳ್ ಪಂಚಾಯತಿ ಪ್ರದೇಶದಲ್ಲಿ 42.12ಲೀಟರ್ ಮತ್ತು ಉಜ್ಜನಿ ಪಂಚಾಯತಿ ಪ್ರದೇಶದಲ್ಲಿ 23.8ಲೀಟರ್ ನೀರು ಪೂರೈಕೆಯಾಗುತ್ತಿದೆ. ಈ ಪಂಚಾಯತಿಗಳಲ್ಲಿ ನೀರಾವರಿ ಪ್ರದೇಶಗಳಾಗಿರುವ ನಾಗೇನಹಳ್ಳಿ ಪಂಚಾಯತಿಯಲ್ಲಿ 50.8ಲೀಟರ್ ಮತ್ತು ಹಿರೇಹೆಗ್ಡಾಳ್‌ನಲ್ಲಿ 42.12ಲೀಟರ್ ನೀರು ಲಭ್ಯವಿದೆ. ಸರಕಾರ ನಿಗದಿಪಡಿಸಿರುವಂತೆ 40 ಲೀಟರ್‌ಗಿಂತ ಹೆಚ್ಚು ನೀರು ಪೂರೈಕೆಯಾಗುತ್ತಿದೆ. ಹೊಸಪೇಟೆ ತಾಲೂಕಿನಲ್ಲಿ ಸರಾಸರಿ ನೀರಿನ ಪೂರೈಕೆ 51ಲೀಟರ್ ಲಭ್ಯವಿದ್ದರೆ, ಕೂಡ್ಲಿಗಿ ತಾಲೂಕಿನಲ್ಲಿ ಸರಾಸರಿ ನೀರಿನ ಪೂರೈಕೆ 35ಲೀಟರ್ ಇದೆ. ಪಂಚಾಯತಿಗಳ ಸರಾಸರಿಯನ್ನು ತಾಲೂಕಿಗೆ ಹೋಲಿಸಿದರೆ, ನೀರಾವರಿ ಪಂಚಾಯತಿ ಪ್ರದೇಶಗಳಾದ ನಾಗೇನಹಳ್ಳಿಯಲ್ಲಿ ತಾಲೂಕು ಸರಾಸರಿಗೆ ಸರಿಯಾಗಿ ನೀರು ಪೂರೈಕೆಯಾದರೆ, ಹಿರೇಹೆಗ್ಡಾಳ್‌ನಲ್ಲಿ ತಾಲೂಕು ಸರಾಸರಿಗಿಂತ 7ಲೀಟರ್ ಹೆಚ್ಚು ನೀರು ಲಭ್ಯವಿದೆ. ಆದರೆ ಒಣಭೂಮಿ ಪ್ರದೇಶಗಳಲ್ಲಿನ ಬೈಲುವದ್ದಿಗೆರೆ ಮತ್ತು ಉಜ್ಜನಿ ಪಂಚಾಯತಿಗಳಲ್ಲಿ ಸರಕಾರ ನಿಗದಿ ಪಡಿಸಿರುವ ತಲಾ 40 ಲೀಟರ್‌ಗಿಂತ ಕಡಿಮೆ ನೀರು ಪೂರೈಕೆಯಾಗುತ್ತಿದೆ. ಹೊಸಪೇಟೆ ಅಭಿವೃದ್ಧಿ ಹೊಂದಿದ ತಾಲೂಕುವಾಗಿದ್ದು, ಇಲ್ಲಿ ಸರಾಸರಿ 51ಲೀಟರ್ ನೀರು ಲಭ್ಯವಿದೆ. ಆದರೆ ತಾಲೂಕಿನ ಒಣಭೂಮಿ ಪ್ರದೇಶವಾದ ಬೈಲುವದ್ದಿಗೆರೆ ಪಂಚಾಯತಿ ವ್ಯಾಪ್ತಿಯಲ್ಲಿ ಪ್ರತಿ ದಿನ ತಲಾ ಮಾನವನಿಗೆ 37 ಲೀಟರ್ ನೀರು ಪೂರೈಕೆಯಾಗುತ್ತಿಲ್ಲ. ತಾಲೂಕಿನ ಸರಾಸರಿಗಿಂತ 14ಲೀಟರ್ ಕಡಿಮೆ ನೀರು ಪೂರೈಕೆಯಾಗುತ್ತಿದೆ(ಕೋಷ್ಟಕ-8.1).

ಹಿಂದುಳಿದ ಕೂಡ್ಲಿಗಿ ತಾಲೂಕಿನಲ್ಲಿ ಸರಾಸರಿ ನೀರಿನ ಲಭ್ಯತೆಯು 35 ಲೀಟರ್ ಪೂರೈಕೆಯಾಗುತ್ತಿದೆ. ತಾಲೂಕಿನ ನೀರಾವರಿ ಪ್ರದೇಶದ ಪಂಚಾಯತಿಯಾದ ಹಿರೇಹೆಗ್ಡಾಳ್‌ನಲ್ಲಿ 42ಲೀಟರ್ ಕುಡಿಯುವ ನೀರು ಪೂರೈಕೆಯಾಗುತ್ತಿದ್ದು ತಾಲೂಕು ಸರಾಸರಿಗಿಂತ 7ಲೀಟರ್ ನೀರು ಹೆಚ್ಚು ಪೂರೈಕೆಯಾಗುತ್ತಿದೆ. ಆದರೆ ಅದೇ ತಾಲೂಕಿನ ಒಣಭೂಮಿ ಪ್ರದೇಶದಲ್ಲಿರುವ ಉಜ್ಜನಿ ಪಂಚಾಯತಿಯಲ್ಲಿ ಕೇವಲ 23ಲೀಟರ್ ನೀರು ಪೂರೈಕೆಯಾಗುತ್ತಿದ್ದು, ತಾಲೂಕು ಸರಾಸರಿಗಿಂತ 12 ಲೀಟರ್ ನೀರು ಕಡಿಮೆ ಪೂರೈಕೆಯಾಗುತ್ತಿದೆ. ಹೀಗೆ ತಳಮಟ್ಟದಲ್ಲಿ ಕುಡಿಯುವ ನೀರಿನ ಸೌಲಭ್ಯ ನೀರಾವರಿ ಪ್ರದೇಶಗಳಲ್ಲಿನ ಗ್ರಾಮಪಂಚಾಯತಿಗಳಲ್ಲಿ ಉತ್ತಮವಾಗಿದ್ದರೆ, ಒಣಭೂಮಿ ಪ್ರದೇಶಗಳಲ್ಲಿನ ಗ್ರಾಮಪಂಚಾಯತಿಗಳಲ್ಲಿ ನೀರಿನ ಕೊರತೆ ಕಂಡುಬಂದಿದೆ. ನಾಲ್ಕು ಗ್ರಾಮಪಂಚಾಯತಿಗಳ 17 ಗ್ರಾಮಗಳಲ್ಲಿ ಪ್ರತಿದಿನ ತಲಾ ಮಾನವನಿಗೆ ನೀರಿನ ಪೂರೈಕೆಯನ್ನು ಲೀಟರ್‌ಗಳಲ್ಲಿ ನೋಡಿದಾಗ, ನಾಗೇನಹಳ್ಳಿ 35, ಬಸವನದುರ್ಗ 62, ಬೆನಕಾಪುರ 55, ಕಾಳಘಟ್ಟ 116,ಬೆಳಗೊಡು 90, ಕಳ್ಳಿರಾಂಪುರ 55 ಹಿರೇಹೆಗ್ಡಾಳ್ 42, ಸಾಸಲವಾಡ 41, ಸಾಣೇಹಳ್ಳಿ 44 ಮತ್ತು ಬೊಪ್ಪಲಪುರದಲ್ಲಿ 40ಲೀಟರ್ ನೀರು ಪೂರೈಕೆಯಾಗುತ್ತಿದೆ. ಈ ಗ್ರಾಮಗಳು ನೀರಾವರಿ ಪ್ರದೇಶದಿಂದ ಕೂಡಿವೆ. ಬೈಲುವದ್ದಿಗೆರೆ 52, ಕಾಕಬಾಳು 19, ಧರ್ಮಸಾಗರ 32, ಗುಂಡ್ಲವದ್ದಿಗೆರೆ 54, ಉಜ್ಜನಿ 23, ಬೈರದೇವರಗುಡ್ಡ 35, ಹಾಗೂ ಬೆನಕನಹಳ್ಳಿಯಲ್ಲಿ 25 ಲೀಟರ್ ನೀರು ಪೂರೈಕೆಯಾಗುತ್ತಿದೆ. ಇವೆಲ್ಲಾ ಒಣಭೂಮಿ ಪ್ರದೇಶದ ಗ್ರಾಮಗಳಾಗಿವೆ(ಕೋಷ್ಟಕ-7). ನೀರಾವರಿ ಮತ್ತು ಒಣಭೂಮಿ ಪ್ರದೇಶಗಳ ಗ್ರಾಮಗಳಲ್ಲಿನ ನೀರಿನ ಪೂರೈಕೆಯನ್ನು ತೌಲಾನಿಕವಾಗಿ ನೋಡಿದಾಗ, ನೀರಾವರಿ ಪ್ರದೇಶ ಒಂದು ಗ್ರಾಮವಾದ ನಾಗೇನಹಳ್ಳಿಯಲ್ಲಿ ಕನಿಷ್ಠ ನೀರಿನ ಪ್ರಮಾಣ ಪೂರೈಕೆ ಆಗಿಲ್ಲ. ನೀರಾವರಿ ಪ್ರದೇಶದ ಗ್ರಾಮಪಂಚಾಯತಿಯಾದ ನಾಗೇನಹಳ್ಳಿಯಲ್ಲಿ ಕನಿಷ್ಟ 50 ಲೀಟರ್ ನೀರು ಲಭ್ಯವಿದೆ. ಆದರೆ ಪಂಚಾಯತಿಯ ಕೇಂದ್ರ ಸ್ಥಳವಾದ ನಾಗೇನಹಳ್ಳಿಯಲ್ಲಿ ಕೇವಲ ತಲಾ 35 ಲೀಟರ್ ನೀರು ಲಭ್ಯವಿದೆ. ಒಟ್ಟು ಸದಸ್ಯರ ಶೇ 80ರಷ್ಟು ಪಂಚಾಯತಿ ಸದಸ್ಯರು ಇಲ್ಲೇ ಇದ್ದು ಮತ್ತು ತಾಲೂಕು ಪಂಚಾಯತಿ ಕ್ಷೇತ್ರವಾಗಿದ್ದರೂ ಕುಡಿಯುವ ನೀರು ಪೂರೈಕೆ ಈ ಗ್ರಾಮದಲ್ಲಿ ಸರಿಯಾಗಿಲ್ಲ. ನೀರಿನ ಗುಣಮಟ್ಟ ಸಹ ಉತ್ತಮವಾಗಿಲ್ಲ. ನೀರಿನಲ್ಲಿ ಪ್ಲೋರೈಡ್ ಅಂಶಗಳು ಇರುವುದರಿಂದ ಕೆಲವು ಚರ್ಮರೋಗಗಳು ಕಾಣಿಸಿಕೊಳ್ಳುತ್ತಿವೆ ಎಂದು ಊರವರು ಮತ್ತು ಪಂಚಾಯತಿ ಸದಸ್ಯರು ಹೇಳಿದ್ದಾರೆ. ಒಟ್ಟಾರೆ ನೀರಾವರಿ ಪ್ರದೇಶದ ಗ್ರಾಮಗಳಲ್ಲಿ ನೀರಿನ ಪೂರೈಕೆ ಉತ್ತಮವಾಗಿದ್ದು,ಒಣಭೂಮಿ ಪ್ರದೇಶಗಳಲ್ಲಿ ಹೆಚ್ಚು ನೀರಿನ ಕೊರತೆ ಕಂಡು ಬಂದಿದೆ. ನೀರಿನ ಅಂತರ್ಜಲ ಅಥವಾ ಒಟ್ಟು ಪರಿಸರದಲ್ಲಿನ ನೀರಿನ ಲಭ್ಯತೆ ಜನರಿಗೆ ದೊರಕುವ ನೀರಿನ ಪ್ರಮಾಣವನ್ನು ನಿರ್ಧರಿಸುವಂತೆ ಕಂಡು ಬರುತ್ತದೆ. ಹಾಗೆಂದು ಬಿಟ್ಟರೆ ಪಂಚಾಯತ್ ವ್ಯವಸ್ಥೆಯ ಅನಗತ್ಯ ಎನ್ನುವ ತೀರ್ಮಾನಕ್ಕೆ ಬರಬೇಕಾಗುತ್ತದೆ. ಆದರೆ ಅದು ಸರಿಯಲ್ಲ. ಪಂಚಾಯತ್ ವ್ಯವಸ್ಥೆ ಬರುವ ಮುನ್ನ ಈಗ ಇದ್ದ ನೀರಿನ ಸೌಲಭ್ಯವೂ ಇರಲಿಲ್ಲವೆಂದು ಗ್ರಾಮಸ್ಥರು ಅಭಿಪ್ರಾಯ ಪಡುತ್ತಾರೆ. ಆದುದರಿಂದ ಪಂಚಾಯತ್ ವ್ಯವಸ್ಥೆ ಖಂಡಿತವಾಗಿಯೂ ನೀರಿನ ಪೂರೈಕೆಯನ್ನು ಪ್ರಭಾವಿಸಿದೆ. ಆದರೆ ಅದರ ಪ್ರಭಾವದ ಪ್ರಮಾಣ ಒಟ್ಟು ಪರಿಸರದಿಂದಲೂ ಪ್ರಭಾವಿತವಾಗಿದೆ.

ವಿಶ್ವಬ್ಯಾಂಕ್ ಯೋಜನೆಯಡಿಯಲ್ಲಿ ನೀರು ಪೂರೈಕೆಯನ್ನು ಅಧ್ಯಯನದ ಕೆಲವು ಗ್ರಾಮಗಳಲ್ಲಿ ಕೈಗೊಳ್ಳಲಾಗಿದೆ. ಅದರಲ್ಲಿ ಬಸವನದುರ್ಗ ನೀರಾವರಿ ಪ್ರದೇಶವಾಗಿದ್ದರೆ, ಕಾಕಬಾಳು, ಉಜ್ಜನಿ ಮತ್ತು ಬೆನಕನಹಳ್ಳಿ ಒಣಭೂಮಿ ಗ್ರಾಮಗಳಾಗಿವೆ. ಈ ಯೋಜನೆ ಕೈಗೊಂಡ ಒಟ್ಟು ನಾಲ್ಕು ಗ್ರಾಮಗಳಲ್ಲಿ ಕುಡಿಯುವ ನೀರಿನ ಪೂರೈಕೆಯನ್ನು ನೋಡಿದಾಗ, ನೀರಾವರಿ ಪ್ರದೇಶವಾದ ಬಸವನದುರ್ಗ ಗ್ರಾಮದಲ್ಲಿ 62 ಲೀಟರ್ ಲಭ್ಯವಿದ್ದರೆ, ಉಳಿದ ಮೂರು ಗ್ರಾಮಗಳಲ್ಲಿ ಕನಿಷ್ಟ 40 ಲೀಟರ್ ಕುಡಿಯುವ ನೀರಿನ ಪೂರೈಕೆ ಆಗಿಲ್ಲ. ಇದಕ್ಕೆ ಹಲವಾರು ಕಾರಣಗಳನ್ನು ಕೊಡಬಹುದು. ವಿಶ್ವಬ್ಯಾಂಕ್ ಯೋಜನೆಯಡಿಯಲ್ಲಿ ಕೈಗೊಂಡ ಕಳಪೆ ಕಾಮಗಾರಿ, ವಿಶ್ವಬ್ಯಾಂಕ್ ನೀರು ಸರಬರಾಜು ಸಮಿತಿಗಳ ಅಸಮರ್ಪಕ ನಿರ್ವಹಣೆ, ಈ ಯೋಜನೆಗಳಿಗೆ ಗ್ರಾಮಪಂಚಾಯತಿಗಳ ಸಹಕಾರ ಇಲ್ಲದೆ ಇರುವುದು ಇವೆಲ್ಲಾ ಅಂಶಗಳು ಕಾರಣವಾಗಿವೆ.

ಅಧ್ಯಯನಕ್ಕೆ ಆಯ್ಕೆ ಮಾಡಿಕೊಂಡ ನಾಲ್ಕು ಗ್ರಾಮಪಂಚಾಯತಿಗಳಲ್ಲಿ ನೀರಾವರಿ ಪ್ರದೇಶದ ನಾಗೇನಹಳ್ಳಿ ಪಂಚಾಯತಿ ಮತ್ತು ಹಿರೇಹೆಗ್ಡಾಳ್ ಪಂಚಾಯತಿಗಳನ್ನು ತಾಲೂಕಿಗೆ ಹೋಲಿಸಿದರೆ ಸರಾಸರಿಗೆ ಸರಿಯಾಗಿ ನಾಗೇನಹಳ್ಳಿ ಪಂಚಾಯತಿಯಲ್ಲಿ ಪೂರೈಕೆಯಾದರೆ, ಹಿರೇಹೆಗ್ಡಾಳ್ ಗ್ರಾಮಪಂಚಾಯತಿಯಲ್ಲಿ ಕುಡಿಯುವ ನೀರು ಸೌಲಭ್ಯ ತಾಲೂಕಿನ ಸರಾಸರಿಗಿಂತ 7 ಲೀಟರ್ ಅಧಿಕ ನೀರು ಲಭ್ಯವಿದೆ ಎಂದು ಹೇಳಬಹುದು. ಕೂಡ್ಲಿಗಿ ಹಿಂದುಳಿದ ತಾಲೂಕು ಆಗಿದ್ದು, ತಾಲೂಕಿನ ಹಿರೇಹೆಗ್ಡಾಳ ಗ್ರಾಮಪಂಚಾಯತಿ ನೀರಾವರಿ ಪ್ರದೇಶವಾಗಿದೆ. ಇಲ್ಲಿ ಕುಡಿಯುವ ನೀರಿನ ಲಭ್ಯತೆಯು ತಾಲೂಕು ಮಟ್ಟಕ್ಕಿಂತ ಅಧಿಕವಾಗಿದೆ. ಒಣಭೂಮಿ ಪ್ರದೇಶವಾದ ಉಜ್ಜನಿಯಲ್ಲಿ ತಾಲೂಕಿನ ಸರಾಸರಿಗಿಂತ 12 ಲೀಟರ್ ನೀರು ಕಡಿಮೆ ಲಭ್ಯವಿದೆ. ನೀರಾವರಿ ಪ್ರದೇಶ ಹಿರೇಹೆಗ್ಡಾಳ್ ಕುಡಿಯುವ ನೀರಿನ ಲಭ್ಯತೆಯು ತಾಲೂಕಿನ ಸರಾಸರಿಗಿಂತ ಉತ್ತಮ ಸ್ಥಿತಿಯಲ್ಲಿದ್ದರೆ, ಒಣಭೂಮಿ ಪ್ರದೇಶವಾದ ಉಜ್ಜನಿಯು ತಾಲೂಕು ಮಟ್ಟಕ್ಕಿಂತ ಉತ್ತಮ ಸ್ಥಿತಿಯಲ್ಲಿಲ್ಲ.

ನೀರಾವರಿ ಪ್ರದೇಶ ನಾಗೇನಹಳ್ಳಿಯಲ್ಲಿ ಪಂಚಾಯತಿ ಸರಾಸರಿಗಿಂತ 5 ಲೀಟರ್ ನೀರು ಕಡಿಮೆ ಪೂರೈಕೆಯಾಗುತ್ತಿದೆ. ಉಳಿದ ನಾಗೇನಹಳ್ಳಿ ಪಂಚಾಯತಿ ವ್ಯಾಪ್ತಿಯ ಗ್ರಾಮಗಳಲ್ಲಿ ಪಂಚಾಯತಿ ಸರಾಸರಿಗಿಂತ ಅಧಿಕ ನೀರು ಲಭ್ಯವಿದೆ. ಒಣಭೂಮಿ ಪ್ರದೇಶಗಳಾದ ಬೈಲುವದ್ದಿಗೆರೆ, ಗುಂಡ್ಲುವದ್ದಿಗೆರೆ ಗ್ರಾಮಗಳಲ್ಲಿ ತಾಲೂಕಿನ ಸರಾಸರಿಗಿಂತ ಕಡಿಮೆ ನೀರು ಲಭ್ಯವಿದ್ದರೂ ಕನಿಷ್ಠ 40 ಲೀಟರ್ ನೀರು ಲಭ್ಯವಿದೆ. ಇದಕ್ಕೆ ಅಧಿಕ ನೀರಿನ ಅಂತರ್ಜಲವೇ ಕಾರಣವಾಗಿದೆ. ಎಂದು ಹೇಳಬಹುದು. ಎಲ್ಲಾ ಗ್ರಾಮಪಂಚಾಯತಿಗಳಲ್ಲಿ ಗ್ರಾಮೀಣ ನೀರು ಸರಬರಾಜು ಸಮಿತಿ ಇದ್ದೂ, ಯಾವ ಗ್ರಾಮಪಂಚಾಯತಿಯಲ್ಲಿ ಸಮಿತಿ ಕಾರ್ಯೋನ್ಮುಖವಾಗಿಲ್ಲ. ಅದರಂತೆ ವಿಶ್ವಬ್ಯಾಂಕ್ ಕುಡಿಯುವ ನೀರಿನ ಯೋಜನೆಯಲ್ಲಿ ಗ್ರಾಮಮಟ್ಟದಲ್ಲಿ ಸಮಿತಿ ರಚಿಸಿದ್ದರೂ ಈ ಸಮಿತಿಗಳು ಸಹ ಕಾರ್ಯೋನ್ಮುಖವಾಗಿಲ್ಲ. ಎಲ್ಲಾ ಪಂಚಾಯತಿಗಳಲ್ಲಿ ದುರಸ್ಥಿ ಮತ್ತು ನಿರ್ವಹಣಾ ಕಾರ್ಯಗಳಲ್ಲಿ ಹೆಚ್ಚು ವಿಳಂಬವಿದೆ ಎಂದು ಊರವರು ಅಭಿಪ್ರಾಯ ಪಟ್ಟಿದ್ದಾರೆ. ಕುಡಿಯವ ನೀರು ಪೂರೈಕೆಯ ಕೊರತೆ ಇರುವ ಎಲ್ಲಾ ಗ್ರಾಮಗಳಲ್ಲಿ ಹೆಚ್ಚು ಕುಟುಂಬಗಳು ಅತೃಪ್ತಿಯನ್ನು ಸೂಚಿಸಿವೆ. ಒಣಭೂಮಿ ಪ್ರದೇಶಗಳಲ್ಲಿ ನೀರಿನ ಕೊರತೆ ಇದೆ ಹಾಗೂ ಹೆಚ್ಚು ಮೇಲ್ವರ್ಗಗಳು ಇರುವುದರಿಂದ ವೈಯುಕ್ತಿಕ ನಳಗಳ ಸಂಖ್ಯೆ ನೀರಾವರಿ ಪ್ರದೇಶಗಳಿಗಿಂತ ಹೆಚ್ಚು ಇರಬಹುದು ಎಂದು ಗ್ರಹಿಸಲಾಗಿದೆ.

ಪಂಚಾಯತಿಗಳ ಕುಡಿಯುವ ನೀರಿಗೆ ಕಳೆದ ಐದು ವರ್ಷದ ಒಟ್ಟು ವೆಚ್ಚವನ್ನು ನೋಡಿದಾಗ, ನಾಗೇನಹಳ್ಳಿಯಲ್ಲಿ ಶೇ.9.42ರಷ್ಟು, ಬೈಲುವದ್ದಿಗೆರೆಯಲ್ಲಿ ಶೇ.11.66ರಷ್ಟು, ಹಿರೇಹೆಗ್ಡಾಳ್‌ನಲ್ಲಿ ಶೇ.16.31ರಷ್ಟು ಮತ್ತು ಉಜ್ಜನಿಯಲ್ಲಿ ಶೇ.7.08ರಷ್ಟು ಹಣವನ್ನು ಖರ್ಚು ಮಾಡಲಾಗಿದೆ(ಕೋಷ್ಟಕ-9). ಈ ಅಂಕಿಅಂಶಗಳನ್ನು ಗಮನಿಸಿದಾಗ ಒಣಭೂಮಿ ಪ್ರದೇಶವಾದ ಉಜ್ಜನಿಯಲ್ಲಿ ಅತಿಕಡಿಮೆ ವೆಚ್ಚವನ್ನು ಕುಡಿಯುವ ನೀರಿಗೆ ಮಾಡಲಾಗಿದೆ. ಅತಿ ಹೆಚ್ಚು ವೆಚ್ಚವನ್ನು ನೀರಾವರಿ ಪ್ರದೇಶವಾದ ಹಿರೇಹೆಗ್ಡಾಳ್‌ನಲ್ಲಿ ಕುಡಿಯುವ ನೀರಿಗೆ ಮಾಡಲಾಗಿದೆ. ಈ ವೆಚ್ಚವು ಕೂಡ ಸರಿಯಾದ ನೀರು ಪೂರೈಕೆಗೆ ಕಾರಣವಾಗಿದೆ ಎಂದು ಹೇಳಬಹುದು. ಬೈಲುವದ್ದಿಗೆರೆ ಪಂಚಾಯತಿಯು, ನಾಗೇನಹಳ್ಳಿ ಪಂಚಾಯತಿಗಿಂತ ಹೆಚ್ಚು ಹಣವನ್ನು ಕುಡಿಯುವ ನೀರಿಗೆ ವೆಚ್ಚ ಮಾಡಲಾಗಿದೆ. ಅದರೂ ಈ ಪಂಚಾಯತಿಯಲ್ಲಿ ಕನಿಷ್ಠ ನೀರು ಪೂರೈಕೆ ಆಗಿಲ್ಲ (ಕೋಷ್ಟಕ-10).

ಒಟ್ಟಾರೆಯಾಗಿ, ಅಧ್ಯಯನದ ನಾಲ್ಕು ಗ್ರಾಮಪಂಚಾಯತಿಗಳಲ್ಲಿ ನೀರಾವರಿ ಪ್ರದೇಶಗಳಾದ ನಾಗೇನಹಳ್ಳಿ ಮತ್ತು ಹಿರೇಹೆಗ್ಡಾಳ್‌ಗಳಲ್ಲಿ ನೀರಿನ ಪೂರೈಕೆಯು, ಒಣಭೂಮಿ ಪ್ರದೇಶಗಳಾದ ಬೈಲುವದ್ದಿಗೆರೆ ಮತ್ತು ಉಜ್ಜನಿ ಪಂಚಾಯತಿಗಳಿಗಿಂತ ಉತ್ತಮ ಸ್ಥಿತಿಯಲ್ಲಿದೆ.

ನೀರಾವರಿ ಪ್ರದೇಶಗಳಾದ ನಾಗೇನಹಳ್ಳಿ ಮತ್ತು ಹಿರೇಹೆಗ್ಡಾಳ್ ಪಂಚಾಯತಿಗಳಲ್ಲಿ ಸರಕಾರ ನಿಗದಿಪಡಿಸಿರುವುದಕ್ಕಿಂತ ಅಧಿಕ ನೀರು ಲಭ್ಯವಿದೆ. ಈ ಪಂಚಾಯಿತಿಗಳಲ್ಲಿ ಅಭಿವೃದ್ಧಿ ಹೊಂದಿದ ತಾಲೂಕಿನ ನಾಗೇನಹಳ್ಳಿ ಪಂಚಾಯತಿಯು, ಹಿಂದುಳಿದ ತಾಲೂಕಿನ ಹಿರೇಹೆಗ್ಡಾಳ್ ಪಂಚಾಯತಿಗಿಂತ ಗಿಂತ ಅಧಿಕ ನೀರು ಪೂರೈಕೆಯನ್ನು ಹೊಂದಿದೆ. ಒಣಭೂಮಿ ಪ್ರದೇಶಗಳಾದ ಬೈಲುವದ್ದಿಗೆರೆ ಮತ್ತು ಉಜ್ಜನಿ ಪಂಚಾಯತಿಗಳಲ್ಲಿ ಸರಕಾರ ನಿಗದಿಪಡಿಸಿರುವುದಕ್ಕಿಂತ ಕಡಿಮೆ ನೀರು ಲಭ್ಯವಿದೆ. ಈ ಪಂಚಾಯತಿಗಳಲ್ಲಿ ಅಭಿವೃದ್ಧಿ ಹೊಂದಿದ ತಾಲೂಕಿನ ಬೈಲುವದ್ದಿಗೆರೆ ಪಂಚಾಯತಿಯು, ಹಿಂದುಳಿದ ತಾಲೂಕಿನ ಉಜ್ಜನಿ ಗಿಂತ ಅಧಿಕ ನೀರು ಲಭ್ಯವಿದೆ. ಒಟ್ಟಾರೆ ನೀರಿನ ಪೂರೈಕೆಯಲ್ಲಿ ಅಭಿವೃದ್ಧಿ ಹೊಂದಿದ ತಾಲೂಕು, ಹಿಂದುಳಿದ ತಾಲೂಕಿಗಿಂತ ಉತ್ತಮ ಸ್ಥಿತಿಯಲ್ಲಿದೆ.

ಗ್ರಾಮವಾರು ನೀರಿನ ಪೂರೈಕೆಯನ್ನು ನೋಡಿದಾಗ ನೀರಾವರಿ ಪ್ರದೇಶವಾದ ನಾಗೇನಹಳ್ಳಿ ಹೊರತುಪಡಿಸಿ ಎಲ್ಲಾ ಗ್ರಾಮಗಳಲ್ಲಿ ಕುಡಿಯುವ ನೀರಿನ ಸೌಲಭ್ಯ ತೃಪ್ತಿಕರವಾಗಿದೆ. ಒಣಭೂಮಿ ಪ್ರದೇಶಗಳಾದ ಕಾಕಬಾಳು, ಧರ್ಮಸಾಗರ, ಉಜ್ಜನಿ, ಬೆನಕನಹಳ್ಳಿ ಮತ್ತು ಬೈರದೇವರಗುಡ್ಡ ಹಾಗೂ ನೀರಾವರಿ ಗ್ರಾಮವಾದ ಬಸವನದುರ್ಗದಲ್ಲಿ ವಿಶ್ವಬ್ಯಾಂಕ್ ಯೋಜನೆಯಡಿಯಲ್ಲಿ ಕುಡಿಯುವ ನೀರು ಪೂರೈಕೆಯಾಗುತ್ತಿದ್ದು ಬಸವನದುರ್ಗ ಗ್ರಾಮದಲ್ಲಿ ಮಾತ್ರ ಪ್ರತಿ ಮಾನವನಿಗೆ ಕನಿಷ್ಠ 62 ಲೀಟರ್ ಲಭ್ಯವಿದ್ದರೆ, ಒಣಭೂಮಿ ಗ್ರಾಮಗಳಾದ ಉಜ್ಜನಿ ಬೆನಕನಹಳ್ಳಿ ಮತ್ತು ಕಾಕಬಾಳು ಗ್ರಾಮದಲ್ಲಿ ಕನಿಷ್ಠ ನೀರು ಲಭ್ಯವಿಲ್ಲಾ ಎಂದು ಹೇಳಬಹುದು.

## 3.6. ಗ್ರಾಮಪಂಚಾಯತ್ ಮತ್ತು ನೈರ್ಮಲೀಕರಣ

ಗ್ರಾಮೀಣ ಪ್ರದೇಶದ ಉತ್ತಮ ಪರಿಸರ ನಿರ್ಮಾಣಕ್ಕೆ ಗ್ರಾಮಪಂಚಾಯತಿಗೆ ಕೆಲವು ನೈರ್ಮಲ್ಯ ಕಾರ್ಯಗಳನ್ನು ವಹಿಸಲಾಗಿದೆ. ಗ್ರಾಮೀಣ ನೈರ್ಮಲ್ಯ ಕುರಿತಂತೆ ಕರ್ನಾಟಕ ಪಂಚಾಯತ್‌ರಾಜ್ ಕಾಯ್ದೆಯಲ್ಲಿ ಗ್ರಾಮಪಂಚಾಯತಿಗಳಿಗೆ ಮುಖ್ಯ ಕಾರ್ಯಗಳನ್ನು ನಿಗಧಿಪಡಿಸಲಾಗಿದೆ. ಪಂಚಾಯತ್‌ರಾಜ್ ಕಾಯ್ದೆ ಅನ್ವಯ 75 ನೇ ಪ್ರಕರಣವು ನೈರ್ಮಲೀಕರಣ ಮತ್ತು ಚರಂಡಿ ವ್ಯವಸ್ಥೆಯ ಕುರಿತ ಕಾರ್ಯಗಳನ್ನು ಗ್ರಾಮಪಂಚಾಯತಿಗಳಿಗೆ ವಹಿಸಲಾಗಿವೆ. ಈ ನಿರ್ದಿಷ್ಟಪಡಿಸಿದ ಕಾರ್ಯಗಳನ್ನು ಪ್ರತಿ ಗ್ರಾಮಪಂಚಾಯತಿಗಳು ನಿರ್ವಹಿಸಬೇಕಾಗಿದೆ. ಆ ಕಾರ್ಯಗಳೆಂದರೇ,

1. ಗ್ರಾಮಪಂಚಾಯತಿಯ ತನ್ನ ವ್ಯಾಪ್ತಿಯಲ್ಲಿ ಬರುವ ಎಲ್ಲ ಜನವಸತಿ ಪ್ರದೇಶಗಳಲ್ಲಿ ನೈರ್ಮಲೀಕರಣ ಪರಿಸ್ಥಿತಿಯನ್ನು ಸುಧಾರಿಸುವುದು.
2. ಪಂಚಾಯತಿ ವ್ಯಾಪ್ತಿಯಲ್ಲಿ ಬರುವ ಗ್ರಾಮಗಳಲ್ಲಿ ಸಾಮಾನ್ಯ ನೈರ್ಮಲ್ಯ ನಿರ್ವಹಣೆ.
3. ಸಾರ್ವಜನಿಕ ರಸ್ತೆಗಳು, ಚರಂಡಿಗಳು, ಕೆರೆಗಳು, ಬಾವಿಗಳು ಮತ್ತು ಇತರೇ ಸಾರ್ವಜನಿಕ ಸ್ಥಳಗಳನ್ನು ಸ್ವಚ್ಛಗೊಳಿಸುವುದು.
4. ಗ್ರಾಮಗಳಲ್ಲಿ ಸ್ಮಶಾನಗಳ ನಿರ್ವಹಣೆ ಮತ್ತು ನಿಯಂತ್ರಣ
5. ಸಾರ್ವಜನಿಕ ಶೌಚಾಲಯಗಳ ನಿರ್ಮಾಣ ಮತ್ತು ನಿರ್ವಹಣೆ
6. ಬಟ್ಟೆ ಒಗೆಯುವ ಮತ್ತು ಸ್ನಾನ ಘಟ್ಟಗಳ ವ್ಯವಸ್ಥೆ ಮತ್ತು ನಿಯಂತ್ರಣ
7. ಪಂಚಾಯತಿ ಪ್ರದೇಶದಲ್ಲಿ ಬರುವ ಪ್ರತಿಯೊಂದು ಕಟ್ಟಡದ ಮಾಲೀಕನಿಗೆ ಸೂಕ್ತವಾದ ಚರಂಡಿ ವ್ಯವಸ್ಥೆಯನ್ನು ಮಾಡುವಂತೆ ಲಿಖಿತ ನೋಟೀಸ್ ಮೂಲಕ ತಿಳಿಯಪಡಿಸುವುದು.
8. ಚರಂಡಿ ಮತ್ತು ಶೌಚಾಲಯಗಳ ಪರಿವೀಕ್ಷಣೆ ಮಾಡುವ ಅಧಿಕಾರ ಆಯಾ ಗ್ರಾಮಪಂಚಾಯತಿಗಳಿಗೆ ಸೇರಿದೆ ಎಂದು ಪಂಚಾಯತ್ ಕಾಯ್ದೆಯ 106ನೇ ಪ್ರಕರಣ ತಿಳಿಸಿದೆ.[15]

ಹೀಗೆ ಗ್ರಾಮೀಣ ನೈರ್ಮಲ್ಯ ಪೂರೈಕೆ ಮತ್ತು ನಿರ್ವಹಣೆಯ ಅಗತ್ಯ ಕಾರ್ಯಗಳನ್ನು ಗ್ರಾಮ ಪಂಚಾಯತಿಗಳಿಗೆ ಕಾಯ್ದೆಯ ಮೂಲಕ ವಹಿಸಲಾಗಿದೆ. ಗ್ರಾಮೀಣ ಪ್ರದೇಶದ ಆರೋಗ್ಯವಂತ ಉತ್ತಮ ಪರಿಸರದಲ್ಲಿರುವಂತೆ ಮಾಡಲು ಅಗತ್ಯವಾದ ಎಲ್ಲಾ ರೀತಿಯ ಸೌಲಭ್ಯಗಳನ್ನು ಒದಗಿಸುವಂತೆ ಕೇಂದ್ರ ಮತ್ತು ರಾಜ್ಯ ಸರಕಾರಗಳು ಹಲವಾರು ಕಾರ್ಯಕ್ರಮಗಳನ್ನು ಜಾರಿಗೊಳಿಸಿ ಅವುಗಳಿಗೆ ಬೇಕಾಗುವ ಸಂಪನ್ಮೂಲಗಳನ್ನು ಒದಗಿಸುತ್ತಿವೆ. ಇದರಲ್ಲಿ ಸಮುದಾಯ ಶೌಚಾಲಯ, ವೈಯಕ್ತಿಕ ಶೌಚಾಲಯ, ಚರಂಡಿ ವ್ಯವಸ್ಥೆ, ಸ್ವಸ್ತಿ ಗ್ರಾಮಯೋಜನೆ ಹಾಗೂ ಸ್ವಚ್ಛ ಗ್ರಾಮ ಯೋಜನೆ ಹೀಗೆ ಹಲವು ಕಾರ್ಯಕ್ರಮಗಳು ಚಾಲನೆಯಲ್ಲಿವೆ. ಈ ಕಾರ್ಯಕ್ರಮಗಳನ್ನು ಗ್ರಾಮೀಣ ಪ್ರದೇಶದಲ್ಲಿ ಅನುಷ್ಠಾನಗೊಳಿಸುವ ಜವಾಬ್ದಾರಿಯನ್ನು ಗ್ರಾಮಪಂಚಾಯತಿಗಳಿಗೆ ವಹಿಸಲಾಗಿದೆ. ಗ್ರಾಮೀಣ ಪ್ರದೇಶಗಳಲ್ಲಿ ಎಲ್ಲಿಂದರಲ್ಲೇ

ಮಲವಿಸರ್ಜನೆ ಮಾಡುವುದರಿಂದ ಆನೇಕ ರೋಗಗಳು ಹರಡುತ್ತವೆ. ಇದೊಂದು ಗ್ರಾಮೀಣ ಮಹಿಳೆಯರಿಗೆ ಸಮಸ್ಯೆಯಾಗಿದೆ. ಅದಕ್ಕಾಗಿ 1996ರಲ್ಲಿ ಕರ್ನಾಟಕ ಸರಕಾರ ನಿರ್ಮಲ ಕರ್ನಾಟಕ ಯೋಜನೆಯನ್ನು ಜಾರಿಗೊಳಿಸಿತು. ಈ ಯೋಜನೆ ಆನ್ವಯ ಬಡತನ ರೇಖೆ ಕೆಳಗಿರುವ ಗ್ರಾಮೀಣ ಕುಟುಂಬಗಳಿಗೆ ಶೌಚಾಲಯವನ್ನು ಒದಗಿಸುವುದು ಯೋಜನೆಯ ಮುಖ್ಯ ಉದ್ದೇಶವಾಗಿದೆ. ಈ ಯೋಜನೆಯ ಕ್ರಿ.ಶ. 2000ದ ವೇಳೆಗೆ ಶೇ 30ರಷ್ಟು ಗ್ರಾಮೀಣ ಕುಟುಂಬಗಳಿಗೆ ಶೌಚಾಲಯಗಳನ್ನು ಒದಗಿಸುವ ಗುರಿಯನ್ನು ಹೊಂದಿತ್ತು. ಪ್ರತಿ ವರ್ಷ ಐದು ಲಕ್ಷ ಕೌಟುಂಬಿಕ ಶೌಚಾಲಯಯಗಳನ್ನು ನಿರ್ಮಾಣ ಮಾಡುವ ಆಶಯವನ್ನು ಈ ಯೋಜನೆ ಹೊಂದಿತ್ತು.[16] ನಿರ್ಮಲ ಕರ್ನಾಟಕ ಯೋಜನೆಯ ಅನುಷ್ಠಾನದ ಹೊಣೆಗಾರಿಕೆ ಆಯಾ ಜಿಲ್ಲಾ ಪಂಚಾಯತಿಗಳು ಹೊಂದಿದ್ದು ಈ ಕಾರ್ಯಕ್ರಮವನ್ನು ಗ್ರಾಮಪಂಚಾಯತಿಗಳ ಮಟ್ಟದಲ್ಲಿ ಅನುಷ್ಠಾನಗೊಳಿಸುವುದು. ಯೋಜನೆಯ ಅನುಷ್ಠಾನಕ್ಕಾಗಿ ಆಯ್ಕೆಯಾಗಿರುವ ಪ್ರತಿ ಗ್ರಾಮದಲ್ಲಿ ಸಂಬಂಧ ಪಟ್ಟ ಗ್ರಾಮಪಂಚಾಯತಿಯ ವತಿಯಿಂದ ಯೋಜನಾ ಅನುಷ್ಠಾನ ಸಮಿತಿಯನ್ನು ರಚಿಸಬೇಕು. ಈ ಸಮಿತಿಯು ಗ್ರಾಮೀಣ ಜನರಲ್ಲಿ ಪರಿಸರ ನೈರ್ಮಲ್ಯ ಹಾಗೂ ವೈಯಕ್ತಿಕ ಶುಚಿತ್ವದ ಬಗ್ಗೆ ಅರಿವು ಮೂಡಿಸುವುದರ ಜೊತೆಗೆ ಶೌಚಾಲಯಗಳ ನಿರ್ಮಾಣ ಕಾರ್ಯಕ್ಕಾಗಿ ಅರ್ಹ ಕುಟುಂಬಗಳನ್ನು ಗುರುತಿಸುವ ಪ್ರಕ್ರಿಯೆಯನ್ನು ಗ್ರಾಮಪಂಚಾಯತಿಯ ಮೂಲಕ ಆಯ್ಕೆ ಮಾಡುತ್ತದೆ. ಅರ್ಹ ಫಲಾನುಭವಿಗಳಿಗೆ ಸಹಾಯಧನದ ಮೂಲಕ ಶೌಚಾಲಯಗಳನ್ನು ಕಟ್ಟಿಸಿ ಕೊಡಲಾಗುವುದು. ಪರಿಶಿಷ್ಟಜಾತಿ ಮತ್ತು ಪಂಗಡ ಫಲಾನುಭವಿಗಳಿಗೆ ಘಟಕ ಒಂದಕ್ಕೆ 1650 ಮತ್ತು ಇತರೇ ವರ್ಗಗಳಿಗೆ 1200ರೂ.ಗಳನ್ನು ಸಹಾಯಧನದ ಮೂಲಕ ವಿತರಿಸಲಾಗುವುದು. ಶೌಚಾಲಯಗಳು ಕಡಿಮೆ ಇರುವ ಜಿಲ್ಲೆಗಳಿಗೆ ಮೊದಲ ಆದ್ಯತೆಯನ್ನು ಈ ಯೋಜನೆಯಲ್ಲಿ ಕೊಡಲಾಯಿತು. ಕಡಿಮೆ ಶೌಚಾಲಯಗಳಿರುವ ಜಿಲ್ಲೆಗಳಲ್ಲಿ ಬಳ್ಳಾರಿ ಜಿಲ್ಲೆಯು ಒಂದಾಗಿದೆ. ಜಿಲ್ಲೆಯ ಶೇ 12.9ರಷ್ಟು ಶೌಚಾಲಯಗಳ ಕುಟುಂಬಗಳನ್ನು ಮಾತ್ರ ಹೊಂದಿದೆ.[17] ಗ್ರಾಮೀಣ ನೈರ್ಮಲ್ಯದ ದೃಷ್ಟಿಯಿಂದ ಶೌಚಾಲಯಗಳ ಸಂಖ್ಯೆಯನ್ನು ಹೆಚ್ಚಿಸಲು ಈ ಯೋಜನೆಯನ್ನು ಸರಕಾರವು ಮುಖ್ಯ ಕೈಗೊಂಡಿದೆ. ಈ ಉದ್ದೇಶಕ್ಕಾಗಿ ಪಂಚಾಯತರಾಜ್ ಕಾಯ್ದೆಯನ್ನು ಸಹ ತಿದ್ದುಪಡಿ ಮಾಡಿ ಜಿಲ್ಲಾ, ತಾಲೂಕು ಮತ್ತು ಗ್ರಾಮಪಂಚಾಯತಿಗಳ ಎಲ್ಲಾ ಸದಸ್ಯರು ತಮ್ಮ ಮನೆಗಳಲ್ಲಿ ಶೌಚಾಲಯಗಳನ್ನು ಹೊಂದಿರಬೇಕೆಂದು ಕಡ್ಡಾಯ ಮಾಡಲಾಗಿದೆ. ಪ್ರಸ್ತುತ ಗ್ರಾಮ ಪಂಚಾಯತಿಗಳ ಶೌಚಾಲಯ ಸಂಖ್ಯೆ ಸಮುದಾಯ ಶೌಚಾಲಯಗಳ ವಿವರಗಳನ್ನು ಮುಂದೆ ಚರ್ಚಿಸಲಾಗಿದೆ.

### ವಿಶ್ವಬ್ಯಾಂಕ್ ನೆರವಿನ ನೀರು ಪೂರೈಕೆ ಮತ್ತು ಗ್ರಾಮ ನೈರ್ಮಲ್ಯ ಯೋಜನೆ

ತೃತೀಯ ಜಗತ್ತಿನ ರಾಷ್ಟ್ರಗಳಿಗೆ ವಿಶ್ವಬ್ಯಾಂಕ್‌ನ ನೆರವಿನಿಂದ ಹಲವಾರು ಅಭಿವೃದ್ಧಿ ಯೋಜನೆಗಳಿಗೆ ಹಣವನ್ನು ವೆಚ್ಚ ಮಾಡುತ್ತಿದೆ. ಅವುಗಳಲ್ಲಿ ಮೂಲ ಅಗತ್ಯಗಳಾದ ಸುರಕ್ಷಿತ ನೀರು ಮತ್ತು ಗ್ರಾಮೀಣ ನೈರ್ಮಲ್ಯಕ್ಕೆ ಸಾಕಷ್ಟು ಬಂಡವಾಳವನ್ನು ಹೂಡಿದೆ. ಇವುಗಳ ಮುಖ್ಯ ಉದ್ದೇಶ ಉತ್ತಮ ಆರೋಗ್ಯ ಮತ್ತು ನಿರ್ಮಲವಾದ ಪರಿಸರ ನಿರ್ಮಾಣ ಆಗಿದೆ. ಈ ಯೋಜನೆಯಲ್ಲಿ ಸಮುದಾಯ ನಿರ್ವಹಣೆಗೆ ಮತ್ತು ಮಾನವ ಸಂಪನ್ಮೂಲ ಅಭಿವೃದ್ಧಿ ಇವುಗಳೊಂದಿಗೆ ಯುಕ್ತಿ ತಂತ್ರಜ್ಞಾನವನ್ನು ಬಳಸುವುದು ಸೇರಿದೆ.

ಪ್ರಸ್ತುತ ಈ ಯೋಜನೆಯಡಿಯಲ್ಲಿ ಕರ್ನಾಟಕ 12 ಜಿಲ್ಲೆಗಳ 1200 ಗ್ರಾಮಗಳು ಯೋಜನೆಯ ವ್ಯಾಪ್ತಿಯಲ್ಲಿ ಬರುತ್ತವೆ. ಸಾಕಷ್ಟು ಪ್ರಮಾಣದ ನೀರು ಪೂರೈಕೆ, ಶೌಚಾಲಯ ಸೌಲಭ್ಯಗಳು, ಮತ್ತು ಶುದ್ದ ಗ್ರಾಮೀಣ ಪರಿಸರವನ್ನು ಒದಗಿಸುವದರೊಂದಿಗೆ ಸುಮಾರು 48 ಲಕ್ಷ ಗ್ರಾಮೀಣ ಜನತೆಗೆ ಈ ಯೋಜನೆಯ ಪ್ರಯೋಜನ ದೊರೆಯಲಿದೆ.[18]

ಯೋಜನೆ ಅನುಷ್ಠಾನಗೊಂಡ ಪ್ರತಿ ಗ್ರಾಮದಲ್ಲಿ ಗ್ರಾಮೀಣ ನೀರು ಪೂರೈಕೆ ಮತ್ತು ನೈರ್ಮಲ್ಯ ಸಮಿತಿ ಇದೆ. ಈ ಯೋಜನೆಯನ್ನು ರೂಪಿಸುವಲ್ಲಿ ಹಾಗೂ ಅನುಷ್ಠಾನಗೊಳಿಸುವಲ್ಲಿ ಸ್ಥಳೀಯ ಗ್ರಾಮಪಂಚಾಯತಿಯು ವಿಸ್ತೃತ ಅಂಗವಾಗಿ ನಿರ್ಣಾಯಕ ಪಾತ್ರ ವಹಿಸುತ್ತದೆ. ಪ್ರತಿ ಗ್ರಾಮ ಪಂಚಾಯತಿಯ ಅಧ್ಯಕ್ಷರು ಪದನಿಮಿತ್ತ ಅಧ್ಯಕ್ಷರಾಗಿದ್ದು, ಈ ಸಮಿತಿಯಲ್ಲಿ 1/3ಕ್ಕಿಂತ ಕಡಿಮೆ ಇಲ್ಲದಷ್ಟು ಮಹಿಳೆಯರು ಸದಸ್ಯರಾಗಿದ್ದು, ಸಮಾಜದ ಎಲ್ಲಾ ವರ್ಗಗಳು ಈ ಸಮಿತಿಯಲ್ಲಿ ಪ್ರತಿನಿಧಿಸುವುದಕ್ಕೆ ಅವಕಾಶ ಮಾಡಿಕೊಟ್ಟಿದೆ. ಪರಿಸರ ನೈರ್ಮಲ್ಯ ಕಾಮಗಾರಿಗಳ ವೆಚ್ಚಕ್ಕಾಗಿ ಸ್ಥಳೀಯವಾಗಿ ಶೇ 30ರಷ್ಟು ಹಣವನ್ನು ಕ್ರೋಢೀಕರಿಸಬೇಕು. ಸ್ಥಳೀಯ ಯೋಜನೆಯಲ್ಲಿ ಜನತೆಯನ್ನು ಭಾಗವಹಿಸುವ ದೃಷ್ಟಿಯಿಂದ ಸಂಪನ್ಮೂಲ ಸಂಗ್ರಹಿಸಲಾಗುತ್ತಿದೆ.

## ಸ್ವಚ್ಛ ಗ್ರಾಮ ಯೋಜನೆ

ಸ್ವಚ್ಛ ಗ್ರಾಮಯೋಜನೆಯನ್ನು ಗ್ರಾಮಗಳ ಸಂಪೂರ್ಣ ನೈರ್ಮಲ್ಯಕ್ಕಾಗಿ 2000-01ನೆ ಸಾಲಿನಲ್ಲಿ ರಾಜ್ಯದ 1000 ಗ್ರಾಮಗಳಲ್ಲಿ ಈ ಯೋಜನೆಯನ್ನು ಅನುಷ್ಠಾನಗೊಳಿಸಲಾಗಿದೆ. ರಾಜ್ಯದಲ್ಲಿ ಸುಮಾರು 200 ಕೋಟಿ ಅಂದಾಜು ಮೊತ್ತದಲ್ಲಿ ಹುಡ್ಕೋ ನೆರವಿನೊಂದಿಗೆ ಜಾರಿಗೊಳಿಸಲು ಉದ್ದೇಶಿಸಲಾಗಿದೆ. ಅನುಷ್ಠಾನ ಜವಾಬ್ದಾರಿಯನ್ನು ಕರ್ನಾಟಕ ಭೂಸೇನಾ ನಿಗಮವನ್ನು ಕೇಂದ್ರ ಸಂಸ್ಥೆಯನ್ನಾಗಿ ನೇಮಿಸಲಾಗಿದೆ. ಈ ಯೋಜನೆಯ ಪ್ರಮುಖ ಉದ್ದೇಶಗಳು, ಗ್ರಾಮದ ಒಳರಸ್ತೆ ಮತ್ತು ಬೀದಿಗಳನ್ನು ಉತ್ತಮ ಪಡಿಸುವುದು, ಕೊಳಚೆ ಮತ್ತು ಮಳೆ ನೀರಿನ ವಿಲೇವಾರಿಗಾಗಿ ಚರಂಡಿಗಳ ನಿರ್ಮಾಣ, ಗ್ರಾಮದ ಎಲ್ಲಾ ಕುಟುಂಬಗಳಿಗೆ ಶೌಚಾಲಯ ಮತ್ತು ಶಾಲಾ ಶೌಚಾಲಯಗಳನ್ನು ನಿರ್ಮಾಣ ಮಾಡುವುದಾಗಿದೆ. ಈ ಯೋಜನೆಗೆ ಸಾರ್ವಜನಿಕರಿಂದ ಶೇ 10ರಷ್ಟು ಹಣವನ್ನು ಸಮುದಾಯ ವಂತಿಗೆಯಾಗಿ ಸಂಗ್ರಹಿಸಲಾಗುವುದು. ಇದರಿಂದ ಜನತೆಯನ್ನು ಆಭಿವೃದ್ಧಿಯಲ್ಲಿ ಪಾಲುದಾರಿಕೆ ಯನ್ನಾಗಿ ಮಾಡಲಾಗಿದೆ. ಶೇ 80ರಷ್ಟು ಹುಡ್ಕೋ ಸಂಸ್ಥೆಯಿಂದ ಸಾಲ, ರಾಜ್ಯ ಸರಕಾರದಿಂದ ಶೇ 10ರಷ್ಟು, ಒಟ್ಟು ಪ್ರತಿ ಗ್ರಾಮಕ್ಕೆ 20 ಲಕ್ಷ ರೂ.ಗಳಲ್ಲಿ ಸ್ವಚ್ಛ ಗ್ರಾಮಯೋಜನೆಯನ್ನು ಕೈಗೊಳ್ಳಲಾಗುವುದು.[19] ಈ ಯೋಜನೆಯು ಸಂಪೂರ್ಣ ಗ್ರಾಮನೈರ್ಮಲ್ಯದ ಉದ್ದೇಶದ ಗುರಿಯನ್ನು ಹೊಂದಿದೆ. ಪ್ರಸ್ತುತ ಈ ಯೋಜನೆಯು ಈಗಾಗಲೇ ಕರ್ನಾಟಕ ರಾಜ್ಯಾದ್ಯಂತ ಅನುಷ್ಠಾನದಲ್ಲಿದ್ದು, ಬಳ್ಳಾರಿ ಜಿಲ್ಲೆಯಲ್ಲಿ ಈ ಯೋಜನೆ ಜಾರಿಯಲ್ಲಿದೆ. ಹೀಗಾಗಿ ಗ್ರಾಮೀಣ ನೈರ್ಮಲ್ಯದ ಸುಧಾರಣೆಗಾಗಿ ಹಲವಾರು ಕಾರ್ಯಕ್ರಮಗಳನ್ನು ಕೈಗೊಂಡಿದ್ದು, ಕೇಂದ್ರ ಮತ್ತು ರಾಜ್ಯ ಸರ್ಕಾರಗಳ ಅನುದಾನದಲ್ಲಿ ನೈರ್ಮಲ್ಯ ಸುಧಾರಣೆಗೆ ಕೆಲವು ಕಾಮಗಾರಿಗಳನ್ನು ಅನುಷ್ಠಾನಗೊಳಿಸಲಾಗುತ್ತಿದೆ.

### 3.7 ಗ್ರಾಮಪಂಚಾಯತಿಗಳಲ್ಲಿ ನೈರ್ಮಲ್ಯ ಕಾರ್ಯಕ್ರಮಗಳ ಅನುಷ್ಠಾನ ಮತ್ತು ನಿರ್ವಹಣೆ

ಪ್ರಸ್ತುತ ಅಧ್ಯಯನಕ್ಕೆ ಆಯ್ಕೆ ಮಾಡಿಕೊಂಡ ನಾಲ್ಕು ಗ್ರಾಮಪಂಚಾಯತಿಗಳಲ್ಲಿನ ನೈರ್ಮಲ್ಯ ವ್ಯವಸ್ಥೆ, ಶೌಚಾಲಯಗಳ ಸಂಖ್ಯೆ, ಸಮುದಾಯ ಮಹಿಳಾ ಶೌಚಾಲಯಗಳ ಸಂಖ್ಯೆ, ನಿರ್ವಹಣೆ, ಮತ್ತು ನೈರ್ಮಲೀಕರಣದ ಬಗ್ಗೆ ಪಂಚಾಯತ್ ಸದಸ್ಯರ ಮತ್ತು ಗ್ರಾಮೀಣ ಜನತೆಯ ಅಭಿಪ್ರಾಯಗಳನ್ನು ಇಲ್ಲಿ ಚರ್ಚಿಸಲಾಗಿದೆ. ಅಧ್ಯಯನದಲ್ಲಿ ನೀರಾವರಿ ಮತ್ತು ಒಣಭೂಮಿ ಪಂಚಾಯತಿಗಳನ್ನು ತೌಲನಿಕವಾಗಿ ಅಧ್ಯಯನ ಮಾಡಲಾಗಿದೆ.

### ನಾಗೇನಹಳ್ಳಿ ಗ್ರಾಮ ಪಂಚಾಯತಿ

ನಾಗೇನಹಳ್ಳಿ ಗ್ರಾಮಪಂಚಾಯತಿಯ ವ್ಯಾಪ್ತಿಯ ಗ್ರಾಮಗಳಲ್ಲಿನ ನೈರ್ಮಲೀಕರಣಕ್ಕಾಗಿ ಹಲವಾರು ಕಾರ್ಯಕ್ರಮಗಳನ್ನು ಅನುಷ್ಠಾನಗೊಳಿಸಿದೆ. ಇದರಲ್ಲಿ ಮುಖ್ಯವಾಗಿ ಮಹಿಳಾ ಸಮುದಾಯ ಶೌಚಾಲಯಗಳು, ನಿರ್ಮಲ ಕರ್ನಾಟಕ ಯೋಜನೆಯಡಿಯ ಕೌಟುಂಬಿಕ ಶೌಚಾಲಯಗಳು, ಬಂಡೆ ಹಾಕಿಸುವುದು ಮತ್ತು ಚರಂಡಿಗಳ ನಿರ್ಮಾಣ ಕಾಮಗಾರಿಗಳನ್ನು ಕೈಗೊಂಡಿದೆ. ಪಂಚಾಯತಿ ವ್ಯಾಪ್ತಿಯ ಪ್ರದೇಶದಲ್ಲಿ ಒಟ್ಟು ಆರು ಮಹಿಳಾ ಸಮುದಾಯ ಶೌಚಾಲಯಗಳಿದ್ದು,ಪ್ರತಿ 416ಜನ ಮಹಿಳೆಯರಿಗೆ ಒಂದು ಸಮುದಾಯ ಶೌಚಾಲಯವಿದೆ. ಪರಿಶಿಷ್ಟಜಾತಿ ಕಾಲೋನಿಗೆ ಎರಡು ಸಮುದಾಯ ಶೌಚಾಲಯವಿದ್ದು,ಪ್ರತಿ 395ಜನ ಮಹಿಳೆಯರಿಗೆ ಒಂದು ಮತ್ತು ಇತರೇ ವರ್ಗದವರಿಗೆ ನಾಲ್ಕು ಸಮುದಾಯ ಶೌಚಾಲಯಗಳಿದ್ದು ಪ್ರತಿ 427 ಜನ ಮಹಿಳೆಯರಿಗೆ ಒಂದು ಸಮುದಾಯ ಶೌಚಾಲಯವಿದೆ(ಕೋಷ್ಟಕ-12). ಈ ಎಲ್ಲಾ ಸಮುದಾಯ ಮಹಿಳಾ ಶೌಚಾಲಯಗಳಿಗೆ ಫಿಟ್, ನೀರು ಪೂರೈಕೆ ಮತ್ತು ಮೇಲ್ಚಾವಣೆ ಇಲ್ಲ. ಸುತ್ತಲೂ ಬಂಡೆಗಳ ಮೂಲಕ ಗೋಡೆಯನ್ನು ನಿರ್ಮಿಸಲಾಗಿದೆ. ನೀರಾವರಿ ಪ್ರದೇಶವಾಗಿರುವುದರಿಂದ ಮಹಿಳೆಯರಿಗೆ ಶೌಚಾಲಯದ ಅವಶ್ಯಕತೆ ಹೆಚ್ಚು ಇದೆ. ಹಾಗಾಗಿ ಈ ಎಲ್ಲಾ ಶೌಚಾಲಯಗಳು ಉಪಯೋಗದಲ್ಲಿವೆ.

ಗ್ರಾಮವಾರು ನೈರ್ಮಲ್ಯ ಕಾರ್ಯಕ್ರಮಗಳನ್ನು ನೋಡಿದಾಗ, ನಾಗೇನಹಳ್ಳಿ, ಬಸವನದುರ್ಗ, ಬೆನಕಾಪುರ ಮತ್ತು ಕಾಳಘಟ್ಟಗಳಲ್ಲಿ ನೈರ್ಮಲ್ಯೀಕರಣ ಕಾರ್ಯಗಳನ್ನು ಕೈಗೊಂಡಿದ್ದು, ಕಳ್ಳಿರಾಂಪುರ ಮತ್ತು ಬೆಳಗೋಡು ಗ್ರಾಮಗಳಲ್ಲಿ ಯಾವುದೇ ನೈರ್ಮಲ್ಯ ಕಾರ್ಯಕ್ರಮಗಳನ್ನು ಕೈಗೊಂಡಿಲ್ಲ. ಕಾರಣ ಈ ಗ್ರಾಮಗಳು ಗದ್ದೆಗಳಿಂದ ಸುತ್ತುವರಿದಿವೆ. ಗ್ರಾಮವಾರು ಮಹಿಳಾ ಸಮುದಾಯ ಶೌಚಾಲಯಗಳನ್ನು ಗಮನಿಸಿದಾಗ ನಾಗೇನಹಳ್ಳಿಯಲ್ಲಿ ಮೂರು, ಬಸವನದುರ್ಗದಲ್ಲಿ ಎರಡು, ಮತ್ತು ಬೆನಕಾಪುರದಲ್ಲಿ ಒಂದು ಸಮುದಾಯ ಶೌಚಾಲಯಗಳನ್ನು ನಿರ್ಮಿಸಲಾಗಿದೆ(ಕೋಷ್ಟಕ-11). ಗ್ರಾಮಾವಾರು ಶೌಚಾಲಯಗಳ ವಿವರಗಳನ್ನು ನೋಡಿದಾಗ ನಾಗೇನಹಳ್ಳಿಯಲ್ಲಿ ಹೆಚ್ಚು ಶೌಚಾಲಯಗಳನ್ನು ನಿರ್ಮಿಸಲಾಗಿದೆ. ಕಳ್ಳಿರಾಂಪುರ,ಬೆಳಗೊಡು ಮತ್ತು ಕಾಳಘಟ್ಟದಲ್ಲಿ ಯಾವುದೇ ಸಮುದಾಯ ಶೌಚಾಲಯಗಳನ್ನು ನಿರ್ಮಿಸಿಲ್ಲ. ಹಾಗಾಗಿ ಪಂಚಾಯತಿ ವ್ಯಾಪ್ತಿಯ ಸಣ್ಣ ಗ್ರಾಮಗಳಿಗೆ ಆದ್ಯತೆಯನ್ನು ನೀಡಿಲ್ಲ.

ನಿರ್ಮಲ ಕರ್ನಾಟಕ ಯೋಜನೆಯ ಪ್ರಾರಂಭದ ವರ್ಷ 1996ರಲ್ಲಿ ಪಂಚಾಯಿತಿ ಪ್ರದೇಶದಲ್ಲಿ ಒಟ್ಟು 86 ಕೌಟುಂಬಿಕ ಶೌಚಾಲಯುಗಳನ್ನು ನಿರ್ಮಿಸಲಾಗಿದೆ.[20] ನಂತರ ಈ ಯೋಜನೆಯಡಿಯಲ್ಲಿ

ಶೌಚಾಲಯಗಳನ್ನು ನಿರ್ಮಿಸಿಲ್ಲ. ಜಾತಿವಾರು ಶೌಚಾಲಯಗಳ ವಿವರಗಳಲ್ಲಿ ಪರಿಶಿಷ್ಟ ಜಾತಿ 20, ಪರಿಶಿಷ್ಟ ಪಂಗಡಕ್ಕೆ 10, ಇತರೇ ವರ್ಗದ ಕುಟುಂಬಗಳು 50 ಶೌಚಾಲಯಗಳನ್ನು ವಿತರಿಸಲಾಗಿದೆ(ಕೋಷ್ಟಕ-12). ಹಾಗಾಗಿ ಹೆಚ್ಚು ಶೌಚಾಲಯಗಳನ್ನು ಇತರೇ ವರ್ಗದವರು ಕಟ್ಟಿಸಿಕೊಂಡಿದ್ದಾರೆ. ಫಲಾನುಭವಿಗಳನ್ನು ಗ್ರಾಮಸಭೆಯ ಮೂಲಕ ಆಯ್ಕೆ ಮಾಡಲಾಗಿದೆ ಎಂದು ದಾಖಲೆಗಳಲ್ಲಿ ಹೇಳಲಾಗಿದೆ.

ಪಂಚಾಯತಿ ವ್ಯಾಪ್ತಿಯ ಗ್ರಾಮಗಳಲ್ಲಿ ನಿರ್ಮಲ ಕರ್ನಾಟಕ ಯೋಜನೆಯಡಿಯಲ್ಲಿ ನಿರ್ಮಿಸಿದ ಶೌಚಾಲಯಗಳನ್ನು ನೋಡಿದಾಗ, ನಾಗೇನಹಳ್ಳಿಯಲ್ಲಿ45, ಬಸವನದುರ್ಗದಲ್ಲಿ 24, ಬೆನಕಾಪುರದಲ್ಲಿ 12 ಮತ್ತು ಕಾಳಘಟ್ಟದಲ್ಲಿ ಐದು ಶೌಚಾಲಯಗಳನ್ನು ನಿರ್ಮಿಸಲಾಗಿದೆ(ಕೋಷ್ಟಕ-12). ಈ ಯೋಜನೆಯಡಿಯಲ್ಲಿ ಕಳ್ಳಿರಾಂಪುರ ಮತ್ತು ಬೆಳಗೋಡು ಗ್ರಾಮಗಳಲ್ಲಿ ಯಾವುದೇ ಶೌಚಾಲಯಗಳನ್ನು ನಿರ್ಮಿಸಿಲ್ಲ. ಕಾರಣ ಪಂಚಾಯತಿ ವ್ಯಾಪ್ತಿಯಲ್ಲಿ ಈ ಎರಡು ಸಣ್ಣ ಗ್ರಾಮಗಳಾಗಿವೆ ಎಂದು ಪಂಚಾಯತ್ ಸದಸ್ಯರು ಹೇಳಿದ್ದಾರೆ.

ಪಂಚಾಯತಿ ಪ್ರದೇಶದಲ್ಲಿನ ಸ್ವಂತ ಶೌಚಾಲಯಗಳನ್ನು ನೋಡಿದಾಗ, ಒಟ್ಟು 48ರಲ್ಲಿ ಪರಿಶಿಷ್ಟರ ಶೌಚಾಲಯಗಳು ಕೇವಲ ಐದು ಇದ್ದು, ಹೆಚ್ಚು ಶೌಚಾಲಯಗಳು ಮೇಲ್ವರ್ಗ ಕುಟುಂಬಗಳಿಗೆ ಸೇರಿವೆ. ಪಂಚಾಯತಿ ವ್ಯಾಪ್ತಿಯ ಗ್ರಾಮಗಳಲ್ಲಿ ಹೆಚ್ಚು ಶೌಚಾಲಯಗಳು ನಾಗೇನಹಳ್ಳಿಯಲ್ಲಿವೆ. ಪಂಚಾಯತಿ ಪ್ರದೇಶದಲ್ಲಿ ಒಟ್ಟು ಶೇ 13ರಷ್ಟು ಕುಟುಂಬಗಳು ಶೌಚಾಲಯಗಳನ್ನು ಹೊಂದಿದ್ದಾರೆ. ನೀರಾವರಿ ಪ್ರದೇಶವಾಗಿರುವುದರಿಂದ ಗ್ರಾಮದ ಪಕ್ಕದಲ್ಲಿ ಕಾಲುವೆ ನೀರು ಹೋಗುವುದರಿಂದ ಪುರುಷರಿಗೆ ಶೌಚಾಲಯದ ಅವಶ್ಯಕತೆ ಕಡಿಮೆ ಇದೆ ಎಂದು ಇಲ್ಲಿಯ ಜನತೆ ಅಭಿಪ್ರಾಯ ವ್ಯಕ್ತಪಡಿಸುತ್ತಾರೆ.

ಪಂಚಾಯತಿ ವ್ಯಾಪ್ತಿಯಲ್ಲಿ ಸುಮಾರು 10 ವಾರ್ಡುಗಳಿದ್ದು ಅವುಗಳಲ್ಲಿ 7 ವಾರ್ಡಗಳಲ್ಲಿ ಚರಂಡಿಗಳನ್ನು ನಿರ್ಮಿಸಲಾಗಿದೆ. ಪರಿಶಿಷ್ಟ ಜಾತಿಯ ಎರಡು ಕಾಲೋನಿಗಳಲ್ಲಿ ಮತ್ತು ಇತರೆ ವರ್ಗದ 5 ವಾರ್ಡಗಳಲ್ಲಿ ಚರಂಡಿಯನ್ನು ನಿರ್ಮಿಸಿದ್ದಾರೆ. ಈ ಚರಂಡಿಗಳಲ್ಲಿ ಎರಡು ಮುಚ್ಚಿದ ಚರಂಡಿ ಉಳಿದ ಐದು ಚರಂಡಿಗಳು ತೆರೆದ ಚರಂಡಿಗಳಾಗಿವೆ. ಗ್ರಾಮದ ಮುಖ್ಯ ಬೀದಿಗಳಲ್ಲಿ ಮುಚ್ಚಿದ ಚರಂಡಿಗಳಿವೆ. ಪರಿಶಿಷ್ಟರ ಕಾಲೋನಿಯ ಎರಡು ಚರಂಡಿಗಳು ತರೆದ ಚರಂಡಿಗಳಾಗಿವೆ.

ಚರಂಡಿ ಕಾಮಗಾರಿಗಳನ್ನು ಗ್ರಾಮವಾರು ನೋಡಿದಾಗ ನಾಗೇನಹಳ್ಳಿಯ ಮುಖ್ಯ ಬೀದಿಯಲ್ಲಿ ಒಂದು ಮುಚ್ಚಿದ ಚರಂಡಿ ಮತ್ತು ಎರಡು ತೆರೆದ ಚರಂಡಿಗಳಿವೆ. ಬಸವನದುರ್ಗದ ಮುಖ್ಯ ವಾರ್ಡನಲ್ಲಿ ಮುಟ್ಟಿದ ಚರಂಡಿ ಮತ್ತು ಒಂದು ತೆರೆದ ಚರಂಡಿಗಳನ್ನು ಕೈಗೊಂಡಿದ್ದರೆ, ಬೆನಕಾಪುರ ಮತ್ತು ಕಾಳಘಟ್ಟದಲ್ಲಿ ತಲಾ ಒಂದು ವಾರ್ಡುನಲ್ಲಿ ಮುಚ್ಚಿದ ಚರಂಡಿಗಳಿವೆ. ಆದರೆ ಕಳ್ಳಿರಾಂಪುರ ಮತ್ತು ಬೆಳಗೊಡು ಗ್ರಾಮಗಳಲ್ಲಿ ಯಾವುದೇ ನೈರ್ಮಲ್ಯ ಕಾರ್ಯಕ್ರಮಗಳನ್ನು ಕೈಗೊಂಡಿಲ್ಲ. ಗ್ರಾಮಪಂಚಾಯತಿಯ ದೊಡ್ಡ ಗ್ರಾಮಗಳಿಗೆ ಹೆಚ್ಚು ಆದ್ಯತೆಯನ್ನು ನೀಡಲಾಗಿದೆ.

ಗ್ರಾಮಪಂಚಾಯತಿಯ ವ್ಯಾಪ್ತಿಯ ಇತರೆ ನೈರ್ಮಲ್ಯ ಕಾರ್ಯಕ್ರಮಗಳಲ್ಲಿ ಬಂಡೆ ಹಾಕಿಸುವ ನೀರಿನ ತೊಟ್ಟಿ ಕಟ್ಟಿಸುವ ಕಾಮಗಾರಿಗಳು ಹೆಚ್ಚು ನಡೆದಿವೆ. ಪಂಚಾಯತಿ ಸದಸ್ಯವಾರು, ಆಯಾ ವಾರ್ಡ ಪ್ರಕಾರ

ಬಂಡೆ ಹಾಕಿಸುವ ಕಾಮಗಾರಿಗಳನ್ನು ಹಂಚಿ ಕೊಂಡಿದ್ದು. ಈ ಕಾಮಗಾರಿಗಳ ಎಲ್ಲಾ ಜವಾಬ್ದಾರಿಗಳನ್ನು ಆಯಾ ಸದಸ್ಯರೇ ಹೊಂದಿದ್ದಾರೆ. ಸದಸ್ಯರೇ ಗುತ್ತಿಗೆದಾರರಿಂದ ಕಾಮಗಾರಿ ಮಾಡಿಸಿದ್ದಾರೆ. ಹೀಗಾಗಿ ಹೆಚ್ಚು ನೈರ್ಮಲೀಕರಣ ಕಾರ್ಯಕ್ರಮಗಳಲ್ಲಿ ಬಂಡೆಹಾಕಿಸುವ ಮತ್ತು ನೀರಿನ ತೊಟ್ಟಿ ಕಟ್ಟಿಸುವ ಕಾಮಗಾರಿಗಳು ಪ್ರತಿವರ್ಷ ನಡೆದಿವೆ. ಕಳ್ಳಿರಾಂಪುರ ಮತ್ತು ಬೆಳಗೊಡು ಪಂಚಾಯತಿ ವ್ಯಾಪ್ತಿಯ ಎರಡು ಸಣ್ಣ ಗ್ರಾಮಗಳಾಗಿದ್ದು. ಪರಿಶಿಷ್ಟರು ಮತ್ತು ಹಿಂದುಳಿದ ವರ್ಗದವರು ಹೆಚ್ಚು ಇದ್ದಾರೆ. ಆದರೆ ಯಾವುದೇ ನೈರ್ಮಲೀಕರಣ ಕಾಮಗಾರಿಗಳು ಇಲ್ಲಿ ನಡೆದಿಲ್ಲ ಎಂದು ಹೇಳಬಹುದು.

ಗ್ರಾಮಪಂಚಾಯತಿಯ 1995ರಿಂದ ನೈರ್ಮಲ್ಯೀಕರಣಕ್ಕಾಗಿ ಮಾಡಿದ ವೆಚ್ಚವನ್ನು ನೋಡಿದಾಗ ಒಟ್ಟು 5 ವರ್ಷದ ಸರಾಸರಿಯಲ್ಲಿ ಒಟ್ಟು ವೆಚ್ಚದಲ್ಲಿ ಶೇ 15ರಷ್ಟು ಹಣವನ್ನು ನೈರ್ಮಲೀಕರಣಕ್ಕೆ ವೆಚ್ಚ ಮಾಡಲಾಗಿದೆ. ನೈರ್ಮಲ್ಯೀಕರಣ ಸೌಲಭ್ಯದ ಬಗ್ಗೆ ಗ್ರಾಮೀಣ ಜನತೆಯ ಅಭಿಪ್ರಾಯವನ್ನು ಸಂಗ್ರಹಿಸಲಾಗಿದೆ(ಕೋಷ್ಠಕ-13). ಶೇ 19ರಷ್ಟು ಕುಟುಂಬಗಳು ತೃಪ್ತಿಕರವೆಂದು, ಶೇ.40ರಷ್ಟು ಕುಟುಂಬಗಳು ಅತೃಪ್ತಿಯನ್ನು ಮತ್ತು ಶೇ 41ರಷ್ಟು ಗೊತ್ತಿಲ್ಲವೆಂದು ಊರವರು ಅಭಿಪ್ರಾಯವನ್ನು ಸೂಚಿಸಿದ್ದಾರೆ. ಒಟ್ಟಾರೆ ಅಭಿಪ್ರಾಯದಲ್ಲಿ ಒಟ್ಟು ಕುಟುಂಬಗಳು ನೈರ್ಮಲೀಕರಣದ ಬಗ್ಗೆ ಹೆಚ್ಚು ಅತೃಪ್ತಿಯನ್ನು ಸೂಚಿಸಿದ್ದಾರೆ(ಕೋಷ್ಠಕ-14). ಆದರಲ್ಲಿ ಹೆಚ್ಚು ಪರಿಶಿಷ್ಟ ಜಾತಿಯ ಕುಟುಂಬಗಳು ಹೆಚ್ಚು ಆತೃಪ್ತಿಯನ್ನು ಸೂಚಿಸಿದ್ದಾರೆ. ಕಾರಣ ಪರಿಶಿಷ್ಟರ ಕಾಲೋನಿಗಳಿಗೆ ಕಡಿಮೆ ಆದ್ಯತೆಯನ್ನು ನೀಡಲಾಗಿದೆ. ಗ್ರಾಮ ಪಂಚಾಯತಿಯು ಕೈಗೊಂಡ ನೈರ್ಮಲ್ಯ ಕಾರ್ಯಕ್ರಮಗಳ ಆನುಷಂಗಿಕ ಮಾಹಿತಿ ಮತ್ತು ಪ್ರಾಥಮಿಕ ಮಾಹಿತಿಯನ್ನು ನೋಡಿದಾಗ, ನೈರ್ಮಲ್ಯ ಕಾರ್ಯಕ್ರಮಗಳು ಇನ್ನೂ ಹೆಚ್ಚು ಆಗಬೇಕಾಗಿದೆ. ಗ್ರಾಮದ ಪಕ್ಕದಲ್ಲಿ ತಿಪ್ಪೆ ಗುಂಡಿಗಳು, ಒಳರಸ್ತೆಗಳ ಕೆಲಸಗಳನ್ನು ಗ್ರಾಮ ಪಂಚಾಯತಿಯು ಸರಿಯಾಗಿ ನಿರ್ವಹಿಸಿಲ್ಲ.

ಗ್ರಾಮಪಂಚಾಯತಿಯ ಕೇಂದ್ರ ಸ್ಥಳವಾದ ನಾಗೇನಹಳ್ಳಿ ಗ್ರಾಮವನ್ನು 2000-01ನೇ ಸಾಲಿನ ಸ್ವಚ್ಛ ಗ್ರಾಮ ಯೋಜನೆಗೆ ಆಯ್ಕೆ ಮಾಡಲಾಗಿದೆ. ಸಾರ್ವಜನಿಕರಿಂದ ಶೇ 10ರಷ್ಟು ಹಣವನ್ನು ಈಗಾಗಲೇ ಸಂಗ್ರಹಿಸಲಾಗಿದ್ದು ಸುಮಾರು 20 ಲಕ್ಷರೂ.ಗಳು ಮುಂಜೂರಾಗಿದೆ.[21] ಅಧ್ಯಯನ ಸಂದರ್ಭದಲ್ಲಿ ಇನ್ನೂ ಯಾವುದೇ ಕಾಮಗಾರಿ ಆರಂಭವಾಗಿಲ್ಲ. ಸ್ವಚ್ಛ ಗ್ರಾಮ ಯೋಜನೆಯು ನಾಗೇನಹಳ್ಳಿಯಲ್ಲಿ ಸರಿಯಾಗಿ ಅನುಷ್ಠಾನಗೊಂಡರೆ ಗ್ರಾಮೀಣ ನೈರ್ಮಲ್ಯ ಸುಧಾರಣೆಯಾಗಲಿದೆ. ಈ ರೀತಿ ನಾಗೇನಹಳ್ಳಿ ಪಂಚಾಯತಿ ವ್ಯಾಪ್ತಿಯಲ್ಲಿ ನೈರ್ಮಲ್ಯೀಕರಣದ ಕಾರ್ಯಕ್ರಮಗಳು ಅನುಷ್ಠಾನಗೊಂಡಿವೆ.

## ಬೈಲುವದ್ದಿಗೆರೆ ಗ್ರಾಮ ಪಂಚಾಯತಿ

ಈ ಗ್ರಾಮಪಂಚಾಯತಿ ವ್ಯಾಪ್ತಿಯ ನಾಲ್ಕು ಗ್ರಾಮಗಳಲ್ಲಿ ನೈರ್ಮಲ್ಯೀಕರಣ ಕುರಿತಂತೆ ಕಾರ್ಯಕ್ರಮಗಳಲ್ಲಿ ಮಹಿಳಾ ಸಮುದಾಯ ಶೌಚಾಲಗಳು, ನಿರ್ಮಲ ಕರ್ನಾಟಕ ಯೋಜನೆಯಡಿ ಯಲ್ಲಿ ಕುಟುಂಬ ಶೌಚಾಲಯಗಳು, ಚರಂಡಿ ಕಾಮಗಾರಿಗಳ ಬಂಡೆ ಹಾಕಿಸುವ ಮತ್ತು ನೀರಿನ ತೊಟ್ಟಿ ಕಾಮಾಗಾರಿಗಳನ್ನು ಕೈಗೊಂಡಿದೆ. ಒಟ್ಟು ಪಂಚಾಯತಿ ವ್ಯಾಪ್ತಿಯಲ್ಲಿ 11 ಮಹಿಳಾ ಸಮುದಾಯ ಶೌಚಾಲಯಗಳಿವೆ. ಪ್ರತಿ 257ಜನ ಮಹಿಳೆಯರಿಗೆ ಒಂದು ಸಮುದಾಯ ಶೌಚಾಲಯವಿದೆ. ಪರಿಶಿಷ್ಟ ಜಾತಿ ಕಾಲೋನಿಗೆ ನಾಲ್ಕು

ಸಮುದಾಯ ಶೌಚಾಲಯವಿದ್ದು,ಪ್ರತಿ 153ಜನ ಮಹಿಳೆಯರಿಗೆ ಒಂದು ಮತ್ತು ಇತರೇ ವರ್ಗದವರಿಗೆ 7ಸಮುದಾಯ ಶೌಚಾಲಯಗಳಿದ್ದು ಪ್ರತಿ 317 ಜನ ಮಹಿಳೆಯರಿಗೆ ಒಂದು ಸಮುದಾಯ ಶೌಚಾಲಯವಿದೆ(ಕೋಷ್ಠಕ-12). ಈ ಅಂಕಿ-ಅಂಶಗಳನ್ನು ಗಮನಿಸಿದರೆ ಹೆಚ್ಚು ಕೆಳಜಾತಿಗಳಿಗೆ ಆದ್ಯತೆಯನ್ನು ನೀಡಿದ್ದಾರೆ. ವಾರ್ಡುವಾರು ಹಂಚಿರುವುದರಿಂದ ಅವರಿಗೆ ಆದ್ಯತೆ ನೀಡಲಾಗಿದೆ ಎಂದು ಹೇಳಬಹುದು. ಒಟ್ಟು ಪಂಚಾಯತಿಯಲ್ಲಿ ಶೇ 35ರಷ್ಟು ಪರಿಶಿಷ್ಟ ಜಾತಿಯವರಿಗೆ ಆದ್ಯತೆ ನೀಡಲಾಗಿದೆ. ಇವೆಲ್ಲಾ ಮಹಿಳಾ ಸಮುದಾಯ ಶೌಚಾಲಯಗಳಾಗಿವೆ. ಈ ಶೌಚಾಲಯಗಳಿಗೆ ನೀರು, ಫಿಟ್ ಮತ್ತು ಮೇಲ್ಛಾವಣಿ ಸೌಲಭ್ಯಗಳಿಲ್ಲ, ಸುತ್ತಲೂ ಬಂಡೆಗಳಿಂದ ಗೋಡೆಯನ್ನು ನಿರ್ಮಿಸಿದ್ದಾರೆ. ಒಣಭೂಮಿ ಪ್ರದೇಶವಾಗಿರುವುದರಿಂದ ಹೆಚ್ಚು ಮಹಿಳಾ ಸಮುದಾಯ ಶೌಚಾಲಯಗಳಿಗೆ ಆದ್ಯತೆ ನೀಡಲಾಗಿದೆ. ಇದರಲ್ಲಿ 9 ಶೌಚಾಲಯಗಳು ಉಪಯೋಗದಲ್ಲಿವೆ.

ಗ್ರಾಮವಾರು ಮಹಿಳಾ ಸಮುದಾಯ ಶೌಚಾಲಯಗಳನ್ನು ನೋಡಿದಾಗ, ಬೈಲುವದ್ದಿಗೆರೆಯಲ್ಲಿ 4, ಕಾಕಬಾಳು ಗ್ರಾಮದಲ್ಲಿ 3, ಧರ್ಮಸಾಗರ ಮತ್ತು ಗುಂಡ್ಲುವದ್ದಿಗೆರೆಯಲ್ಲಿ ತಲಾ ಎರಡು ಸಮುದಾಯ ಶೌಚಾಲಯಗಳಿವೆ(ಕೋಷ್ಠಕ-11). ಗ್ರಾಮವಾರು ಹಂಚಿಕೆಯನ್ನು ನೋಡಿದಾಗ ಕಾಕಬಾಳು ದೊಡ್ಡ ಗ್ರಾಮವಾಗಿದ್ದರು ಕಡಿಮೆ ಸಮುದಾಯ ಶೌಚಾಲಯಗಳನ್ನು, ಪಂಚಾಯತಿ ಕೇಂದ್ರ ಸ್ಥಳವು ಹೆಚ್ಚು ಶೌಚಾಲಯಗಳನ್ನು ಹೊಂದಿದೆ. ನಿರ್ಮಲ ಕರ್ನಾಟಕ ಯೋಜನೆಯು 1996ರಿಂದ ಜಾರಿಗೆ ಬಂದಿದ್ದು, ಅಲ್ಲಿಂದ ಇಲ್ಲಿಯವರೆಗೆ ಈ ಯೋಜನೆಯಲ್ಲಿ ಪಂಚಾಯತಿ ವ್ಯಾಪ್ತಿಯಲ್ಲಿ ಒಟ್ಟು 401 ಕೌಟುಂಬಿಕ ಶೌಚಾಲಯಗಳನ್ನು ನಿರ್ಮಿಸಲಾಗಿದೆ(ಕೋಷ್ಠಕ-12).[22] ಈ ಯೋಜನೆಯಿಂದ ಶೇ.30ರಷ್ಟು ಕುಟುಂಬಗಳು ಈ ಯೋಜನೆಯಿಂದ ಶೌಚಾಲಯಗಳನ್ನು ಕಟ್ಟಿಸಿಕೊಂಡಿದ್ದಾರೆ ಎಂದು ದಾಖಲೆಗಳು ತಿಳಿಸಿವೆ. ಆದರೆ ನಿರ್ಮಲ ಕರ್ನಾಟಕ ಯೋಜನೆಯಡಿಯಲ್ಲಿ ನಿರ್ಮಿಸಿದ ವೈಯಕ್ತಿಕ ಶೌಚಾಲಯಗಳು ಎಷ್ಟರಮಟ್ಟಿಗೆ ಉಪಯೋಗದಲ್ಲಿವೆ ಎಂಬುದುನ್ನು 1998ರಲ್ಲಿ ಬಳ್ಳಾರಿ ಜಿಲ್ಲೆಯಲ್ಲಿ ನಿರ್ಮಲಕರ್ನಾಟಕ ಯೋಜನೆಯ ಮೌಲ್ಯಮಾಪನವನ್ನು ಕನ್ನಡ ವಿಶ್ವವಿದ್ಯಾಲಯದ ಅಭಿವೃದ್ಧಿ ಅಧ್ಯಯನ ವಿಭಾಗವು ಮಾಡಿದ್ದು, ಬೈಲುವದ್ದಿಗೆರೆ ಗ್ರಾಮದಲ್ಲಿ ಶೌಚಾಲಯಗಳು ಉತ್ತಮವಾಗಿ ಅನುಷ್ಠಾನಗೊಂಡಿಲ್ಲ ಎಂದು ಹೇಳಲಾಗಿದೆ.[23]

ಗ್ರಾಮವಾರು ಶೌಚಾಲಯಗಳ ವಿವರಗಳನ್ನು ನೋಡಿದಾಗ ಬೈಲುವದ್ದಿಗೆರೆಯಲ್ಲಿ 100, ಕಾಕಬಾಳು ಗ್ರಾಮದಲ್ಲಿ 140, ಧರ್ಮಸಾಗರದಲ್ಲಿ 100, ಮತ್ತು ಗುಂಡ್ಲುವದ್ದಿಗೆರೆಯಲ್ಲಿ 31 ಶೌಚಾಲಯಗಳನ್ನು ನಿರ್ಮಲ ಕರ್ನಾಟಕ ಯೋಜನೆಯಲ್ಲಿ ನಿರ್ಮಿಸಲಾಗಿದೆ.[24] ಗ್ರಾಮವಾರು ಹಂಚಿಕೆಯು ಆಯಾ ಗ್ರಾಮಕ್ಕೆ ಸರಿಯಾಗಿದ್ದು ಧರ್ಮಸಾಗರವು ಸಣ್ಣ ಗ್ರಾಮವಾಗಿದ್ದರು ಹೆಚ್ಚು ಶೌಚಾಲಯಗಳನ್ನು ನಿರ್ಮಿಸಲಾಗಿದೆ. ಇದಕ್ಕೆ ಕಾರಣ ಇಲ್ಲಿ ಮೇಲ್ವರ್ಗಗಳು ಹೆಚ್ಚು ಇದ್ದು, ಈ ಯೋಜನೆಯ ಅಧಿಕ ಲಾಭವನ್ನು ಪಡೆದುಕೊಂಡಿದ್ದಾರೆ. ಒಣಭೂಮಿ ಪ್ರದೇಶವಾಗಿರುವುದರಿಂದ ಇಲ್ಲಿನ ಕುಟುಂಬಗಳಿಗೆ ಶೌಚಾಲಯಗಳ ಅಗತ್ಯತೆ ಹೆಚ್ಚು ಇದೆ. ಶೌಚಾಲಯಗಳು ಅಗತ್ಯತೆ ಹೆಚ್ಚು ಇರುವುದರಿಂದ ಇಲ್ಲಿ ನೀರಾವರಿ ಪ್ರದೇಶಕ್ಕಿಂತ ಹೆಚ್ಚಿನ ಶೌಚಾಲಯಗಳನ್ನು ನಿರ್ಮಿಸಲಾಗಿದೆ.

ಪಂಚಾಯತಿ ವ್ಯಾಪ್ತಿಯಲ್ಲಿ ಒಟ್ಟು 15 ವಾರ್ಡುಗಳಿದ್ದು ಅವುಗಳಲ್ಲಿ 10 ವಾರ್ಡಗಳಲ್ಲಿ ಚರಂಡಿ ಕಾಮಗಾರಿಗಳನ್ನು ಕೈಗೊಳ್ಳಲಾಗಿದೆ. ಕೈಗೊಂಡ ಚರಂಡಿ ಕಾಮಗಾರಿಗಳಲ್ಲಿ ಹೆಚ್ಚು ತೆರೆದ ಚರಂಡಿಗಳಿವೆ. ಪರಿಶಿಷ್ಟ ಜಾತಿಯ 3 ಕಾಲೋನಿಗಳಲ್ಲಿ ಚರಂಡಿಗಳನ್ನು ನಿರ್ಮಿಸಿದ್ದಾರೆ. ಉಳಿದ ಏಳು ವಾರ್ಡಗಳಲ್ಲಿ ಇತರೆ ವರ್ಗದ ವಾರ್ಡುಗಳಲ್ಲಿ ಚರಂಡಿಗಳನ್ನು ನಿರ್ಮಿಸಿದ್ದು, ಇದರಲ್ಲಿ ಮೂರು ಮುಚ್ಚಿದ ಚರಂಡಿಗಳಿವೆ. ಚರಂಡಿ ಕಾಮಗಾರಿಗಳ ವಿವರಣೆಗಳನ್ನು ನೋಡಿದಾಗ ಪರಿಶಿಷ್ಟ ಜಾತಿಯ ಎಲ್ಲಾ ಕಾಲೋನಿಗಳಲ್ಲಿ ತೆರೆದ ಚರಂಡಿಗಳಿವೆ. ಗ್ರಾಮದ ಮುಖ್ಯ ಬೀದಿಗಳಲ್ಲಿ ಮುಚ್ಚಿದ ಚರಂಡಿಗಳಿವೆ. ಪಂಚಾಯತಿ ವ್ಯಾಪ್ತಿಯ ಎಲ್ಲಾ ಗ್ರಾಮಗಳಲ್ಲಿ ಬಂಡೆ ಹಾಕಿಸುವ ಮತ್ತು ನೀರಿನ ತೊಟ್ಟಿ ಕಟ್ಟಿಸುವ ಕಾಮಗಾರಿಗಳು ಹೆಚ್ಚು ನಡೆದಿದೆ. ಪ್ರತಿ ಗ್ರಾಮಗಳ ಪಂಚಾಯತಿ ಸದಸ್ಯರ ಮೂಲಕ ಈ ಕಾಮಗಾರಿಗಳನ್ನು ಹಂಚಲಾಗಿದೆ. ಹಾಗಾಗಿ ಎಲ್ಲಾ ಕಾಲೋನಿಗಳಲ್ಲಿ ಈ ಕಾರ್ಯಕ್ರಮಗಳು ಅನುಷ್ಠಾನಗೊಂಡಿವೆ.

ಚರಂಡಿ ಕಾಮಗಾರಿಗಳನ್ನು ಗ್ರಾಮವಾರು ನೋಡಿದಾಗ ಬೈಲುವದ್ದಿಗೆರೆ ಮತ್ತು ಕಾಕಬಾಳು ಗ್ರಾಮದ ಮುಖ್ಯ ರಸ್ತೆಯಲ್ಲಿ ತಲಾ ಒಂದು ಮುಚ್ಚಿದ ಚರಂಡಿ, ಕ್ರಮವಾಗಿ ಮೂರು ಮತ್ತು ಎರಡು ತೆರೆದ ಚರಂಡಿಗಳಿವೆ. ಪಂಚಾಯತಿ ವ್ಯಾಪ್ತಿಯ ಇತರೆ ಗ್ರಾಮಗಳಾದ ಧರ್ಮಸಾಗರದಲ್ಲಿ ಮತ್ತು ಗುಂಡ್ಲವದ್ದಿಗೆರೆ ಯಲ್ಲಿ ತೆರೆದ ಚರಂಡಿಗಳಿವೆ. ಈ ಗ್ರಾಮಗಳಲ್ಲಿ ಮುಚ್ಚಿದ ಚರಂಡಿಗಳಿಲ್ಲ. ಗ್ರಾಮಪಂಚಾಯತಿಯ ದೊಡ್ಡ ಗ್ರಾಮಗಳಿಗೆ ಹೆಚ್ಚು ಆದ್ಯತೆಯನ್ನು ನೀಡಲಾಗಿದೆ. ಕಾಮಗಾರಿಗಳಲ್ಲಿ ಹೆಚ್ಚು ಬಂಡೆಹಾಕಿಸುವುದು ಮತ್ತು ನೀರಿನ ತೊಟ್ಟಿಗಳಿಗೆ ಆದ್ಯತೆ ನೀಡಲಾಗಿದೆ.

ನೈರ್ಮಲೀಕರಣದ ವೆಚ್ಚವನ್ನು ನೋಡಿದಾಗ ಕಳೆದ ಐದು ವರ್ಷಗಳಲ್ಲಿ ಸರಾಸರಿಯಾಗಿ ಶೇ 7ರಷ್ಟು ಹಣವನ್ನು ಗ್ರಾಮಪಂಚಾಯತಿ ವೆಚ್ಚ ಮಾಡಿದೆ. ಪ್ರತಿ ವರ್ಷವು ಕನಿಷ್ಠ ಶೇಕಡ ಎರಡ ರಿಂದ ಗರಿಷ್ಟ ಶೇಕಡ ಒಂಬತ್ತರಷ್ಟು ಹಣವನ್ನು ಖರ್ಚು ಮಾಡಿದೆ(ಕೋಷ್ಟಕ-13). ಹೀಗೆ ಗ್ರಾಮಪಂಚಾಯತಿಯು ನೈರ್ಮಲೀಕರಣಕ್ಕೆ ಕಡಿಮೆ ವೆಚ್ಚ ಮಾಡಿದೆ. ನೈರ್ಮಲೀಕರಣದ ಬಗ್ಗೆ ಗ್ರಾಮೀಣ ಜನತೆಯ ಅಭಿಪ್ರಾಯವನ್ನು ನೋಡಿದಾಗ ಶೇ 13ರಷ್ಟು ಕುಟುಂಬಗಳು ತೃಪ್ತಿಕರವೆಂದು, ಶೇ 47ರಷ್ಟು ಕುಟುಂಬಗಳು ಅತೃಪ್ತಿಯನ್ನು ಮತ್ತು 37ರಷ್ಟು ಕುಟುಂಬಗಳು ಗೊತ್ತಿಲ್ಲವೆಂದು ಉತ್ತರಿಸಿದ್ದಾರೆ(ಕೋಷ್ಟಕ-14). ಪಂಚಾಯತಿ ವ್ಯಾಪ್ತಿಯ ಅಧಿಕ ಕುಟುಂಬಗಳು ನೈರ್ಮಲೀಕರಣದ ಬಗ್ಗೆ ಅತೃಪ್ತಿಯನ್ನು ಸೂಚಿಸಿವೆ. ಪಂಚಾಯತಿ ವ್ಯಾಪ್ತಿಯಲ್ಲಿ ಹೀಗೆ ನೈರ್ಮಲ್ಯ ಕಾರ್ಯಕ್ರಮಗಳು ಅನುಷ್ಠಾನಗೊಂಡಿವೆ.

**ಹಿರೇಹೆಗ್ದಾಳ್ ಗ್ರಾಮಪಂಚಾಯತಿ**

ಪಂಚಾಯತಿ ವ್ಯಾಪ್ತಿಯ ಗ್ರಾಮಗಳಲ್ಲಿ ನೈರ್ಮಲ್ಯೀಕರಣ ಕಾರ್ಯಕ್ರಮಗಳಲ್ಲಿ ಮಹಿಳಾ ಸಮುದಾಯ ಶೌಚಾಲಗಳು, ನಿರ್ಮಲ ಕರ್ನಾಟಕ ಯೋಜನೆಯಡಿಯಲ್ಲಿ ಕುಟುಂಬ ಶೌಚಾಲಯ ಗಳು, ಚರಂಡಿ ಕಾಮಗಾರಿಗಳ ಬಂಡೆ ಹಾಕಿಸುವ ಮತ್ತು ನೀರಿನ ತೊಟ್ಟಿ ಕಾಮಾಗಾರಿಗಳನ್ನು ಕೈಗೊಂಡಿದೆ. ಒಟ್ಟು ಪಂಚಾಯತಿಯ ಗ್ರಾಮಗಳಲ್ಲಿ 7 ಮಹಿಳಾ ಸಮುದಾಯ ಶೌಚಾಲಯಗಳಿದ್ದು, ಪ್ರತಿ 282 ಜನ ಮಹಿಳೆಯರಿಗೆ ಒಂದು ಸಮುದಾಯ ಶೌಚಾಲಯವಿದೆ.ಪರಿಶಿಷ್ಟ ಜಾತಿ ಕಾಲೋನಿಗೆ ಮೂರು ಸಮುದಾಯ

ಶೌಚಾಲಯವಿದ್ದು,ಪ್ರತಿ 159ಜನ ಮಹಿಳೆಯರಿಗೆ ಒಂದು ಮತ್ತು ಇತರೇ ವರ್ಗದವರಿಗೆ ನಾಲ್ಕು ಸಮುದಾಯ ಶೌಚಾಲಯಗಳಿದ್ದು ಪ್ರತಿ 282 ಜನ ಮಹಿಳೆಯರಿಗೆ ಒಂದು ಸಮುದಾಯ ಶೌಚಾಲಯವಿದೆ(ಕೋಷ್ಟಕ-12). ಈ ಎಲ್ಲಾ ಸಮುದಾಯ ಶೌಚಾಲಯಗಳಿಗೆ ಫಿಟ್, ನೀರು ಪೂರೈಕೆ ಮತ್ತು ಮೇಲ್ಛಾವಣಿ ಇಲ್ಲ. ಸುತ್ತಲೂ ಬಂಡೆಗಳ ಮೂಲಕ ಗೋಡೆಯನ್ನು ನಿರ್ಮಿಸಲಾಗಿದೆ. ನೀರಾವರಿ ಪ್ರದೇಶವಾಗಿರುವುದರಿಂದ ಮಹಿಳೆಯರಿಗೆ ಶೌಚಾಲಯದ ಅವಶ್ಯಕತೆ ಹೆಚ್ಚು ಇದೆ. ಹಾಗಾಗಿ ಈ ಎಲ್ಲಾ ಶೌಚಾಲಯಗಳು ಉಪಯೋಗದಲ್ಲಿವೆ.

ಗ್ರಾಮವಾರು ಸಮುದಾಯ ಶೌಚಾಲಯಗಳನ್ನು ನೋಡಿದಾಗ ಹಿರೇಹೆಗ್ಡಾಳ್, ಸಾಸಲವಾಡ ಮತ್ತು ಬೊಪ್ಪಲಪುರದಲ್ಲಿ ತಲಾ ಎರಡು ಸಮುದಾಯ ಶೌಚಾಲಯಗಳು ಮತ್ತು ಸಾಣೇಹಳ್ಳಿಯಲ್ಲಿ ಒಂದು ಶೌಚಾಲಯವಿದೆ(ಕೋಷ್ಟಕ-11). ಸಾಣೇಹಳ್ಳಿ ಗ್ರಾಮದಲ್ಲಿ ಪರಿಶಿಷ್ಟ ಜಾತಿಗೆ ಸೇರಿದ ಬೋವಿ ಜನಾಂಗ ಮಾತ್ರ ಇದ್ದಾರೆ. ಉಳಿದ ಮೂರು ಗ್ರಾಮಗಳ ಪರಿಶಿಷ್ಟ ಜಾತಿ ಕಾಲೋನಿಯಲ್ಲಿ ತಲಾ ಒಂದು ಸಮುದಾಯ ಶೌಚಾಲಯವನ್ನು ನಿರ್ಮಿಸಲಾಗಿದೆ. ಹಾಗಾಗಿ ಪಂಚಾಯತಿ ಪ್ರದೇಶದ ಪರಿಶಿಷ್ಟ ಜಾತಿಯ ಎಲ್ಲಾ ಕಾಲೋನಿಗಳಲ್ಲಿ ಸಮುದಾಯ ಶೌಚಲಯಗಳಿವೆ.

ಪಂಚಾಯತಿ ವ್ಯಾಪ್ತಿಯಲ್ಲಿ ನಿರ್ಮಲ ಕರ್ನಾಟಕ ಯೋಜನೆಯಡಿಯಲ್ಲಿ 10 ಶೌಚಾಲಯ ಗಳನ್ನು ಮಾತ್ರ ನಿರ್ಮಿಸಲಾಗಿದೆ. ಜಾತಿವಾರು ನೋಡಿದಾಗ ಪರಿಶಿಷ್ಟ ಜಾತಿಯವರು 02, ಮತ್ತು ಇತರೇ ವರ್ಗದವರು 08 ಶೌಚಾಲಯಗಳನ್ನು ಹೊಂದಿದ್ದಾರೆ.[25] ಇಲ್ಲಿ ಹೆಚ್ಚು ಮೇಲ್ವರ್ಗಗಳು ಇದ್ದರೂ ಸಹ ಈ ಯೋಜನೆಯಲ್ಲಿ ಶೌಚಾಲಯಗಳ ಲಾಭವನ್ನು ಪಡೆದುಕೊಂಡಿಲ್ಲ. ವೈಯುಕ್ತಿಕ ಕೌಟುಂಬಿಕ ಶೌಚಾಲಯಗಳು 23 ಇದ್ದು, ಒಟ್ಟು ಕೇವಲ 33 ಶೌಚಾಲಯಗಳಿವೆ(ಕೋಷ್ಟಕ-12). ಪಂಚಾಯತಿಯು ಒಟ್ಟು ಶೇ.4ರಷ್ಟು ಕುಟುಂಬಗಳು ಮಾತ್ರ ಶೌಚಲಯಗಳನ್ನು ಹೊಂದಿವೆ. ಇದರಿಂದ ಈ ಪ್ರದೇಶದಲ್ಲಿ ಶೌಚಾಲಯದ ಆಗತ್ಯತೆ ಬಹಳ ಕಡಿಮೆ ಇದೆ ಎಂದು ಹೇಳಬಹುದು. ಕಾರಣ ಪಂಚಾಯಿತಿ ವ್ಯಾಪ್ತಿಯ ಗ್ರಾಮಗಳು ಹೆಚ್ಚು ಕೆರೆ ಕಟ್ಟೆಗಳು ಇರುವುದರಿಂದ ಅವಶ್ಯಕತೆ ಇಲ್ಲ ಎಂದು ಹೇಳಬಹುದು.

ಗ್ರಾಮವಾರು ವೈಯಕ್ತಿಕ ಶೌಚಾಲಯಗಳನ್ನು ನೋಡಿದಾಗ ನಿರ್ಮಲ ಕರ್ನಾಟಕ ಯೋಜನೆಯ 10 ಶೌಚಾಲಯಗಳನ್ನು ಹಿರೇಹೆಗ್ಡಾಳ್ ಗ್ರಾಮದಲ್ಲಿ ನಿರ್ಮಿಸಲಾಗಿದೆ. ಸಾಸಲವಾಡದಲ್ಲಿ ಸ್ವಂತ ವೈಯಕ್ತಿಕ ಶೌಚಾಲಯಗಳು ಮಾತ್ರ ಇವೆ. ಇನ್ನೂ ಪಂಚಾಯತಿ ವ್ಯಾಪ್ತಿಯ ಸಾಣೇಹಳ್ಳಿ ಮತ್ತು ಬೊಪ್ಪಲಪುರಗಳಲ್ಲಿ ಯಾವುದೇ ವೈಯಕ್ತಿಕ ಶೌಚಾಲಯಗಳಿಲ್ಲ. ಪಂಚಾಯತಿ ಪ್ರದೇಶದಲ್ಲಿ ಒಟ್ಟು 8 ವಾರ್ಡುಗಳಲ್ಲಿ 5 ವಾರ್ಡಗಳಲ್ಲಿ ಒಂದು ಮುಚ್ಚಿದ ಚರಂಡಿ ಮತ್ತು ನಾಲ್ಕು ತೆರೆದ ಚರಂಡಿ ಕಾಮಗಾರಿಯನ್ನು ಮಾಡಲಾಗಿದೆ. ಈ ಚರಂಡಿಗಳಲ್ಲಿ ಪರಿಶಿಷ್ಟ ಜಾತಿಯ ಕಾಲೋನಿ ಒಂದು ವಾರ್ಡುನಲ್ಲಿ ಮಾತ್ರ ಚರಂಡಿಯನ್ನು ನಿರ್ಮಿಸಲಾಗಿದೆ. ಪಂಚಾಯತಿ ಕೇಂದ್ರ ಸ್ಥಳವಾದ ಹಿರೇಹೆಗ್ಡಾಳ್‌ನ ಮುಖ್ಯ ರಸ್ತೆಯಲ್ಲಿ ಮಾತ್ರ ಮುಚ್ಚಿದ ಚರಂಡಿಯನ್ನು ನಿರ್ಮಾಣ ಮಾಡಲಾಗಿದೆ.

ಗ್ರಾಮವಾರು ಚರಂಡಿ ವ್ಯವಸ್ಥೆಯನ್ನು ನೋಡಿದಾಗ, ಹಿರೇಹೆಗ್ಡಾಳ್‌ನ ಎರಡು ವಾರ್ಡುಗಳಲ್ಲಿ, ಉಳಿದ ಮೂರು ಗ್ರಾಮಗಳಲ್ಲಿ ತಲಾ ಒಂದು ವಾರ್ಡುನಲ್ಲಿ ಚರಂಡಿ ಕಾಮಗಾರಿಗಳನ್ನು ಕೈಗೊಳ್ಳಲಾಗಿದೆ. ಎಲ್ಲಾ ವಾರ್ಡುಗಳಲ್ಲಿ ಪೂರ್ಣವಾಗಿ ಚರಂಡಿಗಳು ನಿರ್ಮಾಣವಾಗಿಲ್ಲ. ಕಾಮಗಾರಿಗಳಲ್ಲಿ ಹೆಚ್ಚು ಬಂಡೆಹಾಕಿಸುವುದು ಮತ್ತು ನೀರಿನ ತೊಟ್ಟಿಗಳಿಗೆ ಆದ್ಯತೆ ನೀಡಲಾಗಿದೆ. ಬಂಡೆ ಹಾಕಿಸುವ ಕಾಮಗಾರಿಗಳು ಎಲ್ಲಾ ಗ್ರಾಮಗಳಲ್ಲಿ ನಡೆದಿದೆ. ಇಲ್ಲಿಯೂ ಸಹ ಸದಸ್ಯವಾರು ಬಂಡೆ ಹಾಕಿಸುವ ಮತ್ತು ನೀರಿನ ತೊಟ್ಟಿ ಕಟ್ಟಿಸುವ ಕಾಮಗಾರಿಗಳನ್ನು ಹಂಚಲಾಗಿದೆ. ಹಾಗಾಗಿ ಎಲ್ಲಾ ಕಾಲೋನಿಗಳಲ್ಲಿ ಈ ಕಾರ್ಯಕ್ರಮಗಳು ಅನುಷ್ಠಾನಗೊಂಡಿವೆ. ಗ್ರಾಮ ಪಂಚಾಯತಿಯು ಕಳೆದ ಐದು ವರ್ಷಗಳಿಂದ ಒಟ್ಟು ವೆಚ್ಚದಲ್ಲಿ ಸರಾಸರಿಯಾಗಿ ಶೇ. 6ರಷ್ಟು ಹಣವನ್ನು ನೈರ್ಮಲೀಕರಣ ಖರ್ಚು ಮಾಡಿದೆ. ಪ್ರತಿ ವರ್ಷ ಕನಿಷ್ಠ ಶೇ. 2ರಿಂದ ಗರಿಷ್ಟ ಶೇ. 9ರಷ್ಟು ವೆಚ್ಚ ಮಾಡಲಾಗಿದೆ(ಕೋಷ್ಟಕ-13).

ನೈರ್ಮಲೀಕರಣ ಬಗ್ಗೆ ಶೇ 23ರಷ್ಟು ಕುಟುಂಬಗಳು ತೃಪ್ತಿಕರವೆಂದು ಶೇ.35ರಷ್ಟು ಕುಟುಂಬಗಳು ಸರಿಯಿಲ್ಲಾವೆಂದು ಮತ್ತು ಶೇ.34ರಷ್ಟು ಗೊತ್ತಿಲ್ಲವೆಂದು ಅಭಿಪ್ರಾಯ ವ್ಯಕ್ತಪಡಿಸಿದ್ದಾರೆ(ಕೋಷ್ಟಕ-14). ಒಟ್ಟಾರೆ ಗ್ರಾಮಪಂಚಾಯತಿಯ ವ್ಯಾಪ್ತಿಯಲ್ಲಿ ಕೌಟುಂಬಿಕ ಶೌಚಾಲಯಗಳ ಸಂಖ್ಯೆ ಬಹಳ ಕಡಿಮೆ ಇವೆ ಹಾಗೂ ಚರಂಡಿ ನಿರ್ಮಾಣ ಕಾಮಗಾರಿಗಳು ಎಲ್ಲಾ ವಾರ್ಡುಗಳಲ್ಲಿ ಪೂರ್ಣವಾಗಿ ಕೈಗೊಂಡಿಲ್ಲ. ಹೀಗೆ ಪಂಚಾಯತಿ ಗ್ರಾಮಗಳಲ್ಲಿ ನೈರ್ಮಲೀಕರಣ ಕಾರ್ಯಕ್ರಮಗಳು ಅನುಷ್ಠಾನಗೊಂಡಿವೆ.

## ಉಜ್ಜಿನಿ ಗ್ರಾಮಪಂಚಾಯತಿ

ಉಜ್ಜಿನಿ ಪಂಚಾಯತಿಯ ಮೂರು ಗ್ರಾಮಗಳಲ್ಲಿ ನೈರ್ಮಲೀಕರಣ ಕಾರ್ಯಕ್ರಮಗಳನ್ನು ಅನುಷ್ಠಾನ ಗೊಳಿಸಲಾಗಿದೆ. ಪಂಚಾಯತಿ ವ್ಯಾಪ್ತಿಯಲ್ಲಿ ಒಟ್ಟು 05 ಮಹಿಳಾ ಸಮುದಾಯ ಶೌಚಾಲಯಗಳಿದ್ದು.ಪ್ರತಿ 831ಜನ ಮಹಿಳೆಯರಿಗೆ ಒಂದು ಸಮುದಾಯ ಶೌಚಾಲಯವಿದೆ. ಪರಿಶಿಷ್ಟಜಾತಿ ಕಾಲೋನಿಗೆ ಒಂದು ಸಮುದಾಯ ಶೌಚಾಲಯವಿದ್ದು, ಪ್ರತಿ 607ಜನ ಮಹಿಳೆಯರಿಗೆ ಒಂದು ಮತ್ತು ಇತರೇ ವರ್ಗದವರಿಗೆ 4ಸಮುದಾಯ ಶೌಚಾಲಯಗಳಿದ್ದು ಪ್ರತಿ 831 ಜನ ಮಹಿಳೆಯರಿಗೆ ಒಂದು ಸಮುದಾಯ ಶೌಚಾಲಯವಿದೆ(ಕೋಷ್ಟಕ-12). ಪಂಚಾಯತಿಯು 10 ವಾರ್ಡಗಳನ್ನು ಹೊಂದಿದ್ದರೂ ಕೇವಲ ಐದು ಶೌಚಾಲಯಗಳನ್ನು ಮಾತ್ರ ಹೊಂದಿದೆ. ಎಲ್ಲಾ ಪಂಚಾಯತಿಗಳಂತೆ ಇಲ್ಲಿಯೂ ಸಹ ಎಲ್ಲಾ ಸಮುದಾಯ ಶೌಚಾಲಯಗಳಿಗೆ ಫಿಟ್, ನೀರು ಪೂರೈಕೆ ಮತ್ತು ಮೇಲ್ವಾವಣೆ ಇಲ್ಲ. ಸುತ್ತಲೂ ಬಂಡೆಗಳ ಮೂಲಕ ಗೋಡೆಯನ್ನು ನಿರ್ಮಿಸಲಾಗಿದೆ.

ಗ್ರಾಮವಾರು ನೋಡಿದಾಗ ನಾಲ್ಕು ಸಮುದಾಯ ಶೌಚಾಲಯಗಳು ಉಜ್ಜಿನಿಯಲ್ಲಿವೆ, ಬೆನಕನಹಳ್ಳಿಯಲ್ಲಿ ಒಂದು ಮತ್ತು ಬೈರದೇವರಗುಡ್ಡ ಗ್ರಾಮದಲ್ಲಿ ಯಾವುದೇ ಸಮುದಾಯ ಶೌಚಾಲಯಗಳಿಲ್ಲ. ಪಂಚಾಯತಿ ಕೇಂದ್ರ ಸ್ಥಳವಾದ ಉಜ್ಜಿನಿಯು ಸುಮಾರು 1200 ಕುಟುಂಬಗಳನ್ನು ಹೊಂದಿರುವುದರಿಂದ ಮತ್ತು ಹೆಚ್ಚು ಸದಸ್ಯರನ್ನು ಹೊಂದಿರುವುದರಿಂದ ಅಧಿಕ ಸಮುದಾಯ ಶೌಚಾಲಯಗಳನ್ನು ಹೊಂದಿದೆ. ನಿರ್ಮಲ

ಕರ್ನಾಟಕ ಯೋಜನೆಯಡಿಯಲ್ಲಿ ಪಂಚಾಯತಿ ವ್ಯಾಪ್ತಿಯಲ್ಲಿ ಒಟ್ಟು 217 ವೈಯಕ್ತಿಕ ಶೌಚಾಲಯಗಳನ್ನು ನಿರ್ಮಿಸಲಾಗಿದೆ.[26] ಸ್ವಂತ ಶೌಚಾಲಯಗಳ ವಿವರಗಳನ್ನು ನೋಡಿದಾಗ 80 ಶೌಚಾಲಯಗಳು ಉಜ್ಜನಿಯಲ್ಲಿವೆ(ಕೋಷ್ಠಕ-12). ಉಳಿದ ಎರಡು ಗ್ರಾಮಗಳಲ್ಲಿ ಸ್ವಂತ ಶೌಚಾಲಯಗಳಿಲ್ಲಿ ಉಜ್ಜನಿಯಲ್ಲಿ ಮೇಲ್ವರ್ಗಗಳು ಹೆಚ್ಚಿರುವುದರಿಂದ ವೈಯುಕ್ತಿಕ ಶೌಚಾಲಯಗಳ ಸಂಖ್ಯೆ ಹೆಚ್ಚಿರುವುದಕ್ಕೆ ಕಾರಣವಾಗಿದೆ. ಒಟ್ಟಾರೆ ಶೇ. 17 ರಷ್ಟು ಕುಟುಂಬಗಳು ಶೌಚಾಲಯಗಳನ್ನು ಹೊಂದಿವೆ.

ಒಟ್ಟು 217 ಶೌಚಾಲಯಗಳನ್ನು ಗ್ರಾಮವಾರು ನೋಡಿದಾಗ ಉಜ್ಜನಿಯಲ್ಲಿ, ಬೆನಕನಹಳ್ಳಿ 13 ಮತ್ತು ಬೈರದೇವರಗುಡ್ಡದಲ್ಲಿ 09 ಶೌಚಾಲಯಗಳನ್ನು ನಿರ್ಮಿಸಲಾಗಿದೆ. ಉಜ್ಜನಿ ದೊಡ್ಡ ಗ್ರಾಮ ಆಗಿದ್ದರಿಂದ ಹೆಚ್ಚಿನ ಆದ್ಯತೆ ನೀಡಲಾಗಿದೆ. ಜಾತಿವಾರು ಶೌಚಾಲಯಗಳನ್ನು ನೋಡಿದಾಗ ಶೇ. 36ರಷ್ಟು ಶೌಚಾಲಯಗಳನ್ನು ಪರಿಶಿಷ್ಟರಿಗೆ, ಶೇ.64ರಷ್ಟು ಶೌಚಾಲಯಗಳನ್ನು ಇತರೆ ವರ್ಗದವರಿಗೆ ಹಂಚಲಾಗಿದೆ(ಕೋಷ್ಠಕ-12). ಹಾಗಾಗಿ ಹೆಚ್ಚು ಮೇಲ್ವರ್ಗದವರು ಶೌಚಾಲಯಗಳನ್ನು ಕಟ್ಟಿಸಿಕೊಂಡಿದ್ದಾರೆ. ಪಂಚಾಯತಿಯ ಒಟ್ಟು 10 ವಾರ್ಡಗಳನ್ನು ಹೊಂದಿದ್ದು ಅದರಲ್ಲಿ 7 ವಾರ್ಡಗಳಲ್ಲಿ ಚರಂಡಿಗಳನ್ನು ನಿರ್ಮಿಸಲಾಗಿದೆ. ಉಜ್ಜನಿಯ ಪ್ರಮುಖ 2 ವಾರ್ಡಗಳಲ್ಲಿ ಮುಚ್ಚಿದ ಚರಂಡಿಗಳಿದ್ದು ಉಳಿದ 4 ವಾರ್ಡಗಳಲ್ಲಿ ತೆರೆದ ಚರಂಡಿಗಳು ಇವೆ. ಬೈರದೇವರಗುಡ್ಡದಲ್ಲಿ ಯಾವುದೇ ಚರಂಡಿಗಳು ಇಲ್ಲ. ಉಜ್ಜನಿಯ ಪರಿಶಿಷ್ಟ ಜಾತಿ ವಾರ್ಡನಲ್ಲಿ ತೆರೆದ ಚರಂಡಿ ಇದೆ. ಈ ಪಂಚಾಯತಿಯಲ್ಲಿ ಸಹ ಬಂಡೆ ಹಾಕಿಸುವ ಮತ್ತು ನೀರಿನ ತೊಟ್ಟಿ ನಿರ್ಮಿಸುವ ಕಾಮಗಾರಿಗಳು ಹೆಚ್ಚು ನಡೆದಿದೆ. ಚರಂಡಿ ನಿರ್ಮಾಣದಲ್ಲಿ ಪರಿಶಿಷ್ಟರ ಕಾಲೋನಿಗಳಿಗೆ ಮತ್ತು ಇತರೇ ಗ್ರಾಮಗಳಿಗೆ ಹೆಚ್ಚು ಆದ್ಯತೆಯನ್ನು ನೀಡಿಲ್ಲ.

ಗ್ರಾಮಪಂಚಾಯತಿಯು 1995-2000ದ ಒಟ್ಟು ವೆಚ್ಚದ ಸರಾಸರಿಯಲ್ಲಿ ಶೇ 11 ರಷ್ಟು ಹಣವನ್ನು ನೈರ್ಮಲೀಕರಣಕ್ಕೆ ವೆಚ್ಚ ಮಾಡಲಾಗಿದೆ. ಪ್ರತಿ ವರ್ಷ ಕನಿಷ್ಠ ಶೇ.4 ರಂದ ಗರಿಷ್ಟ ಶೇ. 20ರಷ್ಟು ಹಣವನ್ನು ಖರ್ಚು ಮಾಡಲಾಗಿದೆ(ಕೋಷ್ಠಕ-13). ಹೆಚ್ಚು ಹಣವನ್ನು ನೈರ್ಮಲೀಕರಣಕ್ಕೆ ವೆಚ್ಚ ಮಾಡಿದೆ. ನೈರ್ಮಲೀಕರಣದ ಬಗ್ಗೆ ಊರವರ ಅಭಿಪ್ರಾಯವನ್ನು ನೋಡಿದಾಗ ಶೇ.12ರಷ್ಟು ತೃಪ್ತಿಕರ ವೆಂದು, ಶೇ 53ರಷ್ಟು ಅತೃಪ್ತಿಯನ್ನು ಮತ್ತು ಶೇ.33ರಷ್ಟು ಕುಟುಂಬಗಳು ಗೊತ್ತಿಲ್ಲವೆಂದು ಅಭಿಪ್ರಾಯಪಟ್ಟಿದ್ದಾರೆ (ಕೋಷ್ಠಕ-14). ಈ ಪ್ರದೇಶ ಒಣಭೂಮಿ ಮತ್ತು ದೊಡ್ಡ ಪಂಚಾಯತಿಯಾಗಿರುವುದರಿಂದ ಶೌಚಾಲಯಗಳಿಗೆ ಹೆಚ್ಚು ಆದ್ಯತೆಯನ್ನು ನೀಡಿಲ್ಲ. ಚರಂಡಿ ಕಾಮಗಾರಿಗಳು ಪೂರ್ಣವಾಗಿ ಕೈಗೊಂಡಿಲ್ಲ ಎಂದು ಹೇಳಬಹುದು. ಹೀಗೆ ಉಜ್ಜನಿ ಪಂಚಾಯತಿ ವ್ಯಾಪ್ತಿಯಲ್ಲಿ ನೈರ್ಮಲೀಕರಣದ ಕಾರ್ಯಕ್ರಮಗಳನ್ನು ಜಾರಿಗೊಳಿಸಲಾಗಿದೆ.

## 3.8.ಗ್ರಾಮಪಂಚಾಯತಿಗಳ ತೌಲನಿಕ ವಿವರಣೆ

ಅಧ್ಯಯನಕ್ಕೆ ಆಯ್ಕೆ ಮಾಡಿಕೊಂಡಿರುವ ನಾಲ್ಕು ಗ್ರಾಮಪಂಚಾಯತಿಗಳಲ್ಲಿ ವಿವಿಧ ರೀತಿಯಲ್ಲಿ ನೈರ್ಮಲೀಕರಣದ ಕಾರ್ಯಕ್ರಮಗಳು ಅನುಷ್ಠಾನಗೊಂಡಿವೆ. ಗ್ರಾಮಪಂಚಾಯತಿಗಳಾದ ನಾಗೇನಹಳ್ಳಿ, ಬೈಲುವದ್ದಿಗೆರೆ, ಹಿರೇಹೆಗ್ಡಾಳ್ ಮತ್ತು ಉಜ್ಜನಿ ಪಂಚಾಯತಿಗಳಲ್ಲಿ ನೈರ್ಮಲೀಕರಣದ ಕಾರ್ಯಕ್ರಮಗಳಲ್ಲಿ ಮಹಿಳಾ ಸಮುದಾಯ ಶೌಚಾಲಯಗಳ ವಿವರಗಳನ್ನು ನೋಡಿದಾಗ, ನಾಗೇನಹಳ್ಳಿ ಪಂಚಾಯತಿ ಪ್ರದೇಶದಲ್ಲಿ

ಒಟ್ಟು 6 ಮಹಿಳಾ ಸಮುದಾಯ ಶೌಚಾಲಯಗಳಿದ್ದು ಇದರಲ್ಲಿ ಪರಿಶಿಷ್ಟಜಾತಿಗೆ 2 ಮತ್ತು ಇತರರಿಗೆ 4 ಇವೆ. ನಿರ್ಮಲ ಕರ್ನಾಟಕ ಯೋಜನೆಯಲ್ಲಿ ಪಂಚಾಯತಿ ಪ್ರದೇಶದಲ್ಲಿ ಒಟ್ಟು 86 ಕೌಟುಂಬಿಕ ಶೌಚಾಲಯಗಳನ್ನು ನಿರ್ಮಿಸಲಾಗಿದೆ. ಜಾತಿವಾರು ಶೌಚಾಲಯಗಳ ವಿವರಗಳಲ್ಲಿ ಪರಿಶಿಷ್ಟರಿಗೆ 30 ಮತ್ತು ಇತರೆ ವರ್ಗದವರಿಗೆ 56 ಶೌಚಾಲಯಗಳನ್ನು ವಿತರಿಸಲಾಗಿದೆ.

ಬೈಲುವದ್ದಿಗೆರೆ ಪಂಚಾಯತಿ ಪ್ರದೇಶದಲ್ಲಿ ಒಟ್ಟು 11ಮಹಿಳಾ ಸಮುದಾಯ ಶೌಚಾಲಯಗಳಿದ್ದು ಇದರಲ್ಲಿ ಪರಿಶಿಷ್ಟಜಾತಿಗೆ ನಾಲ್ಕು ಮತ್ತು ಇತರೆ ವರ್ಗದವರೆಗೆ ಏಳು ಸಮುದಾಯ ಶೌಚಾಲಯ ಗಳಿವೆ. ನಿರ್ಮಲಕರ್ನಾಟಕ ಒಟ್ಟು ಶೌಚಾಲಯಗಳು 401ಇದ್ದು, ಇದರಲ್ಲಿ ಪರಿಶಿಷ್ಟರಿಗೆ 165 ಮತ್ತು ಇತರೆವರ್ಗದವರಿಗೆ 236 ಹಂಚಿಕೆಯಾಗಿವೆ. 34ವೈಯುಕ್ತಿಕ ಶೌಚಾಲಯಗಳ ಇದ್ದು, ಇವೆಲ್ಲಾ ಮೇಲ್ವರ್ಗದ ಕುಟುಂಬಗಳಿಗೆ ಸೇರಿವೆ. ಹಿರೇಹೆಗ್ಡಾಳ್ ಪಂಚಾಯತಿ ಪ್ರದೇಶದಲ್ಲಿ ಒಟ್ಟು 7 ಮಹಿಳಾ ಸಮುದಾಯ ಶೌಚಾಲಯಗಳಿದ್ದು, ಇದರಲ್ಲಿ ಪರಿಶಿಷ್ಟಜಾತಿಗೆ 3 ಮತ್ತು ಇತರ ವರ್ಗದವರಿಗೆ 4 ಶೌಚಾಲಯ ಗಳಿವೆ. ನಿರ್ಮಲಕರ್ನಾಟಕ ಯೋಜನೆಯಡಿಯಲ್ಲಿ 10 ಶೌಚಾಲಯಗಳಿದ್ದು, ಇದರಲ್ಲಿ ಪರಿಶಿಷ್ಟರು 4 ಮತ್ತು ಇತರೆವರ್ಗದವರು 6 ಶೌಚಾಲಯಗಳು ಹಂಚಿಕೆಯಾಗಿವೆ. 23 ವೈಯಕ್ತಿಕ ಶೌಚಾಲಯಗಳ ಇದ್ದಾವೆ. ಉಜ್ಜನಿ ಪಂಚಾಯತಿ ಪ್ರದೇಶದಲ್ಲಿ ಒಟ್ಟು 5 ಮಹಿಳಾ ಸಮುದಾಯ ಶೌಚಾಲಯಗಳಿವೆ. ಇದರಲ್ಲಿ ಪರಿಶಿಷ್ಟಜಾತಿಗೆ 1 ಮತ್ತು ಇತರ ವರ್ಗದವರಿಗೆ 4 ಶೌಚಾಲಯಗಳಿವೆ. ನಿರ್ಮಲ ಕರ್ನಾಟಕ ಯೋಜನೆಯಡಿಯಲ್ಲಿ 217 ಶೌಚಾಲಯಗಳಿದ್ದು, ಇದರಲ್ಲಿ ಪರಿಶಿಷ್ಟರು 80 ಮತ್ತು ಇತರೆವರ್ಗದವರು 137 ಶೌಚಾಲಯಗಳು ಹಂಚಿಕೆಯಾಗಿವೆ. 90 ವೈಯಕ್ತಿಕ ಶೌಚಾಲಯಗಳ ಇವೆ(ಕೋಷ್ಠಕ-12).

ಈ ನಾಲ್ಕು ಪಂಚಾಯತಿಗಳಲ್ಲಿ ನಿರ್ಮಿಸಿದ ಶೌಚಾಲಯಗಳ ಅಂಕಿ-ಅಂಶಗಳನ್ನು ನೋಡಿದಾಗ, ನೀರಾವರಿ ಪಂಚಾಯತಿ ಪ್ರದೇಶಕ್ಕಿಂತ ಒಣಭೂಮಿ ಪಂಚಾಯತಿ ಪ್ರದೇಶದಲ್ಲಿ ಹೆಚ್ಚು ಶೌಚಾಲಯಗಳನ್ನು ನಿರ್ಮಿಸಲಾಗಿದೆ. ಒಣಭೂಮಿ ಪಂಚಾಯತಿ ಪ್ರದೇಶಗಳಲ್ಲಿ ಸರ್ಕಾರದ ಯಾವುದಾದರೂ ಯೋಜನೆಗಳು ಉಚಿತ ರೂಪದಲ್ಲಿ ದೊರಕಿದರೆ ಅದನ್ನು ಪಡೆಯಲು ಮುಂದಾಗುತ್ತಾರೆ. ಹಾಗಾಗಿ ಇಲ್ಲಿ ಹೆಚ್ಚು ಶೌಚಾಲಯಗಳು ಅನುಷ್ಠಾನಗೊಂಡಿವೆ ಎಂದು ಗ್ರಹಿಸಲಾಗಿದೆ. ಮಹಿಳಾ ಸಮುದಾಯ ಶೌಚಾಲಯ ಗಳ ಅಗತ್ಯತೆ ಹೆಚ್ಚು ಇರುವುದರಿಂದ ಆದ್ಯತೆ ನೀಡಿರಬಹುದು ಎಂದು ಗ್ರಹಿಸಲಾಗಿದೆ. ಈ ಮಹಿಳಾ ಸಮುದಾಯ ಉಪಯೋಗದಲ್ಲಿವೆ.

ಗ್ರಾಮವಾರು ಮಹಿಳಾ ಸಮುದಾಯ ಶೌಚಾಲಯಗಳ ವಿವರವನ್ನು ನೋಡಿದಾಗ, ನಾಗೇನಹಳ್ಳಿಯಲ್ಲಿ ಮೂರು, ಬಸವನದುರ್ಗದಲ್ಲಿ ಎರಡು, ಬೆನಕಾಪುರದಲ್ಲಿ ಒಂದು, ಹಿರೇಹೆಗ್ಡಾಳ್‌ನಲ್ಲಿ ಎರಡು, ಸಾಸಲವಾಡದಲ್ಲಿ ಎರಡು ಮತ್ತು ಬೊಪ್ಪಲಪುರದಲ್ಲಿ ಒಂದು ಶೌಚಾಲಯವಿದೆ. ಈ ಗ್ರಾಮಗಳು ನೀರಾವರಿ ಪ್ರದೇಶದಿಂದ ಕೂಡಿವೆ. ಬೈಲುವದ್ದಿಗೆರೆಯಲ್ಲಿ ನಾಲ್ಕು, ಕಾಕಬಾಳುನಲ್ಲಿ ಮೂರು, ಧರ್ಮಸಾಗರ, ಗುಂಡ್ಲವದ್ದಿಗೆರೆಯಲ್ಲಿ ತಲಾ ಎರಡು ಉಜ್ಜನಿಯಲ್ಲಿ ನಾಲ್ಕು ಹಾಗೂ ಬೆನಕನಹಳ್ಳಿಯಲ್ಲಿ ಒಂದು ಶೌಚಾಲಯವಿದೆ. ನೀರಾವರಿ ಪ್ರದೇಶದ ಗ್ರಾಮಗಳಾದ ಕಾಳಘಟ್ಟ,ಬೆಳಗೊಡು ಮತ್ತು ಕಳ್ಳಿರಾಂಪುರದಲ್ಲಿ ಯಾವುದೇ ಶೌಚಾಲಯಗಳಿಲ್ಲ. ಈ ಗ್ರಾಮಗಳು ಚಿಕ್ಕ ಗ್ರಾಮಗಳಾಗಿದ್ದು, ಗದ್ದೆಗಳಿಂದ ಆವೃತವಾಗಿವೆ

ಆದ್ದರಿಂದ ಇಲ್ಲಿ ಶೌಚಾಲಗಳಿಲ್ಲ ಎಂದು ಪಂಚಾಯತಿ ಸದಸ್ಯರು ಮತ್ತು ಸ್ಥಳೀಯ ಜನತೆ ಅಭಿಪ್ರಾಯ ಪಟ್ಟಿದ್ದಾರೆ. ಒಣಭೂಮಿ ಪ್ರದೇಶದ ಗ್ರಾಮವಾದ ಬೈರದೇವರಗುಡ್ಡದಲ್ಲಿ ಮಹಿಳಾ ಸಮುದಾಯ ಶೌಚಾಲಯಗಳಿಲ್ಲ. ಶೌಚಾಲಯಗಳ ಅನುಷ್ಠಾನವನ್ನು ತೌಲಾನಿಕವಾಗಿ ನೋಡಿದಾಗ, ನೀರಾವರಿ ಪ್ರದೇಶದ ಗ್ರಾಮಗಳಿಗಿಂತ ಒಣಭೂಮಿ ಪ್ರದೇಶದ ಗ್ರಾಮಗಳಲ್ಲಿ ಹೆಚ್ಚು ಶೌಚಾಲಯಗಳನ್ನು ನಿರ್ಮಿಸಲಾಗಿದೆ. ನೀರಾವರಿ ಪ್ರದೇಶಗಳಲ್ಲಿ ಶೌಚಾಲಯದ ಅಗತ್ಯತೆ ಕಡಿಮೆ ಇರುವುದು, ಆದರೆ ಮಹಿಳೆಯರಿಗೆ ಹೆಚ್ಚು ಶೌಚಾಲಯಗಳ ಅಗತ್ಯತೆ ಇದ್ದರೂ ಸಹ ಹೆಚ್ಚು ಶೌಚಾಲಯಗಳು ನಿರ್ಮಾಣವಾಗಿಲ್ಲ.

ಗ್ರಾಮವಾರು ನಿರ್ಮಲಕರ್ನಾಟಕ ಯೋಜನೆಯಡಿಯಲ್ಲಿ ನಿರ್ಮಿಸಿದ ಶೌಚಾಲಯಗಳ ವಿವರವನ್ನು ನೋಡಿದಾಗ, ನಾಗೇನಹಳ್ಳಿಯಲ್ಲಿ 85, ಬಸವನದುರ್ಗದಲ್ಲಿ 24 ಬೆನಕಾಪುರದಲ್ಲಿ 12, ಕಾಳಘಟ್ಟದಲ್ಲಿ 5, ಹಿರೇಹೆಗ್ಡಾಳ್‌ನಲ್ಲಿ 10, ಈ ಗ್ರಾಮಗಳು ನೀರಾವರಿ ಪ್ರದೇಶದಿಂದ ಕೂಡಿವೆ. ಬೈಲುವದ್ದಿಗೆರೆಯಲ್ಲಿ 100, ಕಾಕಬಾಳುನಲ್ಲಿ 317 ಧರ್ಮಸಾಗರದಲ್ಲಿ 100, ಗುಂಡ್ಲವದ್ದಿಗೆರೆಯಲ್ಲಿ 31 ಉಜ್ಜನಿಯಲ್ಲಿ 195, ಬೆನಕನಹಳ್ಳಿಯಲ್ಲಿ13 ಹಾಗೂ ಬೈರದೇವರಗುಡ್ಡದಲ್ಲಿ 9 ಶೌಚಾಲಯಗಳಿವೆ (ಕೋಷ್ಟಕ-11). ಇವೆಲ್ಲಾ ಒಣಭೂಮಿ ಪ್ರದೇಶದ ಗ್ರಾಮಗಳಾಗಿವೆ. ನೀರಾವರಿ ಪ್ರದೇಶದ ಗ್ರಾಮಗಳಾದ ಬೆಳಗೊಡು ಮತ್ತು ಕಳ್ಳಿರಾಂಪುರದಲ್ಲಿ ಯಾವುದೇ ಶೌಚಾಲಯಗಳಿಲ್ಲ. ಈ ಗ್ರಾಮಗಳು ಚಿಕ್ಕ ಮತ್ತು ಗದ್ದೆಗಳಿಂದ ಆವೃತವಾಗಿವೆ ಆದ್ದರಿಂದ ಇಲ್ಲಿ ಶೌಚಾಲಯಗಳಿಲ್ಲ ಎಂದು ಹೇಳಬಹುದು. ಒಣಭೂಮಿ ಪ್ರದೇಶದ ಗ್ರಾಮಗಳಾದ ಸಾಸಲವಾಡ, ಬೊಪ್ಪಲಪುರ, ಸಾಣೇಹಳ್ಳಿ ಮತ್ತು ಬೈರದೇವರಗುಡ್ಡದಲ್ಲಿ ನಿರ್ಮಲ ಕರ್ನಾಟಕ ಶೌಚಾಲಯಗಳಿಲ್ಲ. ಶೌಚಾಲಯಗಳ ಅನುಷ್ಠಾನವನ್ನು ತೌಲಾನಿಕವಾಗಿ ನೋಡಿದಾಗ, ನೀರಾವರಿ ಪ್ರದೇಶದ ಗ್ರಾಮಗಳಿಗಿಂತ ಒಣಭೂಮಿ ಪ್ರದೇಶದ ಗ್ರಾಮಗಳಲ್ಲಿ ಹೆಚ್ಚು ಶೌಚಾಲಯ ಗಳನ್ನು ನಿರ್ಮಿಸಲಾಗಿದೆ. ನೀರಾವರಿ ಪ್ರದೇಶಗಳಲ್ಲಿ ಶೌಚಾಲಯದ ಅಗತ್ಯತೆ ಕಡಿಮೆ ಇರುವುದು, ಆದರೆ ಮಹಿಳೆಯರಿಗೆ ಹೆಚ್ಚು ಶೌಚಾಲಯಗಳ ಅಗತ್ಯತೆ ಇದ್ದರೂ ಸಹ ಹೆಚ್ಚು ಶೌಚಾಲಯಗಳು ನಿರ್ಮಾಣವಾಗಿಲ್ಲ. ಈ ಗ್ರಾಮಗಳು ಸಣ್ಣ ಪ್ರದೇಶಗಳಾಗಿವೆ.ಆದರೆ ಬೈಲುವದ್ದಿಗೆರೆ ಪಂಚಾಯತಿ ವ್ಯಾಪ್ತಿಯ ಗ್ರಾಮಗಳು ಬಯಲು ಪ್ರದೇಶ ಗಳಾಗಿವೆ ಹಾಗೂ ನೀರಾವರಿ ಪ್ರದೇಶ ಗ್ರಾಮಗಳಿಗಿಂತ ದೊಡ್ಡ ಗ್ರಾಮಗಳಾಗಿವೆ.ಹಾಗಾಗಿ ಒಣಭೂಮಿ ಪ್ರದೇಶದ ಗ್ರಾಮಗಳಲ್ಲಿ ಹೆಚ್ಚು ಶೌಚಾಲಯಗಳು ನಿರ್ಮಾಣವಾಗಿವೆ. ಸರಕಾರದ ಯೋಜನೆಯಡಿಯಲ್ಲಿ ನಿರ್ಮಲ ಕರ್ನಾಟಕ ಶೌಚಾಲಯಗಳು ಬಂದಿದ್ದರೂ ನಾಗೇನಹಳ್ಳಿಯ ಪಂಚಾಯತಿಯಲ್ಲಿ ಹೆಚ್ಚು ಕುಟುಂಬಗಳು ಕಟ್ಟಿಸಿಕೊಳ್ಳಲು ಆಸಕ್ತಿ ತೋರಿಲ್ಲ. ಇಲ್ಲಿ ಪರಿಶಿಷ್ಟ ಕುಟುಂಬಗಳೇ ಹೆಚ್ಚು ಇರುವುದರಿಂದ ಮತ್ತು ಅಗತ್ಯತೆ ಕಡಿಮೆ ಇರುವುದರಿಂದ ಶೌಚಾಲಯಗಳ ನಿರ್ಮಾಣ ಹೆಚ್ಚು ಆಗಿಲ್ಲ ಎಂದು ಹೇಳಬಹುದು. ಮೇಲ್ವರ್ಗಗಳೇ ಹೆಚ್ಚಿರುವ ಬೈಲುವದ್ದಿಗೆರೆಯ ಪಂಚಾಯತಿ ಪ್ರದೇಶದಲ್ಲಿ ಶೌಚಾಲಯಗಳನ್ನು ಹೆಚ್ಚು ನಿರ್ಮಿಸಿಕೊಳ್ಳಲಾಗಿದೆ. ಪ್ರಾಥಮಿಕ ಮಾಹಿತಿಯ ಪ್ರಕಾರ ನಾಗೇನಹಳ್ಳಿ ಪಂಚಾಯತಿಯಲ್ಲಿ ನೈರ್ಮಲ್ಯೀಕರಣದ ಬಗ್ಗೆ, ಒಣಭೂಮಿ ಪ್ರದೇಶವಾದ ಬೈಲುವದ್ದಿಗೆರೆಗಿಂತ ಉತ್ತಮ ಅಭಿಪ್ರಾಯ ವ್ಯಕ್ತವಾಗಿದೆ. ಈ ಎರಡು ಪ್ರದೇಶಗಳ ಒಟ್ಟು ವಿವರಗಳನ್ನು ನೋಡಿದಾಗ ಬೈಲುವದ್ದಿಗೆರೆಯಲ್ಲಿ ಹೆಚ್ಚು ಕಾರ್ಯಕ್ರಮಗಳು ಕಾರ್ಯಗತಗೊಂಡಿದ್ದರೂ ಸಹ ಹೆಚ್ಚು ಅತೃಪ್ತಿಯನ್ನು ಸೂಚಿಸಿದ್ದಾರೆ. ಇದಕ್ಕೆ ಅಲ್ಲಿಯ ಶೌಚಾಲಯಗಳ

ಅನುಷ್ಠಾನ ಸರಿ ಇಲ್ಲದೆ ಇರುವುದು ಆಗಿರಬಹುದು. ಮತ್ತು ಇಲ್ಲಿನ ಜನತೆಯ ಪ್ರಕಾರ ಶೌಚಾಲಯದ ಬೇಡಿಕೆ ಹೆಚ್ಚು ಇರುವುದು ಕಾರಣವಾಗಿರಬಹುದು. ಆದರೆ ನೀರಾವರಿ ಪ್ರದೇಶವಾದ ನಾಗೇನಹಳ್ಳಿ ಪಂಚಾಯತಿ ಜನರಲ್ಲಿ ನೈರ್ಮಲೀಕರಣ ಕಾರ್ಯಕ್ರಮಗಳ ಬಗ್ಗೆ ಬೇಡಿಕೆ ಕಡಿಮೆ ಇರುವುದರಿಂದ ಹೆಚ್ಚು ತೃಪ್ತಿಕರವೆಂದು ಅಭಿಪ್ರಾಯಪಟ್ಟಿದ್ದಾರೆ.

ಹಿಂದುಳಿದ ಕೂಡ್ಲಿಗಿ ತಾಲೂಕಿನ ಎರಡು ಗ್ರಾಮಪಂಚಾಯತಿಗಳಾದ ಹಿರೇಹೆಗ್ಡಾಳ್ ಮತ್ತು ಉಜ್ಜನಿ ಗ್ರಾಮಪಂಚಾಯತಿಗಳಲ್ಲಿ ನೈರ್ಮಲ್ಯೀಕರಣದ ವಿವರಣೆಯನ್ನು ಗಮನಿಸಿದಾಗ ಹಿರೇಹೆಗ್ಡಾಳ್ ಗ್ರಾಮಪಂಚಾಯತಿಯು ಚಿಕ್ಕ ಗ್ರಾಮಪಂಚಾಯತಿಯಾಗಿದ್ದು, ಉಜ್ಜನಿಗಿಂತ ಕಡಿಮೆ ಶೌಚಾಲಯ, ಕೌಟುಂಬಿಕ ಶೌಚಾಲಯಗಳನ್ನು ಮತ್ತು ಚರಂಡಿಗಳನ್ನು ಹೊಂದಿದೆ. ನೀರಾವರಿ ಪ್ರದೇಶವಾದ ಹಿರೇಹೆಗ್ಡಾಳ್‌ನಲ್ಲಿ ಶೌಚಾಲಯಗಳ ಅಗತ್ಯ ಇಲ್ಲ. ಆದ್ದರಿಂದ ಇಲ್ಲಿ ಕೇವಲ 8 ವೈಯಕ್ತಿಕ ಶೌಚಾಲಯಗಳನ್ನು ಮಾತ್ರ ನಿರ್ಮಿಸಲಾಗಿದೆ. ಶೌಚಾಲಯಗಳ ಸಮಸ್ಯೆ ಹೆಚ್ಚು ಮಹಿಳೆಯರಿಗೆ ಇರುವುದರಿಂದ ಹಿರೇಹೆಗ್ಡಾಳ್ ಪಂಚಾಯತಿ ವ್ಯಾಪ್ತಿಯಲ್ಲಿ ಉಜ್ಜನಿ ಪಂಚಾಯತಿಗಿಂತ ಅಧಿಕ ಮಹಿಳಾ ಸಮುದಾಯ ಶೌಚಾಲಯಗಳನ್ನು ನಿರ್ಮಿಸಲಾಗಿದೆ. ಅಂದರೆ ಹಿರೇಹೆಗ್ಡಾಳ್ ಪಂಚಾಯತಿ ವ್ಯಾಪ್ತಿಯಲ್ಲಿ ಅಗತ್ಯಕ್ಕೆ ಅನುಗುಣವಾಗಿ ಮಹಿಳಾ ಸಮುದಾಯ ಶೌಚಾಲಯಗಳಿಗೆ ಆದ್ಯತೆ ನೀಡಲಾಗಿದೆ. ಉಜ್ಜನಿ ಗ್ರಾಮವು ದೊಡ್ಡ ಗ್ರಾಮವಾಗಿರುವುದರಿಂದ ಮತ್ತು ಒಣಭೂಮಿ ಪ್ರದೇಶವಾಗಿರುವುದರಿಂದ ಶೌಚಾಲಯಗಳ ಅಗತ್ಯ ಹೆಚ್ಚು ಇದೆ. ಆದರೆ ಇಲ್ಲಿ ಮಹಿಳಾ ಸಮುದಾಯ ಶೌಚಾಲಯಗಳಿಗಿಂತ ಹೆಚ್ಚು ಕೌಟುಂಬಿಕ ಶೌಚಾಲಯಗಳನ್ನು ಹೊಂದಿದೆ. ಹಿರೇಹೆಗ್ಡಾಳ್ ಪಂಚಾಯತಿಗಿಂತ ಉಜ್ಜನಿ ಪಂಚಾಯತಿಯಲ್ಲಿ ಮೇಲ್ವರ್ಗದವರು ಹೆಚ್ಚಿರುವುದರಿಂದ ಸ್ವಂತ ಮತ್ತು ನಿರ್ಮಲ ಕರ್ನಾಟಕ ಯೋಜನೆಯಡಿಯಲ್ಲಿ ಹೆಚ್ಚು ಶೌಚಾಲಯಗಳನ್ನು ಹೊಂದಿದ್ದಾರೆ. ಪ್ರಾಥಮಿಕ ಮಾಹಿತಿಯ ಪ್ರಕಾರ ಹಿರೇಹೆಗ್ಡಾಳ್ ಪಂಚಾಯತಿಯಲ್ಲಿ ಹೆಚ್ಚು ತೃಪ್ತಿಕರವೆಂದು ಗ್ರಾಮೀಣ ಜನತೆ ಅಭಿಪ್ರಾಯ ಪಟ್ಟಿದ್ದಾರೆ. ಹಾಗಾಗಿ ನೀರಾವರಿ ಪ್ರದೇಶದಲ್ಲಿ ನೈರ್ಮಲೀಕರಣದ ಯೋಜನೆಗಳಿಗೆ ಬೇಡಿಕೆ ಕಡಿಮೆ ಇದೆ. ಉಜ್ಜನಿ ಪಂಚಾಯತಿಯಲ್ಲಿ ಆಗತ್ಯತೇ ಇರುವುದರಿಂದ ಹೆಚ್ಚು ಕುಟುಂಬಗಳು ಅತೃಪ್ತಿಯನ್ನು ಸೂಚಿಸಿವೆ.

ಗ್ರಾಮಪಂಚಾಯತಿಗಳು ನೈರ್ಮಲ್ಯೀಕರಣಕ್ಕೆ ಕಳೆದ ಐದು ವರ್ಷದ ವೆಚ್ಚವನ್ನು ನೋಡಿದಾಗ, ನಾಗೇನಹಳ್ಳಿಯಲ್ಲಿ ಶೇ.14.52ರಷ್ಟು, ಬೈಲುವದ್ದಿಗೆರೆಯಲ್ಲಿ ಶೇ.13.31ರಷ್ಟು,ಹಿರೇಹೆಗ್ಡಾಳ್‌ನಲ್ಲಿ ಶೇ.5.60ರಷ್ಟು ಮತ್ತು ಉಜ್ಜನಿಯಲ್ಲಿ ಶೇ.11.03ರಷ್ಟು ಹಣವನ್ನು ಖರ್ಚು ಮಾಡಲಾಗಿದೆ. ಈ ಅಂಕಿ-ಅಂಶಗಳನ್ನು ಗಮನಿಸಿದಾಗ ಒಣಭೂಮಿ ಪ್ರದೇಶಗಳಾದ ಬೈಲುವದ್ದಿಗೆರೆ ಮತ್ತು ಉಜ್ಜನಿ ನೀರಾವರಿ ಪ್ರದೇಶವಾದ ನಾಗೇನಹಳ್ಳಿ ಪಂಚಾಯತಿಗಳಲ್ಲಿ ಹೆಚ್ಚು ವೆಚ್ಚವನ್ನು ನೈರ್ಮಲ್ಯೀಕರಣಕ್ಕೆ ಮಾಡಿವೆ. ಅತಿ ಕಡಿಮೆ ವೆಚ್ಚವನ್ನು ನೀರಾವರಿ ಪ್ರದೇಶವಾದ ಹಿರೇಹೆಗ್ಡಾಳ್ ಪಂಚಾಯತಿ ಮಾಡಿದೆ. ಹೊಸಪೇಟೆ ತಾಲೂಕಿನ ಒಣಭೂಮಿ ಪ್ರದೇಶವಾದ ಬೈಲುವದ್ದಿಗೆರೆ ಪಂಚಾಯತಿಗಿಂತ, ನೀರಾವರಿ ಪ್ರದೇಶವಾದ ನಾಗೇನಹಳ್ಳಿ ಪಂಚಾಯತಿಯು ಹೆಚ್ಚು ಹಣವನ್ನು ನೈರ್ಮಲ್ಯೀಕರಣಕ್ಕೆ ವೆಚ್ಚ ಮಾಡಿದೆ. ಕೂಡ್ಲಿಗಿ

ತಾಲೂಕಿನ ಒಣಭೂಮಿ ಪ್ರದೇಶವಾದ ಉಜ್ಜನಿ ಪಂಚಾಯತಿಯು, ನೀರಾವರಿ ಪ್ರದೇಶವಾದ ಹಿರೇಹೆಗ್ಡಾಳ್ ಪಂಚಾಯತಿಗಿಂತ ಹೆಚ್ಚು ಹಣವನ್ನು ನೈರ್ಮಲ್ಯೀಕರಣಕ್ಕೆ ವೆಚ್ಚ ಮಾಡಿದೆ. ಹಾಗಾಗಿ ಅಭಿವೃದ್ಧಿ ಹೊಂದಿದ ಹೊಸಪೇಟೆ ತಾಲೂಕಿನಲ್ಲಿ ನೀರಾವರಿ ಪ್ರದೇಶವಾದ ನಾಗೇನಹಳ್ಳಿ ಪಂಚಾಯತಿಯು ಹೆಚ್ಚು ಹಣವನ್ನು ನೈರ್ಮಲೀಕರಣಕ್ಕೆ ವೆಚ್ಚ ಮಾಡಿದ್ದರೆ ಕೂಡ್ಲಿಗಿ ತಾಲೂಕಿನ ಒಣಭೂಮಿ ಪ್ರದೇಶವಾದ ಉಜ್ಜನಿ ಪಂಚಾಯತಿಯು, ನೀರಾವರಿ ಪ್ರದೇಶವಾದ ಹಿರೇಹೆಗ್ಡಾಳ್ ಪಂಚಾಯತಿಗಿಂತ ಹೆಚ್ಚು ಹಣವನ್ನು ನೈರ್ಮಲೀಕರಣಕ್ಕೆ ವೆಚ್ಚ ಮಾಡಲಾಗಿದೆ. (ಕೋಷ್ಟಕ-13)

ಒಟ್ಟಾರೆ ನೈರ್ಮಲೀಕರಣದ ಕಾರ್ಯಕ್ರಮದ ವಿವರಣೆಯನ್ನು ನೋಡಿದಾಗ ನೈರ್ಮಲೀಕರಣದ ಕಾರ್ಯಕ್ರಮಗಳಲ್ಲಿ ಹೆಚ್ಚು ಶೌಚಾಲಯಗಳನ್ನು ಒಣಭೂಮಿ ಪ್ರದೇಶದ ಪಂಚಾಯತಿಗಳಲ್ಲಿ ಜಾರಿಗೊಳಿಸಲಾಗಿದೆ. ಸಮುದಾಯ ಶೌಚಾಲಯ, ವೈಯುಕ್ತಿಕ ಶೌಚಾಲಯಗಳು ಹೆಚ್ಚು ಒಣಭೂಮಿ ಪಂಚಾಯತಿಗಳಲ್ಲಿವೆ. ಒಣಭೂಮಿ ಪ್ರದೇಶಗಳಲ್ಲಿ ಅಧಿಕ ಶೌಚಾಲಯಗಳ ನಿರ್ಮಾಣಕ್ಕೆ ಮುಖ್ಯ ಕಾರಣಗಳೆಂದರೇ, ಇಲ್ಲಿ ಶೌಚಾಲಯಗಳ ಅಗತ್ಯತೆ ಹೆಚ್ಚಿದೆ, ಈ ಎರಡು ಪಂಚಾಯತಿಗಳು ದೊಡ್ಡ ಪಂಚಾಯತಿಗಳಾಗಿವೆ, ಪಂಚಾಯತಿ ವ್ಯಾಪ್ತಿಯ ಗ್ರಾಮಗಳು ದೊಡ್ಡ ಗ್ರಾಮಗಳು ಮತ್ತು ಈ ಗ್ರಾಮಗಳಲ್ಲಿ ಹೆಚ್ಚು ಮೇಲ್ವರ್ಗಗಳಿವೆ.

ಅಧ್ಯಯನದ ಎಲ್ಲಾ ಪಂಚಾಯತಿಗಳಲ್ಲಿ ಬಂಡೆ ಹಾಕಿಸುವ ಮತ್ತು ನೀರಿನ ತೊಟ್ಟಿ ಕಟ್ಟಿಸುವ ಕಾಮಗಾರಿಗಳನ್ನು ಹೆಚ್ಚು ಕೈಗೊಳ್ಳಲಾಗಿದೆ. ಬೀದಿಗೆ ಬಂಡೆ ಹಾಕಿಸುವ ಮತ್ತು ನೀರಿನ ತೊಟ್ಟಿ ಕಟ್ಟಿಸುವ ಕಾಮಗಾರಿಗಳನ್ನು ಎಲ್ಲಾ ಗ್ರಾಮಪಂಚಾಯತಿಗಳಲ್ಲಿ ಸದಸ್ಯವಾರು ಹಂಚಿರುವುದರಿಂದ ಪರ್ಸೆಂಟೈಸ್ ವ್ಯವಹಾರ ನಡೆದಿದೆ ಎಂಬುದು ಎಲ್ಲರಿಗೂ ಗೊತ್ತಿರುವ ವಿಚಾರವಾಗಿದೆ.ಇದರಿಂದ ಹಣದ ಲಾಭದ ದೃಷ್ಟಿಯಿಂದ ಬಂಡೆ ಹಾಕಿಸುವುದು ಮತ್ತು ನೀರಿನ ತೊಟ್ಟಿ ಕಟ್ಟಿಸುವುದು ಈ ಕಾಮಗಾರಿಗಳು ಹೆಚ್ಚು ನಡೆದಿವೆ.

ಒಟ್ಟಾರೆ ನಾಲ್ಕು ಗ್ರಾಮಪಂಚಾಯತಿಗಳಲ್ಲಿ ನೀರಾವರಿ ಪ್ರದೇಶಗಳಲ್ಲಿ ಆನುಷಂಗಿಕವಾಗಿ ನೈರ್ಮಲೀಕರಣ ಕಾರ್ಯಕ್ರಮಗಳು ಕಡಿಮೆ ಇದ್ದರೂ ಸಹ ಪ್ರಾಥಮಿಕ ಮಾಹಿತಿಯ ಪ್ರಕಾರ ಹೆಚ್ಚು ತೃಪ್ತಿಕರವೆಂದು ಅಭಿಪ್ರಾಯ ಪಟ್ಟಿದ್ದಾರೆ. ಒಣಭೂಮಿ ಪ್ರದೇಶಗಳಲ್ಲಿ ಹೆಚ್ಚು ನೈರ್ಮಲೀಕರಣ ಕಾರ್ಯಕ್ರಮಗಳು ಇದ್ದರೂ ಗ್ರಾಮೀಣ ಜನತೆ ನೀರಾವರಿ ಪ್ರದೇಶಕ್ಕಿಂತ ಹೆಚ್ಚು ಅತೃಪ್ತಿಯನ್ನು ಸೂಚಿಸಿದ್ದಾರೆ. ಪಂಚಾಯತಿ ಕೈಗೊಳ್ಳಬೇಕಾದ ನೈರ್ಮಲೀಕರಣದ ಪ್ರಮುಖ ಕಾರ್ಯಗಳಾದ ಕೊಳೆ ನೀರು ವಿಲೇವಾರಿ, ಚರಂಡಿ ಸ್ವಚ್ಛತೆ, ಸೊಳ್ಳೆಯ ನಿಯಂತ್ರಣ, ಸ್ಮಶಾನಗಳ ನಿರ್ವಹಣೆ ಈ ಕಾರ್ಯಗಳನ್ನು ಅಧ್ಯಯನದ ನಾಲ್ಕು ಗ್ರಾಮಪಂಚಾಯತಿಗಳಲ್ಲಿ ಕೈಗೊಂಡಿಲ್ಲ. ನಾಲ್ಕು ಗ್ರಾಮಪಂಚಾಯತಿಗಳಲ್ಲಿ ಸಹ ನೈರ್ಮಲೀಕರಣದ ಬಗ್ಗೆ ಅತೃಪ್ತಿಯನ್ನು ಜನತೆ ಸೂಚಿಸಿದ್ದಾರೆ.

ನೀರಾವರಿ ಪ್ರದೇಶಕ್ಕೆ ಒಣಭೂಮಿ ಪ್ರದೇಶಗಳನ್ನು ಹೋಲಿಕೆ ಮಾಡಿದಾಗ ಕಾರ್ಯಕ್ರಮಗಳು ಹೆಚ್ಚು ಒಣಭೂಮಿ ಪ್ರದೇಶದಲ್ಲಿ ಕಾರ್ಯಗತಗೊಂಡಿವೆ. ಹೆಚ್ಚು ಹಣವನ್ನು ಅಭಿವೃದ್ಧಿ ತಾಲೂಕಿನ ನೀರಾವರಿ ಪಂಚಾಯತಿಯಲ್ಲಿ ಮಾಡಿದ್ದಾರೆ. ಹಿಂದುಳಿದ ತಾಲೂಕಿನಲ್ಲಿ ಒಣಭೂಮಿ ಪಂಚಾಯತಿಯಲ್ಲಿ ಸಹ ಹೆಚ್ಚು

ಹಣ ಖರ್ಚು ಮಾಡಿವೆ. ಅಂದರೆ ಇಲ್ಲಿ ಎಲ್ಲಾ ಗ್ರಾಮಗಳ ಸಮಸ್ಯೆಗಳು ಒಂದಕ್ಕೊಂದು ಭಿನ್ನವಾಗಿವೆ. ಒಂದು ಗ್ರಾಮದಲ್ಲಿ ಸೌಲಭ್ಯಗಳು ಅಧಿಕವಿದ್ದರೂ ನಿರ್ವಹಣೆ ಸರಿಯಿರುವುದಿಲ್ಲ. ಬೇಡಿಕೆ ಇದ್ದರೆ ಕಾರ್ಯಕ್ರಮಗಳ ಸೌಲಭ್ಯಗಳು ಸರಿಯಿರುವುದಿಲ್ಲ. ಇಲ್ಲಿ ಒಣಭೂಮಿ ಪ್ರದೇಶಗಳಲ್ಲಿ ಹೆಚ್ಚು ಕಾರ್ಯಕ್ರಮಗಳನ್ನು ಕಾರ್ಯಗತಗೊಳಿಸಲಾಗಿದೆ. ಆದರೂ ಸಹ ಜನತೆಯ ಅಭಿಪ್ರಾಯದಲ್ಲಿ ಹೆಚ್ಚು ಅತೃಪ್ತಿ ವ್ಯಕ್ತವಾಗಿದೆ (ಕೋಷ್ಟಕ-14). ಪಂಚಾಯತಿ ಕೇಂದ್ರ ಸ್ಥಳಗಳಲ್ಲಿ ಹೆಚ್ಚು ಕಾರ್ಯಕ್ರಮಗಳು ಕಾರ್ಯಗತಗೊಂಡಿವೆ. ಪಂಚಾಯತಿ ವ್ಯಾಪ್ತಿಯ ಎಲ್ಲಾ ಗ್ರಾಮಗಳಲ್ಲಿ ಕಡಿಮೆ ನೈರ್ಮಲೀಕರಣ ಕಾರ್ಯಕ್ರಮಗಳು ಕಾರ್ಯಗತಗೊಂಡಿವೆ. ಹೀಗೆ ನಾಲ್ಕು ಗ್ರಾಮಪಂಚಾಯತಿಗಳಲ್ಲಿ ನೈರ್ಮಲೀಕರಣ ಕಾರ್ಯಕ್ರಮಗಳನ್ನು ಹೋಲಿಕೆ ಮಾಡಿದರೆ ಒಂದಕ್ಕೊಂದು ಭಿನ್ನವಾಗಿವೆ ಎಂದು ಹೇಳಬಹುದು.

**ಅಡಿ ಟಿಪ್ಪಣಿಗಳು**

1. ಮಲ್ಲಿಕಾರ್ಜುನ ಜಿ. ಎನ್., *ಬೋಧಿವೃಕ್ಷದ ಕೆಳಗೆ*, ಬೆಂಗಳೂರು:ಲಿಪಿ ಮುದ್ರಣ, 1998. ಪುಟ. 7
2. ಚಂದ್ರಶೇಖರ್ ಟಿ.ಆರ್., *ಮಹಿಳೆ: ಆರ್ಥಿಕತೆ ಮತ್ತು ಅಭಿವೃದ್ಧಿ*, ಹಂಪಿ : ಕನ್ನಡ ವಿಶ್ವವಿದ್ಯಾಲಯ, 2001, ಪುಟ. 160
3. ಅದೇ ಪುಟ. 160
4. ಕೃಷ್ಣ ಜೆ., ''ಮಾನವಮುಖಿ ಅಭಿವೃದ್ಧಿ ಪ್ರಾದೇಶಿಕ ಆಯಾಮಗಳ ಅಧ್ಯಯನ'', ಅಪ್ರಕಟಿತ ಪಿಎಚ್.ಡಿ ಸಂಶೋಧನಾ ಪ್ರಬಂಧ, ಹಂಪಿ : ಕನ್ನಡ ವಿಶ್ವವಿದ್ಯಾಲಯ, 2000, ಪುಟ.
5. ಯು.ಎನ್.ಡಿ.ಪಿ., *ಹ್ಯೂಮನ್ ಡೆವಲಪ್‌ಮೆಂಟ್ ರಿಪೋರ್ಟ-1995*, ಆಕ್ಸ್‌ಫರ್ಡ್: ಯೂನಿವರ್ಸಿಟಿ ಪ್ರೆಸ್, 1995
6. ಬಡ್ಡಿ ಎಂ.ಎಂ., *ಕರ್ನಾಟಕ ಪಂಚಾಯತರಾಜ್ ಕಾಯ್ದೆ -1993*, ಧಾರವಾಡ : ಅಕಳವಾಡಿ ಬುಕ್‌ಡಿಪೋ, ಪುಟ. 77
7. ಅದೇ, ಪುಟ.107
8. ಶ್ರೀಧರ ಎ., *ಕರ್ನಾಟಕದಲ್ಲಿ ಪಂಚಾಯತ್‌ರಾಜ್ ಕಾಯ್ದೆಗಳು*, ಹಂಪಿ : ಕನ್ನಡ ವಿಶ್ವವಿದ್ಯಾಲಯ, 2000, ಪುಟ. 36.
9. ಕರ್ನಾಟಕ ಸರ್ಕಾರ, *ಗ್ರಾಮೀಣ ಅಭಿವೃದ್ಧಿ ಯೋಜನೆಗಳು(ಕೈಪಿಡಿ)*, ಬೆಂಗಳೂರು : ಗ್ರಾಮೀಣ ಅಭಿವೃದ್ಧಿ ಮತ್ತು ಪಂಚಾಯತ್‌ರಾಜ್ ಇಲಾಖೆ, 1996, ಪುಟ.54-55
10. ಮುಖ್ಯ ಯೋಜನಾಧಿಕಾರಿಗಳು, ''ಗ್ರಾಮೀಣ ಕುಡಿಯುವ ನೀರಿನ ಯೋಜನೆಗಳು'', ಬಳ್ಳಾರಿ ಜಿಲ್ಲಾ ವಾರ್ತಪತ್ರ, ಬಳ್ಳಾರಿ: ಜಿಲ್ಲಾಪಂಚಾಯತ್ ಕಾರ್ಯಾಲಯ, ಆಗಸ್ಟ್ 2000
11. ಕರ್ನಾಟಕ ಸರ್ಕಾರ, *ಪೂರ್ವೋಕ್ತ*, ಪುಟ.58

12. ಕರ್ನಾಟಕ ಸರ್ಕಾರ, *ರಾಜೀವ್‌ಗಾಂಧಿ ರಾಷ್ಟ್ರೀಯ ಕುಡಿಯುವ ನೀರಿನ ನಿಯೋಗ*, ಬಳ್ಳಾರಿ : ಜಿಲ್ಲಾಪಂಚಾಯತ್, ಬಳ್ಳಾರಿ, 2000, ಪುಟ.5

13. ಅದೇ, ಪುಟ. 4

14. ಶಿವಣ್ಣ ಎನ್., "ರೋಲ್ ಆಫ್ ಪಂಚಾಯತ್ಸ್ ಇನ್ ಪಾವರ್ಟಿ ಆಲಿವೇಶನ್ ಪ್ರೋಗ್ರಾಮ್ಸ್: ಎ ಸ್ಟಡೀ ಇನ್ ದಿ ಸ್ಟೇಟ್ ಆಫ್ ಕರ್ನಾಟಕ", *ಜರ್ನಲ್ ಆಫ್ ರೂರಲ್ ಡೆವಲಪ್‌ಮೆಂಟ್*, ಸಂಚಿಕೆ 16, ಸಂಖ್ಯೆ 4, ಡಿಸೆಂಬರ್ 1997, ಪು.635

15. ಬಡ್ಡಿ ಎಂ. ಎಂ., *ಪೂರ್ವೋಕ್ತ*, ಪುಟ.118-126

16. ಕರ್ನಾಟಕ ಸರ್ಕಾರ, *ಪೂರ್ವೋಕ್ತ*, 1996, ಪುಟ.61

17. ಕರ್ನಾಟಕ ಸರ್ಕಾರ, *ಕರ್ನಾಟಕದಲ್ಲಿ ಮಾನವ ಅಭಿವೃದ್ಧಿ-1999*, ಬೆಂಗಳೂರು : ಯೋಜನಾ ಇಲಾಖೆ, 1999, ಪುಟ.155

18. ಕರ್ನಾಟಕ ಸರ್ಕಾರ, *ಪೂರ್ವೋಕ್ತ*, 1996, ಪುಟ.63

19. ಶ್ರೀನಿವಾಸಮೂರ್ತಿ, "ಸ್ವಚ್ಛ ಗ್ರಾಮ ಯೋಜನೆಯ ಸುತ್ತೋಲೆ", *ಕರ್ನಾಟಕ ವಿಕಾಸ*, ಸಂಪುಟ 41, ಸಂಚಿಕೆ 2-3. ಜನವರಿ-ಫೆಬ್ರವರಿ, 2001, ಪುಟ.17-21

20. ಪಂಚಾಯತಿ ಕಾರ್ಯದರ್ಶಿಗಳು, *ಶೌಚಾಲಯಗಳ ಪಟ್ಟಿ, ಪಂಚಾಯತಿ ದಾಖಲೆಗಳು*, ನಾಗೇನಹಳ್ಳಿ: ಗ್ರಾಮಪಂಚಾಯತಿ ಕಚೇರಿ, 2001

21. ಪಂಚಾಯತಿ ಕಾರ್ಯದರ್ಶಿಗಳು, *ಸ್ವಚ್ಛ ಗ್ರಾಮ ಯೋಜನೆಯ ಮಾಹಿತಿ*, ನಾಗೇನಹಳ್ಳಿ: ಗ್ರಾಮ ಪಂಚಾಯತಿ ಕಚೇರಿ, 2001

22. ಪಂಚಾಯತಿ ಕಾರ್ಯದರ್ಶಿಗಳು, *ಶೌಚಾಲಯಗಳ ಪಟ್ಟಿ, ಪಂಚಾಯತಿ ದಾಖಲೆಗಳು*, ಬೈಲುವದ್ದಿಗೆರೆ : ಗ್ರಾಮಪಂಚಾಯತಿ ಕಚೇರಿ, 2001

23. ಅಭಿವೃದ್ಧಿ ಅಧ್ಯಯನ ವಿಭಾಗ, *ನಿರ್ಮಲ ಕರ್ನಾಟಕ ಮೌಲ್ಯಮಾಪನ ವರದಿ*, ಹಂಪಿ : ಕನ್ನಡ ವಿಶ್ವವಿದ್ಯಾಲಯ, 1998

24. ಪಂಚಾಯತಿ ಕಾರ್ಯದರ್ಶಿಗಳು, *ಶೌಚಾಲಯಗಳ ಪಟ್ಟಿ, ಪಂಚಾಯತಿ ದಾಖಲೆಗಳು*, ಬೈಲುವದ್ದಿಗೆರೆ : ಗ್ರಾಮಪಂಚಾಯತಿ ಕಚೇರಿ, 2001

25. ಪಂಚಾಯತಿ ಕಾರ್ಯದರ್ಶಿಗಳು, *ಶೌಚಾಲಯಗಳ ಪಟ್ಟಿ, ಪಂಚಾಯತಿ ದಾಖಲೆಗಳು*, ಹಿರೇಹೆಗ್ಡಾಳ : ಗ್ರಾಮಪಂಚಾಯತಿ ಕಚೇರಿ, 2001

26. ಪಂಚಾಯತಿ ಕಾರ್ಯದರ್ಶಿಗಳು, *ಶೌಚಾಲಯಗಳ ಪಟ್ಟಿ, ಪಂಚಾಯತಿ ದಾಖಲೆಗಳು*, ಉಜ್ಜನಿ : ಗ್ರಾಮಪಂಚಾಯತಿ ಕಚೇರಿ, 2001

## ಕೋಷ್ಟಕ -7

## ಗ್ರಾಮಪಂಚಾಯತಿಯ ವ್ಯಾಪ್ತಿಯಲ್ಲಿ ಬರುವ ಗ್ರಾಮಗಳಲ್ಲಿ ಕುಡಿಯುವ ನೀರಿನ ಸೌಲಭ್ಯಗಳು, 2001

| ಕ್ರ. ಸಂ. | ವಿವರಗಳು | ಹೊಸಪೇಟೆ ತಾಲೂಕು | | | | | | | | | | ಕೂಡ್ಲಿಗಿ ತಾಲೂಕು | | | | | | |
|---|---|---|---|---|---|---|---|---|---|---|---|---|---|---|---|---|---|---|
| | | ನಾಗೇನಹಳ್ಳಿ (ನೀರಾವರಿ) | | | | | | ಬೈಲುವದ್ದಿಗೆರೆ (ಒಣಭೂಮಿ) | | | | ಹಿರೇ ಹೆಗ್ಡಾಳ್ ( ನೀರಾವರಿ) | | | | ಉಜ್ಜಿನಿ (ಒಣಭೂಮಿ) | | |
| | | ನಾಗೇನಹಳ್ಳಿ | ಬಸವನದುರ್ಗ | ಚಿನ್ನಾಪುರ | ಕಾಳಘಟ್ಟ | ಬೆಳಗೋಡು | ಕಲ್ಲಾಂಪುರ | ಬೈಲುವದ್ದಿಗೆರೆ | ಕಾಕುಬಾಳು | ಧರ್ಮಸಾಗರ | ಗುಂಡ್ಲವದ್ದಿಗೆರೆ | ಹಿರೇಹೆಗ್ಡಾಳ್ | ನಾಗಲಾಪುರ | ಬೊಮ್ಮಲಾಪುರ | ನಾಗೇಹಳ್ಳಿ | ಉಜ್ಜಿನಿ | ಚಿನ್ನಹಳ್ಳಿ | ಬೈರದೇವರಗುಡಿ |
| 01 | ಮಿನಿ ಟ್ಯಾಂಕ್‌ಗಳು | 04 (637) | 03 (457) | 02 (342) | 01 (216) | 01 (92) | 01 (177) | 06 (314) | 05 (429) | 04 (413) | 02 (308) | 04 (410) | 03 (404) | 02 (662) | 01 (237) | 10 (673) | 01 (590) | 01 (5610) |
| 02 | ಕೈಪಂಪುಗಳು | 08 (318) | 06 (228) | 04 (171) | 03 (72) | 01 (92) | 01 (177) | 04 (471) | 06 (357) | 04 (310) | 02 (308) | 03 (547) | 03 (404) | 02 (331) | 02 (237) | 08 (841) | 01 (590) | 01 (560) |
| 03 | ಸಾರ್ವಜನಿಕ ನಳಗಳು | 06 (425) | 05 (274) | 04 (171) | 02 (108) | ---- ----- | ---- ----- | 05 (376) | 06 (357) | 04 (310) | 03 (205) | 06 (273) | 05 (242) | 03 (220) | 02 (118) | 20 (336) | 04 (295) | 02 (280) |
| 04 | ವೈಯಕ್ತಿಕ ನಳಗಳು | 88 | 40 | --- | --- | --- | --- | 47 | 61 | 54 | 15 | 54 | 35 | ---- | ---- | 227 | ----- | ---- |
| 05 | ಬೋರ್‌ವೆಲ್‌ಗಳು | 01 | 01 | 01 | 01 | ---- | 01 | 02 | 02 | 01 | 01 | 01 | 01 | 01 | 01 | 01 | 01 | 01 |
| 06 | ಪ್ರತಿದಿನ ತಲಾ ಮಾನವನಿಗೆ ದೊರೆಯುವ ನೀರು(LPCD) | 35 | 62 | 55 | 116 | 90 | 55 | 52 | 19 | 32 | 54 | 42 | 41 | 40 | 44 | 22 | 25 | 35 |

ಸೂಚನೆ : ಎಲ್.ಪಿ.ಸಿ.ಡಿ.= (ಲೀಟರ್ ಪರ್ ಕ್ಯಾಪಿಟ ಕನ್‌ಸಂಶನ್ ಪರ್ ಡೇ), ಆವರಣದಲ್ಲಿರುವ ಸಂಖ್ಯೆಯು ಪ್ರತಿ ಮಿನಿಟ್ಯಾಂಕ್, ಕೈಪಂಪು ಮತ್ತು ಸಾರ್ವಜನಿಕ ನಳಗಳು ಎಷ್ಟು ಜನಸಂಖ್ಯೆಗೆ ಸೌಲಭ್ಯ ಒದಗಿಸುತ್ತಿದೆ ಎಂಬುದನ್ನು ಸೂಚಿಸುತ್ತದೆ.

ಮೂಲ : ಪಂಚಾಯತ್ ವಿಸ್ತರಣಾಧಿಕಾರಿಗಳು, *ಗ್ರಾಮವಾರು ನೀರಿನ ಸೌಲಭ್ಯಗಳ ವಿವರ, 2001* ಹೊಸಪೇಟೆ ಮತ್ತು ಕೂಡ್ಲಿಗಿ : ತಾಲ್ಲೂಕು ಪಂಚಾಯತ್ ಕಾರ್ಯಾಲಯಗಳು, 2001, ಪಂಚಾಯತಿ ಕಾರ್ಯದರ್ಶಿಗಳು, *ಪಂಚಾಯತ್ ಸಾಮಾನ್ಯ ಮಾಹಿತಿ ಪುಸ್ತಕ, ಪಂಚಾಯತಿ ದಾಖಲೆಗಳು,* ನಾಗೇನಹಳ್ಳಿ, ಬೈಲುವದ್ದಿಗೆರೆ, ಹಿರೇಹೆಗ್ಡಾಳ್ ಮತ್ತು ಉಜ್ಜಿನಿ : ಗ್ರಾಮಪಂಚಾಯತ್ ಕಚೇರಿಗಳು, 2001

## ಕೋಷ್ಟಕ -7.1

### ಗ್ರಾಮಪಂಚಾಯತಿಗೆ ಹೋಲಿಸಿ ಗ್ರಾಮಗಳಲ್ಲಿ ಕುಡಿಯುವ ನೀರಿನ ಸೌಲಭ್ಯವನ್ನು ರೇಖಾ ಚಿತ್ರದ ಮೂಲಕ ತಿಳಿಸಲಾಗಿದೆ, 2001

| ಪಂಚಾಯತಿ ಮತ್ತು ಗ್ರಾಮಗಳು | ನಾಗೇನಹಳ್ಳಿ | ಬಸವನದುರ್ಗ | ಬೆನಕಾಪುರ | ಕಾಳಘಟ್ಟ | ಬೆಳಗೋಡು | ಕಳ್ಳಿರಾಂಪುರ | ನಾಗೇನಹಳ್ಳಿ ಪಂಚಾಯತಿ | ಬೈಲುವದ್ದಿಗೆರೆ | ಕಾಕುಬಾಳು | ಧರ್ಮಸಾಗರ | ಗುಂಡ್ಲವದ್ದಿಗೆರೆ | ಬೈಲುವದ್ದಿಗೆರೆ ಪಂಚಾಯತಿ | ಹಿರೇಹೆಗ್ಡಾಳ್ | ಸಾಸಲವಾಡ | ಬೊಪ್ಪಲಾಪುರ | ಸಾಜೇಹಳ್ಳಿ | ಹಿರೇಹೆಗ್ಡಾಳ್ ಪಂಚಾಯತಿ | ಉಜ್ಜಿನಿ | ಬೆನಕನಹಳ್ಳಿ | ಬೈರದೇವರಗುಡ್ಡ | ಉಜ್ಜಿನಿ ಪಂಚಾಯತಿ |
|---|---|---|---|---|---|---|---|---|---|---|---|---|---|---|---|---|---|---|---|---|---|
| ಪ್ರತಿದಿನ ತಲಾ ಮಾನವನಿಗೆ ದೊರೆಯುವ ನೀರು | 35 | 62 | 55 | 116 | 90 | 55 | 51 | 52 | 19 | 32 | 54 | 37 | 42 | 41 | 40 | 44 | 42 | 22 | 25 | 35 | 24 |




ಮೂಲ : ಪಂಚಾಯತ್ ವಿಸ್ತರಣಾಧಿಕಾರಿಗಳು, *ಗ್ರಾಮವಾರು ನೀರಿನ ಸೌಲಭ್ಯಗಳ ವಿವರ, 2001* ಹೊಸಪೇಟೆ ಮತ್ತು ಕೂಡ್ಲಿಗಿ : ತಾಲ್ಲೂಕು ಪಂಚಾಯತ್ ಕಾರ್ಯಾಲಯಗಳು, 2001, ಪಂಚಾಯತಿ ಕಾರ್ಯದರ್ಶಿಗಳು, *ಪಂಚಾಯತ್ ಸಾಮಾನ್ಯ ಮಾಹಿತಿ ಪುಸ್ತಕ, ಪಂಚಾಯತಿ ದಾಖಲೆಗಳು,* ನಾಗೇನಹಳ್ಳಿ, ಬೈಲುವದ್ದಿಗೆರೆ, ಹಿರೇಹೆಗ್ಡಾಳ್ ಮತ್ತು ಉಜ್ಜಿನಿ : ಗ್ರಾಮಪಂಚಾಯತ್ ಕಚೇರಿಗಳು, 2001

## ಕೋಷ್ಟಕ-8

## ಗ್ರಾಮಪಂಚಾಯತಿವಾರು ಕುಡಿಯುವ ನೀರಿನ ಸೌಲಭ್ಯಗಳು 2001

| ಕ್ರ. ಸಂ. | ವಿವರಗಳು | ಹೊಸಪೇಟೆ ತಾಲೂಕು | | ಕೂಡ್ಲಿಗಿ ತಾಲೂಕು | |
|---|---|---|---|---|---|
| | | ನಾಗೇನಹಳ್ಳಿ (ನೀರಾವರಿ) | ಬೈಲುಗದ್ದಿಗೆರೆ (ಒಣಭೂಮಿ) | ಹಿರೇಹೆಗ್ಡಾಳ್ (ನೀರಾವರಿ) | ಉಜ್ಜಿನಿ (ಒಣಭೂಮಿ) |
| 01. | ಮಿನಿಟ್ಯಾಂಕ್‌ಗಳು | 12 (424) | 16 (367) | 10 (375) | 12 (705) |
| 02. | ಸಾರ್ವಜನಿಕ ನಳಗಳು | 17 (300) | 18 (326) | 16 (234) | 26 (325) |
| 03. | ಕೈಪಂಪ್‌ಗಳು | 23 (221) | 18 (326) | 09 (417) | 11 (770) |
| 04. | ಪ್ರತಿದಿನ ತಲಾ ಮಾನವನಿಗೆ ದೊರೆಯುವ ನೀರು (ಎಲ್.ಪಿ.ಸಿ.ಡಿ.) | 50.08 | 37.01 | 42.12 | 23.8 |

ಸೂಚನೆ : ಎಲ್.ಪಿ.ಸಿ.ಡಿ.= (ಲೀಟರ್ ಪರ್ ಕ್ಯಾಪಿಟ ಕನ್‌ಸಂಶನ್ ಪರ್ ಡೇ), ಆವರಣದಲ್ಲಿರುವ ಸಂಖ್ಯೆಯು ಪ್ರತಿ ಮಿನಿಟ್ಯಾಂಕ್, ಕೈಪಂಪು ಮತ್ತು ಸಾರ್ವಜನಿಕ ನಳಗಳು ಎಷ್ಟು ಜನಸಂಖ್ಯೆಗೆ ಸೌಲಭ್ಯ ಒದಗಿಸುತ್ತಿದೆ ಎಂಬುದನ್ನು ಸೂಚಿಸುತ್ತದೆ.

ಮೂಲ : ಪಂಚಾಯತ್ ವಿಸ್ತರಣಾಧಿಕಾರಿಗಳು, *ಗ್ರಾಮವಾರು ನೀರಿನ ಸೌಲಭ್ಯಗಳ ವಿವರ, 2001* ಹೊಸಪೇಟೆ ಮತ್ತು ಕೂಡ್ಲಿಗಿ : ತಾಲ್ಲೂಕು ಪಂಚಾಯತ್ ಕಾರ್ಯಾಲಯಗಳು, 2001, ಪಂಚಾಯತಿ ಕಾರ್ಯದರ್ಶಿಗಳು, *ಪಂಚಾಯತ್ ಸಾಮಾನ್ಯ ಮಾಹಿತಿ ಪುಸ್ತಕ, ಪಂಚಾಯತಿ ದಾಖಲೆಗಳು,* ನಾಗೇನಹಳ್ಳಿ, ಬೈಲುವದ್ದಿಗೆರೆ, ಹಿರೇಹೆಗ್ಡಾಳ್ ಮತ್ತು ಉಜ್ಜಿನಿ : ಗ್ರಾಮಪಂಚಾಯತ್ ಕಚೇರಿಗಳು, 2001

## ಕೋಷ್ಟಕ-8.1

### ರಾಜ್ಯ, ಜಿಲ್ಲಾ ಮತ್ತು ತಾಲೂಕಿಗೆ ಹೋಲಿಸಿ ಗ್ರಾಮಪಂಚಾಯತಿಗಳಲ್ಲಿ ಕುಡಿಯುವ ನೀರಿನ ಸೌಲಭ್ಯ, 2001

| ಕ್ರ. ಸಂ. | ಗ್ರಾಮಪಂಚಾಯತಿ ತಾಲೂಕು ಮತ್ತು ಜಿಲ್ಲೆ | ಗ್ರಾ.ಪಂ. | ಗ್ರಾ.ಪಂ. | ತಾಲೂಕು | ಗ್ರಾ.ಪಂ. | ಗ್ರಾ.ಪಂ. | ತಾಲೂಕು | ಜಿಲ್ಲೆ | ರಾಜ್ಯ |
|---|---|---|---|---|---|---|---|---|---|
| | | ನಾಗೇನಹಳ್ಳಿ (ನೀರಾವರಿ) | ಬೈಲುವದ್ದಿಗೆರೆ (ಒಣಭೂಮಿ) | ಹೊಸಪೇಟೆ (ನೀರಾವರಿ) | ಹಿರೇಹೆಗ್ಡಾಳ್ (ನೀರಾವರಿ) | ಉಜ್ಜಿನಿ (ಒಣಭೂಮಿ) | ಕೂಡ್ಲಿಗಿ (ಒಣಭೂಮಿ) | ಬಳ್ಳಾರಿ | ಕರ್ನಾಟಕ |
| 1. | ಪ್ರತಿದಿನ ತಲಾ ಮಾನವನಿಗೆ ದೊರೆಯುವ ನೀರು (ಲೀಟರ್‌ಗಳಲ್ಲಿ)(LPCD) | 50.8 | 37.0 | 51 | 42.12 | 23.8 | 35 | 45 | 56 |




ಸೂಚನೆ : ಎಲ್.ಪಿ.ಸಿ.ಡಿ.= (ಲೀಟರ್ ಪರ್ ಕ್ಯಾಪಿಟ ಕನ್‌ಸಂಶನ್ ಪರ್ ಡೇ),

ಮೂಲ : ಪಂಚಾಯತ್ ವಿಸ್ತರಣಾಧಿಕಾರಿಗಳು, *ಗ್ರಾಮವಾರು ನೀರಿನ ಸೌಲಭ್ಯಗಳ ವಿವರ, 2001* ಹೊಸಪೇಟೆ ಮತ್ತು ಕೂಡ್ಲಿಗಿ : ತಾಲ್ಲೂಕು ಪಂಚಾಯತ್ ಕಾರ್ಯಾಲಯಗಳು, 2001, ಪಂಚಾಯತಿ ಕಾರ್ಯದರ್ಶಿಗಳು, *ಪಂಚಾಯತ್ ಸಾಮಾನ್ಯ ಮಾಹಿತಿ ಪುಸ್ತಕ, ಪಂಚಾಯತಿ ದಾಖಲೆಗಳು*, ನಾಗೇನಹಳ್ಳಿ, ಬೈಲುವದ್ದಿಗೆರೆ, ಹಿರೇಹೆಗ್ಡಾಳ್ ಮತ್ತು ಉಜ್ಜಿನಿ : ಗ್ರಾಮಪಂಚಾಯತ್ ಕಚೇರಿಗಳು, 2001

## ಕೋಷ್ಟಕ-9

### ಗ್ರಾಮಪಂಚಾಯತಿಗಳು ಗ್ರಾಮೀಣ ಕುಡಿಯುವ ನೀರು ಪೂರೈಕೆ ಮತ್ತು ನಿರ್ವಹಣೆಗೆ ಮಾಡಿರುವ ವೆಚ್ಚದ ವಿವರ 1995-2000

| ಕ್ರ. ಸಂ. | ವರ್ಷ | ನಾಗೇನಹಳ್ಳಿ | | ಬೈಲುವದ್ದಿಗೆರೆ | | ಹಿರೇಹೆಗ್ಡಾಳ್ | | ಉಜ್ಜನಿ | |
|---|---|---|---|---|---|---|---|---|---|
| | | ಕುಡಿಯುವ ನೀರಿನ ವೆಚ್ಚ | ಒಟ್ಟು ವೆಚ್ಚ | ಕುಡಿಯುವ ನೀರಿನ ವೆಚ್ಚ | ಒಟ್ಟುವೆಚ್ಚ | ಕುಡಿಯುವ ನೀರಿನ ವೆಚ್ಚ | ಒಟ್ಟುವೆಚ್ಚ | ಕುಡಿಯುವ ನೀರಿನ ವೆಚ್ಚ | ಒಟ್ಟುವೆಚ್ಚ |
| 1. | 1995-96 | 16,448-00 (11.33) | 1,45,161-00 | 33,550-00 (26.96) | 1,24,463-00 | 12,311-00 (11.76) | 1,04,597-00 | 11,355-00 (9.50) | 1,19,525-00 |
| 2. | 1996-97 | 12,968 (9.57) | 1,35,465-00 | 4320-00 (3.97) | 1,08,796-00 | 71208-00 (33.53) | 2,12,346-00 | 7,852-00 (6.19) | 1,26,850-00 |
| 3. | 1997-98 | 25,000-00 (12.75) | 1,96,007-00 | 10,216-00 (8.87) | 1,14,956-00 | 4125-00 (2.97) | 1,38,959-00 | 14,152-00 (7.26) | 1,94,922=00 |
| 4. | 1998-99 | 3,400-00 (3.44) | 98,772-00 | 9,850-00 (16.75) | 58,813=00 | 14,180-00 (10.92) | 1,29,806-00 | 11,267-00 (9.21) | 1,22,284-00 |
| 5. | 1999-2000 | 8,590-00 (6.67) | 1,28,831-00 | 15,750-00 (7.01) | 2,24,555-00 | 18,870-00 (12.24) | 1,54,229=00 | 10,150-00 (4.84) | 2,09,598-00 |
| 6. | ಒಟ್ಟು ಐದು ವರ್ಷಗಳಲ್ಲಿ | 66,406 (9.42) | 7,04,236 | 73,686 (11.66) | 6,31,583-00 | 1,20,694-00 (16.31) | 7,39,937-00 | 54776-00 | 7,73,179-00 |

ಸೂಚನೆ : ಆವರಣದಲ್ಲಿರುವುದು ವಾರ್ಷಿಕ ವೆಚ್ಚದಲ್ಲಿನ ಕುಡಿಯುವ ನೀರಿಗೆ ಮಾಡಿರುವ ವೆಚ್ಚವನ್ನು ಶೇಕಡವಾರು ಪ್ರಮಾಣದಲ್ಲಿ ತಿಳಿಸುತ್ತದೆ. ಪ್ರತಿವರ್ಷದ ವರ್ಗ Iರ ಅನುದಾನವನ್ನು ಪರಿಗಣಿಸಲಾಗಿದೆ.

ಮೂಲ : ಪಂಚಾಯತ್ ಕಾರ್ಯದರ್ಶಿಗಳು, *1995- 2000ನೇ ಸಾಲಿನ ಲೆಕ್ಕಪರಿಶೋಧನಾ ವರದಿಗಳು,* ನಾಗೇನಹಳ್ಳಿ, ಬೈಲುವದ್ದಿಗೆರೆ, ಹಿರೇಹೆಗ್ಡಾಳ್ ಮತ್ತು ಉಜ್ಜಿನಿ : ಗ್ರಾಮಪಂಚಾಯತಿ ಕಚೇರಿಗಳು, 2001

## ಕೋಷ್ಟಕ-10

### ಗ್ರಾಮಪಂಚಾಯತಿಗಳ ಕುಡಿಯುವ ನೀರು ಪೂರೈಕೆಯ ಬಗ್ಗೆ ಜಾತಿವಾರು ಗ್ರಾಮೀಣ ಜನತೆಯ ಅಭಿಪ್ರಾಯ

| ಕ್ರ. ಸಂ. | ಜಾತಿ/ವರ್ಗವಾರು | ನಾಗೇನಪಳ್ಳಿ(ನೀರಾವರಿ) | | | | ಬೈಲುವದ್ದಿಗೆರೆ(ಒಣಭೂಮಿ) | | | | ಹಿರೇಹೆಗ್ಡಾಳ್(ನೀರಾವರಿ) | | | | ಉಜ್ಜಿನಿ(ಒಣಭೂಮಿ) | | | |
|---|---|---|---|---|---|---|---|---|---|---|---|---|---|---|---|---|---|
| | | ತೃಪ್ತಿಕರ | ಸರಿಇಲ್ಲ | ಗೊತ್ತಿಲ್ಲ | ಒಟ್ಟು | ತೃಪ್ತಿಕರ | ಸರಿಇಲ್ಲ | ಗೊತ್ತಿಲ್ಲ | ಒಟ್ಟು | ತೃಪ್ತಿಕರ | ಸರಿಇಲ್ಲ | ಗೊತ್ತಿಲ್ಲ | ಒಟ್ಟು | ತೃಪ್ತಿಕರ | ಸರಿಇಲ್ಲ | ಗೊತ್ತಿಲ್ಲ | ಒಟ್ಟು |
| 1. | ಪರಿಶಿಷ್ಟ ಜಾತಿ | 06 (20.00) | 23 (73.33) | 01 (3.34) | 30 (100.00) | 05 (17.24) | 21 (72.41) | 03 (10.35) | 29 (100.00) | 15 (78.94) | 04 (21.05) | 01 (5.26) | 20 (100.00) | 02 (9.09) | 16 (72.73) | 04 (18.83) | 22 (100.00) |
| 2. | ಪರಿಶಿಷ್ಟ ಪಂಗಡ | 04 (25.00) | 12 (75.00) | - - | 16 (100.00) | 05 (31.25) | 10 (62.50) | 01 (6.25) | 16 (100.00) | 04 (66.66) | 02 (33.34) | - - | 06 (100-00) | 01 (16.67) | 04 (66.66) | 01 (16.17) | 06 (100.00) |
| 3. | ಹಿಂದುಳಿದವರ್ಗ | 14 (36.84) | 22 (57.89) | 02 (5.26) | 38 (100.00) | 06 (18.18) | 25 (75.76) | 02 (6.06) | 33 (100.00) | 09 (69.23) | 03 (23.07) | 01 (7.69) | 13 (100.00) | 10 (12.5) | 68 (85.00) | 02 (2.50) | 80 (100.00) |
| 4. | ಇತರೇ ವರ್ಗ | 06 (37.5) | 10 (62.5) | - - | 16 (100.00) | 14 (25.92) | 38 (70.37) | 02 (3.70) | 54 (100.00) | 38 (86.36) | 04 (9.09) | 01 (2.27) | 43 (100.00) | 10 (17.24) | 45 (77.59) | 03 (5.17) | 58 (100.00) |
| | ಒಟ್ಟು | 30 (30.00) | 67 (69.00) | 03 (03.00) | 100 (100.00) | 30 (22.72) | 94 (71.21) | 08 (6.06) | 132 (100.00) | 66 (80.49) | 13 (15.85) | 03 (3.66) | 82 (100.00) | 23 (13.85) | 133 (80.12) | 10 (6.02) | 166 (100.00) |













ಸೂಚನೆ : ಆವರಣದಲ್ಲಿರುವುದು ಕುಟುಂಬಗಳ ಅಭಿಪ್ರಾಯವನ್ನು ಶೇಕಡವಾರು ಪ್ರಮಾಣದಲ್ಲಿ ತಿಳಿಸಲಾಗಿದೆ.

ಮೂಲ : ಪ್ರಾಥಮಿಕ ಮಾಹಿತಿ

# ಕೋಷ್ಟಕ-11

## ಗ್ರಾಮಪಂಚಾಯತಿಯ ವ್ಯಾಪ್ತಿಯಲ್ಲಿ ಬರುವ ಗ್ರಾಮಗಳಲ್ಲಿನ ಶೌಚಾಲಯಗಳ ಸೌಲಭ್ಯಗಳು, 2001

| ಕ್ರ. ಸಂ. | ವಿವರಗಳು | ಹೊಸಪೇಟೆ ತಾಲ್ಲೂಕು | | | | | | | | | | ಕೂಡ್ಲಿಗಿ ತಾಲ್ಲೂಕು | | | | | | |
|---|---|---|---|---|---|---|---|---|---|---|---|---|---|---|---|---|---|---|
| | | ನಾಗೇನಹಳ್ಳಿ (ನೀರಾವರಿ) | | | | | | ಬೈಲುವದ್ದಿಗೆರೆ (ಒಣಭೂಮಿ) | | | | ಹಿರೇ ಹೆಗ್ಡಾಳ್(ನೀರಾವರಿ) | | | | ಉಜ್ಜಿನಿ (ಒಣಭೂಮಿ) | | |
| | | ನಾಗೇನಹಳ್ಳಿ | ಬಸವನದುರ್ಗ | ಬೆನಕಾಪುರ | ಕಾಳಘಟ್ಟ | ಬೆಳಗೋಡು | ಕಳ್ಳಿರಾಂಪುರ | ಬೈಲುವದ್ದಿಗೆರೆ | ಕಾಕುಬಾಳು | ಧರ್ಮಸಾಗರ | ಗುಂಡ್ಲವದ್ದಿಗೆರೆ | ಹಿರೇಹೆಗ್ಡಾಳ್ | ಮಾಕನಡಕು | ಬೊಮ್ಮಲಾಪುರ | ಮಾಜೇಹಳ್ಳಿ | ಉಜ್ಜಿನಿ | ಬೆನಕನಹಳ್ಳಿ | ಬೈರದೇವರಗುಡಿ |
| 01 | ಪ.ಜಾ. ಸಮುದಾಯ ಶೌಚಾಲಯಗಳು | 01 | 01 | --- | --- | --- | --- | 01 | 01 | 01 | 01 | 01 | 01 | 01 | --- | 01 | --- | --- |
| 02 | ಇತರೆ ವರ್ಗದ ಸಮುದಾಯ ಶೌಚಾಲಯಗಳು | 02 | 01 | 01 | --- | --- | --- | 03 | 02 | 01 | 01 | 01 | 01 | 01 | 01 | 03 | 01 | --- |
| 03 | ಒಟ್ಟು ಸಮುದಾಯ ಶೌಚಾಲಯಗಳು | 03 | 02 | 01 | --- | --- | ---- | 04 | 03 | 02 | 02 | 02 | 02 | 02 | 01 | 04 | 01 | --- |
| 04 | ಪರಿಶಿಷ್ಟ ನಿರ್ಮಲ ಕರ್ನಾಟಕಶೌಚಾಲಯಗಳು | 18 | 12 | --- | --- | --- | ---- | 40 | 80 | 35 | 10 | 04 | ----- | ----- | ----- | 70 | 05 | 05 |
| 05 | ಇತರೆ ವರ್ಗದ ನಿರ್ಮಲ ಕರ್ನಾಟಕ ಶೌಚಾಲಯಗಳು | 27 | 12 | 12 | 05 | ---- | ---- | 60 | 90 | 65 | 21 | 06 | ---- | ---- | ---- | 125 | 08 | 04 |
| 06 | ಪರಿಶಿಷ್ಟರ ವೈಯಕ್ತಿಕ ಶೌಚಲಯಗಳು | 05 | ---- | --- | --- | ---- | ---- | ---- | --- | ---- | ---- | 02 | ----- | ---- | ---- | 15 | ----- | ----- |
| 07 | ಇತರೆ ವರ್ಗದ ವೈಯಕ್ತಿಕ ಶೌಚಾಲಯಗಳು | 35 | 08 | --- | --- | --- | --- | 10 | 09 | 12 | 03 | 10 | 11 | ---- | ---- | 75 | ----- | ---- |
| 08 | ಒಟ್ಟು ಶೌಚಾಲಯಗಳು | 85 (16.47) | 32 (10.28) | 12 (12.50) | 05 (16.66) | --- --- | --- --- | 110 (27.50) | 179 (43.02) | 112 (33.83) | 34 (28.33) | 22 (5.64) | 11 (4.80) | --- ----- | --- ----- | 285 (22.57) | 13 (4.85) | 09 (6.92) |

ಸೂಚನೆ : ಪರಿಶಿಷ್ಟರು = ಒಟ್ಟು ಪರಿಶಿಷ್ಟಜಾತಿ ಮತ್ತು ಪರಿಶಿಷ್ಟ ಪಂಗಡ ಕುಟುಂಬಗಳನ್ನು ಸೂಚಿಸುತ್ತದೆ. ಆವರಣದಲ್ಲಿರುವುದು, ಗ್ರಾಮವಾರು ಕುಟುಂಬಗಳು ಹೊಂದಿರುವ ಶೌಚಾಲಯದ ಶೇಕಡವಾರು ಪ್ರಮಾಣವನ್ನು ಸೂಚಿಸುತ್ತದೆ.

ಮೂಲ : ಪಂಚಾಯತ್ ಕಾರ್ಯದರ್ಶಿಗಳು, *ಪಂಚಾಯತ್ ದಾಖಲೆಗಳು*, ನಾಗೇನಹಳ್ಳಿ, ಬೈಲುವದ್ದಿಗೆರೆ, ಹಿರೇಹೆಗ್ಡಾಳ್ ಮತ್ತು ಉಜ್ಜಿನಿ : ಗ್ರಾಮಪಂಚಾಯತ್ ಕಚೇರಿಗಳು, 2001

**ಕೋಷ್ಟಕ-11.1**

## ಗ್ರಾಮಪಂಚಾಯತಿಗೆ ಹೋಲಿಸಿ ಗ್ರಾಮಗಳಲ್ಲಿ ಶೌಚಾಲಯಗಳ ಸಂಖ್ಯೆಯನ್ನು ರೇಖಾಚಿತ್ರದ ಮೂಲಕ ತಿಳಿಸಲಾಗಿದೆ 2001

| ವಿವರಗಳು | ನಾಗೇನಹಳ್ಳಿ | ಬಸವನದುರ್ಗ | ಬೆನಕಾಪುರ | ಕಾಳಘಟ್ಟ | ಬೆಳಗೊಡು | ಕಲ್ಪಿರಾಂಪುರ | ನಾಗೇನಹಳ್ಳಿ ಪಂಚಾಯತಿ | ಬೈಲುವದ್ದಿಗೆರೆ | ಕಾಕಬಾಳು | ಧರ್ಮಸಾಗರ | ಗುಂಡ್ಲವದ್ದಿಗೆರೆ | ಬೈಲುವದ್ದಿಗೆರೆ ಪಂಚಾಯತಿ | ಹಿರೇಹೆಗ್ಡಾಳ್ | ಸಾಸಲವಾಡ | ಬೊಪ್ಪಲಪುರ | ಸಾಣೇಹಳ್ಳಿ | ಹಿರೇಹೆಗ್ಡಾಳ್ ಪಂಚಾಯತಿ | ಉಜ್ಜಿನಿ | ಬೆನಕನಹಳ್ಳಿ | ಬೈರದೇವರಗುಡ್ಡ | ಉಜ್ಜಿನಿ ಪಂಚಾಯತಿ |
|---|---|---|---|---|---|---|---|---|---|---|---|---|---|---|---|---|---|---|---|---|---|
| ಒಟ್ಟು ಶೌಚಾಲಯಗಳು | 85 | 32 | 12 | 05 | 00 | 00 | 134 | 110 | 179 | 112 | 34 | 435 | 22 | 11 | 00 | 00 | 33 | 285 | 13 | 09 | 307 |

ಶೌಚಾಲಯಗಳ ಸಂಖ್ಯೆ

500
400
300
200
100
0

85 32 12 05 0 0 134 110 179 112 34 435 22 11 0 0 33 285 13 9 307

1 ನಾಗೇನಹಳ್ಳಿ
2 ಬಸವನದುರ್ಗ
3 ಬೆನಕಾಪುರ
4 ಕಾಳಘಟ್ಟ
5 ಬೆಳಗೊಡು
6 ಕಲ್ಪಿರಾಂಪುರ
7 ನಾಗೇನಹಳ್ಳಿ ಪಂಚಾಯತಿ
8 ಬೈಲುವದ್ದಿಗೆರೆ
9 ಕಾಕಬಾಳು
10 ಧರ್ಮಸಾಗರ
11 ಗುಂಡ್ಲವದ್ದಿಗೆರೆ
12 ಬೈಲುವದ್ದಿಗೆರೆ ಪಂಚಾಯತಿ
13 ಹಿರೇಹೆಗ್ಡಾಳ್
14 ಸಾಸಲವಾಡ
15 ಬೊಪ್ಪಲಪುರ
16 ಸಾಣೇಹಳ್ಳಿ
17 ಹಿರೇಹೆಗ್ಡಾಳ್ ಪಂಚಾಯತಿ
18 ಉಜ್ಜಿನಿ
19 ಬೆನಕನಹಳ್ಳಿ
20 ಬೈರದೇವರಗುಡ್ಡ
21 ಉಜ್ಜಿನಿ ಪಂಚಾಯತಿ

ಗ್ರಾಮಗಳು
ಗ್ರಾಮಪಂಚಾಯತಿ

**ಪಂಚಾಯತಿ ಮತ್ತು ಗ್ರಾಮಗಳು**

ಮೂಲ : ಪಂಚಾಯತ್ ಕಾರ್ಯದರ್ಶಿಗಳು, *ಪಂಚಾಯತ್ ದಾಖಲೆಗಳು,* ನಾಗೇನಹಳ್ಳಿ, ಬೈಲುವದ್ದಿಗೆರೆ, ಹಿರೇಹೆಗ್ಡಾಳ್ ಮತ್ತು ಉಜ್ಜಿನಿ : ಗ್ರಾಮಪಂಚಾಯತ್ ಕಚೇರಿಗಳು, 2001

## ಕೋಷ್ಟಕ -12

## ಗ್ರಾಮಪಂಚಾಯತಿಗಳ ಜಾತಿವಾರು ಶೌಚಾಲಯಗಳ ವಿವರ 2001

| ಕ್ರ. ಸಂ. | ವಿವರಗಳು | ನಾಗೇನಹಳ್ಳಿ(ನೀರಾವರಿ) | | | ಬೈಲುವದ್ದಿಗೆರೆ (ಒಣಭೂಮಿ) | | | ಹಿರೇಹೆಗ್ಗಾಳ್(ನೀರಾವರಿ) | | | ಉಜ್ಜಿನಿ(ಒಣಭೂಮಿ) | | |
|---|---|---|---|---|---|---|---|---|---|---|---|---|---|
| | | ಪರಿಶಿಷ್ಟರು | ಇತರೆ | ಒಟ್ಟು | ಪರಿಶಿಷ್ಟರು | ಇತರೆ | ಒಟ್ಟು | ಪರಿಶಿಷ್ಟರು | ಇತರೆ | ಒಟ್ಟು | ಪರಿಶಿಷ್ಟರು | ಇತರೆ | ಒಟ್ಟು |
| 1. | ಒಟ್ಟು ಸಮುದಾಯ ಮಹಿಳಾ ಶೌಚಾಲಯಗಳು | 02 (395) | 04 (427) | 06 (416) | 04 (153) | 07 (317) | 11 (257) | 03 (159) | 04 (375) | 07 (282) | 01 (607) | 04 (887) | 05 (831) |
| 2. | ನಿರ್ಮಲ ಕರ್ನಾಟಕ ಯೋಜನೆಯಡಿಯಲ್ಲಿ ನಿರ್ಮಿಸಿದ ಶೌಚಾಲಯಗಳು | 30 (34.88) | 56 (65.12) | 86 (100) | 165 (41.15) | 236 (58.85) | 401 (100) | 04 (40.00) | 06 (60.00) | 10 (100) | 80 (36.86) | 137 (63.13) | 217 (100) |
| 3. | ವೈಯಕ್ತಿಕ ಶೌಚಾಲಯಗಳು | 05 (10.41) | 43 (89.58) | 48 (100) | ---- ----- | 34 (100) | 34 (100) | 02 (9.52) | 21 ----- | 23 (100) | 15 (16.66) | 75 (83.34) | 90 (100) |
| 4. | ಒಟ್ಟು ಶೌಚಾಲಯಗಳು | 35 (26.12) | 99 (73.88) | 134 (100) | 165 (37.93) | 270 (62.07) | 435 (100) | 06 (18.18) | 27 (81.82) | 33 (100) | 95 (30.94) | 212 (69.06) | 307 (100) |













ಸೂಚನೆ : ಕ್ರಮಸಂಖ್ಯೆ 1ರಲ್ಲಿ ಆವರಣದಲ್ಲಿರುವ ಸಂಖ್ಯೆಯು ಪ್ರತಿ ಶೌಚಾಲಯವು ಎಷ್ಟು ಮಹಿಳೆಯರಿಗೆ ಸೌಲಭ್ಯ ಒದಗಿಸುತ್ತದೆ ಎಂಬುದನ್ನು ಸೂಚಿಸುತ್ತದೆ. ಕ್ರಮ ಸಂಖ್ಯೆ 2ರ ಆವರಣದಲ್ಲಿರುವ ಸಂಖ್ಯೆಯು ಶೇಕಡವಾರು ಶೌಚಾಲಯ ವಿತರಣೆಯನ್ನು ತಿಳಿಸುತ್ತದೆ. ಮತ್ತು ಕ್ರಮಸಂಖ್ಯೆ 3ರ ಆವರಣದಲ್ಲಿರುವ ಸಂಖ್ಯೆಯು ಶೌಚಾಲಯ ಹೊಂದಿರುವ ಕುಟುಂಬಗಳ ಶೇಕಡವಾರು ಪ್ರಮಾಣವನ್ನು ತಿಳಿಸುತ್ತದೆ.

ಮೂಲ : ಪಂಚಾಯತ್ ಕಾರ್ಯದರ್ಶಿಗಳು, *ಪಂಚಾಯತಿ ಸಾಮಾನ್ಯ ಮಾಹಿತಿ ಪುಸ್ತಕ, ಪಂಚಾಯತಿ ದಾಖಲೆಗಳು* ನಾಗೇನಹಳ್ಳಿ, ಬೈಲುವದ್ದಿಗೆರೆ, ಹಿರೇಹೆಗ್ಗಾಳ್ ಮತ್ತು ಉಜ್ಜಿನಿ: ಗ್ರಾಮಪಂಚಾಯತ್ ಕಚೇರಿಗಳು, 2001

## ಕೋಷ್ಟಕ -13

## ಗ್ರಾಮಪಂಚಾಯತಿಗಳು ಗ್ರಾಮೀಣ ನೈರ್ಮಲ್ಯಕ್ಕಾಗಿ ಮಾಡಿರುವ ವೆಚ್ಚದ ವಿವರ 1995-2000

| ಕ್ರ. ಸಂ. | ವರ್ಷ | ನಾಗೇನಹಳ್ಳಿ | | ಬೈಲುವದ್ದಿಗೆರೆ | | ಹಿರೇಹೆಗ್ಡಾಳ್ | | ಉಜ್ಜಿನಿ | |
|---|---|---|---|---|---|---|---|---|---|
| | | ನೈರ್ಮಲ್ಯದ ವೆಚ್ಚ | ಒಟ್ಟು ವೆಚ್ಚ | ನೈರ್ಮಲ್ಯದ ವೆಚ್ಚ | ಒಟ್ಟುವೆಚ್ಚ | ನೈರ್ಮಲ್ಯದ ವೆಚ್ಚ | ಒಟ್ಟುವೆಚ್ಚ | ನೈರ್ಮಲ್ಯದ ವೆಚ್ಚ | ಒಟ್ಟುವೆಚ್ಚ |
| 1. | 1995-96 | 24,464-00 (16.85) | 1,45,161-00 | 18,770-00 (22.31) | 1,24,463-00 | 6,985-00 (6.69) | 1,04,597-00 | 14,256-00 (7.28) | 1,95,625-00 |
| 2. | 1996-97 | 32,021-00 (23.64) | 1,35,465-00 | 16,700-00 (19.86) | 1,08,796-00 | 8,580-00 (4.04) | 2,12,346-00 | 12,750-00 (10.05) | 1,26,850-00 |
| 3. | 1997-98 | 24,840-00 (12.67) | 1,96,007-00 | 19,525-00 (23.22) | 1,14,956-00 | 3,240-00 (2.33) | 1,38,959-00 | 40,519-00 (20.78) | 1,94,922-00 |
| 4. | 1998-99 | 8,500-00 (8.60) | 98,772-00 | 15,650-00 (18.60) | 58,813-00 | 7,600-00 (5.85) | 1,29,806-00 | 5,650-00 (4.62) | 1,22,284-00 |
| 5. | 1999-2000 | 12,450-00 (9.66) | 1,28,831-00 | 13,450-00 (15.99) | 2,24,555-00 | 15,000-00 (9.72) | 1,54,229-00 | 20,535-00 (9.80) | 2,09,598-00 |
| | ಒಟ್ಟು | 1,02,275-00 (14.52) | 7,04,236-00 | 84,095-00 (13.31) | 6,31,583-00 | 41,405-00 (5.60) | 7,39,937-00 | 93,710-00 (11.03) | 8,49,279-00 |

ಸೂಚನೆ : ಆವರಣದಲ್ಲಿರುವುದು ವಾರ್ಷಿಕ ವೆಚ್ಚದಲ್ಲಿನ ಕುಡಿಯುವ ನೀರಿಗೆ ಮಾಡಿರುವ ವೆಚ್ಚವನ್ನು ಶೇಕಡವಾರು ಪ್ರಮಾಣದಲ್ಲಿ ತಿಳಿಸುತ್ತದೆ. ಪ್ರತಿವರ್ಷದ ವರ್ಗ Iರ ಅನುದಾನವನ್ನು ಪರಿಗಣಿಸಲಾಗಿದೆ.

ಮೂಲ : ಪಂಚಾಯತ್ ಕಾರ್ಯದರ್ಶಿಗಳು, *1995- 2000ನೇ ಸಾಲಿನ ಲೆಕ್ಕಪರಿಶೋಧನಾ ವರದಿಗಳು*, ನಾಗೇನಹಳ್ಳಿ, ಬೈಲುವದ್ದಿಗೆರೆ, ಹಿರೇಹೆಗ್ಡಾಳ್ ಮತ್ತು ಉಜ್ಜಿನಿ: ಗ್ರಾಮಪಂಚಾಯತ್ ಕಚೇರಿಗಳು, 2001

## ಕೋಷ್ಟಕ -14

### ಗ್ರಾಮಪಂಚಾಯತಿವಾರು ಗ್ರಾಮೀಣ ನೈರ್ಮಲ್ಯ ಕುರಿತು ಗ್ರಾಮೀಣ ಜನತೆಯ ಜಾತಿವಾರು ಅಭಿಪ್ರಾಯ, 2001

| ಕ್ರ. ಸಂ. | ಜಾತಿವಾರು | ನಾಗೇನಹಳ್ಳಿ(ನೀರಾವರಿ) | | | | ಬ್ಯೆಲುವದ್ದಿಗೆರೆ(ಒಣಭೂಮಿ) | | | | ಹಿರೇಹೆಗ್ನಾಳ್(ನೀರಾವರಿ) | | | | ಉಜ್ಜಿನಿ(ಒಣಭೂಮಿ) | | | |
|---|---|---|---|---|---|---|---|---|---|---|---|---|---|---|---|---|---|
| | | ತೃಪ್ತಿಕರ | ಸರಿಇಲ್ಲ | ಗೊತ್ತಿಲ್ಲ | ಒಟ್ಟು | ತೃಪ್ತಿಕರ | ಸರಿಇಲ್ಲ | ಗೊತ್ತಿಲ್ಲ | ಒಟ್ಟು | ತೃಪ್ತಿಕರ | ಸರಿಇಲ್ಲ | ಗೊತ್ತಿಲ್ಲ | ಒಟ್ಟು | ತೃಪ್ತಿಕರ | ಸರಿಇಲ್ಲ | ಗೊತ್ತಿಲ್ಲ | ಒಟ್ಟು |
| 1. | ಪರಿಶಿಷ್ಟ ಜಾತಿ | 03<br>(10.71) | 15<br>(53.57) | 10<br>(35.71) | 28<br>(100.00) | 02<br>(8.33) | 10<br>(41.66) | 12<br>50.00) | 24<br>(100.00) | 04<br>(22.22) | 04<br>(22.22) | 10<br>(55.55) | 18<br>(100.00) | 04<br>(18.18) | 10<br>(45.45) | 08<br>(36.36) | 22<br>(100.00) |
| 2. | ಪರಿಶಿಷ್ಟ ಪಂಗಡ | 04<br>(25.00) | 06<br>(37.50) | 06<br>(25.00) | 16<br>(100.00) | 01<br>(6.25) | 08<br>(50.00) | 07<br>(43.75) | 16<br>(100.00) | 01<br>(16.66) | 03<br>(50.00) | 02<br>(33.33) | 06<br>(100-00) | 01<br>(16.06) | 03<br>(50.00) | 02<br>(33.33) | 06<br>(100.00) |
| 3. | ಹಿಂದುಳಿದವರ್ಗ | 08<br>(21.05) | 04<br>(36.84) | 16<br>(42.10) | 38<br>(100.00) | 03<br>(10.71) | 14<br>(50.00) | 11<br>(39.29) | 28<br>(100.00) | 02<br>(14.29) | 04<br>(28.57) | 08<br>57.14 | 14<br>(100.00) | 06<br>(08.82) | 36<br>(5.94) | 26<br>(38.23) | 68<br>(100.00) |
| 4. | ಇತರೇ ವರ್ಗ | 04<br>(22.22) | 06<br>(33.33) | 08<br>(44.44) | 18<br>(100.00) | 12<br>(18.75) | 31<br>(48.43) | 20<br>(31.25) | 64<br>(100.00) | 12<br>(27.27) | 24<br>(54.55) | 08<br>(18.18) | 44<br>(100.00) | 10<br>(14.29) | 40<br>(57.14) | 20<br>(28.57) | 70<br>(100.00) |
| | ಒಟ್ಟು | 19<br>(19.00) | 40<br>(40.00) | 41<br>(41.00) | 100<br>(100.00) | 18<br>(13.64) | 63<br>(47.73) | 50<br>(37.88) | 132<br>(100.00) | 19<br>(23.17) | 35<br>(42.68) | 28<br>(34.14) | 82<br>(100.00) | 21<br>(12.65) | 89<br>(53.61) | 56<br>(33.73) | 166<br>(100.00) |













ಸೂಚನೆ : ಆವರಣದಲ್ಲಿರುವುದು ಕುಟುಂಬಗಳ ಅಭಿಪ್ರಾಯವನ್ನು ಶೇಕಡವಾರು ಪ್ರಮಾಣದಲ್ಲಿ ಸೂಚಿಸುತ್ತದೆ.

ಮೂಲ : ಪ್ರಾಥಮಿಕ ಮಾಹಿತಿ

ಗ್ರಾಮಪಂಚಾಯತಿಗಳ ಮುಖ್ಯ ಕಾರ್ಯಗಳಾದ ಕುಡಿಯುವ ನೀರು ಮತ್ತು ನೈರ್ಮಲೀಕರಣ ಕಾರ್ಯಕ್ರಮಗಳ ಪೂರೈಕೆ, ಅನುಷ್ಠಾನ, ನಿರ್ವಹಣೆಗಳನ್ನು ಅವು ಹೇಗೆ ಕೈಗೊಂಡಿವೆ ಎಂಬುದನ್ನು ಹಿಂದಿನ ಅಧ್ಯಾಯದಲ್ಲಿ ನೋಡಿದ್ದೇವೆ. ಈ ಅಧ್ಯಾಯದಲ್ಲಿ ಗ್ರಾಮಪಂಚಾಯತಿಯು ವಸತಿ ಯೋಜನೆಗಳನ್ನು ಹೇಗೆ ನಿರ್ವಹಿಸಿದೆ, ಬಡತನ ನಿರ್ಮೂಲನಾ ಕಾರ್ಯಕ್ರಮವಾದ ಜವಾಹರ್ ಗ್ರಾಮಸಮೃದ್ಧಿ ಯೋಜನೆಯ ಜಾರಿ ಮತ್ತು ಶಿಕ್ಷಣದ ನಿರ್ವಹಣೆಯನ್ನು ಹೇಗೆ ನಿರ್ವಹಿಸಿದೆ ಎಂಬುದನ್ನು ಚರ್ಚಿಸಲಾಗಿದೆ.

## 4.1. ವಸತಿ ಯೋಜನೆಗಳು

ವಸತಿಯು ಮಾನವನ ಮೂಲಭೂತ ಅಗತ್ಯಗಳಲ್ಲಿ ಬಹು ಮುಖ್ಯ ಎಂದು ಸಾರ್ವತ್ರಿಕವಾಗಿ ಅಂಗೀಕರಿಸಲಾಗಿದೆ. ಮಾನವನ ಜೀವನ ಮಟ್ಟವನ್ನು ನಿರ್ಧರಿಸುವ ಅತೀ ನಿರ್ಣಾಯಕ ಅಂಶಗಳಲ್ಲಿ ವಸತಿಯು ಮುಖ್ಯವಾಗಿದೆ. ವಸತಿಯು ಇಂದು ಮಾನವ ಅಭಿವೃದ್ಧಿಯ ಸೂಚ್ಯಂಕವಾಗಿದೆ. ಹಾಗೇಯೆ ವಸತಿ ಪೂರೈಕೆಯ ಎಲ್ಲಾ ಹೊಣೆಗಾರಿಕೆಯನ್ನು ಪಂಚಾಯತ್ ಸಂಸ್ಥೆಗಳಿಗೆ ವಹಿಸಲಾಗಿದೆ. ಹಾಗಾಗಿ ವಸತಿಗೆ ಸ್ವಾತಂತ್ರ್ಯಾನಂತರ ಯಾವ ರೀತಿ ಆದ್ಯತೆಯನ್ನು ನೀಡಲಾಯಿತು? ವಸತಿ ಪೂರೈಕೆಯು ಹೇಗೆ ಪಂಚಾಯತ್ ಸಂಸ್ಥೆಗಳ ಕಾರ್ಯಕ್ರಮಗಳಾಗಿವೆ. ಯಾವ ಯಾವ ಯೋಜನೆಗಳಲ್ಲಿ ವಸತಿ ಸೌಲಭ್ಯವನ್ನು ಪೂರೈಸಲಾಗುತ್ತಿದೆ? ಪ್ರಸ್ತುತ ಗ್ರಾಮಪಂಚಾಯತಿಗಳ ವಸತಿ ಪೂರೈಕೆಯ ಜವಬ್ದಾರಿಗಳೇನು ಮುಂತಾದ ಅಂಶಗಳನ್ನು ಕುರಿತು ಇಲ್ಲಿ ವಿಶ್ಲೇಸಿಸಲಾಗಿದೆ.

ಸ್ವಾತಂತ್ರ್ಯಾನಂತರ ಕೇಂದ್ರ ಸರಕಾರವು ಕೆಳಜಾತಿ/ವರ್ಗಗಳ ಮತ್ತು ಬಡವರ ಉದ್ಧಾರಕ್ಕಾಗಿ ಆನೇಕ ಯೋಜನೆಗಳನ್ನು ರೂಪಿಸಿತು. ಆದರಲ್ಲಿ ಗ್ರಾಮೀಣ ಪ್ರದೇಶದ ಮೂಲ ಅಗತ್ಯಗಳ ಕಡೆಗೆ ಗಮನ ಹರಿಸಿತು. ಆದರೆ ಈ ಯೋಜನೆಗಳು ನಿರೀಕ್ಷಿತ ಗುರಿಯನ್ನು ತಲುಪಲಿಲ್ಲ. ಈ ಯೋಜನೆಗಳಲ್ಲಿ ಗ್ರಾಮೀಣ ವಸತಿ ಕ್ಷೇತ್ರವನ್ನು ಪರಿಗಣಿಸಲಿಲ್ಲ. ಒಂದನೆ ಹಾಗೂ ಎರಡನೆ ಪಂಚವಾರ್ಷಿಕ ಯೋಜನೆಗಳಲ್ಲಿ ವಸತಿ ಕ್ಷೇತ್ರಕ್ಕೆ ಆದ್ಯತೆಯನ್ನು ನೀಡಲಿಲ್ಲ. ಸ್ವಾತಂತ್ರ್ಯಾನಂತರದ ವರ್ಷಗಳಲ್ಲಿ ವಸತಿ ಕ್ಷೇತ್ರ ನಿರ್ಲಕ್ಷಕ್ಕೆ ಒಳಗಾಗಿತ್ತು. ಮೂರನೇ ಯೋಜನೆಯಲ್ಲಿ ವಸತಿ ನಿರ್ಮಾಣವು ಅಭಿವೃದ್ಧಿಯ ಪ್ರಮುಖ ಅಂಶವೆಂದು ಗುರುತಿಸಲಾಯಿತು. ನಾಲ್ಕನೇ ಯೋಜನೆಯಲ್ಲಿ ಗ್ರಾಮೀಣ ವಸತಿ ನಿವೇಶನ ಮತ್ತು ವಸತಿ ನಿರ್ಮಾಣ ಕಾರ್ಯಕ್ರಮವನ್ನು ಆರಂಭಿಸಲಾಯಿತು. ವಸತಿ ನಿರ್ಮಾಣಕ್ಕೆ ಸಹಾಯಧನ ನೀಡುವುದಕ್ಕೆ ಮಾತ್ರ ಸೀಮಿತವಾಗಿತ್ತು. ಇದರಲ್ಲಿ ಸರಕಾರಗಳು ಕ್ರೀಯಾತ್ಮಕವಾಗಿ ಭಾಗವಹಿಸಿದ್ದವು. ಆರನೇ ಯೋಜನೆಯಲ್ಲಿ ವಸತಿ ನಿರ್ಮಾಣಕ್ಕೆ ಹಣದ ನೆರವು ನೀಡುವುದರ ಮೂಲಕ ವಸತಿಹೀನರ ಸಂಖ್ಯೆಯನ್ನು ಕಡಿಮೆ ಮಾಡಲು ಪ್ರಯತ್ನಿಸಲಾಯಿತು. ಏಳನೇ ಯೋಜನೆಯಲ್ಲಿ ವಸತಿ ನಿರ್ಮಾಣ ಕೆಲಸದಲ್ಲಿ ರಾಜ್ಯ ಸರಕಾರಗಳನ್ನು ತೊಡಗಿಸಿಕೊಳ್ಳಲು ಕೇಂದ್ರ ಹೆಚ್ಚು ಒತ್ತು ಕೊಟ್ಟಿತು. ವಸತಿ ಸಮಸ್ಯೆಯ ತೀವ್ರತೆಯನ್ನು ಅರಿತು ಎಂಟನೇ

ಪಂಚವಾರ್ಷಿಕ ಯೋಜನೆಯಲ್ಲಿ ಗ್ರಾಮೀಣ ವಸತಿ ಪೂರೈಕೆ ಮುಖ್ಯ ಕ್ಷೇತ್ರವೆಂದು ಪರಿಗಣಿಸಿ ಕೇಂದ್ರ ಸರಕಾರವು 1994ರಲ್ಲಿ ರಾಷ್ಟ್ರಿಯ ವಸತಿ ನೀತಿಯನ್ನು ಜಾರಿಗೊಳಿಸಿತು.[1] 2000 ಇಸವಿಯ ವೇಳೆಗೆ ದೇಶದ ವಸತಿ ವ್ಯವಸ್ಥೆಯ ಬೇಡಿಕೆಯನ್ನು ಪೂರೈಸಿ ಎಲ್ಲರಿಗೂ ಕನಿಷ್ಠ ಮಟ್ಟದ ಮೂಲಭೂತ ಸೇವೆಯನ್ನು ಒದಗಿಸುವುದು ಈ ರಾಷ್ಟ್ರಿಯ ನೀತಿಯ ಉದ್ದೇಶವಾಗಿತ್ತು. ಹೀಗೆ ಕಳೆದ ಐದು ದಶಕಗಳಿಂದ ವಸತಿ ಕ್ಷೇತ್ರಕ್ಕೆ ಆದ್ಯತೆಯನ್ನು ನೀಡಲಾಗಿದೆ.

1991ರ ಜನಗಣತಿಯ ಪ್ರಕಾರ ದೇಶದಲ್ಲಿ ಒಟ್ಟು 153 ದಶಲಕ್ಷ ಕುಟುಂಬಗಳಿದ್ದು, ಈ ಕುಟುಂಬಗಳಲ್ಲಿ ಶೇ. 73.53 ರಷ್ಟು ಗ್ರಾಮೀಣ ಕುಟುಂಬಗಳಿವೆ. ಇದರಲ್ಲಿ 13ದಶಲಕ್ಷ ಕುಟುಂಬಗಳು ವಸತಿಹೀನ ಕುಟುಂಬಗಳಾಗಿವೆ. ಇದರಲ್ಲಿ 70ಕ್ಕೂ ಹೆಚ್ಚಿನ ಮನೆಗಳು ಒಂದು ಅಥವಾ ಎರಡು ಕೋಣೆಗಳನ್ನು ಹೊಂದಿವೆ ಮತ್ತು ಐದಕ್ಕೂ ಹೆಚ್ಚಿನ ವಾಸಿಗಳು ವಾಸವಾಗಿದ್ದಾರೆ.[2] ಕರ್ನಾಟಕದಲ್ಲಿ ವಸತಿ ಸ್ಥಿತಿಗಳನ್ನು ನೋಡಿದಾಗ, 1995ರಲ್ಲಿ ಕರ್ನಾಟಕ ಸರಕಾರ ಕೈಗೊಂಡ ಸಮಿಕ್ಷೆ ಪ್ರಕಾರ ರಾಜ್ಯದಲ್ಲಿ ಒಟ್ಟು ಕುಟುಂಬಗಳು 81,43,879 ಇದ್ದು, ಇದರಲ್ಲಿ 21,49,097(26.39) ರಷ್ಟು ವಸತಿ ಹೀನ ಕುಟುಂಬಗಳು. ಅವುಗಳಲ್ಲಿ ನಿವೇಶನ ರಹಿತ ಕುಟುಂಬಗಳು ಸೇರಿವೆ. ಇವುಗಳಲ್ಲಿ 2,79,731 (3.43)ಕುಟುಂಬಗಳು ಪಟ್ಟಣ ಪ್ರದೇಶದಲ್ಲಿ 18,69,366 (22.95) ಕುಟುಂಬಗಳು ಗ್ರಾಮೀಣ ಪ್ರದೇಶದಲ್ಲಿ ವಸತಿಹೀನ ಕುಟುಂಬಗಳಿವೆ.[3] ವಸತಿಹೀನ ಕುಟುಂಬಗಳನ್ನು ಅಧಿಕವಾಗಿ ಹೊಂದಿರುವ ಜಿಲ್ಲೆಗಳೆಂದರೆ ರಾಯಚೂರು ಮತ್ತು ಬಳ್ಳಾರಿ ಜಿಲ್ಲೆಗಳಾಗಿವೆ. ಬಳ್ಳಾರಿಯಲ್ಲಿ ಶೇ.41.8ರಷ್ಟು ವಸತಿ ಹೀನ ಕುಟುಂಬಗಳಿವೆ. ಅತಿ ಕಡಿಮೆ ವಸತಿ ಹೀನ ಕುಟುಂಬಗಳನ್ನು ಕೊಡಗು ಮತ್ತು ದಕ್ಷಿಣ ಕನ್ನಡ ಜಿಲ್ಲೆಗಳು ಹೊಂದಿವೆ.[4] ಹೀಗೆ ಪ್ರಸ್ತುತ ವಸತಿ ಸ್ಥಿತಿ ಈ ರೀತಿ ಇದೆ.

ರಾಜ್ಯದಲ್ಲಿ2001ನೇಯ ಇಸವಿಯ ವೇಳೆಗೆ ವಸತಿ ಆಭಾವವನ್ನು ಪರಿಹರಿಸಲು 27 ದಶಲಕ್ಷ ವಸತಿ ಘಟಕಗಳು ಅಗತ್ಯವಾಗುತ್ತವೆ ಎಂದು ಅಂದಾಜು ಮಾಡಿದೆ. 1995ರ ಸಮೀಕ್ಷೆಯ ಪ್ರಕಾರ ರಾಜ್ಯದ ಮನೆ ನಿವೇಶನವಿಲ್ಲದ ಕುಟುಂಬಗಳ ಸಂಖ್ಯೆ 1.15 ದಶಲಕ್ಷ ಮತ್ತು ಗ್ರಾಮೀಣ ಪ್ರದೇಶಗಳಲ್ಲಿ ವಸತಿ ರಹಿತ ಕುಟುಂಬಗಳ ಸಂಖ್ಯೆ 78,000 ಆಗಿತ್ತು.[5] ಆದ್ದರಿಂದ ವಸತಿ ಸಮಸ್ಯೆಯನ್ನು ನಿರಂತರ ಮತ್ತು ತೀವ್ರವಾಗಿ ಪರಿಹರಿಸಲು ಕೇಂದ್ರ ಮತ್ತು ರಾಜ್ಯ ಸರಕಾರಗಳು ವಸತಿ ಯೋಜನೆಗಳನ್ನು ಅನುಷ್ಠಾನಗೊಳಿಸುತ್ತಿವೆ. ಅವುಗಳ ವಸತಿನೀತಿಗಳು ಇಂತಿವೆ.

1. ರಾಷ್ಟ್ರಿಯ ಗೃಹ ನಿರ್ಮಾಣ ನೀತಿ
2. ಕೇಂದ್ರ ಪ್ರಾಯೋಜಿತ ಯೋಜನೆಗಳು
3. ರಾಜ್ಯ ಸರಕಾರದ ವಸತಿ ಯೋಜನೆಗಳು.

## ರಾಷ್ಟ್ರೀಯ ಗೃಹ ನಿರ್ಮಾಣ ನೀತಿ

ರಾಷ್ಟ್ರೀಯ ಗೃಹ ನಿರ್ಮಾಣ ನೀತಿಯು 1998ರಲ್ಲಿ ಜಾರಿಗೆ ಬಂದಿದೆ. ಈ ನೀತಿಯ ಪ್ರಮುಖ ಅಂಶವೆಂದರೆ, ಗೃಹ ನಿರ್ಮಾಣ ವಲಯದಲ್ಲಿ ಸರಕಾರವು ನೇರವಾಗಿ ವಸತಿ ಸೌಲಭ್ಯ ಕಲ್ಪಿಸಿ ಕೊಡುವ

ಬಗೆಗಿದ್ದ ಒತ್ತನ್ನು ಗೃಹ ನಿರ್ಮಾಣಕ್ಕೆ ನೆರವಿನ ಪಾತ್ರವಹಿಸುವ ಅವಕಾಶಕ್ಕೆ ಪೂರ್ಣವಾಗಿ ಬದಲಾಯಿಸಿದವು. ಕೇಂದ್ರ ಸರಕಾರವು ವಸತಿ ಗೃಹಗಳನ್ನು ನಿರ್ಮಿಸುವ ಕಾರ್ಯ ಕೈಗೊಳ್ಳುವುದಕ್ಕೆ ಬದಲಾಗಿ ಗೃಹ ನಿರ್ಮಾಣ ಚಟುವಟಿಕೆಗಳ ಬೆಳವಣಿಗೆಗೆ ಪೂರಕವಾದ ಪರಿಸರವನ್ನು ನಿರ್ಮಿಸುತ್ತದೆ ಎಂದು ರಾಷ್ಟ್ರೀಯ ನೀತಿಯಲ್ಲಿ ತಿಳಿಸಲಾಗಿದೆ.[6] ಅಲ್ಲದೆ ಈ ಕಾರ್ಯಕ್ರಮ ವಿಶ್ವದಾದ್ಯಂತ ಅನುಸರಿಸಲಾಗುತ್ತಿರುವ ಕ್ರಮಕ್ಕೆ ಅನುಗುಣವಾಗಿದೆ. 1998ರಲ್ಲಿ ವಿಶ್ವಸಂಸ್ಥೆಯ ಪ್ರಧಾನಾಧಿವೇಶನವು ಕ್ರಿ.ಶ.2000 ವರ್ಷವನ್ನು ವಸತಿ ಸೌಲಭ್ಯಕ್ಕಾಗಿ ಜಾಗತಿಕ ನಿರ್ವಹಣ ತಂತ್ರವೊಂದನ್ನು ಅಂಗಿಕರಿಸಲಾಗಿದೆ. ಇದು ಕಡಿಮೆ ಆದಾಯದ ವರ್ಗಗಳ ಜನರಿಗೆ ವಸತಿ ಒದಗಿಸುವಲ್ಲಿ ಖಾಸಗಿ ಕ್ಷೇತ್ರಕ್ಕೆ ಒಂದು ಮೂಲಭೂತ ಪಾತ್ರ ನೀಡಿದೆ. ವಸತಿ ನಿರ್ಮಾಣಕ್ಕೆ ಸಂಬಂಧಿಸಿದ ಕಾನೂನು ಸುಧಾರಣೆಗಳನ್ನು ತರುವುದು, ಗೃಹ ನಿರ್ಮಾಣದ ರಚನೆ ಮತ್ತು ಕಡಿಮೆ ಬೆಲೆಯ ಕಟ್ಟಡ ಸಾಮಾಗ್ರಿಗಳನ್ನು ರಿಯಾಯತಿ ಬೆಲೆಯಲ್ಲಿ ಒದಗಿಸುವುದು ಮತ್ತು ಉತ್ತೇಜನ ನೀಡುವುದು ರಾಷ್ಟ್ರೀಯ ಗೃಹ ನೀತಿಯ ಮುಖ್ಯ ಉದ್ದೇಶವಾಗಿದೆ.[7] ಹೀಗೆ ವಸತಿಹೀನ ಬಡಕುಟುಂಬಗಳನ್ನು ಗಮನದಲ್ಲಿಟ್ಟುಕೊಂಡು ರಾಷ್ಟ್ರಿಯ ಗೃಹ ನಿರ್ಮಾಣ ನೀತಿಯನ್ನು ಜಾರಿಗೊಳಿಸಲಾಗಿದೆ.

**ಕೇಂದ್ರ ಪ್ರಾಯೋಜಿತ ವಸತಿ ಯೋಜನೆಗಳು**

ಕೇಂದ್ರ ಪ್ರಾಯೋಜಿತ ಯೋಜನೆಗಳಲ್ಲಿ ಇಂದಿರಾ ಆವಾಸ್ ಮತ್ತು ಅಂಬೇಡ್ಕರ್ ವಸತಿ ಯೋಜನೆಗಳು ಅನುಷ್ಠಾನದಲ್ಲಿವೆ. ಈ ಯೋಜನೆಗಳು ಗ್ರಾಮೀಣ ವಸತಿ ಪೂರೈಕೆಯಲ್ಲಿ ಪ್ರಮುಖ ಪಾತ್ರ ವಹಿಸಿವೆ.

**ಇಂದಿರಾ ಆವಾಸ್ ಯೋಜನೆ** : ಗ್ರಾಮೀಣ ಪ್ರದೇಶಗಳಲ್ಲಿನ ಬಡತನ ರೇಖೆಗಳಿಗಿಂತ ಕೆಳಗಿರುವ ಕುಟುಂಬಗಳ ವಸತಿ ಸಮಸ್ಯೆ ನಿವಾರಣೆ ದೃಷ್ಟಿಯಿಂದ ಇಂದಿರಾ ಆವಾಸ್ ಯೋಜನೆಯನ್ನು 1983-84ರಲ್ಲಿ ಜಾರಿಗೆ ತರಲಾಯಿತು. ಆಗ ಈ ಯೋಜನೆಯು ಕೇಂದ್ರ ಸರಕಾರದ ಜವಾಹರ ರೋಜ್‌ಗಾರ್ ಯೋಜನೆಯ ಉಪಯೋಜನೆಯಾಗಿತ್ತು. ಬಡತನ ರೇಖೆಯ ಕೆಳಗಿರುವ ಪರಿಶಿಷ್ಟ ಜಾತಿ/ಪಂಗಡ ಮತ್ತು ಜೀತವಿಮುಕ್ತರಿಗೆ ವಾಸದ ಮನೆಗಳನ್ನು ಒದಗಿಸುವ ಉದ್ದೇಶವನ್ನು ಈ ಯೋಜನೆ ಹೊಂದಿದೆ. ಒಟ್ಟು ಅನುದಾನದ ಶೇ10ರಷ್ಟು ಹಣವನ್ನು ವಸತಿ ನಿರ್ಮಾಣಕ್ಕೆ ವೆಚ್ಚಮಾಡಲಾಗುತ್ತಿತ್ತು. ಈ ಯೋಜನೆಯು 1995ರವರೆಗೆ ಜವಾಹರ್ ರೋಜಗಾರ್ ಯೋಜನೆಯು ಉಪಯೋಜನೆಯಾಗಿ ರಾಷ್ಟ್ರಾದ್ಯಂತ ಲಕ್ಷಾಂತರ ಮನೆಗಳನ್ನು ನಿರ್ಮಿಸಿತು.[8] 1996ರಿಂದ ಆ ಯೋಜನೆಯಿಂದ ಪ್ರತ್ಯೇಕಗೊಂಡು ಸ್ವತಂತ್ರ ಯೋಜನೆಯಾಗಿ ಅನುಷ್ಠಾನಗೊಳಿಸಲಾಗಿದೆ. ಇಂದಿರಾ ಆವಾಸ್ ಯೋಜನೆಯ ಒಟ್ಟು ಅನುದಾನದಲ್ಲಿ ಶೇ. 75ರಷ್ಟು ಕೇಂದ್ರ ಸರ್ಕಾರ ಮತ್ತು ಶೇ.25ರಷ್ಟು ಆಯಾ ರಾಜ್ಯ ಸರ್ಕಾರಗಳು ಭರಿಸುತ್ತವೆ. ಯೋಜನೆ ಹಂಚಿಕೆ ಹಣದಲ್ಲಿ ಶೇ. 80 ರಷ್ಟು ಭಾಗವನ್ನು ಹೊಸ ಮನೆಗಳ ನಿರ್ಮಾಣಕ್ಕೆ, ಶೇ. 20ರಷ್ಟು ಹಣವನ್ನು ಕಚ್ಚಾ ಮನೆಗಳನ್ನು ಪಕ್ಕಾ ಮನೆಗಳಾಗಿ ಪರಿವರ್ತಿಸಲು ಬಳಸಲಾಗುತ್ತದೆ. ಒಟ್ಟು ಅನುದಾನದ ಶೇ 60 ರಷ್ಟು ಪರಿಶಿಷ್ಟ ಜಾತಿ/ಪಂಗಡಗಳಿಗೆ, ಶೇ.40ರಷ್ಟು ಇತರೇ ವರ್ಗದ ಬಡತನ ರೇಖೆಗಿಂತ ಕೆಳಗಿರುವ ಕುಟುಂಬಗಳು ಈ ಯೋಜನೆಯ ಪ್ರಯೋಜನ ಪಡೆಯಬಹುದು.[9] ಈ ವರ್ಗಗಳಲ್ಲಿ ಜೀತ ವಿಮುಕ್ತರಿಗೆ ಪ್ರಕೃತಿ ವಿಕೋಪಕ್ಕೆ

ಒಳಗಾದವರಿಗೆ, ವಿಧವೆಯವರಿಗೆ, ಮಾಜಿ ಸೈನಿಕರಿಗೆ ಮೊದಲ ಆದ್ಯತೆ ನೀಡಬೇಕು. ಈ ಯೋಜನೆಯಲ್ಲಿ ಹೊಸ ಮನೆ ನಿರ್ಮಾಣಕ್ಕೆ 20,000 ರೂ. ಗಳನ್ನು ಕೊಡಲಾಗುತ್ತಿದ್ದು ಹೊಗೆರಹಿತ ಒಲೆಗಳ ನಿರ್ಮಾಣಕ್ಕೆ ಮೂಲ ಪರಿಕರಗಳನ್ನು ಒದಗಿಸಲಾಗುತ್ತದೆ. ಪ್ರತಿಯೊಂದು ಮನೆಗಳು ಶೌಚಾಲಯವನ್ನು ಹೊಂದಬೇಕಾಗಿದೆ. ಅನುದಾನವು ನೇರವಾಗಿ ಜಿಲ್ಲಾ ಪಂಚಾಯತಿಯ ಹಾಗೂ ತಾಲೂಕು ಪಂಚಾಯತಿಯಿಂದ ಫಲಾನುಭವಿಗೆ ನೇರವಾಗಿ ಒದಗಿಸಲಾಗುತ್ತದೆ. ಆಯಾ ಕ್ಷೇತ್ರದ ತಾಲೂಕು ಪಂಚಾಯತಿ ಸದಸ್ಯರು ಗ್ರಾಮಮಟ್ಟದಲ್ಲಿ ಗ್ರಾಮಸಭೆಯನ್ನು ನಡೆಸಿ ಫಲಾನುಭವಿಗಳನ್ನು ಆಯ್ಕೆ ಮಾಡಬೇಕು. ಈ ಯೋಜನಯಡಿ ರಾಜ್ಯದಲ್ಲಿ 1999 ಅಕ್ಟೋಬರ್ ರಿಂದ 2000 ಅಂತ್ಯಕ್ಕೆ 6046.36 ಲಕ್ಷ ರೂ.ಗಳನ್ನು ವೆಚ್ಚ ಮಾಡಿ ಸುಮಾರು 28779 ಮನೆಗಳನ್ನು ನಿರ್ಮಿಸಲಾಗಿದೆ. ಈ ಯೋಜನೆಯಲ್ಲಿ ರೂ.7093 ಲಕ್ಷಗಳನ್ನು ವೆಚ್ಚ ಮಾಡಿ 33655 ಕಚ್ಚಾ ಮನೆಗಳನ್ನು ಪಕ್ಕಾ ಮನೆಗಳನ್ನಾಗಿ ಪರಿವರ್ತಿಸಲಾಗಿದೆ.[10] 1997-98ರಲ್ಲಿ ಸರ್ಕಾರಿ ಯೋಜನೆ ಗಳಡಿಯಲ್ಲಿ ನಿರ್ಮಿಸಲಾಗಿರುವ ಮನೆಗಳಿಗೆ ಶೌಚಾಲಯ ಮತ್ತು ಹೊಗೆ ರಹಿತ ಒಲೆಗಳನ್ನು ಒಳಪಟ್ಟಿರಬೇಕೆಂದು ಯೋಜನೆಯಲ್ಲಿ ಹೇಳಲಾಗಿದೆ. ಆದರೆ ಶೌಚಾಲಯ ನಿರ್ಮಾಣದ ವೆಚ್ಚದ ಸಮಸ್ಯೆಗಳಿವೆ ಎಂದು ಮೌಲ್ಯಮಾಪನ ವರದಿಯಲ್ಲಿ ಹೇಳಲಾಗಿದೆ. ಗುರಿ ಸಾಧನೆಗಳಲ್ಲಿ ಅಪಾರ ಅಂತರವಿದೆ ಎಂದು ವರದಿಯಲ್ಲಿ ಹೇಳಲಾಗಿದೆ.[11] ಹಾಗಾಗಿ ಈ ಯೋಜನೆಯಲ್ಲಿ ನಿರ್ಮಿಸಿದ ಹೆಚ್ಚು ಮನೆಗಳಲ್ಲಿ ಶೌಚಾಲಯಗಳನ್ನು ನಿರ್ಮಿಸಿಲ್ಲ ಎಂದು ಹೇಳಬಹುದು.

**ಅಂಬೇಡ್ಕರ್ ವಸತಿ ಯೋಜನೆ:** ವಸತಿ ಯೋಜನೆಗಳಲ್ಲಿ ಅಂಬೇಡ್ಕರ್ ವಸತಿ ಯೋಜನೆ ಕೇಂದ್ರ ಸರ್ಕಾರದ ಪ್ರಮುಖ ಯೋಜನೆಯಾಗಿದೆ. ಈ ಯೋಜನೆಯು ಬಡತನ ರೇಖೆ ಕೆಳಗಿರುವ ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ಪಂಗಡದ ಕುಟುಂಬಗಳಿಗೆ ಮಾತ್ರ ವಸತಿಯನ್ನು ಕಲ್ಪಿಸಿಕೊಡಲಾಗುವುದು. ಗ್ರಾಮೀಣ ವಸತಿಹೀನರ ಸಂಖ್ಯೆಯಲ್ಲಿ ಹೆಚ್ಚು ಕೆಳಜಾತಿಗಳಿಗೆ ಸೇರಿದವರೇ ಇದ್ದಾರೆ. ಹೀಗಾಗಿ ಅಂಬೇಡ್ಕರ್ ವಸತಿ ಯೋಜನೆಯು ಪರಿಶಿಷ್ಟರ ಮುಖ್ಯ ಕಾರ್ಯಕ್ರಮವಾಗಿದೆ. ಈ ಕೆಳಜಾತಿಗಳ ವಸತಿಹೀನರಿಗೆ ವಸತಿಗಳನ್ನು ಕಲ್ಪಿಸುವುದು ಯೋಜನೆಯ ಪ್ರಮುಖ ಉದ್ದೇಶವಾಗಿದೆ. ಬಡತನ ರೇಖೆ ಕೆಳಗಿರುವ ಪರಿಶಿಷ್ಟ ಜಾತಿ/ ಪಂಗಡದವರು ಮಾತ್ರ ಈ ವಸತಿ ಯೋಜನೆಯ ಫಲಾನುಭವಿಗಳಾಗಿದ್ದಾರೆ. ಈ ಯೋಜನೆಯು ಸಂಪೂರ್ಣ ಕೇಂದ್ರ ಯೋಜನೆಯಾಗಿದ್ದು, ಪ್ರತಿ ಫಲಾನುಭವಿಗೆ ಸಹಾಯಧನವಾಗಿ ರೂ.20,000ಗಳ ವೆಚ್ಚದಲ್ಲಿ ವಸತಿಯನ್ನು ನಿರ್ಮಿಸಲಾಗುವುದು. ಈ ಯೋಜನೆಯ ಹಣವು ಫಲಾನುಭವಿಗೆ ನೇರವಾಗಿ ತಾಲೂಕು ಪಂಚಾಯತಿಯಿಂದ ವಿತರಿಸಲಾಗುತ್ತದೆ.[12] ತಾಲೂಕು ಪಂಚಾಯತಿ ಸದಸ್ಯರು ಆಯಾ ಕ್ಷೇತ್ರದಲ್ಲಿ ಗ್ರಾಮ ಮಟ್ಟದಲ್ಲಿ ಗ್ರಾಮಸಭೆಗಳನ್ನು ನಡೆಸಿ ಫಲಾನುಭವಿಗಳನ್ನು ಆಯ್ಕೆ ಮಾಡಲಾಗುತ್ತದೆ. ಬಡತನ ರೇಖೆ ಕೆಳಗಿರುವ ಕುಟುಂಬಗಳ ಪಟ್ಟಿಯಿಂದ ಗ್ರಾಮಸಭೆಯಲ್ಲಿ ಫಲಾನುಭವಿಗಳನ್ನು ಆಯ್ಕೆ ಮಾಡಲಾಗುತ್ತದೆ. ಫಲಾನುಭವಿ ಆಯ್ಕೆಯನ್ನು ನಿಯಾಮಾನುಸಾರವಾಗಿ ವಸತಿಹೀನರಿಗೆ ಮಾಡತಕ್ಕದು. ಈ ಫಲಾನುಭವಿ ಆಯ್ಕೆ ನಂತರ ಅನುದಾನದ ಬಿಡುಗಡೆಗೆ ಅನುಗುಣವಾಗಿ ವಸತಿ ನಿರ್ಮಾಣವನ್ನು ಕೈಗೊಳ್ಳತಕ್ಕದ್ದು. ಹೀಗೆ ಅಂಬೇಡ್ಕರ್ ವಸತಿ ಯೋಜನೆ ಗ್ರಾಮೀಣ ಪ್ರದೇಶದ ಪರಿಶಿಷ್ಟರ ಮುಖ್ಯ ಯೋಜನೆಯಾಗಿದೆ.

1999-2000 ಸಾಲಿನಲ್ಲಿ 19442 ಅಂಬೇಡ್ಕರ್ ಮನೆಗಳನ್ನು ಕಟ್ಟಿಸಿ ಕೊಡುವ ಭೌತಿಕ ಗುರಿಯನ್ನು ಹೊಂದಿದ್ದು ಕೇವಲ 7958 ಮನೆಗಳನ್ನು ಮಾತ್ರ ನಿರ್ಮಿಸಲಾಗಿದೆ. ಈ ಸಾಲಿನಲ್ಲಿ ಒಟ್ಟು ವೆಚ್ಚದ ಭೌತಿಕ ಸಾಧನೆ ರೂ.19596 ಕೋಟಿ ಹಣವನ್ನು ಮೀಸಲಿಡಲಾಗಿದೆ.[13] ಬಳ್ಳಾರಿ ಜಿಲ್ಲೆಯಲ್ಲಿ 1998-99ನೇ ಸಾಲಿನಲ್ಲಿ ಅಂಬೇಡ್ಕರ್ ವಸತಿ ಯೋಜನೆ ಅಡಿಯಲ್ಲಿ ಪರಿಶಿಷ್ಟಜಾತಿ ಕುಟುಂಬಗಳಿಗೆ 578 ಮನೆಗಳನ್ನು ಮತ್ತು ಪರಿಶಿಷ್ಟ ಪಂಗಡಕ್ಕೆ 357 ಮನೆಗಳನ್ನು ಪೂರ್ಣಗೊಳಿಸಲಾಗಿದೆ.[14] ಹೆಚ್ಚು ಪರಿಶಿಷ್ಟರ ಕುಟುಂಬಗಳು ಬಡತನ ರೇಖೆಗಿಂತ ಕೆಳಗೆ, ವಸತಿಹೀನರು ಇರುವುದರಿಂದ ಈ ಯೋಜನೆಯು ಪರಿಶಿಷ್ಟರಿಗೆ ಉಪಯುಕ್ತ ಹಾಗೂ ಮುಖ್ಯ ಯೋಜನೆಯಾಗಿದೆ.

**ಆಶ್ರಯ ವಸತಿ ಯೋಜನೆ (ರಾಜ್ಯ ಪ್ರಾಯೋಜಿತ ಯೋಜನೆ)**

ಕರ್ನಾಟಕ ವಸತಿ ಯೋಜನೆಗಳಡಿಯಲ್ಲಿ ಬಡತನ ರೇಖೆಗಿಂತ ಕೆಳಗಿರುವ ವಸತಿ ಹೀನರಿಗೆ ನಿವೇಶನಗಳನ್ನು ಹಾಗೂ ಮನೆಗಳನ್ನು ಒದಗಿಸುವುದು ಈ ಯೋಜನೆಯು ಪ್ರಮುಖ ಉದ್ದೇಶವಾಗಿದೆ. ಬಡತನ ರೇಖೆಗಿಂತ ಕೆಳಗಿರುವ ಎಲ್ಲ ವರ್ಗದ ಜನರಿಗೆ ಆಶ್ರಯ ಯೋಜನೆ ಅನ್ವಯವಾಗುತ್ತದೆ. ಈ ಯೋಜನೆಗೆ ತನ್ನದೇ ಆದ ಆಯ್ಕೆ ಸಮಿತಿ ಹೊಂದಿದ್ದು, ಈ ಸಮಿತಿಗೆ ಆಯಾ ಕ್ಷೇತ್ರದ ವಿಧಾನಸಭಾ ಶಾಸಕರು ಅಧ್ಯಕ್ಷರಾಗಿರುತ್ತಾರೆ. ಆಶ್ರಯ ಸಮಿತಿಯು ಫಲಾನುಭವಿಯನ್ನು ಆಯ್ಕೆ ಮಾಡುವಾಗ ಕೆಲವು ನಿಯಮಗಳನ್ನು ರೂಪಿಸಲಾಗಿದೆ. ಆ ನಿಯಮಗಳಲ್ಲಿ ಮುಖ್ಯವಾಗಿ,

1. ಆಶ್ರಯ ಸಮಿತಿಯೇ ಫಲಾನುಭವಿ ಆಯ್ಕೆ ಬಗ್ಗೆ ಅಂತಿಮ ಅಧಿಕಾರವನ್ನು ಹೊಂದಿದೆ. ಜಿಲ್ಲಾ ಪಂಚಾಯತಿಯ ಅನುಮೋದನೆಯ ಅವಶ್ಯಕತೆ ಇರುವುದಿಲ್ಲ. ಆಶ್ರಯ ಸಮಿತಿಯ ಸದಸ್ಯ ಕಾರ್ಯದರ್ಶಿ ಆಯಾ ತಾಲೂಕು ಪಂಚಾಯತಿ ಕಾರ್ಯನಿರ್ವಹಕ ಅಧಿಕಾರಿಯಾಗಿರುತ್ತಾನೆ. ಈ ಅಧಿಕಾರಿಯು ಪ್ರಮಾಣೀಕರಿಸುವ ಅಧಿಕಾರಿಯಾಗಿರುತ್ತಾರೆ.
2. ಗ್ರಾಮಸಭೆಗಳು ವಸತಿರಹಿತ ಮತ್ತು ನಿವೇಶನ ರಹಿತರ ಪಟ್ಟಿಯನ್ನು ಆಶ್ರಯ ಸಮಿತಿಗೆ ಒದಗಿಸತಕ್ಕದ್ದು. ಗ್ರಾಮ ಪಂಚಾಯತಿ ಕಾರ್ಯದರ್ಶಿಯವರು ಫಲಾನುಭವಿಗಳ ನೈಜತೆಯನ್ನು ಪ್ರಮಾಣೀಕರಿಸಬೇಕು.
3. ಪ್ರತಿ ಫಲಾನುಭವಿಗೆ 10,000ರೂ.ಗಳ ಸಹಾಯ ಧನವನ್ನು ಮನೆ ನಿರ್ಮಾಣಕ್ಕೆ ಸಹಾಯಕ ಮೊತ್ತವಾಗಿ ನೀಡಲಾಗುತ್ತದೆ. ಫಲಾನುಭವಿಗಳು ಸರಕಾರ ನೀಡಿದ ಮೊತ್ತದಲ್ಲಿಯೇ ಮನೆಗಳನ್ನು ನಿರ್ಮಿಸಬೇಕೆಂಬ ನಿಯಮ ಇರುವುದಿಲ್ಲ. ಸ್ವಂತ ಬಂಡವಾಳದಿಂದ ಸರಕಾರದ ಮೊತ್ತದ ಜೊತೆಗೆ ಮನೆಯನ್ನು ಕಟ್ಟಬಹುದು.
4. ಆಶ್ರಯ ಸಮಿತಿಯ ಎಲ್ಲಾ ಸದಸ್ಯರುಗಳ ಒಟ್ಟು ಅಭಿಪ್ರಾಯ ಪ್ರಕಾರ ಫಲಾನುಭವಿಗಳ ಆಯ್ಕೆಯಾಗಬೇಕು.
5. ತಾಲೂಕಿನ ಕಾರ್ಯ ನಿರ್ವಾಹಣಾಧಿಕಾರಿಯು ಸಭೆಯನ್ನು ಕರೆಯತಕ್ಕದ್ದು ಮತ್ತು ಪ್ರತಿಯೊಂದು ವಸತಿಯ ಫಲಾನುಭಪಿಯನ್ನು ಗ್ರಾಮಸಭೆಯ ಮೂಲಕ ಆಯ್ಕೆ ಮಾಡತಕ್ಕದ್ದು. ಹೀಗೆ ಆಶ್ರಯ ವಸತಿ ವಿತರಣೆಯಲ್ಲಿ ಈ ನಿಯಮಗಳನ್ನು ಮಾಡಲಾಗಿದೆ.[15]

2000-01 ನೇ ಸಾಲಿನಲ್ಲಿ ರಾಜ್ಯದಲ್ಲಿ ಒಟ್ಟು 1.3ಲಕ್ಷ ಗ್ರಾಮೀಣ ಆಶ್ರಯ ವಸತಿ ಗುರಿಯನ್ನು ಇಟ್ಟುಕೊಂಡಿದ್ದರೂ ಸಹ ಕೇವಲ 68203 ಮನೆಗಳನ್ನು ಕಟ್ಟಲಾಗಿದೆ.[16] ಈ ಯೋಜನೆಯಲ್ಲಿ ಫಲಾನುಭವಿಗಳೇ ತಮ್ಮ ಮನೆಗಳನ್ನು ತಾವೇ ಕಟ್ಟಿಸಿಕೊಳ್ಳುತ್ತಾರೆ. ಪ್ರತಿಯೊಂದು ಮನೆಯ ನಿರ್ಮಾಣ ವೆಚ್ಚ ರೂ.20,000ಗಳಲ್ಲಿ ಇದರಲ್ಲಿ ರೂ.9,000ಗಳನ್ನು ರಾಜ್ಯ ಸರಕಾರದಿಂದ ಸಹಾಯ ಧನ ರೂಪವಾಗಿ, ನಿರ್ಮಲ ಗ್ರಾಮಯೋಜನೆಯಿಂದ ರೂ.1000ಗಳನ್ನು ಮತ್ತು ಹುಡ್ಕೋ ಸಂಸ್ಥೆಯಿಂದ ರೂ.10,000ಗಳನ್ನು ಸಾಲದ ರೂಪವಾಗಿ ಕೊಡಲಾಗುವುದು.[17] ಹೀಗೆ ಕೇಂದ್ರ ಮತ್ತು ರಾಜ್ಯ ಸರಕಾರಗಳು ವಸತಿ ಯೋಜನೆಗಳನ್ನು ರೂಪಿಸಿವೆ.

## 4.2 ಗ್ರಾಮಪಂಚಾಯತಿಗಳಲ್ಲಿ ವಸತಿ ಯೋಜನೆಗಳ ವಿತರಣೆ

ಗ್ರಾಮ ಪಂಚಾಯತಿಯು ವಸತಿಗೆ ಸಂಬಂಧಿಸಿದಂತೆ ನಿರ್ದಿಷ್ಟ ಪಡಿಸಿದ ಕಾರ್ಯಗಳನ್ನು ಹೊಂದಿಲ್ಲದಿದ್ದರೂ, ವಸತಿ ವಿತರಣೆಯಲ್ಲಿ ಗ್ರಾಮಪಂಚಾಯತಿಯ ಪಾತ್ರ ಬಹಳ ಮುಖ್ಯವಾಗಿದೆ. ವಸತಿ ಯೋಜನೆಯ ಯಾವುದೇ ಅನುದಾನವನ್ನು ಗ್ರಾಮಪಂಚಾಯತಿ ಹೊಂದಿಲ್ಲ. ತಾಲೂಕು ಪಂಚಾಯತಿ ನಿರ್ದಿಷ್ಟ ಪಡಿಸಿದ ದಿನ ಗ್ರಾಮಸಭೆಯನ್ನು ಆಯೋಜಿಸಿ ಫಲಾನುಭವಿಗಳನ್ನು ಆಯ್ಕೆ ಮಾಡುವ ಜವಬ್ದಾರಿಯನ್ನು ಹೊಂದಿದೆ. ಆ ಗ್ರಾಮಸಭೆಯಲ್ಲಿ ವಸತಿಹೀನರ ಪಟ್ಟಿಯನ್ನು ಒದಗಿಸುವುದು, ಗ್ರಾಮಸಭೆಯ ಅಧ್ಯಕ್ಷತೆಯನ್ನು ಆಯಾ ಗ್ರಾಮಪಂಚಾಯತಿ ಅಧ್ಯಕ್ಷನು ವಹಿಸುವುದು ಮತ್ತು ಅರ್ಹ ಫಲಾನುಭವಿಗಳನ್ನು ಗುರುತಿಸುವುದು ಹೀಗೆ ಮುಖ್ಯ ಹೊಣೆಗಾರಿಕೆಗಳ ಜೊತೆಗೆ ತಳಮಟ್ಟದಲ್ಲಿ ವಸತಿ ಯೋಜನೆಯ ಸಾಂಸ್ಥಿಕ ವಿತರಣೆ (Delivery Machanism)ಯ ಕೆಲಸವನ್ನು ಗ್ರಾಮಪಂಚಾಯತಿ ನಿರ್ವಹಿಸುತ್ತದೆ. ವಸತಿಗೆ ಸಂಬಂಧಿಸಿದಂತೆ ಅನುದಾನವು ತಾಲೂಕು ಪಂಚಾಯತಿಯಿಂದ ವಿತರಣೆಯಾಗುತ್ತದೆ. ತಾಲೂಕು ಪಂಚಾಯತಿ ಸದಸ್ಯರು ಆಯಾ ಕ್ಷೇತ್ರದಲ್ಲಿರುವ ಗ್ರಾಮಪಂಚಾಯತಿಗಳ ಮೂಲಕ ಗ್ರಾಮಸಭೆಯನ್ನು ನಡೆಸಿ ಫಲಾನುಭವಿಗಳನ್ನು ಆಯ್ಕೆ ಮಾಡುತ್ತಾರೆ. ಹೀಗೆ ತಳಮಟ್ಟದಲ್ಲಿ ಗ್ರಾಮಪಂಚಾಯತಿಯು ವಸತಿ ಯೋಜನೆಗಳಿಗೆ ಪೂರಕವಾಗಿ ಸಾಂಸ್ಥಿಕ ವಿತರಣೆಯ ಜವಾಬ್ದಾರಿಯನ್ನು ಹೊಂದಿದೆ.

ಇಂದು ಸರ್ಕಾರ ಯೋಜನೆಗಳನ್ನು ರೂಪಿಸಿ ಇವುಗಳನ್ನು ಉದ್ದೇಶಿತ ವರ್ಗಕ್ಕೆ ತಲುಪಿಸುವ ಉದ್ದೇಶದಿಂದ ಹಲವಾರು ನಿಯಮಗಳನ್ನು ರೂಪಿಸಿ ಈ ಅಭಿವೃದ್ಧಿ ಪ್ರಯೋಜನಗಳು ಉದ್ದೇಶಿತ ವರ್ಗಕ್ಕೆ ತಲುಪಿಸುವ ಗುರಿಯನ್ನು ಹೊಂದಿದೆ. ಹಾಗಾಗಿ ತಳಮಟ್ಟದಲ್ಲಿ ಸಾಂಸ್ಥಿಕ ವಿತರಣೆಯಲ್ಲಿ ಗ್ರಾಮಪಂಚಾಯತಿಯ ಪಾತ್ರ ಬಹಳ ಮುಖ್ಯವಾಗಿದೆ. ಅಧ್ಯಯನಕ್ಕೆ ಆಯ್ಕೆ ಮಾಡಿಕೊಂಡ ಗ್ರಾಮಪಂಚಾಯತಿಗಳಲ್ಲಿ ವಸತಿ ಯೋಜನೆಗಳಾದ ಆಶ್ರಯ, ಇಂದಿರಾ ಆವಾಸ್ ಮತ್ತು ಅಂಬೇಡ್ಕರ್ ಯೋಜನೆಗಳಲ್ಲಿ ಮನೆಗಳು ಯಾವ ರೀತಿ ವಿತರಣೆಯಾಗಿವೆ? ಉದ್ದೇಶಿತ ವರ್ಗಕ್ಕೆ ತಲುಪವೆಯೇ? ಇಲ್ಲದಿದ್ದರೆ ಯಾಕೆ ತಲುಪಿಲ್ಲ? ಯಾವ ಗ್ರಾಮಪಂಚಾಯತಿಗಳಲ್ಲಿ ಪಲಾನುಭವಿ ಆಯ್ಕೆ ಸರಿ ಇದೆ? ಯಾವ ಪಂಚಾಯತಿಯಲ್ಲಿ ಸರಿಯಿಲ್ಲ? ಈ ಎಲ್ಲಾ ಅಂಶಗಳನ್ನು ಗಮನದಲ್ಲಿಟ್ಟುಕೊಂಡು ತಳಮಟ್ಟದಲ್ಲಿ ವಸತಿಗಳನ್ನು ಪಂಚಾಯತಿಗಳು ಹೇಗೆ ವಿತರಿಸಿವೆ ಎಂಬುದನ್ನು ತೌಲನಿಕವಾಗಿ ಚರ್ಚಿಸಲಾಗಿದೆ.

ಅಧ್ಯಯನಕ್ಕೆ ಆಯ್ಕೆ ಮಾಡಿಕೊಂಡ ನಾಲ್ಕು ಗ್ರಾಮಪಂಚಾಯತಿಗಳು ಕಳೆದ 1995ರಿಂದ 2000ರವರೆಗೆ ಗ್ರಾಮಗಳಲ್ಲಿ ನಿರ್ಮಿಸಿದ ವಸತಿಗಳ ಸಂಖ್ಯೆ, ಯಾವ ಜಾತಿಗೆ ನಿರ್ಮಿಸಲಾಗಿದೆ, ಮುಂತಾದ ವಿವರಗಳ ಜೊತೆಗೆ ಗ್ರಾಮಪಂಚಾಯತಿಯಲ್ಲಿ ಲಭ್ಯವಿರುವ ಫಲಾನುಭವಿಗಳ ಪಟ್ಟಿಯನ್ನು ತೆಗೆದುಕೊಂಡು, ಈ ಫಲಾನುಭವಿ ಪಟ್ಟಿಯಲ್ಲಿರುವ ಹೆಸರುಗಳು ಬಡತನ ರೇಖೆ ಕೆಳಗಿನ ಕುಟುಂಬಗಳ ಪಟ್ಟಿಯಲ್ಲಿದ್ದಾವೆಯೇ ಅಥವಾ ಇಲ್ಲವೆ ಎಂಬುದನ್ನು ತುಲನೆ ಮಾಡಿ ನೋಡಲಾಗಿದೆ. ಹಾಗಾಗಿ ಈ ವಸತಿ ಯೋಜನೆಗಳು ಉದ್ದೇಶಿತ ವರ್ಗಕ್ಕೆ ತಲುಪಿವಿಯೇ ಇಲ್ಲವೆ ಎಂಬುದನ್ನು ಗುರುತಿಸಲಾಗಿದೆ. ಈ ಮೂಲಕ ಗ್ರಾಮಪಂಚಾಯತಿಗಳ ಕಾರ್ಯಕ್ಷಮತೆಯನ್ನು ಮಾಪನ ಮಾಡಲಾಗಿದೆ.

## ನಾಗೇನಹಳ್ಳಿ ಗ್ರಾಮಪಂಚಾಯತಿ

ನಾಗೇನಹಳ್ಳಿ ಗ್ರಾಮಪಂಚಾಯತಿ ವ್ಯಾಪ್ತಿಯ ಗ್ರಾಮಗಳಲ್ಲಿ ವಿವಿಧ ವಸತಿ ಯೋಜನೆಗಳಲ್ಲಿ 1995 ರಿಂದ 2000 ದವರೆಗೆ ಒಟ್ಟು 228 ಮನೆಗಳನ್ನು ಕಟ್ಟಲಾಗಿದೆ.[18] ವಸತಿ ಯೋಜನೆಗಳಾದ ಆಶ್ರಯ ಯೋಜನೆಯಡಿ 86, ಇಂದಿರಾ ಆವಾಸ್ 81, ಮತ್ತು ಅಂಬೇಡ್ಕರ್ ಯೋಜನೆಯಲ್ಲಿ 61 ವಸತಿಗಳನ್ನು ನಿರ್ಮಿಸಲಾಗಿದೆ (ಕೋಷ್ಟಕ-16). ಹೆಚ್ಚು ವಸತಿಗಳನ್ನು ಆಶ್ರಯ ಯೋಜನೆಯಡಿಯಲ್ಲಿ ಕಟ್ಟಲಾಗಿದೆ. ಒಟ್ಟು 982 ಕುಟುಂಬಗಳಲ್ಲಿ 431(43.89) ಕುಟುಂಬಗಳು ಬಡತನ ರೇಖೆಗಿಂತ ಕೆಳಗಿನ ಕುಟುಂಬಗಳಿವೆ. ಇದರಲ್ಲಿ 10 ಕುಟುಂಬಗಳು ವಸತಿ ಹೀನ ಕುಟುಂಬಗಳಿವೆ(ಕೋಷ್ಟಕ-15).[19] ಈ ಕುಟುಂಬಗಳಲ್ಲಿ ಹೆಚ್ಚು ಪರಿಶಿಷ್ಟರು ಮತ್ತು ಹಿಂದುಳಿದ ವರ್ಗದವರಿದ್ದಾರೆ.

ಗ್ರಾಮವಾರು ವಸತಿ ವಿತರಣೆಯನ್ನು ನೋಡಿದಾಗ ನಾಗೇನಹಳ್ಳಿಗೆ 76 ಮನೆಗಳು, ಬಸವನದುರ್ಗ, ಬೆನಕಾಪುರ ಗ್ರಾಮಗಳಲ್ಲಿ ತಲಾ 17 ಮನೆಗಳನ್ನು, ಬೆಳಗೊಡು ಮತ್ತು ಕಾಳಘಟ್ಟದಲ್ಲಿ ತಲಾ ಆರು ಮನೆಗಳು ಮತ್ತು ಕಳ್ಳಿರಾಂಪುರದಲ್ಲಿ ನಾಲ್ಕು ಮನೆಗಳನ್ನು ನಿರ್ಮಿಸಲಾಗಿದೆ(ಕೋಷ್ಟಕ-19). ಶೇ 60ರಷ್ಟು ಮನೆಗಳನ್ನು ಪಂಚಾಯತಿ ಕೇಂದ್ರ ಸ್ಥಳವಾದ ನಾಗೇನಹಳ್ಳಿಯಲ್ಲಿ ನಿರ್ಮಿಸಲಾಗಿದೆ. ಹಾಗಾಗಿ ಪಂಚಾಯತಿ ವ್ಯಾಪ್ತಿಯ ಗ್ರಾಮಗಳಿಗೆ ಹೆಚ್ಚಿನ ಆದ್ಯತೆ ನೀಡಿಲ್ಲ

ಒಟ್ಟು 228 ವಸತಿಗಳನ್ನು ನಿರ್ಮಿಸಿದ್ದು, ಇದರಲ್ಲಿ 126 ಫಲಾನುಭವಿಗಳ ಹೆಸರುಗಳು ಮಾತ್ರ ಲಭ್ಯವಿದ್ದು ಈ ಫಲಾನುಭವಿಗಳು ಬಡತನ ರೇಖೆ ಕೆಳಗಿನ ಕುಟುಂಬಗಳ ಪಟ್ಟಯಲ್ಲಿ ಇದ್ದಾವೆ ಅಥವಾ ಇಲ್ಲವೇ ಎಂಬುದನ್ನು ನೋಡಲಾಗಿದೆ. 126 ವಸತಿ ವಿತರಣೆಯಲ್ಲಿ, ಪಂಚಾಯತಿ ವ್ಯಾಪ್ತಿಯಲ್ಲಿ ವಸತಿಹೀನ ಕುಟುಂಬಗಳು 10(1.02) ಇದ್ದು, ಈ ಕುಟುಂಬಗಳಿಗೆ ಕೇವಲ 05(3.97)ಮನೆಗಳು ,ಬಡತನ ರೇಖೆ ಕೆಳಗಿನ ಕುಟುಂಬಗಳು 421(42.87) ಇದ್ದು, ಈ ಕುಟುಂಬಗಳಿಗೆ 43(34.12) ಮನೆಗಳು, ಬಡತನರೇಖೆ ಮೇಲಿನ ಕುಟುಂಬಗಳು 551(56.12)ಇದ್ದು, ಈ ಕುಟುಂಬಗಳಿಗೆ 78(61.90) ವಸತಿಗಳನ್ನು ಹಂಚಲಾಗಿದೆ(ಕೋಷ್ಟಕ ಮತ್ತು ರೇಖಾಚಿತ್ರ-21). ಇಲ್ಲಿ ಹೆಚ್ಚು ವಸತಿಗಳು ಬಡತನ ರೇಖೆಯ ಮೇಲಿನ ಕುಟುಂಬಗಳಿಗೆ ವಿತರಣೆಯಾಗಿವೆ.

ಅಂಬೇಡ್ಕರ್ ಯೋಜನೆಯಲ್ಲಿ 61 ಮನೆಗಳು ಹಂಚಿಕೆಯಾಗಿದ್ದು ಈ ವಸತಿಗಳು ನಿಯಮಾವಳಿಗಳ ಪ್ರಕಾರ ಪರಿಶಿಷ್ಟರಿಗೆ ತಲುಪಿಸಲಾಗಿದೆ. ತಾಂತ್ರಿಕ ಲೋಪವಾಗುತ್ತೆ ಎನ್ನುವ ದೃಷ್ಟಿಯಿಂದ ಈ ವಸತಿಗಳನ್ನು ಪರಿಶಿಷ್ಟರಿಗೆ ಕಟ್ಟಿಸಿಕೊಡಲಾಗಿದೆ. ಇಲ್ಲಿ ನಿಜವಾದ ವಸತಿಹೀನ ಮತ್ತು ಬಡತನ ರೇಖೆ ಕೆಳಗಿನ ಪರಿಶಿಷ್ಟರಿಗೆ ತಲುಪದೆ ಬಡತನ ರೇಖೆಯ ಮೇಲಿನ ಕುಟುಂಬಗಳಿಗೆ ಈ ವಸತಿಗಳು ವಿತರಣೆಯಾಗಿವೆ. ಆಶ್ರಯ ಯೋಜನೆಯಲ್ಲಿ 88 ಮನೆಗಳಲ್ಲಿ 38 (43.15) ಮನೆಗಳು ಪರಿಶಿಷ್ಟರಿಗೆ, ಇತರೆ ವರ್ಗದವರಿಗೆ 50 (56.52) ಕಟ್ಟಿಸಿಕೊಡಲಾಗಿದೆ. ಹಾಗಾಗಿ ಆಶ್ರಯ ಯೋಜನೆಯಲ್ಲಿ ಪರಿಶಿಷ್ಟರಿಗೆ ಕಡಿಮೆ ಮನೆಗಳು ವಿತರಣೆಯಾಗಿವೆ.ಪಂಚಾಯತಿ ವ್ಯಾಪ್ತಿಯಲ್ಲಿ ನಿಜವಾದ ಬಡವರಿಗೆ ಆಶ್ರಯ ಮನೆಗಳು ವಿತರಣೆಯಾಗಿಲ್ಲ. ಇಂದಿರಾ ಆವಾಸ್‌ನ 16 ಮನೆಗಳಲ್ಲಿ 09 ಮನೆಗಳನ್ನು ಪರಿಶಿಷ್ಟರಿಗೆ ನಿರ್ಮಿಸಿ ಕೊಡಲಾಗಿದೆ(ಕೋಷ್ಟಕ-17). ಇಂದಿರಾ ಆವಾಸ್ ಯೋಜನೆಯಲ್ಲಿ ಶೇ 60ರಷ್ಟು ಆದ್ಯತೆ ನೀಡಬೇಕು. ಆದರೆ ಇಲ್ಲಿ ಶೇ 52ರಷ್ಟು ಮಾತ್ರ ಆದ್ಯತೆ ನೀಡಲಾಗಿದೆ.

ಜಾತಿವಾರು ವಸತಿಗಳ ಹಂಚಿಕೆಯಲ್ಲಿ ಪರಿಶಿಷ್ಟ ಜಾತಿಗೆ 46(36.52) ಪರಿಶಿಷ್ಟ ಪಂಗಡಕ್ಕೆ 23(18.22) ಹಿಂದುಳಿದ ವರ್ಗಕ್ಕೆ 20(15.88) ಮತ್ತು ಇತರೆ ವರ್ಗಕ್ಕೆ 37(29.38) ಮನೆಗಳು ಹಂಚಿಕೆಯಾಗಿವೆ. ಒಟ್ಟು 126 ಮನೆಗಳಲ್ಲಿ 69 (54.76) ಪರಿಶಿಷ್ಟರಿಗೆ, ಮತ್ತು 57 (45.23) ವಸತಿಗಳನ್ನು ಇತರೆ ವರ್ಗದವರಿಗೆ ಹಂಚಲಾಗಿದೆ. ಶೇ 45ರಷ್ಟು ಪರಿಶಿಷ್ಟರಿಗೆ ವಿತರಣೆಯಾಗಿವೆ(ಕೋಷ್ಟಕ-18). ಇಲ್ಲಿ ಹೆಚ್ಚು ಪರಿಶಿಷ್ಟರೆ ಬಡತನ ರೇಖೆ ಕೆಳಗೆ ಇದ್ದು ಇನ್ನೂ ಹೆಚ್ಚು ಮನೆಗಳು ಈ ವರ್ಗಕ್ಕೆ ತಲುಪಬೇಕಾಗಿತ್ತು. ವಸತಿ ಯೋಜನೆಗಳಿರುವುದೇ ಬಡವರಿಗಾಗೀ ಆದರೆ ಈ ಉದ್ದೇಶಿತ ವರ್ಗಕ್ಕೆ ತಲುಪದೆ ಹೆಚ್ಚು ಮನೆಗಳು ಬಡತನ ರೇಖೆ ಮೇಲಿರುವ ಕುಟುಂಬಗಳಿಗೆ ವಿತರಣೆಯಾಗಿವೆ. ವಿಕೇಂದ್ರೀಕರಣ ಆಶಯ ಇಲ್ಲಿ ಪೂರ್ಣವಾಗಿ ಈಡೇರಿಲ್ಲ. ಇದಕ್ಕೆ ಗ್ರಾಮಸಭೆಯಲ್ಲಿ ಫಲಾನುಭವಿಗಳ ಆಯ್ಕೆ ಆಗದೆ, ತಾಲೂಕು ಮತ್ತು ಜಿಲ್ಲಾ ಪಂಚಾಯತ್ ಸದಸ್ಯರು ರಾಜಕೀಯ ಮತ್ತು ಸ್ಥಳೀಯ ರಾಜಕಾರಣ ಈ ಎಲ್ಲಾ ಅಂಶಗಳು ಕಾರಣವಾಗಿವೆ ಎಂದು ಹೇಳಬಹುದು. ವಸತಿ ಪೂರೈಕೆ ಕುರಿತು ಊರವರ ಅಭಿಪ್ರಾಯ ನೋಡಿದಾಗ ಶೇ.26ರಷ್ಟು ತೃಪ್ತಿಕರವೆಂದು, ಶೇ.35ರಷ್ಟು ಸರಿಯಿಲ್ಲಾವೆಂದು ಮತ್ತು ಶೇ.39ರಷ್ಟು ಗೊತ್ತಿಲ್ಲವೆಂದು ಹೇಳಿದ್ದಾರೆ. ಹೆಚ್ಚು ಅತೃಪ್ತಿಯನ್ನು ಪರಿಶಿಷ್ಟಜಾತಿ ಕುಟುಂಬಗಳು ಸೂಚಿಸಿದ್ದಾವೆ(ಕೋಷ್ಟಕ-21).

## ಬೈಲುವದ್ದಿಗೆರೆ ಗ್ರಾಮಪಂಚಾಯತಿ

ಗ್ರಾಮಪಂಚಾಯತಿ ವ್ಯಾಪ್ತಿಯ ನಾಲ್ಕು ಗ್ರಾಮಗಳಲ್ಲಿ ಕಳೆದ 5ವರ್ಷದಿಂದ 148 ಮನೆಗಳನ್ನು ವಿವಿಧ ವಸತಿ ಯೋಜನೆಗಳಲ್ಲಿ ನಿರ್ಮಿಸಲಾಗಿದೆ. ಗ್ರಾಮಿಣ ವಸತಿ ಯೋಜನೆಗಳಾದ ಆಶ್ರಯ ಯೋಜನೆಯಲ್ಲಿ 28, ಇಂದಿರಾ ಆವಾಸ್ ಯೋಜನೆಯು 63 ಮತ್ತು ಅಂಬೇಡ್ಕರ್ ಯೋಜನೆಯಲ್ಲಿ 27 ಮನೆಗಳನ್ನು ನಿರ್ಮಿಸಲಾಗಿದೆ(ಕೋಷ್ಟಕ-16).[20] ಈ ಪಂಚಾಯತಿ ವ್ಯಾಪ್ತಿಯಲ್ಲಿ ಇಂದಿರಾ ಆವಾಸ್ ಯೋಜನೆಯಲ್ಲಿ ಹೆಚ್ಚು ವಸತಿಗಳನ್ನು ಕಟ್ಟಲಾಗಿದೆ. ಒಟ್ಟು 1312 ಕುಟುಂಬಗಳಲ್ಲಿ, 54(4.16) ವಸತಿಹೀನ ಕುಟುಂಬಗಳು,

519 (39.56) ಬಡತನ ರೇಖೆಗಿಂತ ಕೆಳಗಿನ ಕುಟುಂಬಗಳು, 739(69.91) ಬಡತನ ರೇಖೆಗಿಂತ ಮೇಲಿನ ಕುಟುಂಬಗಳಿವೆ. ಬಡತನ ರೇಖೆಗಿಂತ ಕೆಳಗಿನ ಕುಟುಂಬಗಳಲ್ಲಿ ಶೇ.54ರಷ್ಟು ಪರಿಶಿಷ್ಟರು, ಶೇ.15 ರಷ್ಟು ಹಿಂದುಳಿದ ವರ್ಗದಲ್ಲಿ, ಶೇ. 31ರಷ್ಟು ಇತರೇ ವರ್ಗಗಳಲ್ಲಿ ಇದ್ದಾವೆ(ಕೋಷ್ಟಕ-15).[21] ಜಾತಿವಾರು ಆರ್ಥಿಕ ಮಟ್ಟವನ್ನು ಅಳೆಯುವುದಾದರೇ ಪರಿಶಿಷ್ಟರು ಹೆಚ್ಚು ಬಡವರಿದ್ದು,ಹಿಂದುಳಿದ ವರ್ಗದವರು ಮತ್ತು ಇತರೇ ವರ್ಗದವರು ಆರ್ಥಿಕವಾಗಿ ಉತ್ತಮ ಸ್ಥಿತಿಯಲ್ಲಿದ್ದಾರೆ.

ಗ್ರಾಮವಾರು ವಸತಿ ಹಂಚಿಕೆಯನ್ನು ನೋಡಿದಾಗ, ಬೈಲುವದ್ದಿಗೆರೆಯಲ್ಲಿ 34, ಕಾಕಬಾಳು 32, ಧರ್ಮಸಾಗರದಲ್ಲಿ 31 ಮತ್ತು ಗುಂಡ್ಲುವದ್ದಿಗೆರೆ 16ಮನೆಗಳು ವಿತರಣೆಯಾಗಿವೆ(ಕೋಷ್ಟಕ-19). ಗ್ರಾಮಪಂಚಾಯತಿ ಕೇಂದ್ರ ಸ್ಥಳವಾದ ಬೈಲುವದ್ದಿಗೆರೆಗೆ ಹೆಚ್ಚು ಮನೆಗಳು ವಿತರಣೆಯಾಗಿವೆ. ವಸತಿ ಹೀನ ಕುಟುಂಬಗಳು ಕಾಕಬಾಳು ಗ್ರಾಮದಲ್ಲಿ ಹೆಚ್ಚು ಇದ್ದುರು ಸಹ ಕಡಿಮೆ ವಸತಿಗಳನ್ನು ನಿರ್ಮಿಸಲಾಗಿದೆ. ವಸತಿಹೀನ ಕುಟುಂಬಗಳು ಅಧಿಕ ಇದ್ದರೂ ಕೇವಲ 7 ಮನೆಗಳು ಮಾತ್ರ ವಿತರಣೆಯಾಗಿವೆ. ಈ ಪಂಚಾಯತಿ ವ್ಯಾಪ್ತಿಯಲ್ಲಿ ವಸತಿಹೀನ ಕುಟುಂಬಗಳ ಸಂಖ್ಯೆ ಹೆಚ್ಚು ಇದೆ. ಒಣಭೂಮಿ ಪ್ರದೇಶವಾಗಿರುವುದರಿಂದ ಆರ್ಥಿಕವಾಗಿ ದುರ್ಬಲರಾಗಿರುವುದರಿಂದ ವಸತಿಗೆ ಹೆಚ್ಚು ಬೇಡಿಕೆ ಇದೆ. ಪರಿಶಿಷ್ಟರ ಹೆಚ್ಚು ಕುಟುಂಬಗಳು ಜೋಪಡಿಗಳಲ್ಲಿ ವಾಸವಾಗಿದ್ದಾವೆ.

1995 ರಿಂದ 2000ದ ವರೆಗೆ ಒಟ್ಟು 148 ವಸತಿ ಫಲಾನುಭವಿಗಳಿದ್ದು, ಇದರಲ್ಲಿ 113 ಫಲಾನುಭವಿಗಳ ಹೆಸರು ಲಭ್ಯವಿದೆ. ಈ ಫಲಾನುಭವಿಗಳ ಹಂಚಿಕೆಯನ್ನು ನೋಡಿದಾಗ, ಪಂಚಾಯತಿ ವ್ಯಾಪ್ತಿಯಲ್ಲಿ ವಸತಿಹೀನ ಕುಟುಂಬಗಳು 54(4.16) ಇದ್ದು, ಈ ಕುಟುಂಬಗಳಿಗೆ ಕೇವಲ 07(6.19)ಮನೆಗಳು, ಬಡತನ ರೇಖೆ ಕೆಳಗಿನ ಕುಟುಂಬಗಳು 519(39.56) ಇದ್ದು, ಈ ಕುಟುಂಬಗಳಿಗೆ 27(23.89) ಮನೆಗಳು, ಬಡತನ ರೇಖೆ ಮೇಲಿನ ಕುಟುಂಬಗಳು 739(56.33)ಇದ್ದು, ಈ ಕುಟುಂಬಗಳಿಗೆ 79(69.91) ವಸತಿಗಳು ಹಂಚಲಾಗಿದೆ(ಕೋಷ್ಟಕ -21). ಇಲ್ಲಿ ಹೆಚ್ಚು ವಸತಿಗಳು ಬಡತನ ರೇಖೆಯ ಮೇಲಿನ ಕುಟುಂಬಗಳಿಗೆ ವಿತರಣೆಯಾಗಿವೆ.

ಜಾತಿವಾರು ವಸತಿ ಹಂಚಿಕೆಯನ್ನು ನೋಡಿದಾಗ ಪರಿಶಿಷ್ಟ ಜಾತಿಗೆ 51(45.13), ಪರಿಶಿಷ್ಟ ಪಂಗಡ 19(16.82), ಹಿಂದುಳಿದ ವರ್ಗ 17(15.04) ಮತ್ತು ಇತರೆ ವರ್ಗಗಳಿಗೆ 26(23.01) ವಸತಿಗಳು ಹಂಚಿಕೆಯಾಗಿವೆ. ಜಾತಿವಾರು ನೋಡಿದಾಗ ಪರಿಶಿಷ್ಟರಿಗೆ ಹೆಚ್ಚು ಮನೆಗಳು ವಿತರಣೆಯಾಗಿವೆ (ಕೋಷ್ಟಕ-18). ಹೆಚ್ಚು ಪರಿಶಿಷ್ಟರ ಯೋಜನೆಗಳಲ್ಲಿ ಮನೆಗಳನ್ನು ನಿರ್ಮಿಸಿರುವುದರಿಂದ ಅಧಿಕ ಮನೆಗಳು ಪರಿಶಿಷ್ಟರ ಪಾಲಾಗಿವೆ. ಆದರೆ ಬಡತನ ರೇಖೆ ಕೆಳಗೆ ಇರುವ ಪರಿಶಿಷ್ಟರಿಗೆ ವಿತರಣೆಯಾಗದೇ, ಬಡತನ ರೇಖೆ ಮೇಲಿರುವ ಪರಿಶಿಷ್ಟರ ಕುಟುಂಬಗಳಿಗೆ ವಿತರಿಸಲಾಗಿದೆ. ವಸತಿ ವಿತರಣೆ ಕುರಿತು ಊರವರ ಅಭಿಪ್ರಾಯ ನೋಡಿದಾಗ ಶೇ.15ರಷ್ಟು ತೃಪ್ತಿಕರವೆಂದು, ಶೇ.43ರಷ್ಟು ಸರಿಯಿಲ್ಲವೆಂದು ಮತ್ತು ಶೇ.42ರಷ್ಟು ಗೊತ್ತಿಲ್ಲವೆಂದು ಹೇಳಿದ್ದಾರೆ. ಹೆಚ್ಚು ಅತೃಪ್ತಿಯನ್ನು ಪರಿಶಿಷ್ಟ ಕುಟುಂಬಗಳು ಸೂಚಿಸಿವೆ. ಹೀಗೆ ಬೈಲುವದ್ದಿಗೆರೆ ಪಂಚಾಯತಿ ವ್ಯಾಪ್ತಿಯಲ್ಲಿ ವಸತಿ ವಿತರಿಸಲಾಗಿದೆ.

## ಹಿರೇಹೆಗ್ಡಾಳ್ ಗ್ರಾಮಪಂಚಾಯತಿ

ಹಿರೇಹೆಗ್ಡಾಳ್ ಗ್ರಾಮಪಂಚಾಯತಿಯ ನಾಲ್ಕು ಗ್ರಾಮಗಳಲ್ಲಿ 1995ರಿಂದ 2000ರ ವರೆಗೆ ವಿವಿಧ ಗ್ರಾಮೀಣ ವಸತಿ ಯೋಜನೆಗಳಿಂದ ಒಟ್ಟು 147 ಮನೆಗಳನ್ನು ಕಟ್ಟಿಸಲಾಗಿದೆ. ಅದರಲ್ಲಿ ಆಶ್ರಯ ಯೋಜನೆಯಡಿಯಲ್ಲಿ 29, ಇಂದಿರಾ ಆವಾಸ್ ಯೋಜನೆಯಡಿಯಲ್ಲಿ 100, ಮತ್ತು ಅಂಬೇಡ್ಕರ್ ಯೋಜನೆಯಡಿಯಲ್ಲಿ 36 ಮನೆಗಳನ್ನು ನಿರ್ಮಿಸಲಾಗಿದೆ(ಕೋಷ್ಟಕ-16).[22] ಇಂದಿರಾ ಆವಾಸ್ ಯೋಜನೆಯಲ್ಲಿ ಅತಿ ಹೆಚ್ಚು ವಸತಿಗಳನ್ನು ಹಂಚಲಾಗಿದೆ. ಗ್ರಾಮಪಂಚಾಯತಿಯ ಒಟ್ಟು 804 ಕುಟುಂಬಗಳಲ್ಲಿ, 08(0.91)ವಸತಿಹೀನ ಕುಟುಂಬಗಳು, 380 (43.53) ಕುಟುಂಬಗಳು ಬಡತನ ರೇಖೆಗಿಂತ ಕೆಳಗೆ ಮತ್ತು 446(55.48) ಬಡತನ ರೇಖೆ ಮೇಲಿನ ಕುಟುಂಬಗಳು ಇವೆ. ಆರ್ಥಿಕ ಮಟ್ಟವನ್ನು ಜಾತಿವಾರು ನೋಡಿದಾಗ ಶೇ 54ರಷ್ಟು ಪರಿಶಿಷ್ಟರು ಬಡವರಿದ್ದಾರೆ.[23] ಹಿಂದುಳಿದ ವರ್ಗ ಮತ್ತು ಇತರೆ ವರ್ಗದ ಕುಟುಂಬಗಳು ಆರ್ಥಿಕವಾಗಿ ಉತ್ತಮವಾಗಿದ್ದಾರೆ.

ಒಟ್ಟು ಐದು ವರ್ಷಗಳಲ್ಲಿ 147 ವಸತಿಗಳನ್ನು ನಿರ್ಮಿಸಿದ್ದು, ಇದರಲ್ಲಿ 136 ಫಲಾನುಭವಿಗಳ ಹೆಸರುಗಳು ಲಭ್ಯವಿವೆ. ಈ ವಸತಿಗಳ ಹಂಚಿಕೆಯನ್ನು ನೋಡಿದಾಗ ಪಂಚಾಯತಿ ವ್ಯಾಪ್ತಿಯಲ್ಲಿ ವಸತಿಹೀನ ಕುಟುಂಬಗಳು 08(0.91) ಇದ್ದು, ಈ ಕುಟುಂಬಗಳಿಗೆ 06(4.41)ಮನೆಗಳು ,ಬಡತನ ರೇಖೆ ಕೆಳಗಿನ ಕುಟುಂಬಗಳು 380(43.53) ಇದ್ದು, ಈ ಕುಟುಂಬಗಳಿಗೆ 50(36.76) ಮನೆಗಳು, ಬಡತನ ರೇಖೆ ಮೇಲಿನ ಕುಟುಂಬಗಳು 446(55.48)ಇದ್ದು, ಈ ಕುಟುಂಬಗಳಿಗೆ 80(58.82) ವಸತಿಗಳು ಬಡತನ ರೇಖೆಯ ಮೇಲಿನ ಕುಟುಂಬಗಳಿಗೆ ಹಂಚಲಾಗಿದೆ(ಕೋಷ್ಟಕ-20). ಇಲ್ಲಿ ಹೆಚ್ಚು ವಸತಿಗಳು ಬಡತನ ರೇಖೆಯ ಮೇಲಿನ ಕುಟುಂಬಗಳಿಗೆ ವಿತರಣೆಯಾಗಿವೆ.ಈ ಪಂಚಾಯತಿಯಲ್ಲೂ ಸಹ ಉದ್ದೇಶಿತ ವರ್ಗಕ್ಕೆ ಹೆಚ್ಚು ಮನೆಗಳೂ ವಿತರಣೆಯಾಗಿಲ್ಲ ಎಂಬುದು ಸ್ಪಷ್ಟವಾಗಿ ಕಂಡುಬಂದಿದೆ. ಗ್ರಾಮವಾರು ವಸತಿ ಹಂಚಿಕೆಯನ್ನು ನೋಡಿದಾಗ ಹಿರೇಹೆಗ್ಡಾಳ್‌ನಲ್ಲಿ 76, ಸಾಸಲವಾಡದಲ್ಲಿ 21, ಸಾಣೇಹಳ್ಳಿಯಲ್ಲಿ 22 ಮತ್ತು ಬೊಪ್ಪಲಪುರದಲ್ಲಿ 17 ವಸತಿಗಳನ್ನು ನಿರ್ಮಿಸಲಾಗಿದೆ(ಕೋಷ್ಟಕ-19). ಈ ಅಂಕಿ ಅಂಶಗಳನ್ನು ಗಮನಿಸಿದಾಗ ಗ್ರಾಮಪಂಚಾಯತಿ ಕೇಂದ್ರ ಸ್ಥಳಕ್ಕೆ ಹೆಚ್ಚು ಆದ್ಯತೆ ನೀಡಲಾಗಿದೆ.

ವಸತಿಗಳ ಜಾತಿವಾರು ಹಂಚಿಕೆಯನ್ನು ನೋಡಿದಾಗ ಪರಿಶಿಷ್ಟ ಜಾತಿ 76(55.88), ಪರಿಶಿಷ್ಟ ಪಂಗಡ16(11.76), ಹಿಂದುಳಿದ ವರ್ಗಕ್ಕೆ ಹಾಗೂ ಇತರೇ ವರ್ಗಗಳಿಗೆ ತಲಾ 22(16.17) ಮನೆಗಳು ಹಂಚಿಕೆಯಾಗಿವೆ(ಕೋಷ್ಟಕ-18). ಶೇ. 68ರಷ್ಟು ಪರಿಶಿಷ್ಟರ ಪಾಲಾಗಿದ್ದು, ಹೆಚ್ಚು ಮನೆಗಳು ಪರಿಶಿಷ್ಟರಿಗೆ ಹಂಚಲಾಗಿದೆ. ಆದರೆ ಬಡತನ ರೇಖೆ ಕೆಳಗಿರುವ ಪರಿಶಿಷ್ಟರಿಗೆ ತಲುಪದೇ,ಪರಿಶಿಷ್ಟರಲ್ಲಿ ಬಡತನ ರೇಖೆ ಮೇಲಿರುವ ಕುಟುಂಬಗಳಿಗೆ ತಲುಪಿವೆ ಎಂದು ಹೇಳಬಹುದು. ಪರಿಶಿಷ್ಟರ ಯೋಜನೆಗಳಾದ ಇಂದಿರಾ ಆವಾಸ್ ಮತ್ತು ಅಂಬೇಡ್ಕರ್ ಯೋಜನೆಗಳಲ್ಲಿ ಹೆಚ್ಚು ವಸತಿಗಳು ಬಂದಿದ್ದರಿಂದ ಹೆಚ್ಚು ಪರಿಶಿಷ್ಟರಿಗೆ ವಸತಿಗಳನ್ನು ಕಟ್ಟಿಸಲಾಗಿದೆ. ಆಶ್ರಯ ಯೋಜನೆಯ 32 ಮನೆಗಳಲ್ಲಿ 20 ಮನೆಗಳನ್ನು ಪರಿಶಿಷ್ಟರಿಗೆ, ಇಂದಿರಾ ಆವಾಸ್ ಯೋಜನೆಯ 78 ಮನೆಗಳಲ್ಲಿ, 46 ಮನೆಗಳನ್ನು ಪರಿಶಿಷ್ಟರಿಗೆ ಮತ್ತು ಅಂಬೇಡ್ಕರ್ ಯೋಜನೆಯಡಿಯಲ್ಲಿ ಎಲ್ಲಾ 26 ಮನೆಗಳನ್ನು ಪರಿಶಿಷ್ಟರಿಗೆ ವಿತರಿಸಲಾಗಿದೆ(ಕೋಷ್ಟಕ-17).

ಹೆಚ್ಚು ಬಡತನ ರೇಖೆ ಕುಟುಂಬಗಳು ಇತರೆ ಗ್ರಾಮಗಳಲ್ಲಿ ಇದ್ದರೂ ಹಿರೇಹೆಗ್ಡಾಳ್ ಗ್ರಾಮಕ್ಕೆ ಹೆಚ್ಚಿನ ಪ್ರಾಧಾನ್ಯತೆ ನೀಡಲಾಗಿದೆ. ಈ ಪಂಚಾಯತಿ ವ್ಯಾಪ್ತಿಯ ಆಶ್ರಯ ಯೋಜನೆಯಲ್ಲಿ ಸಹ ಪರಿಶಿಷ್ಟರಿಗೆ ಹೆಚ್ಚು ಮನೆಗಳನ್ನು ವಿತರಿಸಲಾಗಿದೆ. ಇದು ನೀರಾವರಿ ಪ್ರದೇಶವಾಗಿದ್ದು ವಸತಿ ಹೀನ ಕುಟುಂಬಗಳು ಸಂಖ್ಯೆ ಕಡಿಮೆ ಇದ್ದು, ಪರಿಶಿಷ್ಟರು ಹೆಚ್ಚು ಇರುವುದರಿಂದ ಬಡತನ ರೇಖೆ ಕೆಳಗಿನ ಕುಟುಂಬಗಳು ಹೆಚ್ಚಿವೆ. ಪರಿಶಿಷ್ಟರಿಗೆ ಹೆಚ್ಚು ವಸತಿಗಳನ್ನು ಕಟ್ಟಿಸಿ ಕೊಡಲಾಗಿದೆ. ಆದರೆ ಬಡತನ ರೇಖೆಯ ಮೇಲಿನ ಕುಟುಂಬಗಳಿಗೆ ಹೆಚ್ಚಿನ ಮನೆಗಳನ್ನು ಹಂಚಲಾಗಿದೆ. ಹೀಗೆ ಹಿರೇಹೆಗ್ಡಾಳ್ ಗ್ರಾಮಪಂಚಾಯತಿ ವ್ಯಾಪ್ತಿಯ ಗ್ರಾಮಗಳಲ್ಲಿ ವಸತಿಗಳನ್ನು ವಿತರಿಸಲಾಗಿದೆ.

ವಸತಿ ವಿತರಣೆ ಕುರಿತು ಊರವರ ಅಭಿಪ್ರಾಯ ನೋಡಿದಾಗ ಶೇ.40ರಷ್ಟು ತೃಪ್ತಿಕರವೆಂದು, ಶೇ.21ರಷ್ಟು ಸರಿಯಿಲ್ಲವೆಂದು ಮತ್ತು ಶೇ.37ರಷ್ಟು ಗೊತ್ತಿಲ್ಲವೆಂದು ಹೇಳಿದ್ದಾರೆ(ಕೋಷ್ಟಕ-21). ಹೆಚ್ಚು ಅತೃಪ್ತಿಯನ್ನು ಇತರೆ ವರ್ಗದ ಕುಟುಂಬಗಳು ಸೂಚಿಸಿವೆ. ಹೆಚ್ಚು ಪರಿಶಿಷ್ಟರ ಯೋಜನೆಗಳು ಅನುಷ್ಠಾನಗೊಂಡಿರುವುದರಿಂದ ಈ ವರ್ಗಗಳು ಅತೃಪ್ತಿಯನ್ನು ವ್ಯಕ್ತಪಡಿಸಿವೆ. ಪಂಚಾಯತಿ ವ್ಯಾಪ್ತಿಯ ಗ್ರಾಮಗಳ ಜನರು ವಸತಿ ವಿತರಣೆ ಕುರಿತು ಹೀಗೆ ಅಭಿಪ್ರಾಯಪಟ್ಟಿದ್ದಾರೆ.

### ಉಜ್ಜಿನಿ ಗ್ರಾಮಪಂಚಾಯತಿ

ಅಧ್ಯಯನಕ್ಕೆ ಆಯ್ಕೆ ಮಾಡಿಕೊಂಡ ಗ್ರಾಮಪಂಚಾಯತಿಗಳಲ್ಲಿ ಉಜ್ಜಿನಿ ದೊಡ್ಡ ಗ್ರಾಮ ಪಂಚಾಯತಿಯಾಗಿದೆ. ಒಟ್ಟುಪಂಚಾಯತಿಯ 1661 ಕುಟುಂಬಗಳಲ್ಲಿ 60(3.12) ವಸತಿ ಹೀನ ಕುಟುಂಬಗಳು, 479 (28.83) ಬಡತನದ ರೇಖೆ ಕೆಳಗಿನ ಕುಟುಂಬಗಳು, ಮತ್ತು 1122(47.55) ಬಡತನ ರೇಖೆಗಿಂತ ಮೇಲಿನ ಕುಟುಂಬಗಳಿವೆ(ಕೋಷ್ಟಕ-15).[24] ಈ ಗ್ರಾಮಪಂಚಾಯತಿ ವ್ಯಾಪ್ತಿಯಲ್ಲಿ ಒಟ್ಟು 1995ರಿಂದ 2000ವರೆಗೆ ವಿವಿಧ ವಸತಿ ಯೋಜನೆಯಲ್ಲಿ 108 ಮನೆಗಳನ್ನು ನಿರ್ಮಿಸಲಾಗಿದೆ. ವಸತಿ ಯೋಜನೆಗಳಾದ ಆಶ್ರಯ ಯೋಜನೆಯಡಿಯಲ್ಲಿ 22, ಇಂದಿರಾ ಆವಾಸ್ ಯೋಜನೆಯಡಿಯಲ್ಲಿ 32, ಮತ್ತು ಅಂಬೇಡ್ಕರ್ ಯೋಜನೆಯಡಿಯಲ್ಲಿ 54 ಮನೆಗಳನ್ನು ವಿತರಿಸಲಾಗಿದೆ(ಕೋಷ್ಟಕ-16).[25] ಹೆಚ್ಚು ಪರಿಶಿಷ್ಟರ ಯೋಜನೆಗಳಲ್ಲಿ ವಸತಿಗಳನ್ನು ನಿರ್ಮಿಸಲಾಗಿದೆ.

ಒಟ್ಟು 108 ವಸತಿಗಳನ್ನು ನಿರ್ಮಿಸಿದ್ದು, ಅದರಲ್ಲಿ 96 ಫಲಾನುಭವಿಗಳ ಹೆಸರುಗಳು ಲಭ್ಯವಿದ್ದು, ಈ ಪಟ್ಟಿಯನ್ನು ಬಡತನ ರೇಖೆಗಿಂತ ಕೆಳಗಿನ ಕುಟುಂಬಗಳ ಪಟ್ಟಿಗೆ ಹೋಲಿಕೆ ಮಾಡಲಾಗಿದೆ.ಈ ವಸತಿಗಳ ಹಂಚಿಕೆಯನ್ನು ತುಲನೆ ಮಾಡಿ ನೋಡಿದಾಗ, ಪಂಚಾಯತಿ ವ್ಯಾಪ್ತಿಯಲ್ಲಿ ವಸತಿಹೀನ ಕುಟುಂಬಗಳು 60(3.12) ಇದ್ದು, ಈ ಕುಟುಂಬಗಳಿಗೆ 06(6.31)ಮನೆಗಳು ,ಬಡತನ ರೇಖೆ ಕೆಳಗಿನ ಕುಟುಂಬಗಳು 479(28.83) ಇದ್ದು, ಈ ಕುಟುಂಬಗಳಿಗೆ 30(31.25) ಮನೆಗಳು, ಬಡತನ ರೇಖೆ ಮೇಲಿನ ಕುಟುಂಬಗಳು 1122(47.55)ಇದ್ದು, ಈ ಕುಟುಂಬಗಳಿಗೆ 60(62.50) ವಸತಿಗಳು ಬಡತನ ರೇಖೆಯ ಮೇಲಿನ ಕುಟುಂಬಗಳಿಗೆ ಹಂಚಲಾಗಿದೆ(ಕೋಷ್ಟಕ-20). ಇಲ್ಲಿ ಹೆಚ್ಚು ವಸತಿಗಳು ಬಡತನ ರೇಖೆಯ ಮೇಲಿನ ಕುಟುಂಬಗಳಿಗೆ

ವಿತರಣೆಯಾಗಿವೆ.ಈ ಪಂಚಾಯತಿಯಲ್ಲೂ ಸಹ ಉದ್ದೇಶಿತ ವರ್ಗಕ್ಕೆ ಹೆಚ್ಚು ಮನೆಗಳೂ ವಿತರಣೆಯಾಗಿಲ್ಲ ಎಂಬುದು ಸ್ಪಷ್ಟವಾಗಿ ಕಂಡುಬಂದಿದೆ.

ವಿವಿಧ ವಸತಿ ಯೋಜನೆಗಳಲ್ಲಿ ಮನೆಗಳ ಹಂಚಿಕೆಯನ್ನು ಜಾತಿವಾರು ನೋಡಿದಾಗ, ಆಶ್ರಯ 17 ಮನೆಗಳಲ್ಲಿ 2 ವಸತಿಗಳು ಪರಿಶಿಷ್ಟರಿಗೆ ಮತ್ತು 17 ಮನೆಗಳು ಇತರೆ ವರ್ಗದವರಿಗೆ, ಇಂದಿರಾ ಆವಾಸ್‌ನ 38 ಮನೆಗಳಲ್ಲಿ 15 ಮನೆಗಳನ್ನು ಪರಿಶಿಷ್ಟರಿಗೆ ಮತ್ತು ಇತರೆ ವರ್ಗದವರಿಗೆ 23 ಮನೆಗಳು, ಹಂಚಲಾಗಿದೆ(ಕೋಷ್ಟಕ-18). ಈ ಎರಡು ಯೋಜನೆಯಲ್ಲಿ ಪರಿಶಿಷ್ಟರಿಗೆ ಕಡಿಮೆ ಆದ್ಯತೆಯನ್ನು ನೀಡಲಾಗಿದೆ. ಅಂಬೇಡ್ಕರ್ ಮತ್ತು ಇಂದಿರಾ ಆವಾಸ್ ಯೋಜನೆಗಳು ಹೆಚ್ಚು ಬಂದಿರುವುದರಿಂದ ಪರಿಶಿಷ್ಟರಿಗೆ ಹೆಚ್ಚು ವಸತಿಗಳು ದೊರಕಿವೆ ಎಂದು ಹೇಳಬಹುದು. ಆಶ್ರಯ ಯೋಜನೆಯಲ್ಲಿ ಕೇವಲ ಎರಡು ಮನೆಗಳನ್ನು ಮಾತ್ರ ಪರಿಶಿಷ್ಟರಿಗೆ ನೀಡಲಾಗಿದೆ. ಅಂದರೆ ಈ ಯೋಜನೆಯಲ್ಲಿ ಪರಿಶಿಷ್ಟರಿಗೆ ಹೆಚ್ಚು ಆದ್ಯತೆ ನೀಡಿಲ್ಲ.

ಗ್ರಾಮವಾರು ಹಂಚಿಕೆಯನ್ನು ನೋಡಿದಾಗ ಉಜ್ಜನಿ 65, ಬೆನಕನಹಳ್ಳಿ 15, ಬೈರದೇವರಗುಡ್ಡ 16 ಮನೆಗಳನ್ನು ವಿತರಿಸಲಾಗಿದೆ(ಕೋಷ್ಟಕ-19). ಗ್ರಾಮಪಂಚಾಯತಿಯ ಕೇಂದ್ರ ಸ್ಥಳವಾದ ಉಜ್ಜನಿಯಲ್ಲಿ ಅಧಿಕ ವಸತಿಗಳು ವಿತರಣೆಯಾಗಿದೆ. ಈ ಗ್ರಾಮಪಂಚಾಯತಿಯು ಪೂರ್ತಿ ಒಣಭೂಮಿ ಪ್ರದೇಶವಾಗಿದ್ದರೂ ಕಡಿಮೆ ಬಡವರಿದ್ದಾರೆ. ಕಾರಣ ಕೃಷಿಯೇತರ ಚಟುವಟಿಕೆಗಳಲ್ಲಿ ತೊಡಗಿರುವವರು, ಹಿಂದುಳಿದವರ್ಗ ಹಾಗೂ ಮೇಲ್ವರ್ಗದ ಕುಟುಂಬಗಳು ಹೆಚ್ಚಾಗಿರುವುದರಿಂದ ಕಡಿಮೆ ಬಡವರಿದ್ದಾರೆ. ಅದರಲ್ಲೂ ಇಲ್ಲಿರುವ ಪರಿಶಿಷ್ಟರು ಹೆಚ್ಚು ವಸತಿ ಹೀನರಿದ್ದು ಇವರಿಗೆ ವಸತಿ ಹಂಚಿಕೆಯಾಗಿಲ್ಲ. ಇಲ್ಲಿ ಕೆಳಜಾತಿಗಳಿಗೆ ವಸತಿ ಸಮಸ್ಯೆ ಹೆಚ್ಚು ಇದ್ದು, ವಸತಿಗೆ ಬೇಡಿಕೆಯು ಸಹ ಹೆಚ್ಚು ಇದೆ.

ಜಾತಿವಾರು ವಸತಿ ಹಂಚಿಕೆಯನ್ನು ನೋಡಿದಾಗ ಪರಿಶಿಷ್ಟಜಾತಿಗೆ 36(36.17), ಪರಿಶಿಷ್ಟ ಪಂಗಡಕ್ಕೆ 22(23.34), ಹಿಂದುಳಿದ ವರ್ಗಕ್ಕೆ 20(24.46) ಮತ್ತು ಇತರೆ ವರ್ಗದ ಕುಟುಂಬಗಳಿಗೆ 18(17.02) ವಸತಿಗಳನ್ನು ಒದಗಿಸಲಾಗಿದೆ(ಕೋಷ್ಟಕ-18). ಹೆಚ್ಚು ಪರಿಶಿಷ್ಟರ ಯೋಜನೆಗಳು ಈ ಪಂಚಾಯತಿಯಲ್ಲಿ ಹೆಚ್ಚು ಅನುಷ್ಠಾನಗೊಂಡಿದ್ದರಿಂದ ಅಧಿಕ ಮನೆಗಳು ಪರಿಶಿಷ್ಟರಿಗೆ ವಿತರಣೆಯಾಗಿವೆ ಎಂದು ಹೇಳಬಹುದು. ವಸತಿ ವಿತರಣೆ ಕುರಿತು ಊರವರ ಅಭಿಪ್ರಾಯ ನೋಡಿದಾಗ ಶೇ.16ರಷ್ಟು ತೃಪ್ತಿಕರವೆಂದು, ಶೇ.40ರಷ್ಟು ಸರಿಯಿಲ್ಲವೆಂದು ಮತ್ತು ಶೇ.42ರಷ್ಟು ಗೊತ್ತಿಲ್ಲವೆಂದು ಹೇಳಿದ್ದಾರೆ(ಕೋಷ್ಟಕ-21). ಇಲ್ಲಿಯೂ ಸಹ ಹೆಚ್ಚು ಪರಿಶಿಷ್ಟರ ಯೋಜನೆಗಳು ಅನುಷ್ಠಾನಗೊಂಡಿದ್ದರಿಂದ ಇತರೆ ವರ್ಗಗಳು ವಸತಿ ಬಗ್ಗೆ ಹೆಚ್ಚು ಅತೃಪ್ತಿಯನ್ನು ಸೂಚಿಸಿದ್ದಾವೆ ಎಂದು ಹೇಳಬಹುದು.ಹೀಗೆ ಪಂಚಾಯತಿ ವ್ಯಾಪ್ತಿಯ ಗ್ರಾಮಗಳಲ್ಲಿ ವಸತಿ ವಿತರಣೆ ಮಾಡಲಾಗಿದೆ.

## 4.3.ಗ್ರಾಮಪಂಚಾಯತಿಗಳ ತೌಲನಿಕ ವಿವರಣೆ

ಅಧ್ಯಯನದ ನಾಲ್ಕು ಗ್ರಾಮಪಂಚಾಯತಿಗಳಿಂದ 1995ರಿಂದ 2000 ಅವಧಿಯೊಳಗೆ ಒಟ್ಟು 601ವಸತಿಗಳನ್ನು ನಿರ್ಮಿಸಲಾಗಿದೆ. ಗ್ರಾಮಪಂಚಾಯತಿವಾರು ನೋಡಿದಾಗ ನಾಗೇನಹಳ್ಳಿಯಲ್ಲಿ

228, ಬೈಲುವದ್ದಿಗೆರೆಯಲ್ಲಿ 118, ಹಿರೇಹೆಗ್ಡಾಳ್‌ನಲ್ಲಿ147 ಮತ್ತು ಉಜ್ಜನಿಯಲ್ಲಿ 108 ವಸತಿಗಳನ್ನು ಕಟ್ಟಲಾಗಿದೆ(ಕೋಷ್ಟಕ-16).[26] ಗ್ರಾಮಪಂಚಾಯತಿಗಳಲ್ಲಿ ವಸತಿ ನಿರ್ಮಾಣವನ್ನು ತೌಲನಿಕವಾಗಿ ನೋಡಿದಾಗ ನೀರಾವರಿ ಪ್ರದೇಶಗಳಾದ ನಾಗೇನಹಳ್ಳಿ ಮತ್ತು ಹಿರೇಹೆಗ್ಡಾಳ್ ಪಂಚಾಯತಿಗಳಲ್ಲಿ, ಒಣಭೂಮಿ ಪ್ರದೇಶಗಳಾದ ಬೈಲುವದ್ದಿಗೆರೆ ಮತ್ತು ಉಜ್ಜನಿ ಗ್ರಾಮಪಂಚಾಯತಿಗಳಿಗಿಂತ ಹೆಚ್ಚು ವಸತಿಗಳನ್ನು ನಿರ್ಮಿಸಲಾಗಿದೆ. ಈ ವಸತಿ ಹೆಚ್ಚಳಕ್ಕೆ ಕೆಲವು ಕಾರಣಗಳನ್ನು ಹೀಗೆ ಗುರುತಿಸಲಾಗಿದೆ. ನಾಗೇನಹಳ್ಳಿ ಮತ್ತು ಹಿರೇಹೆಗ್ಡಾಳ್ ಪಂಚಾಯತ್ ಪ್ರದೇಶಗಳು ತಾಲೂಕಿಗೆ ಹತ್ತಿರವಿದ್ದು, ತಾಲೂಕು ಮತ್ತು ಜಿಲ್ಲಾ ಪಂಚಾಯತಿ ಸದಸ್ಯರು ಕಾಂಗ್ರೇಸ್ ಪಕ್ಷಕ್ಕೆ ಸೇರಿದ್ದು ಹಾಗೂ ಕಾಂಗ್ರೆಸಾ ಪಕ್ಷವೇ ಗ್ರಾಮ ಪಂಚಾಯತಿ ಆಡಳಿತ ನಡೆಸುತ್ತಿದೆ. ಇವೆಲ್ಲಾ ಅಂಶಗಳು ಹೆಚ್ಚಿನ ವಸತಿ ನಿರ್ಮಾಣಕ್ಕೆ ಕಾರಣವಾಗಬಹುದು. ಒಣಭೂಮಿ ಪ್ರದೇಶಗಳಾದ ಬೈಲುವದ್ದಿಗೆರೆ ಮತ್ತು ಉಜ್ಜನಿಯಲ್ಲಿ ಕಡಿಮೆ ವಸತಿಗಳು ನಿರ್ಮಾಣವಾಗಿವೆ. ತಾಲೂಕಿನ ಕೇಂದ್ರಕ್ಕೆ ಈ ಪ್ರದೇಶಗಳು ದೂರ, ತಾಲೂಕು ಪಂಚಾಯತಿ ಸದಸ್ಯರು ಕಾಂಗ್ರೇಸ್ ಪಕ್ಷಕ್ಕೆ ಸೇರಿದ್ದು ಗ್ರಾಮಪಂಚಾಯತಿ ಆಡಳಿತ ಜನತಾದಳದವರ ಕೈಯಲ್ಲಿದೆ. ಈ ಎಲ್ಲಾ ಅಂಶಗಳು ಅಲ್ಲಿ ಕಡಿಮೆ ವಸತಿಗಳು ನಿರ್ಮಾಣವಾಗಲು ಕಾರಣವಾಗಿರಬಹುದು.

ಅಧ್ಯಯನ ಕೈಗೊಂಡ ನಾಲ್ಕು ಗ್ರಾಮಪಂಚಾಯತಿಗಳಲ್ಲಿ ವಸತಿ ವಿತರಣೆಯನ್ನು ವಿವರಿಸಲಾಗಿದೆ. ನಾಗೇನಹಳ್ಳಿ ಪಂಚಾಯತಿ ವ್ಯಾಪ್ತಿಯಲ್ಲಿ 126 ವಸತಿಗಳ ಹಂಚಿಕೆಯನ್ನು ನೋಡಿದಾಗ, ವಸತಿಹೀನ ಕುಟುಂಬಗಳು 10(1.02) ಇದ್ದು, ಈ ಕುಟುಂಬಗಳಿಗೆ ಕೇವಲ 05(3.97)ಮನೆಗಳು, ಬಡತನ ರೇಖೆ ಕೆಳಗಿನ ಕುಟುಂಬಗಳು 421(42.87) ಇದ್ದು, ಈ ಕುಟುಂಬಗಳಿಗೆ 43(34.12) ಮನೆಗಳು, ಬಡತನ ರೇಖೆ ಮೇಲಿನ ಕುಟುಂಬಗಳು 551(56.12)ಇದ್ದು, ಈ ಕುಟುಂಬಗಳಿಗೆ 78(61.90) ವಸತಿಗಳು ಹಂಚಲಾಗಿದೆ.

ಬೈಲುವದ್ದಿಗೆರೆ ಪಂಚಾಯತಿ ವ್ಯಾಪ್ತಿಯಲ್ಲಿ 113 ವಸತಿಗಳ ವಿತರಣೆಯನ್ನು ನೋಡಿದಾಗ, ವಸತಿಹೀನ ಕುಟುಂಬಗಳು 54(4.16) ಇದ್ದು, ಈ ಕುಟುಂಬಗಳಿಗೆ ಕೇವಲ 07(6.19)ಮನೆಗಳು, ಬಡತನ ರೇಖೆ ಕೆಳಗಿನ ಕುಟುಂಬಗಳು 519(39.56) ಇದ್ದು, ಈ ಕುಟುಂಬಗಳಿಗೆ 27(23.89) ಮನೆಗಳು, ಬಡತನ ರೇಖೆ ಮೇಲಿನ ಕುಟುಂಬಗಳು 739(56.33)ಇದ್ದು, ಈ ಕುಟುಂಬಗಳಿಗೆ 79(69.91) ವಸತಿಗಳು ಹಂಚಲಾಗಿದೆ.

ಹಿರೇಹೆಗ್ಡಾಳ್ ಪಂಚಾಯತಿ ವ್ಯಾಪ್ತಿಯಲ್ಲಿ 136 ವಸತಿಗಳ ಹಂಚಿಕೆಯನ್ನು ನೋಡಿದಾಗ ಪಂಚಾಯತಿ ವ್ಯಾಪ್ತಿಯಲ್ಲಿ ವಸತಿಹೀನ ಕುಟುಂಬಗಳು 08(0.91) ಇದ್ದು, ಈ ಕುಟುಂಬಗಳಿಗೆ 06(4.41)ಮನೆಗಳು , ಬಡತನ ರೇಖೆ ಕೆಳಗಿನ ಕುಟುಂಬಗಳು 380(43.53) ಇದ್ದು, ಈ ಕುಟುಂಬಗಳಿಗೆ 50(36.76) ಮನೆಗಳು, ಬಡತನ ರೇಖೆ ಮೇಲಿನ ಕುಟುಂಬಗಳು 446(55.48)ಇದ್ದು, ಈ ಕುಟುಂಬಗಳಿಗೆ 80(58.82) ವಸತಿಗಳು ವಿತರಿಸಲಾಗಿದೆ.

ಉಜ್ಜನಿ ಪಂಚಾಯತಿಯಲ್ಲಿ 96 ವಸತಿ ಫಲಾನುಭವಿಗಳ ಹಂಚಿಕೆಯನ್ನು ನೋಡಿದಾಗ, ಪಂಚಾಯತಿ ವ್ಯಾಪ್ತಿಯಲ್ಲಿ ವಸತಿಹೀನ ಕುಟುಂಬಗಳು 60(3.12) ಇದ್ದು, ಈ ಕುಟುಂಬಗಳಿಗೆ 06(6.31)ಮನೆಗಳು, ಬಡತನ ರೇಖೆ ಕೆಳಗಿನ ಕುಟುಂಬಗಳು 479(28.83) ಇದ್ದು, ಈ ಕುಟುಂಬಗಳಿಗೆ 30(31.25) ಮನೆಗಳು,

ಬಡತನ ರೇಖೆ ಮೇಲಿನ ಕುಟುಂಬಗಳು 1122(47.55)ಇದ್ದು, ಈ ಕುಟುಂಬಗಳಿಗೆ 60(62.50) ವಸತಿಗಳು ಬಡತನ ರೇಖೆಯ ಮೇಲಿನ ಕುಟುಂಬಗಳಿಗೆ ಹಂಚಲಾಗಿದೆ(ಕೋಷ್ಟಕ-20). ಒಟ್ಟಾರೆ ನಾಲ್ಕು ಗ್ರಾಮಪಂಚಾಯತಿಗಳಲ್ಲಿ ವಸತಿ ಹಂಚಿಕೆಯನ್ನು ನೋಡಿದಾಗ, ಅಧ್ಯಯನ ಕೈಗೊಂಡ ಎಲ್ಲಾ ಪಂಚಾಯತಿಗಳಲ್ಲಿ ವಸತಿಗಳು ಪೂರ್ಣಪ್ರಮಾಣದಲ್ಲಿ ವಸತಿ ಹೀನ ಮತ್ತು ಬಡತನ ರೇಖೆ ಕೆಳಗಿರುವ ಕುಟುಂಬಗಳಿಗೆ ವಿತರಣೆಯಾಗಿಲ್ಲ. ಹಾಗಾಗಿ ಯಾವ ಪಂಚಾಯತಿಯಲ್ಲೂ ಸಹ ಉದ್ದೇಶಿತ ವರ್ಗಕ್ಕೆ ಹೆಚ್ಚು ಮನೆಗಳೂ ವಿತರಣೆಯಾಗಿಲ್ಲ ಎಂಬುದು ಸ್ಪಷ್ಟವಾಗಿ ಕಂಡುಬಂದಿದೆ.

ವಸತಿಗಳ ಹಂಚಿಕೆಯನ್ನು ನೀರಾವರಿ ಮತ್ತು ಒಣಭೂಮಿ ಪಂಚಾಯತಿ ಪ್ರದೇಶಗಳಿಗೆ ತುಲನೆ ಮಾಡಿದರೆ , ನೀರಾವರಿ ಪಂಚಾಯತಿ ಪ್ರದೇಶಗಳಲ್ಲಿ ಒಣಭೂಮಿ ಪಂಚಾಯತಿ ಪ್ರದೇಶಗಳಿಗಿಂತ ಹೆಚ್ಚು ವಸತಿಗಳು ಉದ್ದೇಶಿತವರ್ಗಕ್ಕೆ ತಲುಪಿವೆ. ನಾಗೇನಹಳ್ಳಿ ಮತ್ತು ಹಿರೇಹೆಗ್ಡಾಳ್ ಪಂಚಾಯತಿ ಪ್ರದೇಶಗಳು ನೀರಾವರಿಯಿಂದ ಕೂಡಿದ್ದು ಇಲ್ಲಿ ಹೆಚ್ಚು ವಸತಿಗಳು ಉದ್ದೇಶಿತ ವರ್ಗಕ್ಕೆ ತಲುಪಿವೆ. ಬೈಲುವದ್ದಿಗೆರೆ ಮತ್ತು ಉಜ್ಜನಿ ಪಂಚಾಯತಿಗಳು ಒಣಭೂಮಿ ಪ್ರದೇಶಗಳಾಗಿದ್ದು ಇಲ್ಲಿ ಕಡಿಮೆ ವಸತಿಗಳು ಉದ್ದೇಶಿತ ವರ್ಗಕ್ಕೆ ತಲಪಿವೆ.ಅಂದರೆ ಬಡತನ ರೇಖೆ ಮೇಲಿನ ಕುಟುಂಬಗಳಿಗೆ ಹೆಚ್ಚು ವಸತಿಗಳು ಹಂಚಿಕೆಯಾಗಿವೆ.

ಹೊಸಪೇಟೆ ತಾಲೂಕಿನ ಎರಡು ಪಂಚಾಯತಿಗಳಲ್ಲಿ ವಸತಿ ವಿತರಣೆಯನ್ನು ತುಲನೆ ಮಾಡಿದರೆ ಬೈಲುವದ್ದಿಗೆರೆಗಿಂತ ಹೆಚ್ಚು ವಸತಿಗಳು ನಾಗೇನಹಳ್ಳಿ ಗ್ರಾಮಪಂಚಾಯತಿಯಲ್ಲಿ ಹೆಚ್ಚು ಬಡತನರೇಖೆಗಿಂತ ಕೆಳಗಿರುವ ಕುಟುಂಬಗಳಿಗೆ ವಿತರಣೆಯಾಗಿವೆ. ಇಲ್ಲಿ ತಾಲೂಕು ಪಂಚಾಯತಿ ಸದಸ್ಯರ ಪ್ರಭಾವ ಹಣ ಇದ್ದವರು ಹೆಚ್ಚು ಲಾಭವನ್ನು ಪಡೆದಿದ್ದಾರೆ. ಗ್ರಾಮಸಭೆಯಲ್ಲಿ ಫಲಾನುಭವಿಗಳು ಸರಿಯಾಗಿ ಆಯ್ಕೆಯಾಗದೆ ಇರುವುದು ಸಹ ಕಾರಣವಾಗಿದೆ. ವಸತಿ ಹೀನರು ಎರಡು ಗ್ರಾಮಪಂಚಾಯತಿಗಳಲ್ಲಿ ಇದ್ದರೂ, ನಿಜವಾದ ವಸತಿಹೀನರಿಗೆ ಸರಿಯಾಗಿ ತಲುಪಿಲ್ಲ. ಅಂದರೆ ಗ್ರಾಮಪಂಚಾಯತಿಯ ಸಾಂಸ್ಥಿಕ ವಿತರಣೆಯ ಉದ್ದೇಶಿತ ವರ್ಗಕ್ಕೆ ತಲುಪಿಸುವಲ್ಲಿ ವಿಪಲವಾಗಿದೆ.

ಕೂಡ್ಲಿಗಿ ತಾಲೂಕಿನ ಎರಡು ಗ್ರಾಮಪಂಚಾಯತಿಗಳಲ್ಲಿ ವಸತಿ ವಿತರಣೆಯನ್ನು ಹೋಲಿಕೆ ಮಾಡಿದರೆ, ಉಜ್ಜನಿ ಗ್ರಾಮಪಂಚಾಯತಿಗಿಂತ ಹಿರೇಹೆಗ್ಡಾಳ್ ಗ್ರಾಮಪಂಚಾಯತಿಯಲ್ಲಿ ಹೆಚ್ಚು ವಸತಿಗಳು ಉದ್ದೇಶಿತ ವರ್ಗಕ್ಕೆ ತಲುಪಿವೆ. ಒಣಭೂಮಿ ಪ್ರದೇಶ ಉಜ್ಜನಿಯಲ್ಲಿ ಹೆಚ್ಚು ವಸತಿ ಹೀನರಿದ್ದರೂ ಸಹ ನೀರಾವರಿ ಪ್ರದೇಶವಾದ ಹಿರೇಹೆಗ್ಡಾಳ್‌ನಲ್ಲಿ ಹೆಚ್ಚು ಮನೆಗಳು ಹಂಚಿಕೆಯಾಗಿವೆ. ಈ ಪ್ರದೇಶವು ತಾಲೂಕಿಗೆ ಹತ್ತಿರವಿದ್ದು, ತಾಲೂಕು ಪಂಚಾಯತಿ ಸದಸ್ಯರು ಕಾಂಗ್ರೆಸ್ ಪಕ್ಷಕ್ಕೆ ಸೇರಿದ್ದರಿಂದ.ಹೆಚ್ಚು ಮನೆಗಳು ನಿರ್ಮಿಸಲಾಗಿದೆ. ಇಲ್ಲಿ ಪರಿಶಿಷ್ಟರಿಗೆ ಹೆಚ್ಚು ಆದ್ಯತೆ ನೀಡುವ ಯೋಜನೆಯಾದ ಇಂದಿರಾ ಆವಾಸ್ ಮತ್ತು ಪರಿಶಿಷ್ಟರಿಗೆ ಇರುವ ಅಂಬೇಡ್ಕರ್ ಯೋಜನೆಯಲ್ಲಿ ಹೆಚ್ಚು ಮನೆಗಳನ್ನು ನಿರ್ಮಿಸಲಾಗಿದೆ. ಹೆಚ್ಚು ವಸತಿ ಹೀನ ಕುಟುಂಬಗಳಿರುವ ಉಜ್ಜನಿಯಲ್ಲಿ ಕಡಿಮೆ ಮನೆಗಳು ವಿತರಣೆಯಾಗಿವೆ. ಉಜ್ಜನಿಯು ತಾಲೂಕು ಮತ್ತು ಜಿಲ್ಲಾ ಪಂಚಾಯತ್ ಕ್ಷೇತ್ರವಾಗಿದ್ದರು ಸಹ ಕಡಿಮೆ ವಸತಿಗಳು ನಿರ್ಮಾಣವಾಗಿವೆ. ವಸತಿ ಹಂಚಿಕೆಯನ್ನು ಪಂಚಾಯತಿಗಳಲ್ಲಿ ನೋಡಿದಾಗ ಹಿರೇಹೆಗ್ಡಾಳ್ ಪಂಚಾಯತಿಯಲ್ಲಿ ಉಜ್ಜನಿ ಪಂಚಾಯತಿಗಿಂತ ಹೆಚ್ಚು

ಮನೆಗಳು ಬಡತನ ರೇಖೆ ಕೆಳಗಿರುವ ಕುಟುಂಬಗಳಿಗೆ ವಿತರಣೆಯಾಗಿವೆ. ಎರಡು ಪಂಚಾಯತಿಗಳಲ್ಲಿ ಹೆಚ್ಚು ಮನೆಗಳು ಬಡತನರೇಖೆ ಮೇಲಿನ ಕುಟುಂಬಗಳಿಗೆ ಹಂಚಿಕೆಯಾಗಿವೆ. ಎರಡು ಪಂಚಾಯತಿಗಳನ್ನು ಹೋಲಿಕೆ ಮಾಡಿದಾಗ ಹಿರೇಹೆಗ್ಡಾಳ್ ಪಂಚಾಯತಿಯಲ್ಲಿ ಉದ್ದೇಶಿತ ವರ್ಗಕ್ಕೆ ಹೆಚ್ಚು ವಸತಿಗಳು ಹಂಚಿಕೆಯಾಗಿವೆ. ಉಜ್ಜಿನಿಯಲ್ಲಿ ಹೆಚ್ಚು ಮೇಲ್ವವರ್ಗಗಳೇ ಇರುವುದರಿಂದ ಆಶ್ರಯ ಯೋಜನೆಯಲ್ಲಿ ಪರಿಶಿಷ್ಟರನ್ನು ಪರಿಗಣಿಸಿಲ್ಲ. ಇಂದಿರಾ ಆವಾಸ್ ವಸತಿ ಯೋಜನೆಯಲ್ಲಿ ಶೇ 60 ಪರಿಶಿಷ್ಟರಿಗೆ ಆದ್ಯತೆ ನೀಡಬೇಕು. ಆದರೆ ಕೇವಲ 40 ರಷ್ಟು ಮಾತ್ರ ಆದ್ಯತೆ ನೀಡಲಾಗಿದೆ. ಜಾತಿವಾರು ನೋಡಿದಾಗ ಸಹ ಹಿರೇಹೆಗ್ಡಾಳ್ ಗ್ರಾಮಪಂಚಾಯತಿಯಲ್ಲಿ ಪರಿಶಿಷ್ಟರಿಗೆ ಹೆಚ್ಚು ವಸತಿಗಳು ಹಂಚಿಕೆಯಾಗಿವೆ. ಆಶ್ರಯ ಮತ್ತು ಇಂದಿರಾ ಆವಾಜ್ ಯೋಜನೆಯಲ್ಲಿ ಪರಿಶಿಷ್ಟರನ್ನು ಪರಿಗಣಿಸಿದ್ದಾರೆ. ಒಟ್ಟಾರೆ ಈ ಎರಡು ಗ್ರಾಮ ಪಂಚಾಯತಿಯಲ್ಲಿ ನೀರಾವರಿ ಪ್ರದೇಶವಾದ ಹಿರೇಹೆಗ್ಡಾಳ್ ಕಾರ್ಯಕ್ಷಮತೆಯೂ ಉಜ್ಜನಿ ಪಂಚಾಯತಿಗಿಂತ ಉತ್ತಮವಾಗಿದೆ.

ಅಧ್ಯಯನ ಕೈಗೊಂಡ ನಾಲ್ಕು ಗ್ರಾಮಪಂಚಾಯತಿಗಳಲ್ಲಿ ವಸತಿ ಹಂಚಿಕೆಯನ್ನು ಜಾತಿವಾರು ನೋಡಿದಾಗ, ಪರಿಶಿಷ್ಟರ ಯೋಜನೆಗಳಾದ, ಅಂಬೇಡ್ಕರ್ ಮತ್ತು ಇಂದಿರಾ ಆವಾಸ್ ಯೋಜನೆಯಡಿಯಲ್ಲಿ ಯಾವ ಪಂಚಾಯತಿಯಲ್ಲಿ ಹೆಚ್ಚು ವಸತಿಗಳನ್ನು ನಿರ್ಮಿಸಿದ್ದಾರೋ ಆ ಪಂಚಾಯತಿಯಲ್ಲಿ ಮಾತ್ರ ಪರಿಶಿಷ್ಟರಿಗೆ ಹೆಚ್ಚು ಮನೆಗಳನ್ನು ವಿತರಿಸಲಾಗಿದೆ. ಆದರೆ ಈ ವಸತಿಗಳು ಬಡತನರೇಖೆ ಕೆಳಗಿನ ಪರಿಶಿಷ್ಟರಿಗೆ ತಲುಪದೆ, ಪರಿಶಿಷ್ಟರಲ್ಲೇ ಬಡತನ ರೇಖೆ ಮೇಲಿನ ಕುಟುಂಬಗಳಿಗೆ ತಲುಪಿವೆ. ಇದಕ್ಕೆ ಕಾರಣ ಸ್ಥಳೀಯ ರಾಜಕಾರಣದ ಪ್ರಭಾವ ರಾಜಕೀಯ ಪ್ರತಿನಿಧಿಗಳ ಜೊತೆ ಹೆಚ್ಚು ಒಡನಾಟ ಇರುವವರಿಗೆ ಹಾಗೂ ಹಣದ ಆಮಿಷ ಕಾರಣವಾಗಿದೆ ಎಂದು ಹೇಳಬಹುದು. ನಾಗೇನಹಳ್ಳಿಯಲ್ಲಿ ಪರಿಶಿಷ್ಟರ ಕುಟುಂಬಗಳು ಹೆಚ್ಚು ಇದ್ದರೂ, ಪರಿಶಿಷ್ಟರ ಯೋಜನೆಗಳಾದ ಅಂಬೇಡ್ಕರ್ ಮತ್ತು ಇಂದಿರಾ ಆವಾಸ್ ಯೋಜನೆಗಳಲ್ಲಿ ಕಡಿಮೆ ವಸತಿಗಳು ವಿತರಣೆಯಾಗಿವೆ. ಈ ಯೋಜನೆಯಲ್ಲಿ ಬೈಲುವದ್ದಿಗೆರೆ ಪಂಚಾಯತಿಯಲ್ಲಿ ಹೆಚ್ಚು ಮನೆಗಳು ಹಂಚಿಕೆಯಾಗಿರುವುದರಿಂದ ಪರಿಶಿಷ್ಟರಿಗೆ ಹೆಚ್ಚು ವಸತಿಗಳು ಹಂಚಿಕೆಯಾಗಿವೆ. ಹಂಚಿಕೆಯಾಗದಿದ್ದರೆ ತಾಂತ್ರಿಕ ಬದ್ಧತೆಯನ್ನು ಪಾಲಿಸಿಲ್ಲ ಎಂಬ ಕಾರಣಕ್ಕಾಗಿ ಪರಿಶಿಷ್ಟರಿಗೆ ಹೆಚ್ಚು ಮನೆಗಳು ಹಂಚಿಕೆಯಾಗಿವೆ. ಪರಿಶಿಷ್ಟರು ನಾಗೇನಹಳ್ಳಿ ಪಂಚಾಯತಿಯಲ್ಲಿ ಹೆಚ್ಚು ಇದ್ದರು ಸಹ ಪರಿಶಿಷ್ಟರ ಯೋಜನೆಗಳಾದ ಅಂಬೇಡ್ಕರ್ ಮತ್ತು ಇಂದಿರಾ ಆವಾಸ್ ಯೋಜನೆಯಲ್ಲಿ ಕಡಿಮೆ ಮನೆಗಳು ಹಂಚಿಕೆಯಾಗಿವೆ. ಒಟ್ಟಾರೆ ಈ ಎರಡು ಗ್ರಾಮಪಂಚಾಯತಿಯಲ್ಲಿ ಉದ್ದೇಶಿತ ವರ್ಗಕ್ಕೆ ನಿರೀಕ್ಷಿತ ವಸತಿಗಳು ಹಂಚಿಕೆಯಾಗದೆ ಬಡತನ ರೇಖೆಯ ಮೇಲಿನ ಕುಟುಂಬಗಳಿಗೆ ಹೆಚ್ಚು ವಸತಿಗಳು ವಿತರಣೆಯಾಗಿವೆ. ಆದರೆ ಈ ಎರಡು ಗ್ರಾಮಪಂಚಾಯತಿಗಳಲ್ಲಿ ನಾಗೇನಹಳ್ಳಿ ಗ್ರಾಮ ಪಂಚಾಯತಿಯು ಎಲ್ಲಾ ಅಂಶಗಳಿಂದ ತೃಪ್ತಿದಾಯಕವಾಗಿದೆ. ಬೈಲುವದ್ದಗೆರೆ ಒಣಭೂಮಿ ಪ್ರದೇಶ, ವಸತಿ ಹೀನರ ಸಂಖ್ಯೆ ಹೆಚ್ಚು ಇದ್ದರೂ ನೀರಾವರಿ ಪ್ರದೇಶಕ್ಕಿಂತ ಕಡಿಮೆ ಮನೆಗಳು ಹಂಚಿಕೆ ಯಾಗಿವೆ. ಹಿರೇಹೆಗ್ಡಾಳ್ ಮತ್ತು ಉಜ್ಜನಿಯಲ್ಲಿ ಜಾತಿವಾರು ಹಂಚಿಕೆಯನ್ನು ನೋಡಿದಾಗ, ಉಜ್ಜನಿ ಗ್ರಾಮಪಂಚಾಯತಿಗಿಂತ ಹಿರೇಹೆಗ್ಡಾಳ್ ಗ್ರಾಮಪಂಚಾಯತಿಯಲ್ಲಿ ಪರಿಶಿಷ್ಟರಿಗೆ ಹೆಚ್ಚು ವಸತಿಗಳು ವಿತರಿಸಲಾಗಿದೆ.

ಒಟ್ಟಾರೆ ನಾಲ್ಕು ಪಂಚಾಯತಿಗಳಲ್ಲಿ ನೀರಾವರಿ ಪ್ರದೇಶಗಳಲ್ಲಿ ವಸತಿ ವಿತರಣೆಗಳು ಉದ್ದೇಶಿತ ವರ್ಗವನ್ನು ನಿರೀಕ್ಷಿತ ಮಟ್ಟದಲ್ಲಿ ತಲುಪಿಲ್ಲದಿದ್ದರೂ ಒಣಭೂಮಿ ಪಂಚಾಯತಿ ಪ್ರದೇಶಗಳಿಗಿಂತ ಹೆಚ್ಚು ವಸತಿಗಳು ಉದ್ದೇಶಿತ ವರ್ಗಕ್ಕೆ ವಿತರಣೆಯಾಗಿವೆ. ನಾಲ್ಕು ಗ್ರಾಮಪಂಚಾಯತಿಗಳಲ್ಲಿ ವಸತಿ ಯೋಜನೆಯ ಹಂಚಿಕೆಯನ್ನು ಗ್ರಾಮವಾರು ನೋಡಿದಾಗ ಗ್ರಾಮಪಂಚಾಯತಿ ಇರುವ ಕೇಂದ್ರ ಸ್ಥಳಗಳಲ್ಲೇ ಹೆಚ್ಚು ಮನೆಗಳು ವಿತರಣೆಯಾಗಿವೆ. ಇದಕ್ಕೆ ಗ್ರಾಮಪಂಚಾಯತಿ ಕೇಂದ್ರ ಸ್ಥಳಗಳು ಹೆಚ್ಚು ಕುಟುಂಬಗಳನ್ನು ಹೊಂದಿರುವುದು ಮತ್ತು ಹೆಚ್ಚು ಪಂಚಾಯತಿ ಸದಸ್ಯರನ್ನು ಹೊಂದಿರುವುದು ಕಾರಣವಾಗಿದೆ.ಹಾಗಾಗಿ ಹೆಚ್ಚು ಆದ್ಯತೆಯನ್ನು ಕೊಟ್ಟಿದ್ದಾರೆ.

ವಸತಿ ಯೋಜನೆಯ ಮುಖ್ಯ ಉದ್ದೇಶ ವಸತಿ ಹೀನರಿಗೆ, ಬಡತನ ರೇಖೆ ಕೆಳಗಿನ ಕುಟುಂಬಗಳಿಗೆ ಮಾತ್ರ ವಿತರಣೆಯಾಗಬೇಕಾಗಿತ್ತು. ಆದರೆ ಇಲ್ಲಿ ಆಯ್ಕೆ ಮಾಡಿಕೊಂಡ ನಾಲ್ಕು ಗ್ರಾಮಪಂಚಾಯತಿ ಗಳಲ್ಲಿ ಪೂರ್ಣವಾಗಿ ನಿಜವಾದ ವಸತಿ ಹೀನರಿಗೆ, ಬಡವರಿಗೆ ವಿತರಣೆಯಾಗಿಲ್ಲ. ವಿಕೇಂದ್ರೀಕರಣದ ಆಶಯ ಇಲ್ಲಿ ನಡೆಯದೆ ಇರುವುದಕ್ಕೆ ಅನೇಕ ಕಾರಣಗಳನ್ನು ಗುರುತಿಸಲಾಗಿದೆ. ಸ್ಥಳೀಯ ರಾಜಕಾರಣ, ಜಿಲ್ಲಾ ಪಂಚಾಯತಿ ಮತ್ತು ತಾಲೂಕು ಪಂಚಾಯತಿ ಸದಸ್ಯರ ತಾರತಮ್ಯ, ಗ್ರಾಮಸಭೆಗಳು ಸರಿಯಾಗಿ ನಡೆಯದೇ ಇರುವುದು, ಪಕ್ಷರಾಜಕಾರಣ ಮತ್ತು ಕೆಳಜಾತಿ/ವರ್ಗಗಳ ಜನರ ಆರ್ಥಿಕ ಹಾಗೂ ಸಾಮಾಜಿಕ ದೌರ್ಬಲ್ಯ, ಅಭಿವೃದ್ಧಿ ಸವಲತ್ತುಗಳನ್ನು ಪಡೆಯುವಷ್ಟು ಇನ್ನೂ ಶಕ್ತರಾಗಿಲ್ಲ ಎಂದು ಗುರುತಿಸಲಾಗಿದೆ. ಅಭಿವೃದ್ಧಿ ಸೌಲಭ್ಯಗಳನ್ನು ಸರಿಯಾದ ರೀತಿಯಲ್ಲಿ ತಲುಪುವ ಉದ್ದೇಶದಿಂದಲೇ ಆಧುನಿಕ ಸಂಸ್ಥೆಗಳನ್ನು ಸ್ಥಾಪಿಸಿ ಅವುಗಳಿಗೆ ಸಾಕಷ್ಟು ಅಧಿಕಾರಗಳನ್ನು, ಕಾರ್ಯಗಳನ್ನು ಮತ್ತು ಸಂಪನ್ಮೂಲಗಳನ್ನು ಒದಗಿಸಲಾಗಿದೆ. ಇದರ ಜೊತೆಗೆ ಎಲ್ಲ ವರ್ಗದ ಜನತೆ ಪ್ರಾತಿನಿಧ್ಯವನ್ನು ಹೊಂದಿವೆ. ಈ ಪ್ರಾತಿನಿಧ್ಯ ಹೊಂದಿದ್ದರೂ ಸಹ ಅಭಿವೃದ್ಧಿ ಸೌಲಭ್ಯಗಳು ಉದ್ದೇಶಿತ ವರ್ಗದ ಜನತೆಗೆ ತಲುಪಿಲ್ಲ ಎಂಬುದು ಪ್ರಸ್ತುತ ಗ್ರಾಮಪಂಚಾಯತಿಗಳ ಅಧ್ಯಯನದಿಂದ ತಿಳಿದುಬಂದಿದೆ. ವಿಕೇಂದ್ರೀಕರಣದ ಮುಖ್ಯ ಗುರಿ ಅಭಿವೃದ್ಧಿ ಸವಲತ್ತುಗಳನ್ನು ಉದ್ದೇಶಿತ ವರ್ಗಕ್ಕೆ ತಲುಪಿಸುವುದು. ಆದರೆ ಇಲ್ಲಿ ಆ ಉದ್ದೇಶ ಈಡೇರಿಲ್ಲ ಎಂದ ಮೇಲೆ ಈ ವರ್ಗಗಳು ಸಶಕ್ತೀಕರಣ ಗೊಳ್ಳುವುದು ಹೇಗೆ ಎಂಬುದು ಮುಖ್ಯ ಪ್ರಶ್ನೆಯಾಗಿದೆ. ಬೈಲುವದ್ದಿಗೆರೆ ಮತ್ತು ಉಜ್ಜನಿ ಗ್ರಾಮ ಪಂಚಾಯತಿಗಳಲ್ಲಿ ಹೆಚ್ಚು ಪಕ್ಷ ರಾಜಕಾರಣದಿಂದ ವಸತಿ ವಿತರಣೆಗಳು ಸರಿಯಾಗಿಲ್ಲ ಎಂದು ಹೇಳಬಹುದು. ಬೈಲುವದ್ದಿಗೆರೆ ಗ್ರಾಮಪಂಚಾಯತಿಗಳಲ್ಲಿ ಹೆಚ್ಚು ರಾಜಕಾರಣ ದಿಂದ ವಸತಿ ಯೋಜನೆಯ ಫಲಗಳು ಉದ್ದೇಶಿತ ವರ್ಗಕ್ಕೆ ತಲುಪಿಲ್ಲ ಎಂದು ಹೇಳಬಹುದು. ಈ ಎರಡೂ ಪಂಚಾಯತಿಗಳಲ್ಲಿ ಜನತಾದಳ ಆಡಳಿತ ನಡೆಸುತ್ತಿರುವುದರಿಂದ ಮೇಲಿನ ಸ್ತರದ ಸದಸ್ಯರಿಂದ ಆಡಳಿತ ಪಕ್ಷದ ಶಾಸಕರಿರುವುದರಿಂದ ಸಾಂಸ್ಥಿಕ ವಿತರಣೆಗೆ ನೇರ ಸಂಬಂಧವಿರುವುದನ್ನು ಇಲ್ಲಿಯ ಸದಸ್ಯರು ಮತ್ತು ಗ್ರಾಮಿಣ ಜನತೆ ಅಭಿಪ್ರಾಯಪಟ್ಟಿದ್ದಾರೆ. ಗ್ರಾಮಪಂಚಾಯತಿಯ ಆಡಳಿತ ಪಕ್ಷಾತೀತವಾದರು ಸ್ಥಳೀಯರ ಪ್ರತಿಷ್ಠೆಯ ದೃಷ್ಟಿಯಿಂದ ಅವರು ರಾಷ್ಟ್ರೀಯ ಪಕ್ಷಗಳನ್ನು ಗುರುತಿಸಿಕೊಳ್ಳುತ್ತಾರೆ. ಈ ಎರಡು ಪ್ರದೇಶಗಳು ಒಣಭೂಮಿ ಪ್ರದೇಶಗಳಾಗಿದ್ದರೂ ಇಲ್ಲಿಯೆ ಹೆಚ್ಚು ಯೋಜನೆಗಳು ಜಾರಿಯಾಗಬೇಕು. ಆದರೆ ನೀರಾವರಿ ಪ್ರದೇಶಗಳಾದ ನಾಗೇನಹಳ್ಳಿ ಮತ್ತು ಓರೇಹೆಗ್ಗಾಳ್ ಪಂಚಾಯತಿಗಳಿಗಿಂತ ಕಡಿಮೆ ಮನೆಗಳು ಹಂಚಿಕೆ ಯಾಗಿವೆ.

ಗ್ರಾಮಪಂಚಾಯತಿ ವಸತಿಯೋಜನೆಗಳನ್ನು ತಲುಪಿಸುವ ಆಡಳಿತ ರಚನೆಯಾಗಿದೆ. ವಸತಿಗೆ ಸಂಬಂಧಪಟ್ಟ ಸಂಪನ್ಮೂಲಗಳು ನೇರವಾಗಿ ಈ ಸಂಸ್ಥೆಗೆ ಬರುವುದಿಲ್ಲ. ಅದರೂ ಆಭಿವೃದ್ಧಿಯ ಸವಲತ್ತು ಗಳನ್ನು ವಿತರಿಸುವ ತಳಮಟ್ಟದ ಸಂಸ್ಥೆಯಾಗಿದೆ. ಆದ್ದರಿಂದ ವಸತಿ ಯೋಜನೆಗಳು ನೇರವಾಗಿ ಗ್ರಾಮಪಂಚಾಯತಿಗಳಿಗೆ ವಹಿಸಿದರೇ ಪಕ್ಷ ರಾಜಕಾರಣವನ್ನು ನಿಯಂತ್ರಿಸಬಹುದು ಮತ್ತು ಪಂಚಾಯತಿಯು ಸ್ಥಳೀಯವಾಗಿ ಇರುವುದರಿಂದ ಜವಬ್ದಾರಿಯನ್ನು ತಾನೇ ವಹಿಸಿಕೊಳ್ಳಬಹುದಾಗಿದೆ. ಈ ಜವಾಬ್ದಾರಿಯನ್ನು ಪಂಚಾಯಿತಿಗೆ ವಹಿಸಿದರೆ ನೇರವಾಗಿ ಜನತೆ ಪ್ರಶ್ನಿಸಬಹುದು. ಆದರೆ ತಾಲೂಕು ಮತ್ತು ಜಿಲ್ಲಾ ಪಂಚಾಯತಿ ಸದಸ್ಯರನ್ನು ಪ್ರಶ್ನಿಸುವುದು ಕಷ್ಟವಾಗಬಹುದು. ಹೀಗೆ ಹಲವಾರು ಕಾರಣಗಳಿಂದ ವಸತಿ ಯೋಜನೆಯ ಸಾಂಸ್ಥಿಕ ವಿತರಣೆ ಉದ್ದೇಶಿತ ವರ್ಗಗಳಿಗೆ ತಲುಪಿಲ್ಲಾ ಎಂದು ಸ್ಪಷ್ಟವಾಗಿ ಅಧ್ಯಯನದಲ್ಲಿ ಕಂಡುಬಂದಿದೆ. ಆಯ್ಕೆ ಮಾಡಿಕೊಂಡ ನಾಲ್ಕು ಗ್ರಾಮಪಂಚಾಯತಿಗಳಲ್ಲಿ ಇದೇ ತಿರ್ಮಾನಕ್ಕೆ ಬರಲಾಗಿದೆ.

## 4.4 ಬಡತನ ನಿರ್ಮೂಲನಾ ಕಾರ್ಯಕ್ರಮ

ಗ್ರಾಮೀಣ ಬಡವರ ಆರ್ಥಿಕ ಮತ್ತು ಸಾಮಾಜಿಕ ಜೀವನದ ಸುಧಾರಣೆ ತರುವ ದೃಷ್ಟಿಯಿಂದ ಸ್ವಾತಂತ್ರ್ಯಾನಂತರ ಹಲವಾರು ಗ್ರಾಮೀಣಾಭಿವೃದ್ಧಿ ಕಾರ್ಯಕ್ರಮಗಳನ್ನು ಕೇಂದ್ರ ಸರ್ಕಾರ ಜಾರಿಗೆ ತಂದಿತು. ಈ ಯೋಜನೆಗಳ ಮುಖ್ಯ ಉದ್ದೇಶ ಗ್ರಾಮೀಣ ಪ್ರದೇಶದ ಬಡತನವನ್ನು ಕಡಿಮೆ ಮಾಡಿ ಬಡವರ್ಗಗಳ ಆರ್ಥಿಕ ಮತ್ತು ಜೀವನ ಮಟ್ಟ ಸುಧಾರಣೆಯ ಗುರಿಯನ್ನು ಹೊಂದಿದ್ದವು. ಆದರೆ ಈ ಯೋಜನೆಗಳು ನಿರೀಕ್ಷಿತ ಗುರಿಯನ್ನು ಮುಟ್ಟಲಿಲ್ಲ. ಸ್ವಾತಂತ್ರ್ಯದ ಪ್ರಾರಂಭದ ದಶಕದಲ್ಲಿ ಅಭಿವೃದ್ಧಿಯ ವಿಫಲತೆಯನ್ನು ಗುರುತಿಸಿದ ಸಮಿತಿಗಳ ಸಾಂಸ್ಥಿಕ ರಚನೆಗಳ ಅವಶ್ಯಕತೆಯನ್ನು ಒತ್ತಿ ಹೇಳಿದವು. ಹಾಗಾಗಿ ವಿಕೇಂದ್ರೀಕರಣದ ಮೂಲಕ ಅಭಿವೃದ್ಧಿಯನ್ನು ಕೈಗೊಳ್ಳಲಾಯಿತು. ಪಂಚಾಯತ್‌ರಾಜ್ ಸಂಸ್ಥೆಗಳು ಬೆಳವಣಿಗೆ ಕುರಿತು ಈಗಾಗಲೇ ಹಿಂದಿನ ಅಧ್ಯಾಯಗಳಲ್ಲಿ ನೋಡಿದ್ದೇವೆ. ಪ್ರಸ್ತುತ ಮೂರು ಹಂತದ ಪಂಚಾಯತ್‌ರಾಜ್ ವ್ಯವಸ್ಥೆ ಈಗ ಸಂಸ್ಥೆಯಾಗಿ ಜಾರಿಯಲ್ಲಿದೆ. ಅಭಿವೃದ್ಧಿಯ ಫಲಗಳನ್ನು ತಲುಪಿಸುವ ವ್ಯವಸ್ಥೆಯಾಗಿ ಪಂಚಾಯತಿ ಸಂಸ್ಥೆಗಳನ್ನು ಸ್ಥಾಪಿಸಲಾಗಿದೆ. ಈ ಪಂಚಾಯತ್ ಸಂಸ್ಥೆಗಳು ಇಂದು ಸರ್ಕಾರದ ಹಲವಾರು ಸವಲತ್ತುಗಳನ್ನು ಉದ್ದೇಶಿತ ವರ್ಗಕ್ಕೆ ತಲುಪಿಸುವ ವ್ಯವಸ್ಥೆಯಾಗಿ ಕಾರ್ಯನಿರ್ವಹಿಸುತ್ತಿವೆ. ಇಲ್ಲಿ ಉದ್ದೇಶಿತ ವರ್ಗವೆಂದರೆ ಬಡತನ ರೇಖೆ ಕೆಳಗಿರುವ ಜನತೆ. ಈ ಜನತೆಯಲ್ಲಿ ಶೇ ೯೦ ರಷ್ಟು ಕೆಳಜಾತಿ/ವರ್ಗಗಳ ಕುಟುಂಬಗಳಲ್ಲಿದ್ದಾರೆ.[27] ಗ್ರಾಮೀಣ ಪ್ರದೇಶದಲ್ಲಿರುವ ಈ ಉದ್ದೇಶಿತ ವರ್ಗಗಳ ನಿರುದ್ಯೋಗ, ಅಸಮರ್ಪಕ ಉದ್ಯೋಗವನ್ನು ನಿವಾರಿಸುವ ದೃಷ್ಟಿಯಿಂದ ಕೇಂದ್ರ ಮತ್ತು ರಾಜ್ಯ ಸರ್ಕಾರಗಳು ಹಲವಾರು ಕಾರ್ಯಕ್ರಮಗಳನ್ನು ಪಂಚಾಯತ್‌ರಾಜ್ ಸಂಸ್ಥೆಗಳ ಮೂಲಕ ಜಾರಿಗೊಳಿಸುತ್ತಿದೆ. ಈ ಕಾರ್ಯಕ್ರಮಗಳ ಮುಖ್ಯ ಉದ್ದೇಶ ಬಡತನ ನಿರ್ಮೂಲನೆಯಾಗಿದೆ.

## 4.5 ಬಡತನ ಮತ್ತು ಅಭಿವೃದ್ಧಿ

ಬಡತನ ಮತ್ತು ಅಭಿವೃದ್ಧಿಗೆ ನೇರ ಸಂಬಂಧವಿದೆ, ಬಡತನ ಇಲ್ಲದಿದ್ದರೆ ಅಭಿವೃದ್ಧಿ ಎಂಬ ಕಲ್ಪನೆ ಬರುತ್ತಿರಲಿಲ್ಲ. ಹಾಗಾಗಿ ಇವೆರಡಕ್ಕೂ ಅವಿನಾಭಾವ ಸಂಬಂಧವಿದೆ. ಅಭಿವೃದ್ಧಿಯ ಮುಖ್ಯ ಗುರಿಯೇ

ಬಡತನ ಹೋಗಲಾಡಿಸುವುದು. ಅಂದರೆ ಬಡವರ ಆರ್ಥಿಕ ಮತ್ತು ಸಾಮಾಜಿಕ ಬದಲಾವಣೆಯನ್ನು ತರುವುದು ಎಂದು ಹೇಳಬಹುದು. ವ್ಯಾಪಕ ಆರ್ಥದಲ್ಲಿ ಬಡತನವೆಂದರೆ ಮಾನವ ಬದುಕಲು ಅತ್ಯವಶ್ಯಕವಾದ ಸರಕುಗಳು ಮತ್ತು ಸೇವೆಗಳು ಇಲ್ಲದಿರುವುದು ಎಂದು ಹೇಳಬಹುದು. ಇಲ್ಲಿ ಮಾನವನ ಮೂಲಭೂತ ಅವಶ್ಯಕತೆಗಳಾದ, ಆರೋಗ್ಯ ಸೌಲಭ್ಯ, ಶಿಕ್ಷಣ ಕೊರತೆ, ಅಸಮರ್ಪಕ ವಸತಿ, ಸಾಮಾಜಿಕ ನಿರ್ಬಂಧಗಳು ಸೇರಿವೆ.[28] ಬಡತನವು ವರಮಾನ ಮತ್ತು ಉಪಭೋಗದೊಂದಿಗೆ ನಿಕಟ ಸಂಬಂಧ ಹೊಂದಿದೆ. ಲಿಂಗ, ಸಾಕ್ಷರತೆ, ಭೂ ಒಡೆತನ, ಉದ್ಯೋಗ, ಸಾಮಾಜಿಕ ಸ್ಥಾನಮಾನ, ಜಾತಿ ಈ ಅಂಶಗಳಿಗೆ ಮತ್ತು ಬಡತನಕ್ಕೆ ನಿಕಟ ಸಂಬಂಧವಿದೆ. ಗ್ರಾಮೀಣ ಕುಟುಂಬಗಳ ಬಗ್ಗೆ NCAER ಇತ್ತೀಚೆಗೆ ಕೈಗೊಂಡ ಒಂದು ಸಮೀಕ್ಷೆಯ ಪ್ರಕಾರ ಭೂರಹಿತ ಕೂಲಿಗಾರರ ಶೇ. 68 ರಷ್ಟು ಪರಿಶಿಷ್ಟರು ಸೇರಿದ್ದು ಶೇ 75 ರಷ್ಟು ಜನ ಬಡತನವನ್ನು ಅನುಭವಿಸುತ್ತಿದ್ದಾರೆ ಎಂದು ಹೇಳಿದೆ.[29] ಅಂದರೆ ಇಲ್ಲಿ ಹೆಚ್ಚು ಕೆಳವರ್ಗಗಳೆ ಬಡವರಾಗಿದ್ದಾರೆ.

ಗ್ರಾಮೀಣ ಪ್ರದೇಶಗಳಲ್ಲಿನ ನಿರುದ್ಯೋಗ ಮತ್ತು ಅರೆ ನಿರುದ್ಯೋಗವು ಗ್ರಾಮೀಣ ಜನತೆಯ ಬಡತನಕ್ಕೆ ಕಾರಣಗಳಾಗಿವೆ. ಗ್ರಾಮೀಣ ಜನತೆಯ ಬಡತನವನ್ನು ನಿವಾರಿಸುವ ದೃಷ್ಠಿಯಿಂದ 1980 ರಲ್ಲಿ ರಾಷ್ಟ್ರೀಯ ಗ್ರಾಮೀಣ ಉದ್ಯೋಗ ಯೋಜನೆಯನ್ನು ಪ್ರಾರಂಭಿಸಲಾಯಿತು. 6ನೇ ಪಂಚವಾರ್ಷಿಕ ಯೋಜನೆಯಲ್ಲಿ ಗ್ರಾಮೀಣ ಪ್ರದೇಶದಲ್ಲಿ ಉದ್ಯೋಗಾವಕಾಶಗಳನ್ನು ಸೃಷ್ಠಿಸಿ ಬಡತನದ ನಿವಾರಣೆಯನ್ನು ಬಗೆಹರಿಸಲು ಪ್ರಯತ್ನಿಸಲಾಯಿತು.[30] ಆ ನಂತರ ಬಡತನ ನಿರ್ಮೂಲನೆಗಾಗಿ ಮತ್ತು ಗ್ರಾಮೀಣ ಪ್ರದೇಶದ ನಿರುದ್ಯೋಗ ನಿವಾರಣೆಗಾಗಿ ಕೆಲವು ಗ್ರಾಮೀಣಾಭಿವೃದ್ಧಿ ಯೋಜನೆಗಳನ್ನು ಜಾರಿಗೆ ತರಲಾಯಿತು. ಅದರಲ್ಲಿ ಮುಖ್ಯವಾಗಿ ಸಮಗ್ರ ಗ್ರಾಮೀಣಾಭಿವೃದ್ಧಿ ಯೋಜನೆ, ಗ್ರಾಮೀಣ ಭೂರಹಿತ ಉದ್ಯೋಗ ಭರವಸೆ ಯೋಜನೆ ಮತ್ತು ಜವಹಾರ್ ರೋಜಗಾರ್ ಯೋಜನೆಗಳನ್ನು ಜಾರಿಗೊಳಿಸಲಾಯಿತು. ಈ ಎಲ್ಲಾ ಯೋಜನೆಗಳನ್ನು ಜಾರಿಗೊಳಿಸುವ ಜವಬ್ದಾರಿಯನ್ನು ಪಂಚಾಯತಿ ಸಂಸ್ಥೆಗಳಿಗೆ ವಹಿಸಲಾಗಿತ್ತು. ಹೀಗೆ ಸ್ವಾತಂತ್ರ್ಯಾನಂತರ ಹಲವಾರು ಕಾರ್ಯಕ್ರಮಗಳನ್ನು ಬಡತನ ನಿವಾರಣೆಗಾಗಿ ರೂಪಿಸಲಾಯಿತು. ಇದಲ್ಲದೇ ಪಂಚವಾರ್ಷಿಕ ಯೋಜನೆಗಳಲ್ಲಿ ಬಡತನ ಮತ್ತು ನಿರುದ್ಯೋಗ ನಿವಾರಣೆಗೆ ಪ್ರಯತ್ನಿಸಲಾಯಿತು.

ಯೋಜನಾ ಆಯೋಗವು ರಾಷ್ಟ್ರೀಯ ಮತ್ತು ರಾಜ್ಯಮಟ್ಟದಲ್ಲಿ ಬಡತನದ ಸಮೀಕ್ಷೆಯನ್ನು ಕೈಗೊಂಡಿದ್ದು, ಪ್ರೊ. ಡಿ.ಟಿ.ಲಕಡಾವಾಲಾ ಅವರ ಅಧ್ಯಕ್ಷತೆಯಲ್ಲಿ ಬಡತನದ ಅಂದಾಜು ಮತ್ತು ಬಡತನ ರೇಖೆಯನ್ನು ಪುನರ್ ವಿವರಿಸುವ ವಿಧಾನಗಳನ್ನು 1989 ರಲ್ಲಿ ಪರಿಶೀಲಿಸಿತು. 1973-74 ಮತ್ತು 1993-94ರ ನಡುವೆ ಬಡತನ ರೇಖೆ ಕೆಳಗಿರುವ ಜನಸಂಖ್ಯೆ ಪ್ರಮಾಣ ರಾಷ್ಟ್ರಿಯ ಮಟ್ಟದಲ್ಲಿ 55ರಿಂದ 36 ಕ್ಕೆ ಇಳಿದ ಸಮಯದಲ್ಲಿ ಕರ್ನಾಟಕದಲ್ಲಿ ಶೇ 54ರಿಂದ 33ಕ್ಕೆ ಇಳಿಯಿತು. ಗ್ರಾಮೀಣ ಕರ್ನಾಟಕದಲ್ಲಿ ಈ ಪ್ರಮಾಣ ಶೇ.54 ರಿಂದ 33ಕ್ಕೆ ಇಳಿಯಿತು. ಗ್ರಾಮೀಣ ಪ್ರದೇಶಗಳಲ್ಲಿ ಬಡತನವು ಸ್ಪಷ್ಟವಾಗಿ ಇಳಿದಿದೆ ಎಂಬುದು ವರದಿಯಿಂದ ತಿಳಿದುಬಂದಿದೆ. 1973-74ರಲ್ಲಿ 17.1 ದಶಲಕ್ಷಗಳಿದ್ದವು. 1993-94 ರಲ್ಲಿ 15.6ದಶಲಕ್ಷಕ್ಕೆ ಇಳಿದಿದೆ. ಗ್ರಾಮೀಣ ಪ್ರದೇಶಗಳಲ್ಲಿನ 12.8 ದಶಲಕ್ಷದಿಂದ 9.6 ದಶಲಕ್ಷಕ್ಕೆ ಇಳಿದಿದೆ. ಬಡತನ ರೇಖೆಯ ಕೆಳಗಿರುವ ಗ್ರಾಮೀಣ ಜನಸಂಖ್ಯೆ ಶೇ. 61ರಷ್ಟಿದ್ದರೆ, ನಗರ ಜನಸಂಖ್ಯೆ ಶೇ. 39 ಆಗಿದೆ.[31] ಈ ಸೂಚ್ಯಾಂಕಗಳನ್ನು ಗಮನಿಸಿದಾಗ ಬಡತನ ಸಮಸ್ಯೆ ಗ್ರಾಮೀಣ ಪ್ರದೇಶದಲ್ಲಿ ತೀವ್ರವಾಗಿದೆ ಎಂಬುದು

ಸ್ಪಷ್ಟವಾಗಿದೆ. ಕಳೆದ ಮೂವತ್ತು ವರ್ಷಗಳಿಂದ ಆಯೋಜಕರು, ನೀತಿ ನಿರೂಪಕರು ಬಡತನದ ಸಮಸ್ಯೆ ಬಗ್ಗೆ ಕಾಳಜಿ ವಹಿಸಿ ಇಡಿಯಾಗಿ ಮೈಕ್ರೋ ಮಟ್ಟದಲ್ಲಿ ವ್ಯಕ್ತಿಗತ ಮಟ್ಟಗಳಲ್ಲಿ ಪರಿಹಾರಗಳನ್ನು ಅಭಿವೃದ್ಧಿ ಪಡಿಸಿದ್ದಾರೆ. ಬಡತನ ನಿರ್ಮೂಲನೆ ಕಾರ್ಯ ಕ್ರಮಗಳನ್ನು ಉತ್ಪಾದಕರ ಆಧಾರಿತ ಅಥವಾ ಗ್ರಾಹಕರ ಆಧಾರಿತ ಪರಿಹಾರಗಳಾಗಿ ವರ್ಗೀಕರಿಸಬಹುದಾಗಿದೆ. ಮೊದಲನೆಯದು ಬಡವರ ಆಸ್ತಿ ತಳಹದಿಯನ್ನು ಬಲಪಡಿಸುವ ಬಗ್ಗೆ ಕೇಂದ್ರೀಕರಿಸಿ ಆಸ್ತಿವಿವರಣೆಗೆ ಸಂಬಂಧಿಸಿದ ಹಾಗೂ ಬಡವರಿಗಾಗಿ ಆಸ್ತಿ ಮೇಲಿನ ಪ್ರತಿಫಲವನ್ನು ಉತ್ತಮಪಡಿಸುವಂತಹ ಸಹಾಯ ಧನಗಳು, ಪ್ರೋತ್ಸಾಹಗಳು, ರಿಯಾಯಿತಿಗಳು, ಬೆಲೆ ಪ್ರಯೋಜನೆಗಳು ಇತ್ಯಾದಿಗೆ ಅನ್ವಯಿಸುತ್ತದೆ. ಜೀವನಮಟ್ಟವನ್ನು ಸುಧಾರಿಸುವ ಹಲವಾರು ಕಾರ್ಯಕ್ರಮಗಳು ಸಹ ಇವೆ. ಅವುಗಳಲ್ಲಿ ಕುಡಿಯುವ ನೀರು, ನೈರ್ಮಲ್ಯೀಕರಣ, ಆರೋಗ್ಯ, ವಸತಿ, ಶಿಕ್ಷಣ, ವಿದ್ಯುತ್, ನೀರಾವರಿ, ಫಲಾನುಭವಿ ಉದ್ದೇಶಿತ ಕಾರ್ಯಕ್ರಮಗಳು ಹಾಗೂ ಗ್ರಾಮೀಣಾಭಿವೃದ್ಧಿ ಕಾರ್ಯಕ್ರಮಗಳಾದ ಪ್ರದೇಶಾಭಿವೃದ್ಧಿ ಕಾರ್ಯಕ್ರಮಗಳು ಸಹ ಬಡತನವನ್ನು ನಿವಾರಿಸುವ ಕಾರ್ಯಕ್ರಮಗಳಾಗಿವೆ.[32] ಇಂದು ಈ ಎಲ್ಲಾ ಕಾರ್ಯಕ್ರಮಗಳನ್ನು ಪಂಚಾಯತ್ ಸಂಸ್ಥೆಗಳ ಮೂಲಕ ಜಾರಿಗೊಳಿಸಲಾಗಿದೆ. ಹಾಗಾಗಿ ಬಡತನ ನಿವಾರಣೆಯಲ್ಲಿ ಪಂಚಾಯತ್ ಸಂಸ್ಥೆಗಳ ಪಾತ್ರ ಬಹಳ ಮುಖ್ಯವಾಗಿವೆ.

ಪ್ರಸ್ತುತ ಅಧ್ಯಯನದಲ್ಲಿ ಗ್ರಾಮಪಂಚಾಯತಿಯ ಪ್ರಮುಖ ಬಡತನ ನಿವಾರಣಾ ಕಾರ್ಯಕ್ರಮ ವಾದ ಜವಹಾರ್ ಗ್ರಾಮಸಮೃದ್ಧಿ ಯೋಜನೆಯ ಬಗ್ಗೆ ಮಾತ್ರ ಇಲ್ಲಿ ಚರ್ಚಿಸಲಾಗಿದೆ. ಈ ಯೋಜನೆಯು ಹೇಗೆ ಗ್ರಾಮಪಂಚಾಯತಿಯ ಮುಖ್ಯ ಕಾರ್ಯಕ್ರಮವಾಗಿದೆ? ಯೋಜನೆಯ ಮುಖ್ಯ ಉದ್ದೇಶಗಳೇನು? ಈ ಕಾರ್ಯಕ್ರಮವನ್ನು ಗ್ರಾಮೀಣ ಪ್ರದೇಶದಲ್ಲಿ ಎಷ್ಟರ ಮಟ್ಟಿಗೆ ಬಡತನ ನಿವಾರಣೆ ಮಾಡುವಲ್ಲಿ ಕೆಲಸ ಮಾಡಿದೆ? ಇದರಲ್ಲಿ ಗ್ರಾಮ ಪಂಚಾಯತಿಯ ಪಾತ್ರ, ನೀರಾವರಿ ಮತ್ತು ಒಣಭೂಮಿ ಪಂಚಾಯತಿ ಪ್ರದೇಶಗಳಲ್ಲಿ ಹೇಗೆ ಈ ಕಾರ್ಯಕ್ರಮ ಅನುಷ್ಠಾನಗೊಂಡಿವೆ ಎಂಬುದನ್ನು ತೌಲಾನಿಕವಾಗಿ ನೋಡಲಾಗಿದೆ. ಪ್ರಸ್ತುತ ನಾಲ್ಕು ಗ್ರಾಮಪಂಚಾಯತಿಗಳಲ್ಲಿ ಕಳೆದ 5 ವರ್ಷದಿಂದ ಈ ಯೋಜನೆಯಲ್ಲಿ ಕೈಗೊಂಡ ಮಾನವ ದಿನಗಳನ್ನು ಮತ್ತು ಕಾರ್ಯಕ್ರಮಗಳಲ್ಲಿ ಗ್ರಾಮೀಣ ಜನತೆಯ ಮತ್ತು ಪಂಚಾಯತ್ ಸದಸ್ಯರ ಪಾತ್ರವನ್ನು ಕುರಿತು ಚರ್ಚಿಸಲಾಗಿದೆ.

## 4.6. ಜವಾಹರ್ ಗ್ರಾಮ ಸಮೃದ್ಧಿ ಯೋಜನೆ

ಗ್ರಾಮೀಣ ಪ್ರದೇಶಗಳಲ್ಲಿನ ನಿರುದ್ಯೋಗ ಮತ್ತು ಅರೆ ನಿರುದ್ಯೋಗವನ್ನು ನಿವಾರಿಸುವ ದೃಷ್ಠಿಯಿಂದ ಭಾರತ ಸರ್ಕಾರವು ಮೊದಲ ಅಸ್ತಿತ್ವದಲ್ಲಿದ್ದ ಉದ್ಯೋಗ ಕಾರ್ಯಕ್ರಮಗಳಾದ ರಾಷ್ಟ್ರಿಯ ಗ್ರಾಮೀಣ ಉದ್ಯೋಗ ಯೋಜನೆ ಮತ್ತು ಗ್ರಾಮೀಣ ಭೂರಹಿತ ಉದ್ಯೋಗ ಭರವಸೆ ಯೋಜನೆಗಳನ್ನು ವಿಲೀನಗೊಳಿಸುವ ಮೂಲಕ 1989ರಲ್ಲಿ ಜವಾಹರ್ ರೋಜಗಾರ್ ಯೋಜನೆಯನ್ನು ಅನುಷ್ಠಾನಕ್ಕೆ ತರಲಾಯಿತು. ಈ ಯೋಜನೆಯನ್ನು ಪುನರ್‌ರಚಿಸಿ 1999ರಿಂದ ಜವಹಾರ್ ಗ್ರಾಮಸಮೃದ್ಧಿ ಯೋಜನೆಯನ್ನಾಗಿ ಜಾರಿಗೊಳಿಸಲಾಗುತ್ತಿದೆ.[33] ಗ್ರಾಮೀಣ ಪ್ರದೇಶದಲ್ಲಿನ ನಿರುದ್ಯೋಗ ಮತ್ತು ಅರೆ ನಿರುದ್ಯೋಗವನ್ನು

ನಿವಾರಿಸಿ ಗ್ರಾಮೀಣ ಪ್ರದೇಶದ ಪುರುಷ ಮತ್ತು ಮಹಿಳೆಯರಿಗೆ ಹೆಚ್ಚುವರಿ ಲಾಭದಾಯಕ ಉದ್ಯೋಗವನ್ನು ಕಲ್ಪಿಸುವುದೇ ಈ ಕಾರ್ಯಕ್ರಮದ ಮುಖ್ಯ ಆಶಯವಾಗಿದೆ. ಗ್ರಾಮೀಣ ಪ್ರದೇಶಗಳಲ್ಲಿನ ಜನತೆಯ ಒಟ್ಟಾರೆ ಜೀವನ ಮಟ್ಟವನ್ನು ಸುಧಾರಿಸುವುದು, ನೇರ ಮತ್ತು ಸತತ ಪ್ರಯೋಜನಗಳನ್ನು ಒದಗಿಸುವುದು. ಗ್ರಾಮೀಣ ಜನತೆಯ ಆರ್ಥಿಕ ವ್ಯವಸ್ಥೆಯ ಮೂಲವನ್ನು ಬಲಪಡಿಸುವ ಮೂಲಕ ಸುದೀರ್ಘ ಉದ್ಯೋಗಗಳನ್ನು ಒದಗಿಸುವುದು ಈ ಯೋಜನೆಯ ಮುಖ್ಯ ಉದ್ದೇಶಗಳಾಗಿವೆ.

ಜವಹಾರ್ ಗ್ರಾಮಸಮೃದ್ಧಿ ಯೋಜನೆಯು ಕೇಂದ್ರ ಪುರಸ್ಕೃತ ಯೋಜನೆಯಾಗಿದ್ದು ಅನುದಾನ ವನ್ನು ಶೇ 75:25ರ ಪ್ರಮಾಣದಲ್ಲಿ ಕೇಂದ್ರ ಹಾಗೂ ರಾಜ್ಯ ಸರ್ಕಾರಗಳು ಭರಿಸುತ್ತವೆ. ಗ್ರಾಮ ಪಂಚಾಯತಿಗಳು ಈ ಯೋಜನೆಯ ಅನುಷ್ಠಾನದ ಅಂಗ ಸಂಸ್ಥೆಗಳಾಗಿ ಕಾರ್ಯನಿರ್ವಹಿಸುತ್ತಿವೆ. ಈ ಯೋಜನೆಯ ಹಣವನ್ನು ಗ್ರಾಮಪಂಚಾಯತಿಗಳ ಜನಸಂಖ್ಯೆಯ ಅಧಾರದ ಮೇಲೆ ನಿರ್ಧಾರವಾಗುತ್ತದೆ. ಗ್ರಾಮಪಂಚಾಯತಿಗಳು ಅಭಿವೃದ್ಧಿ ಕಾಮಗಾರಿಗಳನ್ನು, ಗುಂಪು ಮನೆಗಳ ನಿರ್ಮಾಣ, ಕಟ್ಟಡಗಳು, ರಸ್ತೆ, ಚರಂಡಿ ಮತ್ತು ಇತರೆ ಅಭಿವೃದ್ಧಿ ಕಾರ್ಯಕ್ರಮಗಳನ್ನು ಯೋಜನೆಯಲ್ಲಿ ಅಳವಡಿಸಿ ಯೋಜನೆಯನ್ನು ಅನುಷ್ಠಾನಗೊಳಿಸುತ್ತಿವೆ.[34] ಪ್ರತಿವರ್ಷ ಕ್ರಿಯಾ ಯೋಜನೆಯನ್ನು ತಯಾರಿಸುವಾಗ ಗ್ರಾಮ ಪಂಚಾಯತಿಯ ಪ್ರದೇಶದಲ್ಲಿ ಹಿಂದಿನ ವರ್ಷ ತೆಗೆದುಕೊಂಡ, ಪೂರ್ಣಗೊಳ್ಳದ ಕಾಮಗಾರಿಗಳಿಗೆ ಮೊದಲು ಆದ್ಯತೆಯನ್ನು ನೀಡಿ, ನಂತರ ಹೊಸ ಕಾಮಗಾರಿಗಳಿಗೆ ಹಣವನ್ನು ನಿಗದಿ ಮಾಡಬೇಕು. ಮೇಲ್ಕಂಡ ವಾರ್ಷಿಕ ಯೋಜನೆಗಳನ್ನು ತಯಾರಿಸುವ ಮುನ್ನ ಗ್ರಾಮಸಭೆಯಲ್ಲಿ ಪ್ರತಿ ವರ್ಷವು ಪ್ರತಿ ಗ್ರಾಮದಲ್ಲಿ ತೆಗೆದುಕೊಳ್ಳುವ ಅಭಿವೃದ್ಧಿಕಾರ್ಯಗಳ ಪಟ್ಟಿ ಹಾಗೂ ಫಲಾನುಭವಿಗಳ ಪಟ್ಟಿಯನ್ನು ತಯಾರಿಸಿ ಗ್ರಾಮಸಭೆಯಿಂದ ಅನುಮೋದನೆ ಪಡೆದು ಗ್ರಾಮಪಂಚಾಯತಿಯ ವಾರ್ಷಿಕ ಯೋಜನೆಯಲ್ಲಿ ಎಲ್ಲಾ ಕಾರ್ಯಕ್ರಮಗಳ ಜೊತೆಗೆ ಅಳವಡಿಸಬೇಕು. ಈ ರೀತಿ ಪ್ರತಿಯೊಂದು ಗ್ರಾಮಪಂಚಾಯತಿಗಳು ಅಭಿವೃದ್ಧಿ ಯೋಜನೆಗಳನ್ನು ತಯಾರಿಸಿದ ನಂತರ ಅನುಷ್ಠಾನಗೊಳಿಸಬೇಕು. ಗ್ರಾಮೀಣ ಪ್ರದೇಶದಲ್ಲಿ ಈ ಯೋಜನೆಯು ಮೂಲಭೂತ ಅವಶ್ಯಕತೆಗಳಿಗೆ ಪೂರಕವಾದ ಕಾಮಗಾರಿಗಳನ್ನು ಕೈಗೊಳ್ಳಬೇಕು.

**ಯೋಜನೆಯ ಮುಖ್ಯ ಉದ್ದೇಶಗಳು**

ಜವಾಹರ್ ಗ್ರಾಮಸಮೃದ್ಧಿ ಯೋಜನೆಯು ಗ್ರಾಮಪಂಚಾಯತಿಯ ಪ್ರಮುಖ ಯೋಜನೆ ಯಾಗಿದೆ. ಈ ಯೋಜನೆಯ ಪ್ರಮುಖ ಉದ್ದೇಶಗಳು ಈ ರೀತಿ ಇವೆ.

1. ಗ್ರಾಮೀಣ ಪ್ರದೇಶದ ನಿರುದ್ಯೋಗ ಮತ್ತು ಅರೆ ನಿರುದ್ಯೋಗಿಗಳಿಗೆ ಹೆಚ್ಚುವರಿ ಉದ್ಯೋಗ ದೊರಕುವಂತೆ ಮಾಡುವುದು.
2. ಬಡ ಕುಟುಂಬಗಳು ಬಹುಕಾಲ ಬಳಸುವಂತಾಗುವ ಸಾಮೂಹಿಕ ಉತ್ಪಾದನೆ ಆಸ್ತಿಯನ್ನು ನಿರ್ಮಿಸುವುದು.
3. ಗ್ರಾಮೀಣ ಪ್ರದೇಶದ ಜನತೆಯ ಜೀವನ ಮಟ್ಟ ಸುಧಾರಣೆ.

4. ಗ್ರಾಮಾಂತರ ಪ್ರದೇಶದ ಆರ್ಥಿಕ ಮತ್ತು ಸಾಮಾಜಿಕ ವ್ಯವಸ್ಥೆಯನ್ನು ಬಲಪಡಿಸುವುದರ ಮೂಲಕ ಬಡ ಜನತೆಯ ಆದಾಯ ಮಟ್ಟವನ್ನು ಹೆಚ್ಚಿಸುವುದು.

**ಯೋಜನೆಯ ಫಲಾನುಭವಿಗಳು**

1. ಬಡತನ ರೇಖೆಗಿಂತ ಕೆಳಗಿನ ಕುಟುಂಬಗಳು

2. ಪರಿಶಿಷ್ಟ ಜಾತಿ/ಪಂಗಡದವರಿಗೆ ಮೊದಲ ಆದ್ಯತೆ

3. ಮಹಿಳೆಯರಿಗೆ ಶೇ 30ರಷ್ಟು ಉದ್ಯೋಗವಕಾಶ

4. ಪರಿಶಿಷ್ಟ ಜಾತಿ /ಪಂಗಡದವರಿಗೆ ಶೇ 22.5 ರಷ್ಟು ಮೊತ್ತವನ್ನು ವೈಯಕ್ತಿಕ ಸವಲತ್ತು ನೀಡುವ ಕೆಲಸಗಳಿಗೆ ವಿನಿಯೋಗವಾಗಬೇಕು.[35] ಈ ಯೋಜನೆಯಲ್ಲಿ ಪ್ರಥಮಬಾರಿಗೆ ಜೀತ ವಿಮುಕ್ತರನ್ನು ಫಲಾನುಭವಿಗಳ ಪಟ್ಟಿಗೆ ಸೇರಿಸಲು ಅವಕಾಶವನ್ನು ಕಲ್ಪಿಸಲಾಗಿದೆ. ಗ್ರಾಮಸಭೆ ಯಲ್ಲಿ ವಿವರವಾಗಿ ಚರ್ಚಿಸಿ ಫಲಾನುಭವಿಗಳ ಪಟ್ಟಿಯನ್ನು ತಯಾರಿಸಬೇಕು. ಫಲಾನುಭವಿಗಳ ಹೆಸರುಗಳನ್ನು ಬದಲಾಯಿಸಿದರು ಸಹ ಗ್ರಾಮಸಭೆಯ ಒಪ್ಪಿಗೆಯನ್ನು ಪಡೆಯಬೇಕು.

**ಯೋಜನೆಯ ಹಣಕಾಸು ಹಂಚಿಕೆ**

ಜವಾಹರ್ ರೋಜಗಾರ್ ಯೋಜನೆಯ ಹಣವನ್ನು ನಿರ್ದಿಷ್ಟಪಡಿಸಿದ ಕೆಲಸಗಳಿಗೆ ಗ್ರಾಮ ಪಂಚಾಯತಿಗಳು ಖರ್ಚು ಮಾಡತಕ್ಕದ್ದು.

1. ಜಿ.ಆರ್.ವೈ. ಒಟ್ಟು ಅನುದಾನದಲ್ಲಿ ಶೇ. 5 ರಷ್ಟು ಹಣವನ್ನು ಆಡಳಿತ ವೆಚ್ಚಕ್ಕಾಗಿ ಪ್ರತಿ ವರ್ಷವು ಗ್ರಾಮಪಂಚಾಯತಿಯು ಉಪಯೋಗಿಸಬಹುದು.

2. ಯೋಜನೆಯ ಒಟ್ಟು ಅನುದಾನದಲ್ಲಿ ಶೇ 22.5 ರಷ್ಟು ಹಣವನ್ನು ಪರಿಶಿಷ್ಟ ಜಾತಿ/ ಪಂಗಡದವರಿಗೆ ನೇರವಾಗಿ ಸೌಕರ್ಯಗಳನ್ನು ಒದಗಿಸುವುದು.

3. ಶೇ. 3 ರಷ್ಟು ಹಣವನ್ನು ಅಂಗವಿಕಲರಿಗೆ ಮೂಲಭೂತ ಸೌಕರ್ಯಗಳನ್ನು ಒದಗಿಸಲು ಖರ್ಚು ಮಾಡಬಹುದು.

4. ಒಟ್ಟು ಅನುದಾನದ ಶೇ. 23 ರಷ್ಟು ಹಣವನ್ನು ಸಾಮಾಜಿಕ ಅರಣ್ಯ ಸಂರಕ್ಷಣೆಯನ್ನು ಕೈಗೊಳ್ಳಲು ವೆಚ್ಚ ಮಾಡಬಹದು.

5. ರಸ್ತೆ, ಕಟ್ಟಡಗಳು ಮುಂತಾದ ಇತರೆ ಕಾಮಗಾರಿಗಳಿಗೆ ಶೇ. 25 ರಷ್ಟು ಹಣವನ್ನು ಬಳಸಬಹುದು. ಇದಲ್ಲದೆ ಗ್ರಾಮಪಂಚಾಯತಿಯ, ಗ್ರಾಮಸಭೆಯ ಅನುಮೋದನೆಯೊಂದಿಗೆ 50,000ರೂ.ಗಳ ಕಾಮಗಾರಿಗಳನ್ನು ಅನುಷ್ಠಾನಗೊಳಿಸಬಹುದು. ಮೇಲ್ಕಂಡ ರೀತಿಯಲ್ಲಿ ಅಭಿವೃದ್ಧಿ

ಯೋಜನೆಗಳನ್ನು ತಯಾರಿಸಿ ಅನುಮೋದನೆ ಪಡೆದು ಪ್ರತಿಯೊಂದು ಗ್ರಾಮಪಂಚಾಯತಿಯು ಕಾಮಗಾರಿಗಳನ್ನು ಅನುಷ್ಠಾನಗೊಳಿಸಬಹುದಾಗಿದೆ.[36]

## ಅನುಷ್ಠಾನಗೊಳಿಸಬೇಕಾದ ಕೆಲಸಗಳು

ಗ್ರಾಮೀಣ ಪ್ರದೇಶಗಳಲ್ಲಿ ಬಹುಕಾಲ ಬಾಳುವಂತಹ ಮತ್ತು ಸಾಮೂಹಿಕ ಉತ್ಪಾದಕ ಕೆಲಸಗಳನ್ನು ನಿರ್ಮಿಸುವ ಎಲ್ಲಾ ಗ್ರಾಮೀಣ ಕೆಲಸಗಳನ್ನು ಈ ಯೋಜನೆಗಳಲ್ಲಿ ಕೈಗೊಳ್ಳಬಹುದು. ಬಡತನ ನಿರ್ಮೂಲನಾ ಕಾರ್ಯಕ್ರಮಗಳಿಗೆ ಪೂರಕವಾದ ಕೆಲಸಗಳನ್ನು ಶಾಲಾ ಕಟ್ಟಡಗಳಿಗೆ ಅವಕಾಶ ಕಲ್ಪಿಸಲಾಗಿದೆ.

ಈ ಕೆಲಸಗಳನ್ನು ಕೈಗೊಳ್ಳವಾಗ ಪರಿಶಿಷ್ಟ ಜಾತಿ/ಪಂಗಡದವರಿಗೆ, ಜೀತ ವಿಮುಕ್ತರಿಗೆ ಮತ್ತು ಬಡತನ ರೇಖೆಗಿಂತ ಕೆಳಗಿರುವ ವ್ಯಕ್ತಿಗಳಿಗಾಗಿ ಕೆಲಸಗಳನ್ನು ಕೊಡುವುದು.

1. ಪರಿಶಿಷ್ಟ ಜಾತಿ/ಪಂಗಡದವರಿಗೆ ಮತ್ತು ಜೀತವಿಮುಕ್ತರಿಗೆ ಇಂದಿರಾ ಆವಾಸ್ ಯೋಜನೆಯಡಿಯಲ್ಲಿ ವಾಸದ ಮನೆಗಳ ನಿರ್ಮಾಣ ಈ ಮನೆಗಳನ್ನು ಸಾಧ್ಯವಾದಲ್ಲಿ ಗುಂಪು ಮನೆಗಳನ್ನಾಗಿ ನಿರ್ಮಿಸಬೇಕು. ಮನೆಯ ಅಳತೆ 17.20 ಚ.ಮೀ.ಪ್ರತಿ ಮನೆಗೆ ತಗಲುವ ವೆಚ್ಚ ರೂ.10200ಗಳು ಆಗಿರತಕ್ಕದ್ದು.
2. ಪರಿಶಿಷ್ಟ ಜಾತಿ/ಪಂಗಡದ ಜನತೆಗೆ ಹೊಂದಿದ ಜಮೀನಿನಲ್ಲಿ ಉರುವಲು ಮತ್ತು ಸೊಪ್ಪುಕೊಡುವ ಸಾಮಾಜಿಕ ಅರಣ್ಯ ಬೆಳಸುವುದು
3. ಪರಿಶಿಷ್ಟರಿಗೆ ಸಣ್ಣ ನೀರಾವರಿ ಬಾವಿಗಳು
4. ಹರಿಜನರ ಕಾಲೋನಿಗಳಲ್ಲಿ ಕುಡಿಯುವ ನೀರು ಪೂರೈಕೆಗಾಗಿ ನೀರಿನ ಬಾವಿಗಳು
5. ಮುಖ್ಯ ರಸ್ತೆಯಿಂದ ಹರಿಜನ ಕಾಲೋನಿಗೆ ಹೋಗುವ ಸಂಪರ್ಕ ರಸ್ತೆ
6. ಪರಿಶಿಷ್ಟರ ಕಾಲೋನಿಗಳಲ್ಲಿ ನೈರ್ಮಲೀಕರಣ ಕೆಲಸಗಳು
7. ಭೂಸಾರವನ್ನು ಸಂರಕ್ಷಿಸುವ ಸಾಮಾಜಿಕ ಅರಣ್ಯ ಕೆಲಸಗಳನ್ನು ಸರ್ಕಾರಿ ಪಂಚಾಯತಿ ಭೂಮಿ ರಸ್ತೆಯ ಇಕ್ಕಡೆ. ಕಾಲುವೆಗಳ ಬದಿ, ಸಾಮೂಹಿಕ ಭೂಮಿ ಮತ್ತು ಅರಣ್ಯಭೂಮಿಯಲ್ಲಿ ಕೈಗೊಳ್ಳಬಹುದು ಮತ್ತು ಸಾಮೂಹಿಕ ಉಪಯೋಗಕ್ಕಾಗಿ ಬೆಳೆಸಿದ ಮರಗಳ ನಿರ್ವಹಣೆಯ ಖರ್ಚನ್ನು 3 ವರ್ಷಗಳ ಕಾಲ ಜೆ.ಆರ್.ವೈ. ಫಂಡ್‌ನಿಂದ ಬರಿಸತಕ್ಕದು.[3] ಈ ರೀತಿಯಾಗಿ ಜೆ.ಆರ್.ವೈ.ಹಣವನ್ನು ನಿಗಧಿಪಡಿಸಿದ ಕೆಲಸಗಳಿಗೆ ಬಳಸತಕ್ಕದ್ದು.

## ಕೂಲಿ ಮತ್ತು ಸಾಮಗ್ರಿಗಳ ಘಟಕ

ಜವಾಹಾರ್ ರೋಜಗಾರ್ ಯೋಜನೆಯ ಒಟ್ಟು ಅನುದಾನದಲ್ಲಿ ಶೇ.50 ಹಣವನ್ನು ಗ್ರಾಮ ಪಂಚಾಯತಿಗಳು ಕೂಲಿಗಾಗಿ ವೆಚ್ಚಮಾಡತಕ್ಕದ್ದು. ಉಚಿತ ಸಾಮಗ್ರಿಗಳು, ಆಡಳಿತಾತ್ಮಕ ಮೇಲ್ವಿ ಚಾರಣೆ

ಮತ್ತು ಸಾಗಣಿಕೆ ವೆಚ್ಚವು ಕೂಲಿಯ ಘಟಕದಿಂದ ಹೆಚ್ಚಿದಲ್ಲಿ ಬೇರೆ ರಾಜ್ಯದ ನಿಧಿಯಿಂದ ಅಥವಾ ವಂತಿಕೆಯಿಂದ ಭರಿಸಬಹುದು. ಸ್ಥಳಿಯ ಸಾಮಗ್ರಿಗಳ ಸಂಸ್ಕರಣಾ ವೆಚ್ಚವನ್ನು ಕೂಲಿಯ ಘಟಕದಲ್ಲಿ ಸೇರಿಸಬಹುದು. ಆದರೆ ಬೇರೆಡೆಯಿಂದ ತಂದ ಸಾಮಗ್ರಿಗಳ ಬಗ್ಗೆ ಈ ವೆಚ್ಚವನ್ನು ಭರಿಸಬಾರದು. ಕೂಲಿ ಪ್ರಮಾಣ ಶೇ 60 ರಷ್ಟು ಇಲ್ಲದಿದ್ದಲ್ಲಿ ಮತ್ತು ಶೇ 22.5 ರಷ್ಟು ಪರಿಶಿಷ್ಟರಿಗೆ ಒದಗಿಸದಿದ್ದರೆ ಕ್ರಿಯಾ ಯೋಜನೆಯನ್ನು ಗ್ರಾಮಪಂಚಾಯತಿಗಳಿಗೆ ಹಿಂದಿರುಗಿಸಬಹುದು.

## ಕೂಲಿಯ ವಿತರಣೆ

ಕೂಲಿಯನ್ನು ಭಾಗಶಃ ಹಣ ಮತ್ತು ಆಹಾರ ಧಾನ್ಯಗಳ ರೂಪದಲ್ಲಿ ಕೊಡಲಾಗುವುದು. ಒಂದು ದಿನಕ್ಕೆ 1.5 ಕೆ.ಜಿ.ಯಷ್ಟು ಆಹಾರ ಧಾನ್ಯಗಳನ್ನು ಕೊಡಲಾಗುವುದು. ಈ ಯೋಜನೆಯಡಿಯಲ್ಲಿ ಕೂಲಿಯಾಗಿ 16 ರೂ.ಗಳನ್ನು ನೀಡಬೇಕಾಗುತ್ತದೆ.[38]

## ಜವಾಹರ್ ಗ್ರಾಮಸಮೃದ್ಧಿ ಯೋಜನೆಯ ವಾರ್ಷಿಕ ಯೋಜನೆ

ಜವಾಹರ್ ಗ್ರಾಮಸಮೃದ್ಧಿ ಯೋಜನೆಗೆ ಗ್ರಾಮಪಂಚಾಯತಿಗಳಿಗೆ ಪ್ರತ್ಯೇಕವಾದ ಅನುದಾನವು ಬರುವುದರಿಂದ ಜಿಲ್ಲಾ ಪಂಚಾಯಿತಿ ಮತ್ತು ತಾಲೂಕು ಪಂಚಾಯಿತಿಗಳು ಆದೇಶಿಸುವಂತೆ ಅಭಿವೃದ್ಧಿ ಕಾರ್ಯಗಳನ್ನು ಪ್ರತಿ ವರ್ಷ ಕೈಗೊಳ್ಳತಕ್ಕದ್ದು. ಪ್ರತಿ ಗ್ರಾಮಪಂಚಾಯತಿಯ ಕಾರ್ಯದರ್ಶಿಯು ಈ ಯೋಜನೆಯ ಅನುದಾನವನ್ನು ನಿರ್ಧರಿಸಿ, ಅಭಿವೃದ್ಧಿ ಯೋಜನೆಗಳನ್ನು ತಯಾರಿಸಬೇಕು. ವಾರ್ಷಿಕ ಯೋಜನೆಗಳನ್ನು ತಯಾರಿಸುವಾಗ ನಿಂತುಹೋಗಿರುವ ಕೆಲಸಗಳಿಗೆ ಮೊದಲು ಆದ್ಯತೆ ನೀಡಬೇಕು. ಎರಡು ವರ್ಷಗಳ ಒಳಗಾಗಿ ಮುಕ್ತಾಯಗೊಳ್ಳುವ ಕೆಲಸಗಳನ್ನು ಮಾತ್ರ ಸೇರಿಸಬೇಕು. ಗ್ರಾಮವಾರು ಯೋಜನೆಯನ್ನು ತಯಾರಿಸುವಾಗ ಪರಿಶಿಷ್ಟರಿಗೆ ಮತ್ತು ಮಹಿಳೆಯರಿಗೆ ಆದ್ಯತೆಯನ್ನು ನೀಡಬೇಕು. ಈ ಬಗ್ಗೆ ಗ್ರಾಮಪಂಚಾಯತಿಯು ಗ್ರಾಮಸಭೆಗಳಲ್ಲಿ ಕೂಲಂಕಶವಾಗಿ ಚರ್ಚಿಸಬೇಕು. ಗ್ರಾಮ ಪಂಚಾಯತಿಗಳು ಈ ಯೋಜನೆಯ ಕಾರ್ಯಗತದ ಬಗ್ಗೆ ಪೂರ್ಣ ಜವಾಬ್ದಾರಿಯನ್ನು ಹೊಂದಿರುತ್ತವೆ. ಕೆಲಸಗಳ ಉಸ್ತುವಾರಿಯನ್ನು ಪಂಚಾಯತಿಯಿಂದ ನೇಮಕಗೊಂಡ ಸಮಿತಿಯು ಮಾತ್ರ ನಿರ್ವಹಿಸಬೇಕು.[39]

ಜೆ.ಆರ್.ವೈ.ಯೋಜನೆಯು ಒಂದು ಗ್ರಾಮೀಣ ಪ್ರದೇಶದ ಬಡತನ ನಿರ್ಮೂಲನೆ ಕಾರ್ಯಕ್ರಮಗಳನ್ನು ಅನುಷ್ಠಾನಗೊಳಿಸುವ ಉತ್ತಮವಾದ ಸಾಮೂಹಿಕ ಉದ್ಯೋಗ ಯೋಜನೆ ಯಾಗಿದೆ. ಈ ಯೋಜನೆಯ ಯಶಸ್ಸು ಪಂಚಾಯತಿ ಸದಸ್ಯರು ಮತ್ತು ಗ್ರಾಮೀಣ ಜನತೆ ಸಂಘಟಿತರಾಗಿ ಭಾಗವಹಿಸಿ ಸೂಕ್ತ ಯೋಜನೆ ತಯಾರಿಸಿ ಸ್ವಸಹಾಯ ತತ್ವದಂತೆ ಅನುಷ್ಠಾನಗೊಳಿಸುವುದರಲ್ಲಿ ನಿಂತಿದೆ. ಈ ಯೋಜನೆಯ ಕಾರ್ಯಕ್ರಮಗಳು ಅವುಗಳ ಮಾರ್ಗ ಸೂಚಿಗಳ ಪ್ರಕಾರ ಗ್ರಾಮಸಭೆಗಳಲ್ಲಿ ಆದ್ಯತೆ ಮತ್ತು ಸಮಸ್ಯೆಗಳನ್ನು ಗುರುತಿಸಿ ಪಟ್ಟಿಯನ್ನು ಆಧಾರವಾಗಿಟ್ಟುಕೊಂಡು ಗ್ರಾಮಪಂಚಾಯತಿಗಳು ತಮ್ಮ ಕ್ರಿಯಾ ಯೋಜನೆಯನ್ನು ಪ್ರತಿ ವರ್ಷ ಏಪ್ರಿಲ್ ಅಥವಾ ಮೇ ತಿಂಗಳ ಒಳಗೆ ಸಿದ್ಧಪಡಿಸಬೇಕು.[40]

## 4.7. ಜವಾಹರ್ ಗ್ರಾಮಸಮೃದ್ಧಿ ಯೋಜನೆ ಮತ್ತು ಗ್ರಾಮಪಂಚಾಯತಿಗಳು

ಅಧ್ಯಯನ ಕೈಗೊಂಡ ಗ್ರಾಮಪಂಚಾಯತಿ ಪ್ರದೇಶಗಳಲ್ಲಿ ಜವಾಹರ್ ಗ್ರಾಮ ಸಮೃದ್ಧಿ ಯೋಜನೆಯ ಜಾರಿ ಅನುಷ್ಠಾನ, ಈ ಯೋಜನೆಯಿಂದ ಗ್ರಾಮೀಣ ನಿರುದ್ಯೋಗ ಎಷ್ಟರ ಮಟ್ಟಿಗೆ ನಿವಾರಣೆಯಾಗಿದೆ? ಎಷ್ಟು ಮಾನವ ದಿನಗಳನ್ನು ಗ್ರಾಮಪಂಚಾಯತಿಗಳು ಸೃಷ್ಟಿಸಿವೆ? ನೀರಾವರಿ ಮತ್ತು ಒಣಭೂಮಿ ಪಂಚಾಯತಿಗಳನ್ನು ಇಲ್ಲಿ ತುಲಾನಾತ್ಮಕವಾಗಿ ನೋಡಲಾಗಿದೆ. ಈ ಯೋಜನೆಯ ಬಗ್ಗೆ ಜನತೆಯ ಅಭಿಪ್ರಾಯಗಳನ್ನು ಸಹ ಇಲ್ಲಿ ಚರ್ಚಿಸಲಾಗಿದೆ.

### ನಾಗೇನಹಳ್ಳಿ ಗ್ರಾಮಪಂಚಾಯತಿ

ಗ್ರಾಮಪಂಚಾಯತಿಗಳ ಕಾರ್ಯಕ್ರಮಗಳಲ್ಲಿ ಜವಾಹರ್ ಗ್ರಾಮಸಮೃದ್ಧಿ ಯೋಜನೆ ಮುಖ್ಯ ಕಾರ್ಯಕ್ರಮವಾಗಿದೆ. ಈ ಯೋಜನೆಯಲ್ಲಿ ಕಾಮಗಾರಿಗಳನ್ನು ಕೈಗೊಳ್ಳುವುದು, ಸಾಮಾಜಿಕ ಅರಣ್ಯದ ಅಭಿವೃದ್ಧಿ ಮತ್ತು ಪರಿಶಿಷ್ಟರ ಅಭಿವೃದ್ಧಿಗಳು ಸೇರಿವೆ. ಈ ಅಭಿವೃದ್ಧಿಯ ಜೊತೆಗೆ ಬಡತನ ರೇಖೆ ಕೆಳಗಿರುವ ಕುಟುಂಬಗಳಿಗೆ ಉದ್ಯೋಗವನ್ನು ಒದಗಿಸಿಕೊಡುವುದು ಈ ಯೋಜನೆಯ ಮುಖ್ಯ ಉದ್ದೇಶವಾಗಿದೆ. ಜವಾಹರ್ ಗ್ರಾಮಸಮೃದ್ಧಿ ಯೋಜನೆಯ ಅನುಷ್ಠಾನವನ್ನು ಕಳೆದ 5 ವರ್ಷಗಳಿಂದ ನೋಡಿದಾಗ, ಒಟ್ಟು 5 ವರ್ಷದಲ್ಲಿ 13841 ಮಾನವ ದಿನಗಳನ್ನು ಕಲ್ಪಸಿಕೊಡಲಾಗಿದ್ದು ಇದಕ್ಕೆ ಸುಮಾರು 15 ಲಕ್ಷ ರೂ.ಗಳನ್ನು ವೆಚ್ಚ ಮಾಡಲಾಗಿದೆ (ಕೋಷ್ಠಕ-23).[41] ಈ ಯೋಜನೆಯಲ್ಲಿ ರಸ್ತೆಗೆ ಬಂಡೆಗಳನ್ನು ಹಾಕಿಸುವ, ನೀರುತೊಟ್ಟಿ ಕಟ್ಟಿಸುವ ಹಾಗೂ ಶಾಲೆಗಳ ಕಾಂಪೌಂಡ್ ದುರಸ್ತಿ ಕಾರ್ಯಗಳನ್ನು ಕೈಗೊಳ್ಳಲಾಗಿದೆ. ಒಟ್ಟು ಹಣದಲ್ಲಿ ಶೇ 52 ರಷ್ಟು ಕಾಮಗಾರಿಗಳಿಗೆ ವೆಚ್ಚ ಮಾಡಲಾಗಿದೆ. ಶೇ 25 ರಷ್ಟು ಸಾಮಾಜಿಕ ಅರಣ್ಯಕ್ಕೆ ಖರ್ಚು ಮಾಡಿರುವ ಹಣದಲ್ಲಿ ರಸ್ತೆಯ ಬದಿಯಲ್ಲಿ ಗಿಡ ಮರಗಳನ್ನು ಬೆಳಸುವ ಕಾರ್ಯಗಳನ್ನು ಮಾತ್ರ ಕೈಗೊಂಡಿರುವುದು ಕಂಡುಬಂದಿದೆ. ಶೇ 25.5 ರಷ್ಟು ಹಣದಲ್ಲಿ ಪರಿಶಿಷ್ಟರಿಗೆ ಮೀಸಲಿಡಲಾಗಿದ್ದು ಈ ಹಣವನ್ನು ಪರಿಶಿಷ್ಟ ಜಾತಿ/ಪಂಗಡ ವಿದ್ಯಾರ್ಥಿಗಳಿಗೆ ಪುಸ್ತಕ ತೆಗೆದುಕೊಳ್ಳಲು, ಪರಿಶಿಷ್ಟರ ಕಾಲೋನಿಗಳಲ್ಲಿ ಕಟ್ಟೆಗಳ ನಿರ್ಮಾಣ, ಸಮುದಾಯ ಶೌಚಾಲಯಗಳನ್ನು ಕಟ್ಟಿಸಿ ಕೊಡಲಾಗಿದೆ. ಕ್ರಿಯಾ ಯೋಜನೆಯನ್ನು ಸರ್ಕಾರದ ನಿಯಮಗಳ ಅನ್ವಯ ಮಾಡಲಾಗಿದ್ದು ಅದು ಆದೇ ಪ್ರಕಾರ ವೆಚ್ಚ ಮಾಡಲಾಗಿದೆ ಎಂಬುದು ಗುರುತಿಸುವುದು ಕಷ್ಟವಾಗಿದೆ. ಈ ಪರಿಮಿತಿಯಲ್ಲಿ ಭೌತಿಕ ಗುರಿಯ ಪ್ರಕಾರವೇ ಸಾಧನೆ ಮಾಡಲಾಗಿದೆ.

ಸಂದರ್ಶನ ಮಾಡಿದ ಊರವರಲ್ಲಿ ಶೇ.21 ರಷ್ಟು ಜನರಿಗೆ ಉದ್ಯೋಗ ಸಿಕ್ಕಿದೆ. ಪಂಚಾಯತಿಯ ಕೆಲಸದ ಬಗ್ಗೆ ಶೇ.27 ರಷ್ಟು ಗೊತ್ತಿದೆ. ಶೇ.52 ರಷ್ಟು ಪಂಚಾಯತಿಯ ಯಾವುದೇ ಕೆಲಸದ ಬಗ್ಗೆ ಗೊತ್ತಿಲ್ಲವೆಂದು ಅಭಿಪ್ರಾಯಪಟ್ಟಿದ್ದಾರೆ (ಕೋಷ್ಠಕ-24). ನಾಗೇನಹಳ್ಳಿ ಪಂಚಾಯತಿಯು ನೀರಾವರಿ ಪ್ರದೇಶ ವಾಗಿರುವುದರಿಂದ ನಿರುದ್ಯೋಗ ಸಮಸ್ಯೆ ಅಷ್ಟಾಗಿ ಇಲ್ಲ. ಆದರೂ ಸಹ ಕಳೆದ 5 ವರ್ಷದಿಂದ ಬಜೆಟ್ ಪ್ರಕಾರ 13,841 ಮಾನವ ದಿನಗಳನ್ನು ಕಲ್ಪಿಸಲಾಗಿದ್ದು ಹೆಚ್ಚು ಕಾಮಗಾರಿಗಳಿಗೆ ಆದ್ಯತೆಯನ್ನು ನೀಡಲಾಗಿದೆ. ಹೀಗೆ ಜವಾಹರ್ ಗ್ರಾಮಸಮೃದ್ಧಿ ಯೋಜನೆಯಡಿಯಲ್ಲಿ ವೆಚ್ಚ ಮಾಡಲಾಗಿದೆ. ಈ ಯೋಜನೆಯ ಹಣವನ್ನು

ಸರಿಯಾಗಿ ಬಳಸಿಲ್ಲವೆಂದು ಪ್ರತಿ ವರ್ಷದ ಬಜೆಟ್‌ನಲ್ಲಿ ಆಕ್ಷೇಪಣೆ ಮಾಡಲಾಗಿದೆ. ಆದರೆ ಇದರ ಸರಿಪಡಿಸುವಿಕೆ ಕಂಡುಬಂದಿಲ್ಲ. ಹೀಗೆ ಗ್ರಾಮಪಂಚಾಯತಿ ಗಳಲ್ಲಿ ಜವಾಹರ್ ಗ್ರಾಮಸಮೃದ್ದಿ ಯೋಜನೆಯನ್ನು ಅನುಷ್ಠಾನಗೊಳಿಸಲಾಗಿದೆ.

## ಬೈಲುವದ್ದಿಗೆರೆ ಗ್ರಾಮಪಂಚಾಯತಿ

ಬೈಲುವದ್ದಿಗೆರೆ ಗ್ರಾಮಪಂಚಾಯತಿಯ ಎಲ್ಲಾ ಗ್ರಾಮಗಳು ಒಣಭೂಮಿ ಪ್ರದೇಶವಾಗಿದ್ದು ಶೇ 90 ರಷ್ಟು ಜನರು ಒಣಬೇಸಾಯವನ್ನು ಹೊಂದಿದ್ದಾರೆ, ನೀರಾವರಿ ಪ್ರದೇಶಕ್ಕಿಂತ ಹೆಚ್ಚು ನಿರುದ್ಯೋಗ ಸಮಸ್ಯೆ ಈ ಪ್ರದೇಶದಲ್ಲಿದೆ. ಈ ನಿರುದ್ಯೋಗ ನಿವಾರಿಸುವಲ್ಲಿ ಪಂಚಾಯತಿಯು ಕಳೆದ 5 ವರ್ಷದಿಂದ 11,213 ಮಾನವ ದಿನಗಳನ್ನು ಕಲ್ಪಿಸಿದೆ. ಪಂಚಾಯತಿಯು ತನ್ನ ಭೌತಿಕ ಗುರಿಯನ್ನು ಶೇ 90 ರಷ್ಟು ಮಾತ್ರ ಸಾಧಿಸಿದೆ (ಕೋಷ್ಠಕ-23).[42] ಈ ಯೋಜನೆಯಲ್ಲಿ ಬಂಡೆಹಾಕಿಸುವುದು. ಸಮುದಾಯ ಶೌಚಾಲಯ, ಅಗಸಿ ಕಟ್ಟೆಗಳ ನಿರ್ಮಾಣ ಮತ್ತು ನೀರಿನ ತೊಟ್ಟಿಯನ್ನು ನಿರ್ಮಿಸಲಾಗಿದೆ. 5 ವರ್ಷದಿಂದ ರೂ.8.5 ಲಕ್ಷಗಳನ್ನು ಖರ್ಚು ಮಾಡಿ ಇದರಲ್ಲಿ ಶೇ 52 ರಷ್ಟು ಕಾಮಗಾರಿಗಳಿಗೆ, ಶೇ 25 ರಷ್ಟು ಸಾಮಾಜಿಕ ಅರಣ್ಯ ಮತ್ತು ಶೇ 22.5 ರಷ್ಟು ಪರಿಶಿಷ್ಟರ ಕಲ್ಯಾಣಕ್ಕಾಗಿ ಬಳಸಲಾಗಿದೆ(ಕೋಷ್ಠಕ-22). ಸಾಮಾಜಿಕ ಅರಣ್ಯಕ್ಕಾಗಿ ಮೀಸಲಿಟ್ಟಿರುವ ಹಣದಲ್ಲಿ ರಸ್ತೆಯ ಬದಿಯಲ್ಲಿ ಗಿಡಗಳನ್ನು ನೆಡೆಸುವ ಕೆಲಸ ಮಾತ್ರ ನಡೆದಿದ್ದು ಯಾವುದಕ್ಕೆ ಖರ್ಚು ಮಾಡಲಾಗಿದೆ ಎಂಬುವುದು ಸರಿಯಾದ ವಿವರಣೆ ಇಲ್ಲ. ಪರಿಶಿಷ್ಟರ ಕಲ್ಯಾಣಕ್ಕಾಗಿ ಇರುವ ಹಣದಲ್ಲಿ ಪರಿಶಿಷ್ಟ ವಿದ್ಯಾರ್ಥಿಗಳಿಗೆ ಪುಸ್ತಕಗಳನ್ನು ತೆಗೆದು ಕೊಳ್ಳಲು ನೆರವಾಗಿದೆ.

ಈ ಯೋಜನೆಯ ಬಗ್ಗೆ ಊರವರಲ್ಲಿ ಅಭಿಪ್ರಾಯವನ್ನು ಸಂಗ್ರಹಿಸಲಾಗಿದ್ದು ಸಂದರ್ಶನ ಮಾಡಿದ ಶೇ 25 ಜನರಿಗೆ ಪಂಚಾಯತಿ ಕೆಲಸ ಸಿಕ್ಕಿದೆ. ಶೇ 64 ರಷ್ಟು ಜನರಿಗೆ ಯೋಜನೆಯ ಬಗ್ಗೆ ಅರಿವು ಇಲ್ಲ (ಕೋಷ್ಠಕ-24). ಇಲ್ಲಿ ಗ್ರಾಮೀಣ ಜನರಿಗೆ ಉದ್ಯೋಗವನ್ನು ಕಲ್ಪಿಸುವ ಕೆಲಸ ಪಂಚಾಯತಿ ಮಾಡುತ್ತದೆ ಎಂಬ ಅರಿವು ಗ್ರಾಮಸ್ಥರಿಗೆ ಇಲ್ಲ. ಕಾಮಗಾರಿಗಳನ್ನು ಕಂಟ್ರಾಕ್ಟರ್‌ಗಳಿಗೆ ಕೊಡಲಾಗಿದೆ. ಈ ಕಂಟ್ರಾಕ್ಟರ್‌ಗಳ ಮೂಲಕ ಇವರಿಗೆ ಕೆಲಸ ಸಿಕ್ಕಿದೆ. ಕೂಲಿ ವಿತರಣೆಯನ್ನು ಅಕ್ಕಿ ಮತ್ತು ಗೋಧಿಯ ಮೂಲಕ ಹಂಚಲಾಗಿದೆ. ಆದರೆ ಗೋದಿಯನ್ನು ಈ ಜನರು ಬಳಸುವುದಿಲ್ಲವೆಂದು ಅಭಿಪ್ರಾಯಪಟ್ಟಿದ್ದಾರೆ. ಪ್ರತಿ ವರ್ಷ ಬಜೆಟ್‌ನಲ್ಲಿ ಜೆ.ಆರ್.ವೈ ಯೋಜನೆಯಲ್ಲಿ ಹಣ ಬಳಸುವ ಕ್ರಮಗಳ ಬಗ್ಗೆ ಆಕ್ಷೇಪಣೆಯನ್ನು ಮಾಡಲಾಗಿದ್ದು ನಿಗಧಿತ ಮಾನವ ದಿನಗಳನ್ನು ಸಾಧಿಸಿಲ್ಲ ಎಂದು ಹೇಳಲಾಗಿದೆ. ಈ ಯೋಜನೆಯ ಬಗ್ಗೆ ಜನತೆಗೆ ಗೊತ್ತಿಲ್ಲದೆ ಇರುವುದು, ಗ್ರಾಮಸಭೆಗಳಲ್ಲಿ ಕೇವಲ ಕ್ರಿಯಾ ಯೋಜನೆಯ ಬಗ್ಗೆ ಮಾತ್ರ ತಿಳಿಸಲಾಗುತ್ತದೆ. ಹೀಗೆ ಜವಾಹರ್ ಗ್ರಾಮಸಮೃದ್ಧಿ ಯೋಜನೆಯು ಸರ್ಕಾರದ ನಿಯಮದ ಪ್ರಕಾರ ಖರ್ಚು ಮಾಡಲಾಗಿದೆ ಎಂದು ದಾಖಲೆಗಳು ಮಾತ್ರ ಹೇಳಿವೆ. ಆದರೆ ನಿಯಮದಂತೆ ವೆಚ್ಚ ಮಾಡಿಲ್ಲವೆಂದು ಹೇಳಬಹುದು.

## ಹಿರೇಹೆಗ್ಡಾಳ್ ಗ್ರಾಮಪಂಚಾಯಿತಿ

ಹಿರೇಹೆಗ್ಡಾಳ್ ಗ್ರಾಮಪಂಚಾಯತಿ ಬರುವ ಗ್ರಾಮಗಳಲ್ಲಿ ಜವಾಹರ್ ಗ್ರಾಮಸಮೃದ್ಧಿ ಯೋಜನೆಯಡಿ ಯಲ್ಲಿ ಹಲವಾರು ಅಭಿವೃದ್ಧಿ ಕಾರ್ಯಗಳನ್ನು ಕೈಗೊಂಡಿದೆ.ಕಳೆದ 5 ವರ್ಷದಿಂದ ರೂ 7.3 ಲಕ್ಷಗಳನ್ನು

ಈ ಯೋಜನೆಯಲ್ಲಿ ವೆಚ್ಚ ಮಾಡಲಾಗಿದ್ದು, ಇದರಲ್ಲಿ ಹೆಚ್ಚು ಕಾಮಗಾರಿಗಳನ್ನು ಕೈಗೊಳ್ಳಲಾಗಿದೆ. ಶೇ 52 ರಷ್ಟು ಹಣವನ್ನು ಕಾಮಗಾರಿಗಳು ಕೈಗೊಂಡಿದ್ದು ಇದರಲ್ಲಿ ಶಾಲೆಗಳ ದುರಸ್ಥಿ, ನೀರಿನ ತೊಟ್ಟಿ, ಬಂಡೆ ಹಾಕಿಸುವುದು, ಅಗಸಿ ಕಟ್ಟೆಗಳ ನಿರ್ಮಾಣ ಮತ್ತು ಸಮುದಾಯ ಶೌಚಾಲಯಗಳಿಗೆ ಬಳಸಲಾಗಿದೆ. ಈ ಕಾಮಗಾರಿಗಳ ಮೂಲಕ ಕಳೆದ 5 ವರ್ಷದಿಂದ 7553 ಮಾನವ ದಿನಗಳು ಕಲ್ಪಿಸಲಾಗಿದೆ.[43] ಈ ಪಂಚಾಯತಿಯು ತನ್ನ ಭೌತಿಕ ಗುರಿಯನ್ನು ಪೂರ್ಣವಾಗಿ ಸಾಧಿಸಿದೆ(ಕೋಷ್ಠಕ-23). ಈ ಪಂಚಾಯತಿಯು ಚಿಕ್ಕ ಗ್ರಾಮಪಂಚಾಯತಿ ಆಗಿದ್ದರಿಂದ ಕಡಿಮೆ ಹಣ ಮಂಜೂರಾಗಿದೆ. ಶೇ 25 ರಷ್ಟು ಹಣವನ್ನು ಸಾಮಾಜಿಕ ಅರಣ್ಯಕ್ಕೆ ಬಳಸಲಾಗಿದ್ದು, ರಸ್ತೆ ಬದಿಯಲ್ಲಿ ಗಿಡಗಳನ್ನು ನೆಡುವುದು ಮಾತ್ರ ನಡಿದಿದ್ದು, ಉಳಿದ ಹಣ ಯಾವ ರೀತಿ ಖರ್ಚು ಮಾಡಲಾಗಿದೆ ಎಂಬುದರ ಬಗ್ಗೆ ಸರಿಯಾದ ಮಾಹಿತಿ ಇಲ್ಲ. ಶೇ 23 ರಷ್ಟು ಹಣವನ್ನು ಪರಿಶಿಷ್ಟರ ಕಲ್ಯಾಣಕ್ಕೆ ಬಳಸಲಾಗಿದ್ದು, ಪರಿಶಿಷ್ಟರ ಕಾಲೋನಿಯಲ್ಲಿ ಕಟ್ಟೆ ಕಟ್ಟಿಸುವುದು, ಶೌಚಾಲಯಗಳನ್ನು ನಿರ್ಮಿಸುವುದು, ಬಂಡೆಹಾಕಿಸುವುದು ಮತ್ತು ವಿದ್ಯಾರ್ಥಿಗಳಿಗೆ ಪುಸ್ತಕಗಳ ಸಹಾಯ ಹೀಗೆ ಹಣವನ್ನು ಖರ್ಚು ಮಾಡಿದೆ. ಪ್ರತಿ ವರ್ಷ ಬಜೆಟ್‌ನಲ್ಲಿ ಈ ಹಣದ ಉಪಯೋಗವನ್ನು ಸರಿಯಾಗಿ ನಿರ್ವಹಿಸಿಲ್ಲ, ನಿಗದಿತ ಮಾನವ ದಿನಗಳನ್ನು ಸಾಧಿಸಿಲ್ಲವೆಂದು ಆಕ್ಷೇಪಣೆ ಮಾಡಲಾಗಿದೆ. ಗ್ರಾಮೀಣ ಜನತೆಗೆ ಈ ಯೋಜನೆಯ ಬಗ್ಗೆ ಅರಿವು ಇತರೆ ಪಂಚಾಯತಿಗಳಿಗಿಂತ ಹೆಚ್ಚು ಇದೆ. ಸಂದರ್ಶಿಸಿದವರಲ್ಲಿ ಶೇ 28 ರಷ್ಟು ಜನರಿಗೆ ಕೆಲಸ ಕಂಟ್ರಕ್ಟ್‌ದಾರರ ಮೂಲಕ ದೊರೆತಿದೆ ಎಂದು ಹೇಳಿದ್ದಾರೆ. ಶೇ 35 ರಷ್ಟು ಜನರಿಗೆ ಈ ಯೋಜನೆಯ ಬಗ್ಗೆ ಅರಿವಿದೆ. ಶೇ 25 ರಷ್ಟು ಜನರು ಗೊತ್ತಿಲ್ಲವೆಂದು ಉತ್ತರಿಸಿದ್ದಾರೆ (ಕೋಷ್ಠಕ-24). ಹೀಗೆ ಜವಾಹರ್ ಗ್ರಾಮಸಮೃದ್ಧಿ ಯೋಜನೆಯನ್ನು ಅನುಷ್ಠಾನಗೊಳಿಸಲಾಗಿದೆ.

## ಉಜ್ಜಿನಿ ಗ್ರಾಮಪಂಚಾಯತಿ

ಉಜ್ಜಿನಿ ಗ್ರಾಮಪಂಚಾಯತಿ ದೊಡ್ಡ ಗ್ರಾಮಪಂಚಾಯತಿಯಾಗಿದ್ದು ಇಲ್ಲಿ ಜವಾಹರ್ ಗ್ರಾಮಸಮೃದ್ಧಿ ಯೋಜನೆಯಲ್ಲಿ ಕಳೆದ 5 ವರ್ಷದಿಂದ ರೂ.11.6 ಲಕ್ಷಗಳನ್ನು ವೆಚ್ಚಮಾಡಲಾಗಿದೆ. ಕಳೆದ ಐದು ವರ್ಷದಿಂದ ಪಂಚಾಯತಿ ವ್ಯಾಪ್ತಿಯ ಗ್ರಾಮಗಳಲ್ಲಿ ಮಾನವ ದಿನಗಳನ್ನು ನೋಡಿದರೆ ಕೇವಲ 5192 ಮಾನವ ದಿನಗಳನ್ನು ಕಲ್ಪಿಸಿ ಕೊಡಲಾಗಿದೆ(ಕೋಷ್ಠಕ-23).[44] ಹೆಚ್ಚು ಮಾನವ ದಿನಗಳನ್ನು ಈ ಪಂಚಾಯಿತಿಯು ಸಾಧಿಸಿಲ್ಲ ಎಂಬುದು ಗೊತ್ತಾಗುತ್ತದೆ. ಆದರೆ ತನ್ನ ಭೌತಿಕ ಗುರಿಯನ್ನು ಪೂರ್ಣವಾಗಿ ಸಾಧಿಸಿದೆ. ಎಲ್ಲಾ ಗ್ರಾಮಪಂಚಾಯತಿಗಳಂತೆ ಇಲ್ಲಿ ಸಹ ಶೇ 52.5 ರಷ್ಟು ಹಣವನ್ನು ಕಾಮಗಾರಿಗಳಿಗೆ ವೆಚ್ಚ ಮಾಡಲಾಗಿದೆ. ಬಂಡೆ ಹಾಕಿಸುವುದು, ನೀರಿನ ತೊಟ್ಟಿ, ಶಾಲೆಗಳ ಮೂಲಭೂತ ಅವಶ್ಯಕತೆಗಳನ್ನು ಒದಗಿಸಿಕೊಡುವ ಕಾಮಗಾರಿಗಳು ನಡೆದಿವೆ. ಈ ಪ್ರದೇಶ ಸಂಪೂರ್ಣ ಒಣಭೂಮಿ ಪ್ರದೇಶವಾಗಿದ್ದು ಇಲ್ಲಿ ಉದ್ಯೋಗ ಸೃಷ್ಟಿಯ ಕೆಲಸಗಳು ನಡೆದಿಲ್ಲ. ಕಂಟ್ರಾಕ್ಟ್‌ದಾರರು ತಮಗೆ ಬೇಕಾದವರಿಗೆ ಉದ್ಯೋಗವನ್ನು ಕೊಡಲಾಗಿದೆ. ಸಾಮಾಜಿಕ ಅರಣ್ಯದ ಹಣದಲ್ಲಿ ಗಿಡಗಳನ್ನು ನಡೆಸುವ ಕಾರ್ಯಗಳು ನಡೆದಿವೆ. ಇನ್ನೂ ಪರಿಶಿಷ್ಟರ ಕಲ್ಯಾಣದಲ್ಲಿ ಹೆಚ್ಚು ವಿದ್ಯಾರ್ಥಿಗಳು ಇರುವುದರಿಂದ ಪುಸ್ತಕ ಕೊಂಡುಕೊಳ್ಳಲು ಸಹಾಯವನ್ನು ಹೆಚ್ಚು ಮಾಡಿದೆ.

ಸಂದರ್ಶಿಸಿದ 166 ಕುಟುಂಬಗಳಲ್ಲಿ ಶೇ 15 ರಷ್ಟು ಕೆಲಸ ಸಿಕ್ಕಿದೆ,ಶೇ 10 ರಷ್ಟು ಜನತೆಗೆ ಕೆಲಸ ಸಿಕ್ಕಿಲ್ಲ ಮತ್ತು ಶೇ 65 ರಷ್ಟು ಕುಟುಂಬಗಳು ಯೋಜನೆಯ ಬಗ್ಗೆ ಗೊತ್ತಿಲ್ಲವೆಂದು ಅಭಿಪ್ರಾಯ ಪಟ್ಟಿದ್ದಾರೆ(ಕೋಷ್ಟಕ-24). ಪ್ರತಿ ವರ್ಷ ಬಜೆಟ್‌ನಲ್ಲಿ ನಿಗಧಿತ ಮಾನವ ದಿನಗಳನ್ನು ಸಾಧಿಸಿಲ್ಲ. ನಿಯಮದ ಪ್ರಕಾರ ಹಣ ವೆಚ್ಚ ಮಾಡಿಲ್ಲವೆಂದು ಆಕ್ಷೇಪಣೆ ಮಾಡಲಾಗಿದೆ. ಇದು ಒಣ ಭೂಮಿ ಪ್ರದೇಶವಾದರು ಇಲ್ಲಿ ಮಾನವ ದಿನಗಳಿಗೆ ಹೆಚ್ಚು ಆದ್ಯತೆ ನೀಡಬೇಕು ಆದರೆ ಅದು ಇಲ್ಲಿ ಆದ್ಯತೆ ನೀಡಿಲ್ಲವೆಂದು ಹೇಳಬಹುದು. ಹೀಗೆ ಪಂಚಾಯತಿಯು ಜೆ. ಆರ್.ವೈ. ಕಾರ್ಯಕ್ರಮವನ್ನು ಕೈಗೊಂಡಿದೆ.

## 4.8 ಗ್ರಾಮಪಂಚಾಯತಿಗಳ ತೌಲನಿಕ ವಿವರಣೆ

ಅಧ್ಯಯನ ಕೈಗೊಂಡ ನಾಲ್ಕು ಗ್ರಾಮ ಪಂಚಾಯತಿಗಳಲ್ಲಿ ಜವಾಹರ್ ಗ್ರಾಮಸಮೃದ್ಧಿ ಯೋಜನೆಯ ಅನುಷ್ಠಾನವನ್ನು ನೋಡಲಾಗಿದೆ.1995-2000 ರವರೆಗಿನ ಜವಾಹರ್ ಗ್ರಾಮಸಮೃದ್ಧಿ ಯೋಜನೆಯ ಅನುಷ್ಠಾನವನ್ನು ಪಂಚಾಯತಿಗಳಲ್ಲಿ ನೋಡಿದಾಗ, ನಾಗೇನಹಳ್ಳಿ ಗ್ರಾಮಪಂಚಾಯತಿ ಯಲ್ಲಿ ಐದು ವರ್ಷದಲ್ಲಿ 13841 ಮಾನವ ದಿನಗಳನ್ನು ಕಲ್ಪಿಸಿಕೊಡಲಾಗಿದ್ದು ಇದಕ್ಕೆ ಸುಮಾರು ರೂ.15 ಲಕ್ಷಗಳನ್ನು, ಬೈಲುವದ್ದಿಗೆರೆ ಪಂಚಾಯತಿಯಲ್ಲಿ ರೂ.8.5 ಲಕ್ಷಗಳನ್ನು ಖರ್ಚು ಮಾಡಿ 11,213 ಮಾನವ ದಿನಗಳನ್ನು, ಹಿರೇಹೆಗ್ಡಾಳ್ ಪಂಚಾಯತಿಯಲ್ಲಿ ರೂ.7.3 ಲಕ್ಷಗಳನ್ನು ಈ ಯೋಜನೆಯಲ್ಲಿ ವೆಚ್ಚ ಮಾಡಲಾಗಿದ್ದು ಇದರಿಂದ 7553 ಮಾನವ ದಿನಗಳನ್ನು ಮತ್ತು ಉಜ್ಜನಿ ಪಂಚಾಯತಿಯಲ್ಲಿ ರೂ.11.6 ಲಕ್ಷಗಳನ್ನು ವೆಚ್ಚಮಾಡಿ 5192 ಮಾನವ ದಿನಗಳನ್ನು ಕಲ್ಪಿಸಿ ಕೊಡಲಾಗಿದೆ(ಕೋಷ್ಟಕ-23). ಅಧ್ಯಯನ ಕೈಗೊಂಡ ಎರಡು ನೀರಾವರಿ ಪಂಚಾಯತಿ ಪ್ರದೇಶಗಳಾದ ನಾಗೇನಹಳ್ಳಿ ಮತ್ತು ಹಿರೇಹೆಗ್ಡಾಳ್‌ನಲ್ಲಿ, ಒಣಭೂಮಿ ಪಂಚಾಯತಿ ಪ್ರದೇಶಗಳಾದ ಬೈಲುವದ್ದಿಗೆರೆ ಮತ್ತು ಉಜ್ಜನಿಗಳಿಗಿಂತ ಹೆಚ್ಚು ಮಾನವ ದಿನಗಳನ್ನು ಸೃಷ್ಟಿಸಲಾಗಿದೆ. ಹಾಗಾಗಿ ನೀರಾವರಿ ಪ್ರದೇಶದಲ್ಲಿ ಹೆಚ್ಚು ಉದ್ಯೋಗಗಳನ್ನು ಕಲ್ಪಿಸಲಾಗಿದೆ.

ಒಣ ಬೂಮಿ ಪ್ರದೇಶದಲ್ಲಿ ಹೆಚ್ಚು ನಿರುದ್ಯೋಗ ಮತ್ತು ಅರೆ ಉದ್ಯೋಗ ಇರುವುದರಿಂದ ಅಲ್ಲಿ ಹೆಚ್ಚು ಮಾನವ ದಿನಗಳ ಸೃಷ್ಟಿಸಬೇಕು. ಆದರೆ ನೀರಾವರಿ ಪ್ರದೇಶದಲ್ಲಿ ಹೆಚ್ಚು ಉದ್ಯೋಗವನ್ನು ಕಲ್ಪಿಸಲಾಗಿದೆ. ಜವಾಹರ್ ಗ್ರಾಮಸಮೃದ್ಧಿಯ ಯೋಜನೆಯ ಹಣವನ್ನು ಪರಿಶಿಷ್ಟ ಜಾತಿ/ಪಂಗಡದವರು ಹೆಚ್ಚು ಇರುವ ಪ್ರದೇಶಗಳಿಗೆ ನಿಯಮದಂತೆ ಹೆಚ್ಚು ಮಂಜೂರು ಮಾಡಲಾಗಿದೆ. ಅಧ್ಯಯನ ಕೈಗೊಂಡ ಎರಡು ನೀರಾವರಿ ಪ್ರದೇಶಗಳಲ್ಲಿ ಪರಿಶಿಷ್ಟರ ಜನಸಂಖ್ಯೆ ಹೆಚ್ಚು ಇರುವುದರಿಂದ ಹೆಚ್ಚು ಹಣ ಬಿಡುಗಡೆಯಾಗಿದೆ. ಹಾಗೆಯೇ ಹೆಚ್ಚು ಮಾನವ ದಿನಗಳನ್ನು ಕಲ್ಪಿಸಲಾಗಿದೆ. ಸರ್ಕಾರವು ತಾನು ಮಾಡಿದ ನಿಯಾಮವಳಿಗಳ ಪ್ರಕಾರ ಹಣ ಬಿಡುಗಡೆ ಮಾಡುತ್ತದೆ. ಅದೇ ಪ್ರಕಾರ ಗ್ರಾಮಪಂಚಾಯತಿಗಳು ಆ ನಿಯಮಗಳಂತೆ ಹಣವನ್ನು ವೆಚ್ಚಮಾಡಿವೆ ಎಂದು ದಾಖಲೆಗಳಲ್ಲಿ ತೋರಿಸಿವೆ. ಆದರೆ ಇಲ್ಲಿ ಅಧ್ಯಯನ ಕೈಗೊಂಡ ಯಾವ ಪಂಚಾಯತಿಯಲ್ಲಿ ಸಹ ಉದ್ದೇಶಿತ ವರ್ಗಗಳಿಗೆ ಈ ಯೋಜನೆಯ ಲಾಭ ತಲುಪಿಲ್ಲ ಎಂದು ಹೇಳಬಹುದು. ಎಲ್ಲಾ ಗ್ರಾಮಪಂಚಾಯತಿಗಳು ಗ್ರಾಮಸಭೆ ನಡೆಯುವ ದಿನ ಈ ಯೋಜನೆಯ

ಕ್ರಿಯಾಯೋಜನೆಯನ್ನು ತಿಳಿಸಲಾಗುತ್ತದೆ. ಆದರೆ ಈ ಯೋಜನೆಯ ಅನುಷ್ಠಾನ ಹೇಗೆ ಅಗಬೇಕು? ಯಾರಿಗೆ ಉದ್ಯೋಗ ಸಿಗಬೇಕು? ಎಲ್ಲೆಲ್ಲಿ ಕಾಮಗಾರಿಗಳನ್ನು ಕೈಗೊಳ್ಳಬೇಕು ಎಂಬುವ ವಿವರವನ್ನು ಯಾವ ಗ್ರಾಮ ಪಂಚಾಯತಿಗಳು ಗ್ರಾಮದವರಿಗೆ ತಿಳಿಸಿಲ್ಲ. ಹಾಗಾಗಿ ಗ್ರಾಮದವರಿಗೆ ಈ ಯೋಜನೆಯಿಂದ ನಮಗೆ ಉದ್ಯೋಗ ಸಿಗುತ್ತದೆ ಎಂಬ ಅರಿವು ಸಹ ಇಲ್ಲದಂತಾಗಿದೆ.

ಈ ಯೋಜನೆಯ ಉದ್ದೇಶದ ಪ್ರಕಾರ ಯಾವ ಪಂಚಾಯತಿಯಲ್ಲಿ ಕೆಲಸ ಕೈಗೊಂಡಿಲ್ಲ. ಎಲ್ಲಾ ಪಂಚಾಯತಿಗಳ ಆಯವ್ಯಯದಲ್ಲಿ ಆಕ್ಷೇಪಣೆಯನ್ನು ಮಾಡಲಾಗಿದೆ. ನಿಯಮ ಪ್ರಕಾಗ ಹಣವನ್ನು ವೆಚ್ಚ ಮಾಡಿಲ್ಲ. ನಿಗಧಿತ ಮಾನವ ದಿನಗಳನ್ನು ಯಾವ ಪಂಚಾಯತಿಯಗಳು ಸಾಧಿಸಿಲ್ಲವೆಂಬುದು ಸ್ಪಷ್ಟವಾಗಿ ಗೊತ್ತಾಗುತ್ತದೆ. ಎಲ್ಲಾ ಪಂಚಾಯತಿಗಳಲ್ಲಿ ಗುತ್ತಿಗೆದಾರರಿಗೆ ಕಾಮಗಾರಿಗಳನ್ನು ವಹಿಸಲಾಗಿದ್ದು ಈ ಗುತ್ತಿಗೆ ತಮಗೆ ಬೇಕಾದವರನ್ನು ಮಾತ್ರ ಕೆಲಸಕ್ಕೆ ತೆಗೆದುಕೊಂಡಿದ್ದಾರೆ. ಗ್ರಾಮದವರನ್ನು ಬಿಟ್ಟು ಹೊರಗಡೆಯವರನ್ನು ಸಹ ಕೆಲಸಕ್ಕೆ ತೆಗೆದುಕೊಂಡಿರುವುದು ಅಧ್ಯಯನದಿಂದ ಗುರುತಿಸಲಾಗಿದೆ. ಪಂಚಾಯತಿ ಕೇಂದ್ರದಲ್ಲಿ ಹೆಚ್ಚು ಕಾಮಗಾರಿಗಳು ನಡೆದಿರುವುದರಿಂದ ಪಂಚಾಯತ್ ವ್ಯಾಪ್ತಿಯ ಗ್ರಾಮಗಳಲ್ಲಿ ಹೆಚ್ಚು ಉದ್ಯೋಗಗಳು ಸೃಷ್ಠಿಯಾಗಿಲ್ಲ. ಗ್ರಾಮಪಂಚಾಯತಿ ಯಿಂದ ನಮಗೆ ಉದ್ಯೋಗ ಸಿಗುತ್ತದೆ ಎಂಬ ಅರಿವು ಊರವರಲ್ಲಿ ಯಾರಲ್ಲೂ ಇಲ್ಲ. ಎಲ್ಲಾ ಪಂಚಾಯತಿಗಳಲ್ಲಿ ನಮಗೆ ಗುತ್ತಿಗೆದಾರರಿಂದ ಕೆಲಸ ಸಿಕ್ಕಿದೆ ಎಂಬ ಅಭಿಪ್ರಾಯ ಎಲ್ಲಾ ಗ್ರಾಮಪಂಚಾಯತಿಗಳಲ್ಲಿ ವ್ಯಕ್ತವಾಗಿದೆ. ಕೂಲಿ ವಿತರಣೆಯಲ್ಲಿ ಒಂದು ದಿನಕ್ಕೆ 1.5 ಕೆ.ಜಿ. ಆಹಾರ ಧಾನ್ಯಗಳನ್ನು ಕೊಡಬೇಕು. ಆದರೆ ಎಲ್ಲಾ ಪಂಚಾಯತಿಗಳಲ್ಲಿ ಹೆಚ್ಚು ಗೋಧಿಯನ್ನು ವಿತರಿಸಲಾಗಿದೆ. ಜನತೆ ಅಭಿಪ್ರಾಯದಲ್ಲಿ ಗೋಧಿಯನ್ನು ಊಟ ಮಾಡುವುದು ನಮಗೆ ಕಷ್ಟವಾಗಿದೆ. ಅಂದರೆ ಅಭ್ಯಾಸವಿಲ್ಲ ಎಂದು ಹೇಳಿದ್ದಾರೆ. ಊಟ ಮಾಡುವ ಆಹಾರ ಧಾನ್ಯಗಳು ವಿತರಣೆಯಾಗಬೇಕು. ಆದರೆ ಯಾವ ಪಂಚಾಯತಿಯಲ್ಲಿ ಜೋಳವಾಗಲೀ, ರಾಗಿಯಾಗಲೀ ವಿತರಣೆಯಾಗಿಲ್ಲ. ಅಕ್ಕಿಯ ಜೊತೆಗೆ ಗೋಧಿಯನ್ನು ವಿತರಿಸಲಾಗಿದೆ.

ಸಾಮಾಜಿಕ ಅರಣ್ಯಕ್ಕೆ ಮೀಸಲಿಟ್ಟಿರುವ ಹಣದಲ್ಲಿ ಹೆಚ್ಚು ಹಣವನ್ನು ರಸ್ತೆ ಬದಿಗಳಲ್ಲಿ ಗಿಡಗಳನ್ನು ನಡೆಸಲು ಖರ್ಚು ಮಾಡಲಾಗಿದೆ ಎಂದು ಅಧಿಕಾರಿಗಳು ಮತ್ತು ಪಂಚಾಯತ್ ಸದಸ್ಯರು ಹೇಳಿದ್ದಾರೆ. ಆದರೆ ಬಜೆಟ್‌ಗಳಲ್ಲಿ ಯಾವುದಕ್ಕೆ ಹಣ ಬಳಕೆಯಾಗಿದೆ ಎಂಬುದು ಸ್ಪಷ್ಟನೆ ಇಲ್ಲ. ಈ ಹಣವನ್ನು ಇದಕ್ಕೆ ಬಿಟ್ಟರೇ ಬೇರೆ ಅರಣ್ಯ ಅಭಿವೃದ್ಧಿಗೆ ಬಳಸಿಲ್ಲದಿರುವುದು ಸಹ ಗೊತ್ತಾಗಿದೆ. ಪಂಚಾಯತಿಗಳ ಆಯವ್ಯಯದಲ್ಲಿ ಹಣವನ್ನು ಪ್ರಮಾಣಕ್ಕನುಗುಣವಾಗಿ ಸರಕಾರ ನಿಗಧಿಪಡಿಸಿದಂತೆ ಬಳಸಲಾಗಿದೆ ಎಂದು ಹೇಳಲಾಗಿದೆ. ಆದರೆ ಯಾವುದಕ್ಕೆ ಬಳಸಲಾಗಿದೆ ಎಂಬುದರ ಬಗ್ಗೆ ಸರಿಯಾದ ವಿವರಣೆ ಬಜೆಟ್‌ನಲ್ಲಿ ತಿಳಿಸಿಲ್ಲ. ಬಂಡೆಹಾಕಿಸುವುದು, ನೀರಿನ ತೊಟ್ಟಿ,ಶಾಲೆಗಳ ಕಾಂಪೌಂಡ್ ದುರಸ್ಥಿ, ಅಗಸಿ ಕಟ್ಟೆ ಇವುಗಳನ್ನು ಮಾತ್ರ ಸ್ಪಷ್ಟವಾಗಿ ಬಜೆಟ್‌ಗಳಲ್ಲಿ ಹೇಳಲಾಗಿದೆ. ಆದರೆ ಸಾಮಾಜಿಕ ಅರಣ್ಯ ಮತ್ತು ಪರಿಶಿಷ್ಟರ ಕಲ್ಯಾಣಕ್ಕಾಗಿ ಮೀಸಲಿರುವ ಯಾವುದಕ್ಕೆ ಖರ್ಚು ಮಾಡಲಾಗಿದೆ ಎಂಬುದನ್ನು ಸ್ಪಷ್ಟವಾಗಿ ನಮೂದಿಸಿಲ್ಲ. ಬಜೆಟ್‌ನಲ್ಲಿ ಕೇವಲ ಕ್ರಿಯಾ ಯೋಜನೆಯನ್ನು ತಯಾರಿಸಿರುವ ಬಗ್ಗೆ ಮಾತ್ರ ಹೇಳಲಾಗಿದೆ. ಆದರೆ ಕೆಲಸ ಎಲ್ಲಿ ಆಗಿದೆ

ಮತ್ತು ಹೇಗೆ ಆಗಿದೆ ಎಂಬುದರ ಬಗ್ಗೆ ಯಾವ ಪಂಚಾಯತಿಗಳು ಸ್ಪಷ್ಟವಾಗಿ ನಮೂದಿಸಿಲ್ಲ. ಶೇ 30 ರಷ್ಟು ಮಹಿಳೆಯರಿಗೆ ಉದ್ಯೋಗವನ್ನು ಒದಗಿಸಬೇಕು. ಅದರೆ ಇದರ ಬಗ್ಗೆಯೂ ಸಹ ಯಾವುದೇ ಮಾಹಿತಿ ಇಲ್ಲ. ಅಧಿಕಾರಿಗಳು ಮತ್ತು ಪಂಚಾಯತ್ ಸದಸ್ಯರಿಗೆ ಸರಿಯಾದ ಸ್ಪಷ್ಟನೆ ಇಲ್ಲವಾಗಿದೆ.

ಗ್ರಾಮಪಂಚಾಯತಿಗಳು ಇಂದು ಕಾರ್ಯ ನಿರ್ವಹಿಸುವುದಕ್ಕೆ ಸಂಪನ್ಮೂಲಗಳ ಅವಶ್ಯಕತೆ ಹೆಚ್ಚು ಇದೆ. ಪಂಚಾಯತಿಯ ಸಂಪನ್ಮೂಲಗಳಲ್ಲಿ ದೊಡ್ಡ ಸಂಪನ್ಮೂಲವೆಂದರೆ ಜೆ.ಆರ್.ವೈ.ಯೋಜನೆ ಆದರೆ ಇದರ ಸರಿಯಾದ ಅನುಷ್ಠಾನದ ಕಡೆಗೆ ಪಂಚಾಯತಿಗಳು ಹೆಚ್ಚು ಗಮನಹರಿಸಬೇಕಾಗಿದೆ. ನೀರಾವರಿ ಮತ್ತು ಒಣಭೂಮಿ ಪ್ರದೇಶಗಳನ್ನು ತುಲನೆ ಮಾಡಿದಾಗ ಈ ಯೋಜನೆಯ ಅನುಷ್ಠಾನ, ಯೋಜನೆಯ ಬಗ್ಗೆ ಅರಿವು, ಮತ್ತು ಕೆಲಸವನ್ನು ಪಡೆದಿರುವುದು ನೀರಾವರಿ ಪ್ರದೇಶದಲ್ಲೆ ಹೆಚ್ಚು ಎಂದು ಹೇಳಬಹುದು. ನಿಜವಾಗಿ ಈ ಯೊಜನೆಯನ್ನು ಹೆಚ್ಚು ಅನುಷ್ಠಾನಗೊಳಿಸಬೇಕಾಗಿರುವುದು ಒಣಭೂಮಿ ಪ್ರದೇಶಗಳಲ್ಲಿ. ಇಲ್ಲಿ ಹೆಚ್ಚು ನಿರುದ್ಯೋಗ, ಅರೆ ಉದ್ಯೋಗ ಇದೆ. ವಲಸೆ ಇದೆ. ಅದ್ದರಿಂದ ಜವಾಹರ್ ಗ್ರಾಮಸಮೃದ್ಧಿ ಯೋಜನೆಯು ಹೆಚ್ಚು ಅನುಷ್ಠಾನ ಒಣಭೂಮಿ ಪ್ರದೇಶಗಳಲ್ಲಿ ಅಗಬೇಕು. ನಾಲ್ಕು ಗ್ರಾಮಪಂಚಾಯತಿಗಳನ್ನು ನೋಡಿದಾಗ ಉಜ್ಜನಿಯಲ್ಲಿ ಕಡಿಮೆ ಮಾನವ ದಿನಗಳನ್ನು ಕಲ್ಪಿಸಲಾಗಿದೆ. ಒಣಭೂಮಿ ಪ್ರದೇಶಗಳಲ್ಲಿ ಈ ಯೋಜನೆಯ ಬಗ್ಗೆ ನಿರಾಶೆಯ ಭಾವನೆಗಳು ವ್ಯಕ್ತವಾಗಿವೆ. ಹೀಗೆ ನಾಲ್ಕು ಪಂಚಾಯತಿಗಳಲ್ಲಿ ಜವಾಹರ್ ಗ್ರಾಮಸಮೃದ್ಧಿ ಯೋಜನೆಯ ಅನುಷ್ಠಾನವನ್ನು ಕಾಣಬಹುದಾಗಿದೆ.

## 4.9 ಗ್ರಾಮಪಂಚಾಯತಿ ಮತ್ತು ಶಿಕ್ಷಣ

ಮಾನವನ ಸಾಮಾಜಿಕ, ಆರ್ಥಿಕ ಮತ್ತು ರಾಜಕೀಯ ಅಭ್ಯುದಯದಲ್ಲಿ ಶಿಕ್ಷಣದ ಪಾತ್ರ ಬಹಳ ಮುಖ್ಯವಾಗಿದೆ. ಮೂಲಭೂತ ಶಿಕ್ಷಣವನ್ನು ಒದಗಿಸುವುದು ಇಂದು ಸಂವಿಧಾನಿಕ ಹೊಣೆಯಾಗಿದೆ. ಸಂವಿಧಾನದ 45ನೇ ವಿಧಿ ಅನ್ವಯ 14 ವರ್ಷ ವಯಸ್ಸಿನ ಎಲ್ಲಾ ಮಕ್ಕಳಿಗೆ ಉಚಿತ ಮತ್ತು ಕಡ್ಡಾಯ ಶಿಕ್ಷಣವನ್ನು ಕೊಡಬೇಕೆಂದು ಹೇಳಿದೆ.[45] ಇಂದು ಶಿಕ್ಷಣವು ಮಾನವ ಅಭಿವೃದ್ಧಿಯ ಮುಖ್ಯ ಸೂಚ್ಯಂಕವಾಗಿದೆ.[46] ಶಿಕ್ಷಣದ ಅಭಿವೃದ್ಧಿಯ ದೃಷ್ಟಿಯಿಂದ ಸೀಮಿತ ಜವಾಬ್ದಾರಿಗಳನ್ನು ಪಂಚಾಯತ್ ರಾಜ್ ಸಂಸ್ಥೆಗಳಿಗೆ ವಹಿಸಲಾಗಿದೆ. ಆದ್ದರಿಂದ ಶಿಕ್ಷಣದ ಸುಧಾರಣೆಯಲ್ಲಿ ಪಂಚಾಯತಿ ಸಂಸ್ಥೆಗಳ ಪಾತ್ರ ಬಹಳ ಆಗತ್ಯವಾಗಿದೆ. ಆದರಲ್ಲೂ ಗ್ರಾಮೀಣ ಶಿಕ್ಷಣದ ಸುಧಾರಣೆಯಲ್ಲಿ ಈ ಸಂಸ್ಥೆಗಳ ಪಾತ್ರ ಇನ್ನೂ ಹೆಚ್ಚಿದೆ. ಕಾರಣ ಗ್ರಾಮೀಣ ಸಾಕ್ಷರತೆ ನಗರ ಸಾಕ್ಷರತೆಗೆ ಹೋಲಿಸಿದರೆ ಬಹಳ ಅಂತರವನ್ನು ಕಾಣುತ್ತೇವೆ. ಈ ಅಂತರಕ್ಕೆ ಗ್ರಾಮೀಣ ಪ್ರದೇಶ ವಿದ್ಯಾರ್ಥಿಗಳ ದಾಖಲಾತಿ, ಶಾಲೆ ಬಿಟ್ಟವರ ಪ್ರಮಾಣ ಇವೆಲ್ಲವು ಕಾರಣವಾಗಿವೆ. ಆದ್ದರಿಂದ ಸಂವಿಧಾನದ 243ಜಿ ವಿಧಿಯ ಅನ್ವಯ ಕೆಳಗೆ ತಿಳಿಸಿರುವಂತೆ ಶೈಕ್ಷಣಿಕ ಹೊಣೆಗಾರಿಕೆಗಳನ್ನು ಸ್ಥಳೀಯ ಸಂಸ್ಥೆಗಳಿಗೆ ಒದಗಿಸಲಾಗಿದೆ.[47]

ಮೂಲ ಶಿಕ್ಷಣವನ್ನು ಒದಗಿಸುವಲ್ಲಿ ಪ್ರಾಥಮಿಕ ಶಿಕ್ಷಣ, ವಯಸ್ಕರ ಶಿಕ್ಷಣ, ಗ್ರಂಥಾಲಯ ಮತ್ತು ಸಾಂಸ್ಕೃತಿಕ ಚಟುವಟಿಕೆಗಳು ಮುಖ್ಯವಾಗಿವೆ. ಇದರಲ್ಲಿ ಕೆಲವು ಸೌಲಭ್ಯಗಳನ್ನು ಮಾತ್ರ ಗ್ರಾಮಗಳು ಹೊಂದಿವೆ. ಈ ಸೌಲಭ್ಯಗಳ ಎಲ್ಲಾ ನಿರ್ವಹಣೆಯನ್ನು ಈ ಪಂಚಾಯತಿ ಸಂಸ್ಥೆಗಳಿಗೆ ವಹಿಸಲಾಗಿದೆ.

ಈ ಶಿಕ್ಷಣವನ್ನು ಒದಗಿಸುವಲ್ಲಿ ಬೇರೆ ಬೇರೆ ರಾಜ್ಯಗಳು ವಿವಿಧ ರೀತಿಯ ಜವಬ್ದಾರಿಗಳನ್ನು ಹೊಂದಿವೆ. ಕೆಲವು ರಾಜ್ಯಗಳು ಎಲ್ಲಾ ಶಿಕ್ಷಣದ ಎಲ್ಲಾ ಹೊಣೆಗಾರಿಕೆಗಳನ್ನು ಹೊಂದಿವೆ. ಕರ್ನಾಟಕ ರಾಜ್ಯವು ಪ್ರಾಥಮಿಕ ಶಿಕ್ಷಣ, ವಯಸ್ಕರ ಶಿಕ್ಷಣ, ಮತ್ತು ಅನೌಪಚಾರಿಕ ಶಿಕ್ಷಣದ ಚಟುವಟಿಕೆಗಳ ನಿರ್ವಹಣೆಯನ್ನು ಗ್ರಾಮಪಂಚಾಯತಿಗಳಿಗೆ ಒದಗಿಸಲಾಗಿದೆ. ನಿರ್ವಹಣೆಯ ಪ್ರಗತಿಗಾಗಿ ಗ್ರಾಮಪಂಚಾಯತಿಗಳಲ್ಲಿ ಸಮಿತಿಗಳನ್ನು ರಚಿಸಲಾಗಿದೆ. ಈ ಸಮಿತಿಗಳು ಶಿಕ್ಷಣಕ್ಕೆ ಪೂರಕವಾಗಿ ಕಾರ್ಯನಿರ್ವಹಿಸಬೇಕಾಗಿದೆ.[48]

ಗ್ರಾಮೀಣ ಪ್ರದೇಶಗಳಲ್ಲಿ ಶೈಕ್ಷಣಿಕ ಸಂಸ್ಥೆಗಳನ್ನು ಸರಿಯಾಗಿ ನಡೆಸಿಕೊಂಡು ಹೋಗಲು ಮಾರ್ಗದರ್ಶನ ಮತ್ತು ಜವಬ್ದಾರಿಗಳನ್ನು ಪಂಚಾಯತಿ ಸಂಸ್ಥೆಗಳಿಗೆ ಒದಗಿಸಲಾಗಿದೆ. ಹೊಸ ಶಾಲೆಗಳ ಸ್ಥಾಪನೆ, ಕಟ್ಟಡಗಳ ದುರಸ್ತಿಕಾರ್ಯ ಮತ್ತು ಶಿಕ್ಷಣ ಅವಶ್ಯ ಅನುದಾನಗಳನ್ನು ಈ ಸಂಸ್ಥೆಗಳ ಮೂಲಕ ವಿತರಿಸಲಾಗುತ್ತದೆ. ಅದರಲ್ಲಿ ತಳ ಮಟ್ಟದ ಸಂಸ್ಥೆಯಾದ ಗ್ರಾಮಪಂಚಾಯತಿಯು ಜನತೆಗೆ, ಶಿಕ್ಷಣದ ತಿಳುವಳಿಕೆ ಸಾಕ್ಷರತೆ ಹೆಚ್ಚಿಸುವ ಕೆಲಸ ಮಾಡಬೇಕಾಗಿದೆ. ಸಾರ್ವತ್ರಿಕ ಶಿಕ್ಷಣ ನೀಡುವ ದೃಷ್ಟಿಯಿಂದ ಸ್ಥಳೀಯ ಸಂಸ್ಥೆಗಳಿಗೆ ಕೆಲವು ಕಾರ್ಯಗಳನ್ನು ನಿಗಧಿಪಡಿಸಲಾಗಿದೆ.

1. ಶಾಲೆಗೆ ಬಿಟ್ಟಿರುವ ಮಕ್ಕಳನ್ನು ಹಾಗೂ ಮಕ್ಕಳ ತೊಂದರೆಗಳನ್ನು ಗುರುತಿಸಿ ಇವುಗಳನ್ನು ಸಾಧ್ಯವಾದ ಮಟ್ಟಿಗೆ ಪರಿಹರಿಸಿ ಮಕ್ಕಳ ದಾಖಲಾತಿಯನ್ನು ಹೆಚ್ಚಿಸಬೇಕು
2. ಶಿಕ್ಷಣ ಹಿಂದುಳಿದಿರುವ ಪ್ರದೇಶಗಳನ್ನು ಗುರುತಿಸಿ ಅಲ್ಲಿ ಹೆಚ್ಚಿನ ಶೈಕ್ಷಣಿಕ ಕಾರ್ಯಕ್ರಮಗಳನ್ನು ಹಮ್ಮಿಕೊಳ್ಳುವುದು
3. ಬಾಲಕಾರ್ಮಿಕರನ್ನು ಗುರುತಿಸಿ ಇವರಿಗೆ ಶಿಕ್ಷಣ ಸೌಲಭ್ಯಗಳನ್ನು ಒದಗಿಸುವುದು ಮತ್ತು ಕೆಳ ವರ್ಗಗಳಿಗೆ ಹೆಚ್ಚಿನ ಆದ್ಯತೆಯನ್ನು ನೀಡಬೇಕು
4. ಸಾರ್ವತ್ರಿಕ ಶಿಕ್ಷಣ ಮತ್ತು ಸಾಕ್ಷರತೆಯನ್ನು ಹೆಚ್ಚಿಸುವ ಕಾರ್ಯಕ್ರಮಗಳಿಗೆ ಸಂಪನ್ಮೂಲಗಳ ಕ್ರೋಢೀಕರಣ ಮತ್ತು ಯೋಜನೆಯನ್ನು ತಯಾರಿಸುವುದು. ಈ ಕಾರ್ಯಗಳ ಜೊತೆಗೆ ಗ್ರಾಮೀಣ ಪ್ರದೇಶದಲ್ಲಿ ಶಿಕ್ಷಣಕ್ಕೆ ಪೂರಕವಾಗಿ ಕೆಲಸ ನಿರ್ವಹಿಸಬೇಕು. ಇವೆಲ್ಲವುಗಳ ಜೊತೆಗೆ ಶಿಕ್ಷಣದ ಬಗ್ಗೆ ಗ್ರಾಮಪಂಚಾಯತಿ ಸದಸ್ಯರು, ಶಾಲಾ ಶಿಕ್ಷಕರು ಸೇರಿ ಸಮುದಾಯ ಸದಸ್ಯರೊಂದಿಗೆ ಸಮಾಲೋಚಿಸಿ ಶೈಕ್ಷಣಿಕ ಕಾರ್ಯಕ್ರಮಗಳ ಅರಿವನ್ನು ಮೂಡಿಸಬೇಕು. ಗ್ರಾಮೀಣ ಮಟ್ಟದಲ್ಲಿ ತಾವು ಪ್ರತಿನಿಧಿಸುವ ಜಿಲ್ಲಾ, ತಾಲೂಕುವಾರು ಮತ್ತು ಗ್ರಾಮಪಂಚಾಯತಿ ಸದಸ್ಯರುಗಳು ಶಾಲೆಗಳು ಸಮರ್ಪಕವಾಗಿ ಶಿಕ್ಷಣ ಪ್ರಸಾರ ಮಾಡುತ್ತಿರುವ ಬಗ್ಗೆ ಜಾಗೃತಿ ವಹಿಸುವ ಸಲುವಾಗಿ ಕೆಳಗೆ ಸೂಚಿಸಿರುವ ಕಾರ್ಯಗಳನ್ನು ನಿರ್ವಹಿಸಬೇಕಾಗಿದೆ.

    ಎ. ಗ್ರಾಮದಲ್ಲಿ ಪ್ರಾಥಮಿಕ ಶಾಲೆಗಳ ಅವಶ್ಯಕತೆ ಇದ್ದು ಶಾಲೆಯು ಆರಂಭವಾಗದಿದ್ದಲ್ಲಿ ಶಾಲೆಯ ಅಗತ್ಯತೆಯ ಬಗ್ಗೆ ತಾಲೂಕು ಮತ್ತು ಜಿಲ್ಲಾ ಮಟ್ಟದ ಅಧಿಕಾರಗಳ ಗಮನಕ್ಕೆ ತಂದು ಶಾಲೆಯ ಪ್ರಾರಂಭಕ್ಕೆ ಅಗತ್ಯ ಪ್ರಸ್ತಾವನೆಗಳನ್ನು ಸಲ್ಲಿಸಿರುವ ಬಗ್ಗೆ ಖಚಿತಪಡಿಸಿ ಕೊಳ್ಳಬೇಕು.

ಬಿ. ಗ್ರಾಮದಲ್ಲಿರುವ 6 ರಿಂದ 14 ವರ್ಷದ ಮಕ್ಕಳು ಶಾಲೆಗೆ ದಾಖಲಾಗಿರುವ ಮತ್ತು ನಿಯಮಿತವಾಗಿ ಹಾಜರಾಗುವುದನ್ನು ಖಚಿತ ಪಡಿಸಿಕೊಳ್ಳಬೇಕು. ಶಾಲೆ ಬಿಟ್ಟ ಮಕ್ಕಳನ್ನು ಪುನಃ ಸೇರಿಸಲು ಪೋಷಕರನ್ನು ನೇರ ಭೇಟಿ ಮಾಡಿ ಅವರ ಮಕ್ಕಳಿಗೆ ಶಿಕ್ಷಣ ನೀಡುವುದರ ಅಗತ್ಯತೆಯ ಬಗ್ಗೆ ತಿಳಿಹೇಳಿ ನಿಯಮಿತವಾಗಿ ಶಾಲೆಗೆ ಕಳುಹಿಸಲು ಮನ ಒಲಿಸಬೇಕು.

ಸಿ. ಪ್ರತಿ ಗ್ರಾಮದಲ್ಲಿ ಶಾಲೆಗಳು ಕ್ರಮಬದ್ಧವಾಗಿ ನಡೆಯುವಂತೆ ಗ್ರಾಮಪಂಚಾಯತಿ ಸದಸ್ಯರು ಶಾಲೆಗಳಿಗೆ ಭೇಟಿ ಕೊಟ್ಟು ಖಚಿತ ಪಡಿಸಿಕೊಳ್ಳಬೇಕು. ಶಿಕ್ಷಕರು ಕ್ರಮಬದ್ಧವಾಗಿ ಶಾಲೆಗೆ ಹಾಜರಾಗುತ್ತಾರೊ ಇಲ್ಲವೊ ಎಂಬುದರ ಬಗ್ಗೆ ನಿಗಾವಹಿಸಬೇಕು.

ಡಿ. ಶಾಲೆಯಲ್ಲಿ ಕಲಿಯುತ್ತಿರುವ ವಿದ್ಯಾರ್ಥಿಗಳು ನಿಗದಿತವಾಗಿರುವ ಕನಿಷ್ಠ ಕಲಿಕಾ ಸಾಮರ್ಥ್ಯವನ್ನು ಹೊಂದಿರುವ ಬಗ್ಗೆ ಆಗಿಂದಾಗ್ಗೆ ಶಾಲೆಗೆ ಭೇಟಿ ಕೊಟ್ಟು ಮುಖ್ಯ ಗುರುಗಳೊಂದಿಗೆ ಸಮಾಲೋಚಿಸಿ ಖಚಿತಪಡಿಸಿಕೊಳ್ಳಬೇಕು.

ಈ. ಶಾಲೆಯ ಸುತ್ತಮುತ್ತ ಪರಿಸರವನ್ನು ಸ್ವಚ್ಛವಾಗಿಡುವುದು. ಶಾಲೆಗೆ ಅಗತ್ಯವಾದ ವಸ್ತುಗಳನ್ನು ಸ್ಥಳೀಯ ದಾನಿಗಳಿಂದ ಮತ್ತು ಸ್ಥಳೀಯ ಸಂಸ್ಥೆಗಳ ಮುಖಾಂತರ ಸಂಗ್ರಹಿಸಲು ನೆರವು ನೀಡುವುದು. ಗ್ರಾಮೀಣ ಪ್ರದೇಶಗಳಲ್ಲಿ ಶಿಕ್ಷಣ ಸಂಸ್ಥೆಗಳು ಸರಿಯಾಗಿ ನಡೆಸಿಕೊಂಡು ಹೋಗಲು ಮಾರ್ಗದರ್ಶಿ ಹಾಗೂ ಜವಬ್ದಾರಿಗಳನ್ನು ಗ್ರಾಮಪಂಚಾಯತಿಗಳಿಗೆ ವಹಿಸಿ ಕೊಡಲಾಗಿದೆ.[49]

## ಶಿಕ್ಷಣ ಸುಧಾರಣಾ ಕಾರ್ಯಕ್ರಮಗಳು

ಗ್ರಾಮೀಣ ಪ್ರದೇಶಗಳ ಸಾಕ್ಷರತೆಯನ್ನು ಹೆಚ್ಚಿಸುವ ಸಲುವಾಗಿ ಎಲ್ಲಾ ಗ್ರಾಮಗಳಲ್ಲಿ ನಿರಂತರ ಶಿಕ್ಷಣ ಕಾರ್ಯಕ್ರಮದಡಿಯಲ್ಲಿ ಕೆಲವು ಶೈಕ್ಷಣಿಕ ಚಟುವಟಿಕೆಗಳನ್ನು ಕೈಗೊಳ್ಳಲಾಗಿದೆ. ಈ ನಿರಂತರ ಶಿಕ್ಷಣ ಕಾರ್ಯಕ್ರಮಗಳನ್ನು ಅನುಷ್ಠಾನಗೊಳಿಸುವಲ್ಲಿ ಗ್ರಾಮಪಂಚಾಯತಿಗಳ ಪಾತ್ರ ಬಹಳ ಮುಖ್ಯ. ನಿರಂತರ ಶಿಕ್ಷಣ ಕಾರ್ಯಕ್ರಮದ ಉದ್ದೇಶ ಸಾಕ್ಷರತೆ ಹಾಗೂ ಪ್ರಾಥಮಿಕ ಶಿಕ್ಷಣದ ಚೌಕಟ್ಟಿನಿಂದ ಹೊರಗಿರುವ ಎಲ್ಲಾ ವ್ಯಕ್ತಿಗಳಿಗೆ ಅವರ ಅಗತ್ಯಗಳಿಗನುಗುಣವಾಗಿ ಕಲಿಕೆಗೆ ಮುಕ್ತವಾದ ಅವಕಾಶಗಳನ್ನು ಒದಗಿಸಿಕೊಡುವ ವ್ಯಾಪಕ ಶಿಕ್ಷಣ ಕಾರ್ಯಕ್ರಮವಾಗಿದೆ. ಈ ಕಾರ್ಯಕ್ರಮ ಸಾಕ್ಷರತೆ ಆಂದೋಲನಕ್ಕಿಂತ ಭಿನ್ನವಾಗಿರುವುದು. 1500-2000 ಜನ ಜನಸಂಖ್ಯೆಗೆ ಒಂದು ನಿರಂತರ ಶಿಕ್ಷಣ ಕೇಂದ್ರ ಇರಬೇಕು. ಶಿಕ್ಷಣ ಕೇಂದ್ರದ ಪ್ರೇರಕ ಮತ್ತು ಉಪಪ್ರೇರಕರನ್ನು ಗ್ರಾಮ ಪಂಚಾಯತಿಯಲ್ಲಿಯೇ ಆಯ್ಕೆ ಮಾಡಬೇಕು. ಪ್ರತಿ ಗ್ರಾಮಪಂಚಾಯತಿ ಯಲ್ಲಿರುವ ಗ್ರಾಮಶಿಕ್ಷಣ ಸಮಿತಿಯು ನಿರಂತರ ಶಿಕ್ಷಣ ಕೇಂದ್ರದ ನಿರ್ವಹಣೆಯನ್ನು ವಹಿಸಲಾಗಿದೆ.[50] ನಿರಂತರ ಶಿಕ್ಷಣ ಕಾರ್ಯಕ್ರಮದಲ್ಲಿ ಗ್ರಾಮಪಂಚಾಯತಿಯ ಪಾತ್ರ ಪ್ರಮುಖವಾಗಿದೆ. ಪ್ರತಿ ಗ್ರಾಮಪಂಚಾಯತಿಯು ತನ್ನ ವ್ಯಾಪ್ತಿಯಲ್ಲಿ ಈ ಕಾರ್ಯಕ್ರಮವನ್ನು ಅನುಷ್ಠಾನಗೊಳಿಸುವ ತಳಮಟ್ಟದ ಮುಖ್ಯ ಘಟಕವಾಗಿ ಕಾರ್ಯನಿರ್ವಹಿಸುತ್ತದೆ. ರಾಜ್ಯದ ಪ್ರತಿ ಗ್ರಾಮಪಂಚಾಯತಿಯ ನಿರಂತರ ಶಿಕ್ಷಣ ಪ್ರಾರಂಭವಾಗುವ ಪ್ರತಿ ಗ್ರಾಮದಲ್ಲಿ ಗ್ರಾಮೀಣ ಶಿಕ್ಷಣ ಸಮಿತಿಯನ್ನು ರಚಿಸಬೇಕು.

## ಗ್ರಾಮೀಣ ಶಿಕ್ಷಣ ಸಮಿತಿ

ರಾಜ್ಯದ ಪ್ರತಿ ಗ್ರಾಮಪಂಚಾಯತಿಯು ಕಾಯ್ದೆಯ 61ನೇ ಪ್ರಕರಣದ ಅನ್ವಯ ಮೂರು ಸ್ಥಾಯಿ ಸಮಿತಿಗಳನ್ನು ಹೊಂದಿರತಕ್ಕದ್ದು.[51] 1993ರ ಕಾಯ್ದೆಯಲ್ಲಿದ್ದ ಸೌಕರ್ಯ ಸಮಿತಿಯನ್ನು ಈಗ ಗ್ರಾಮೀಣ ಶಿಕ್ಷಣ ಸಮಿತಿಯನ್ನಾಗಿ ಬದಲಾಯಿಸಲಾಗಿದೆ. ಈ ಸಮಿತಿಯು ಶಿಕ್ಷಣ ಸುಧಾರಣೆಯ ಕಾರ್ಯಗಳನ್ನು ನಿರ್ವಹಿಸತಕ್ಕದ್ದು. ಹಾಗೆಯೇ ಆರೋಗ್ಯ ಮತ್ತು ಲೋಕೋಪಯೋಗಿ ಕಾರ್ಯಗಳನ್ನು ಮಾಡತಕ್ಕದ್ದು. ಸಮಿತಿಗಳ ಅಧಿಕಾರ ಗ್ರಾಮ ಪಂಚಾಯತಿಗಳು ವಹಿಸಿರುವ ಕಾರ್ಯಗಳಿಗೆ ಮಾತ್ರ ಸೀಮಿತವಾಗಿರುತ್ತದೆ. ಸಮಿತಿಗಳಲ್ಲಿ ತೆಗೆದುಕೊಂಡ ನಿರ್ಣಯಗಳನ್ನು ಪಂಚಾಯತಿ ಸಭೆಗಳಲ್ಲಿ ಮಂಡಿಸಿ ಅನುಮೋದನೆಯನ್ನು ಪಡೆಯತಕ್ಕದ್ದು. ಈ ಸಮಿತಿಯು ಅಧ್ಯಕ್ಷ ಮತ್ತು ಉಪಾಧ್ಯಕ್ಷರನ್ನೊಳಗೊಂಡಂತೆ ಒಟ್ಟು 5ಕ್ಕಿಂತ ಕಡಿಮೆ ಸದಸ್ಯರನ್ನು ಹೊಂದಿರುತ್ತದೆ. ಗ್ರಾಮಪಂಚಾಯತಿ ಸದಸ್ಯರಲ್ಲಿ ಯಾರಾದರೂ ಈ ಸಮಿತಿಯ ಅಧ್ಯಕ್ಷರಾಗಬಹುದು. ಆಯಾ ಪ್ರದೇಶದ ಪ್ರಾಥಮಿಕ ಶಾಲೆಯ ಮುಖ್ಯಗುರುಗಳು ಕಾರ್ಯದರ್ಶಿಯಾಗಿರುತ್ತಾರೆ. ಸಮಿತಿಯ ಸದಸ್ಯರನ್ನು ಪಂಚಾಯತಿ ಸದಸ್ಯರಿಂದ ಚುನಾಯಿಸತಕ್ಕದ್ದು. ಗ್ರಾಮದಲ್ಲಿ ಶಿಕ್ಷಣ ಆಸಕ್ತರು ಮಹಿಳೆಯರು ಅಂಗನವಾಡಿ ಕಾರ್ಯಕರ್ತೆಯರು ಈ ಸಮಿತಿಯ ಸದಸ್ಯರಾಗಬಹುದು.[52] ಹೀಗೆ ಸಮಿತಿಯು ಪ್ರತಿ ಗ್ರಾಮಮಟ್ಟದಲ್ಲಿ ರಚನೆಗೊಳ್ಳಬೇಕು.

## ಗ್ರಾಮೀಣ ಶಿಕ್ಷಣ ಸಮಿತಿಯ ಕಾರ್ಯಗಳು

ಗ್ರಾಮೀಣ ಶಿಕ್ಷಣ ಸಮಿತಿಯು ತನ್ನದೇ ಆದ ಮುಖ್ಯ ಪ್ರಕಾರ್ಯಗಳನ್ನು ಹೊಂದಿದೆ.

1. ಆಯಾ ಗ್ರಾಮದ ಶಿಕ್ಷಣ ಕೇಂದ್ರಗಳ ನಿರ್ವಹಣೆಯ ಜವಾಬ್ದಾರಿಯಿರುವ ಸಂಘ ಸಂಸ್ಥೆಗಳನ್ನು ಗುರುತಿಸುವುದು.
2. ನಿರಂತರ ಶಿಕ್ಷಣ ಕೇಂದ್ರಗಳನ್ನು ಕಾಲಕಾಲಕ್ಕೆ ಪರಿಶೀಲಿಸುವುದು.
3. ನಿರಂತರ ಶಿಕ್ಷಣ ಕೇಂದ್ರಗಳ ಪ್ರೇರಕ ಮತ್ತು ಉಪಪ್ರೇರಕಗಳನ್ನು ನೇಮಿಸುವುದು.
4. ತರಬೇತಿ ಕಾರ್ಯಕ್ರಮ, ಗ್ರಾಮೀಣಾಭಿವೃದ್ಧಿ ಸಮಿತಿಗಳ ರಚನೆ ಕಾರ್ಯಗಳನ್ನು ನಿರ್ವಹಿಸುವುದು.
5. ಗ್ರಾಮೀಣ ಶಿಕ್ಷಣ ಸಮಿತಿಯು ದಾಖಲಾತಿ ಹೆಚ್ಚಳ ಮತ್ತು ಶಾಲೆ ಬಿಟ್ಟವರ ಸಂಖ್ಯೆಯನ್ನು ಕಡಿಮೆ ಮಾಡುವಲ್ಲಿ ನೆರವಾಗಬೇಕು. ಪಾಲಕರ ಸಭೆಯನ್ನು ಕರೆದು ಶಿಕ್ಷಣ ಸುಧಾರಣೆಗಳನ್ನು ತೆಗೆದುಕೊಳ್ಳತಕ್ಕದ್ದು. ಹೀಗೆ ಗ್ರಾಮೀಣ ಶಿಕ್ಷಣ ಸಮಿತಿಗೆ ಕೆಲವು ಜವಾಬ್ದಾರಿಗಳನ್ನು ಕೊಡಲಾಗಿದೆ.[53]

ಒಟ್ಟಾರೆ ಶಿಕ್ಷಣದ ಮತ್ತು ಸಾಕ್ಷರತೆಯ ಸುಧಾರಣೆಯನ್ನು ಕೈಗೊಳ್ಳುವ ಸಮಿತಿಯಾಗಿದ್ದು ಮತ್ತು ಅನುಷ್ಠಾನದ ಕೆಳಸ್ತರದ ಪ್ರಮುಖ ಘಟಕವಾಗಿದೆ. ಹೀಗೆ ಗ್ರಾಮಪಂಚಾಯತಿ ಮತ್ತು ಗ್ರಾಮೀಣ ಶಿಕ್ಷಣ

ಸಮಿತಿಯು ಗ್ರಾಮೀಣ ಪ್ರದೇಶದ ಶಿಕ್ಷಣ ಮತ್ತು ಸಾಕ್ಷರತೆಯನ್ನು ಹೆಚ್ಚಿಸುವ ಹಲವಾರು ಜವಾಬ್ದಾರಿಗಳನ್ನು ಮತ್ತು ನಿರ್ವಹಣೆಗಳನ್ನು ವಹಿಸಲಾಗಿದೆ. ಈ ಎಲ್ಲಾ ಶಿಕ್ಷಣದ ಜವಾಬ್ದಾರಿ ಮತ್ತು ನಿರ್ವಹಣೆಗಳನ್ನು ಅಧ್ಯಯನದ ಗ್ರಾಮಪಂಚಾಯತಿಗಳು ಹೇಗೆ ಕೈಗೊಂಡಿವೆ ಎಂಬುದನ್ನು ಮುಂದೆ ಚರ್ಚಿಸಲಾಗಿದೆ.

## 4.10 ಗ್ರಾಮಪಂಚಾಯತಿಗಳು ಮತ್ತು ಶಿಕ್ಷಣದ ನಿರ್ವಹಣೆ

ಅಧ್ಯಯನದ ನಾಲ್ಕು ಗ್ರಾಮಪಂಚಾಯತಿಗಳ ವ್ಯಾಪ್ತಿಯಲ್ಲಿ ಬರುವ ಗ್ರಾಮಗಳಲ್ಲಿ ಶೈಕ್ಷಣಿಕ ಸೌಲಭ್ಯಗಳು, ಕಳೆದ ಐದು ವರ್ಷಗಳಲ್ಲಿ ವಿದ್ಯಾರ್ಥಿಗಳ ದಾಖಲಾತಿ, ಶಾಲೆ ಬಿಟ್ಟವರ ಸಂಖ್ಯೆ, ಶಿಕ್ಷಕರ ಮತ್ತು ವಿದ್ಯಾರ್ಥಿಗಳ ಅನುಪಾತ, ಸಾಕ್ಷರತೆ ಕುರಿತ ಕಾರ್ಯಕ್ರಮಗಳು, ಗ್ರಾಮೀಣ ಶಿಕ್ಷಣ ಸಮಿತಿಯ ಕಾರ್ಯಕ್ಷಮತೆ, ಗ್ರಾಮಪಂಚಾಯತಿಯು ನಿರ್ವಹಿಸಬೇಕಾದ ಕೆಲಸಗಳನ್ನು ಎಷ್ಟರ ಮಟ್ಟಿಗೆ ನಿರ್ವಹಿಸಿದೆ. ಗ್ರಾಮೀಣ ಶಿಕ್ಷಣದ, ಬಗ್ಗೆ ಜನತೆಯ ಅಭಿಪ್ರಾಯ ಮತ್ತು ನೀರಾವರಿ ಪ್ರದೇಶ ಮತ್ತು ಒಣಭೂಮಿ ಪ್ರದೇಶಗಳಲ್ಲಿ ಶಿಕ್ಷಣ ಕುರಿತು ತೌಲನಿಕವಾಗಿ ಅಧ್ಯಯನ ಮಾಡಲಾಗಿದೆ.

### ನಾಗೇನಹಳ್ಳಿ ಗ್ರಾಮಪಂಚಾಯತಿ

ನಾಗೇನಹಳ್ಳಿ ಗ್ರಾಮಪಂಚಾಯತಿ ವ್ಯಾಪ್ತಿಯ ಗ್ರಾಮಗಳಲ್ಲಿ ಶಿಕ್ಷಣ ಸೌಲಭ್ಯಗಳ ವಿವರಗಳನ್ನು ನೋಡಿದಾಗ, ಪಂಚಾಯತಿಯ ಗ್ರಾಮಗಳಾದ ನಾಗೇನಹಳ್ಳಿ, ಬಸವನದುರ್ಗದಲ್ಲಿ ಏಳನೇ ತರಗತಿ ಯವರೆಗೆ, ಬೆನಕಾಪುರ ಮತ್ತು ಕಾಲಘಟ್ಟಗಳಲ್ಲಿ ಐದನೇ ತರಗತಿಯವರೆಗೆ ಶಿಕ್ಷಣ ಸೌಲಭ್ಯವಿದೆ. ಬೆಳಗೋಡು ಮತ್ತು ಕಳ್ಳಿರಾಂಪುರಗಳು ಬಹಳ ಚಿಕ್ಕ ಕಂದಾಯ ಗ್ರಾಮಗಳಾಗಿವೆ. ಬೆಳಗೋಡು 92, ಕಳ್ಳಿರಾಂಪುರ 177 ಜನಸಂಖ್ಯೆಯನ್ನು ಹೊಂದಿದೆ. ಆದರೆ ಈ ಎರಡು ಗ್ರಾಮಗಳಲ್ಲಿ ಶಾಲೆಯಾಗಲೀ, ಅಂಗನವಾಡಿಯಾಗಲಿ ಇಲ್ಲ. ಇಲ್ಲಿರುವ ಮಕ್ಕಳನ್ನು ಹೊಸಪೇಟೆ ಮತ್ತು ಬಸವನದುರ್ಗ ಗ್ರಾಮಕ್ಕೆ ಕಳುಹಿಸುತ್ತಾರೆ. ವಿದ್ಯಾರ್ಥಿಗಳ ದಾಖಲಾತಿಯನ್ನು ಕಳೆದ ಐದು ವರ್ಷಗಳಲ್ಲಿ ನೋಡಿದಾಗ ದಾಖಲಾತಿಯಲ್ಲಿ ಪ್ರತಿವರ್ಷ ಏರಿಕೆಯಾಗಿದೆ. ಈ ಪ್ರದೇಶದಲ್ಲಿ ಪ್ರತಿವರ್ಷ ಮಕ್ಕಳ ದಾಖಲಾತಿ ಹೆಚ್ಚಾಗಿದೆ. ಹಾಗೆಯೇ ಶಾಲೆ ಬಿಟ್ಟವರ ಸಂಖ್ಯೆ (Drop-out)ಸಹ ಕಡಿಮೆಯಾಗಿದೆ. 1997ರಲ್ಲಿ ಶೇ 12ರಷ್ಟು ಇದ್ದು ಡ್ರಾಪ್ ಔಟ್ 2000-01ರ ವೇಳೆಗೆ ಅದು ಶೇ.8ಕ್ಕೆ ಇಳಿದಿದೆ. ಅಂದರೆ ಶೇ 4ರಷ್ಟು ಶಾಲೆ ಬಿಟ್ಟವರ ಪ್ರಮಾಣ ಕಡಿಮೆಯಾಗಿದೆ. ಈ ಪ್ರದೇಶ ನೀರಾವರಿಯಾಗಿರುವುದರಿಂದ ಆರ್ಥಿಕವಾಗಿ ಉತ್ತಮವಾಗಿದ್ದಾರೆ(ಕೋಷ್ಟಕ-26). ಈ ಅಂಶ ಶಾಲೆ ಬಿಟ್ಟವರ ಪ್ರಮಾಣ ಕಡಿಮೆ ಮಾಡುವುದರಲ್ಲಿ ಪಾತ್ರವಹಿಸಿರಬಹುದು.

ಒಟ್ಟು ಪಂಚಾಯತಿ ಪ್ರದೇಶದ ಶಿಕ್ಷಕರ ವಿದ್ಯಾರ್ಥಿಗಳ ಅನುಪಾತವನ್ನು ನೋಡಿದಾಗ 50 ವಿದ್ಯಾರ್ಥಿಗಳಿಗೆ ಒಬ್ಬ ಶಿಕ್ಷಕರಿದ್ದಾರೆ. ತಾಲೂಕಿನ ಸರಾಸರಿ 40 ವಿದ್ಯಾರ್ಥಿಗಳಿಗೆ ಒಬ್ಬ ಶಿಕ್ಷಕನಿದ್ದಾನೆ. ಹಾಗಾಗಿ ಈ ಅನುಪಾತವನ್ನು ತಾಲೂಕಿಗೆ ಹೋಲಿಸಿದರೆ ಇಲ್ಲಿ ಹೆಚ್ಚು ವಿದ್ಯಾರ್ಥಿಗಳಿಗೆ ಒಬ್ಬ ಶಿಕ್ಷಕನಿದ್ದಾನೆ. ಪಟ್ಟಣ ಪ್ರದೇಶಕ್ಕೆ ಹತ್ತಿರವಿದ್ದರು ಈ ಪ್ರದೇಶದಲ್ಲಿ ಶಿಕ್ಷಕರ ಕೊರತೆ ಇದೆ. ಗ್ರಾಮವಾರು ನೋಡಿದಾಗ ಕಾಳಘಟ್ಟ ಸಣ್ಣ

ಗ್ರಾಮವಾದರೂ 27 ವಿದ್ಯಾರ್ಥಿಗಳಿಗೆ ಒಬ್ಬ ಶಿಕ್ಷಕನಿದ್ದಾನೆ. ಸರ್ಕಾರದ ನಿಯಮದ ಪ್ರಕಾರ 40 ವಿದ್ಯಾರ್ಥಿಗಳಿಗೆ ಒಬ್ಬ ಶಿಕ್ಷಕನಿರಬೇಕು. ಆದರೆ ಇಲ್ಲಿ ಕಾಳಘಟ್ಟ ಗ್ರಾಮ ಒಂದರಲ್ಲಿ ಸರಿಯಾಗಿದೆ. ಉಳಿದ ಗ್ರಾಮಗಳಲ್ಲಿ ಹೆಚ್ಚು ಅಂದರೆ 45ಕ್ಕೆ ಒಬ್ಬ ಶಿಕ್ಷಕನಿದ್ದಾನೆ. ಒಟ್ಟಾರೆ ಪಂಚಾಯತಿ ಗ್ರಾಮಗಳಲ್ಲಿ ಕಾಳಘಟ್ಟದಲ್ಲಿ ಮಾತ್ರ ಶಿಕ್ಷಕರ ಸೌಲಭ್ಯ ಚೆನ್ನಾಗಿದ್ದು, ಉಳಿದ ಎಲ್ಲಾ ಗ್ರಾಮಗಳಲ್ಲಿ ಶಿಕ್ಷಕರ ಕೊರತೆ ಇದೆ ಎಂದು ಹೇಳಬಹುದು(ಕೋಷ್ಠಕ-25).

ನಿರಂತರ ಶಿಕ್ಷಣ ಕೇಂದ್ರ ಪಂಚಾಯತಿ ಕೇಂದ್ರ ಸ್ಥಳವಾದ ನಾಗೇನಹಳ್ಳಿಯಲ್ಲಿ ಮಾತ್ರ ಇದೆ. ಅಂಗನವಾಡಿಗಳ ಸಂಖ್ಯೆಯನ್ನು ನೋಡಿದಾಗ ಒಟ್ಟು ಐದು ಅಂಗನವಾಡಿಗಳಿವೆ. ಬೆಳಗೋಡು ಮತ್ತು ಕಳ್ಳಿರಾಂಪುರದಲ್ಲಿ ಯಾವುದೇ ಅಂಗನವಾಡಿಗಳಿಲ್ಲ. ಪಂಚಾಯತಿ ವ್ಯಾಪ್ತಿಯ ಶಿಕ್ಷಕರ ಅಭಿಪ್ರಾಯದ ಪ್ರಕಾರ ಪಂಚಾಯತಿ ಸದಸ್ಯರು ಸಹಕರಿಸುತ್ತಾರೆ ಎಂದು ಉತ್ತರಿಸಿದ್ದಾರೆ. ಪಂಚಾಯತಿ ಸದಸ್ಯರಲ್ಲಿ ಮತ್ತು ಊರವರ ಪ್ರಕಾರ ಶಿಕ್ಷಣದ ಬಗ್ಗೆ ಶೇ 90ರಷ್ಟು ಉತ್ತಮ ಅಭಿಪ್ರಾಯವನ್ನು ವ್ಯಕ್ತಪಡಿಸಿದ್ದಾರೆ (ಕೋಷ್ಠಕ-27). ಗ್ರಾಮೀಣ ಶಿಕ್ಷಣ ಸಮಿತಿಯು ಕೇವಲ ದಾಖಲೆಯಲ್ಲಿ ಮಾತ್ರ ಇದ್ದು ಯಾವುದೇ ಶಿಕ್ಷಣ ಸುಧಾರಣೆಯ ಕಾರ್ಯದಲ್ಲಿ ತೊಡಗಿಲ್ಲ. ಈ ಪ್ರದೇಶ ಹೊಸಪೇಟೆಗೆ ಹತ್ತಿರವಿರುವುದರಿಂದ ಇಬ್ಬರು ಶಿಕ್ಷರು ಮಾತ್ರ ಇಲ್ಲಿ ವಾಸವಾಗಿದ್ದಾರೆ. ಹೀಗೆ ನಾಗೇನಹಳ್ಳಿ ಪಂಚಾಯತಿ ಶಿಕ್ಷಣದಲ್ಲಿ ಭಾಗಿಯಾಗಿದೆ ಎಂದು ಹೇಳಬಹುದು.

**ಬೈಲುವದ್ದಿಗೆರೆ ಗ್ರಾಮಪಂಚಾಯತಿ**

ಪಂಚಾಯತಿ ವ್ಯಾಪ್ತಿಯ ಗ್ರಾಮಗಳಲ್ಲಿ ಶಿಕ್ಷಣ ಸೌಲಭ್ಯವನ್ನು ನೋಡಿದಾಗ, ಬೈಲುವದ್ದಿಗೆರೆ, ಕಾಕಬಾಳು, ಗುಂಡ್ಲವದ್ದಿಗೆರೆಯಲ್ಲಿ ಒಂದರಿಂದ ಏಳನೇ ತರಗತಿವರೆಗೆ ಮತ್ತು ಧರ್ಮಸಾಗರದಲ್ಲಿ ಒಂದರಿಂದ ಆರನೇ ತರಗತಿವರೆಗೆ ಶಾಲೆಗಳಿವೆ. ಒಟ್ಟು ಪಂಚಾಯತಿ ಪ್ರದೇಶದ ವಿದ್ಯಾರ್ಥಿಗಳ ದಾಖಲಾತಿ ಯಲ್ಲಿ ಪ್ರತಿ ವರ್ಷ ಮಕ್ಕಳ ಸಂಖ್ಯೆ ಏರಿಕೆಯಾಗಿಲ್ಲ. 1997 ರಿಂದ 1999 ರಲ್ಲಿ 69 ವಿದ್ಯಾರ್ಥಿಗಳ ದಾಖಲಾತಿಯಲ್ಲಿ ಏರಿದೆ. ನಂತರದ ವರ್ಷಗಳಲ್ಲಿ 20 ಕ್ಕಿಂತ ಕಡಿಮೆ ಮಕ್ಕಳು ದಾಖಲಾತಿ ಹೊಂದಿದ್ದಾರೆ. ಅಂದರೆ ವಿದ್ಯಾರ್ಥಿಗಳ ದಾಖಲಾತಿಯಲ್ಲಿ ಹೆಚ್ಚು ಕಡಿಮೆ ಆಗಿದೆ. ಈ ಪಂಚಾಯತಿಯು ದೊಡ್ಡ ಪ್ರದೇಶವಾದರೂ ಮಕ್ಕಳ ದಾಖಲಾತಿಯಲ್ಲಿ ಗಣನೀಯವಾಗಿ ಹೆಚ್ಚಾಗಿಲ್ಲ.

1997ರಲ್ಲಿ ಶಾಲೆ ಬಿಟ್ಟವರ ಪ್ರಮಾಣ ಶೇ 15, ಇದ್ದು 2000-01ರಲ್ಲಿ ಸಹ ಶಾಲೆ ಬಿಟ್ಟವರ ಪ್ರಮಾಣ ಅಷ್ಟೆ ಇದೆ. ಶಾಲೆ ಬಿಟ್ಟವರ ಪ್ರಮಾಣ ಕಳೆದ 5 ವರ್ಷದಿಂದ ಈ ಪ್ರಮಾಣ ಹಾಗೇ ಉಳಿದಿದೆ(ಕೋಷ್ಠಕ-26). ಈ ಪ್ರದೇಶ ಒಣಭೂಮಿ ಆಗಿರುವುದರಿಂದ ಉದ್ಯೋಗದ ಸಮಸ್ಯೆಯಾದಾಗ ವಲಸೆ ಹೋಗುತ್ತಾರೆ. ಆದ್ದರಿಂದ ಡ್ರಾಪ್-ಔಟ್ ಪ್ರಮಾಣ ಹೆಚ್ಚಿಗೆ ಇದೆ. ಗ್ರಾಮಪಂಚಾಯತಿಯಾಗಲಿ ಮತ್ತು ಗ್ರಾಮೀಣ ಶಿಕ್ಷಣ ಸಮಿತಿಯಾಗಲಿ ಇದರ ಬಗ್ಗೆ ಯಾವುದೇ ಕಾರ್ಯಕ್ರಮವನ್ನು ರೂಪಿಸಿಲ್ಲ.

ಪಂಚಾಯತಿ ವ್ಯಾಪ್ತಿಯ ಗ್ರಾಮಗಳಲ್ಲಿ ಶಿಕ್ಷಕರ ವಿದ್ಯಾರ್ಥಿಗಳ ಅನುಪಾತವನ್ನು ನೋಡಿದಾಗ, 51 ವಿದ್ಯಾರ್ಥಿಗಳಿಗೆ ಒಬ್ಬ ಶಿಕ್ಷಕರಿದ್ದಾರೆ. ತಾಲೂಕಿನ ಸರಾಸರಿ 40 ವಿದ್ಯಾರ್ಥಿಗಳಿಗೆ ಒಬ್ಬ ಶಿಕ್ಷಕನಿದ್ದಾನೆ.

ಹಾಗಾಗಿ ಈ ಅನುಪಾತವನ್ನು ತಾಲೂಕಿಗೆ ಹೋಲಿಸಿದರೆ ಇಲ್ಲಿ ಹೆಚ್ಚು ವಿದ್ಯಾರ್ಥಿಗಳಿಗೆ ಒಬ್ಬ ಶಿಕ್ಷಕನಿದ್ದಾನೆ. ಹಾಗಾಗಿ ಶಿಕ್ಷಕರ ಕೊರತೆ ಪಂಚಾಯತಿ ಪ್ರದೇಶದಲ್ಲಿದೆ ಎಂದು ಹೇಳಬಹುದು. ವಿದ್ಯಾರ್ಥಿಗಳ ಮತ್ತು ಶಿಕ್ಷಕರ ಅನುಪಾತವನ್ನು ನೋಡಿದಾಗ ಪಂಚಾಯತಿ ವ್ಯಾಪ್ತಿಯ ಗುಂಡ್ಲವದ್ದಿಗೆರೆ ಬಿಟ್ಟು ಉಳಿದ ಗ್ರಾಮಗಳಲ್ಲಿ ಸರ್ಕಾರದ ನಿಯಮಾವಳಿ ಅನ್ವಯ ಶಿಕ್ಷಕರಿದ್ದಾರೆ. ಇದು ಒಣಭೂಮಿ ಪ್ರದೇಶವಾಗಿರುವುದರಿಂದ ಶಿಕ್ಷಕರು ಹೆಚ್ಚು ಇದ್ದರೂ ದಾಖಲಾತಿಯಲ್ಲಿ ಏರಿಕೆಯಾಗಿಲ್ಲ ಮತ್ತು ಡ್ರಾಪ್ ಔಟ್‌ನಲ್ಲಿ ಕಡಿಮೆಯಾಗಿಲ್ಲ. ಒಂದು ಪ್ರದೇಶದ ಜೀವನಮಟ್ಟ, ಶಿಕ್ಷಣವು ಆ ಪ್ರದೇಶದ ಸಾಮಾಜಿಕ ಮತ್ತು ಆರ್ಥಿಕ ಮಟ್ಟದಿಂದ ನಿರ್ಧರಿಸಲ್ಪಡುತ್ತದೆ ಎನ್ನಬಹುದು(ಕೋಷ್ಠಕ-25). ಇಲ್ಲಿ ಹೆಚ್ಚು ಶಿಕ್ಷಕರಿದ್ದರೂ, ಶಿಕ್ಷಣ ಸೌಲಭ್ಯವಿದ್ದರೂ, ಸಹ ಡ್ರಾಪ್-ಔಟ್ ಕಡಿಮೆಯಾಗಿಲ್ಲ ದಾಖಲಾತಿ ಹೆಚ್ಚಾಗಿಲ್ಲ.

ನಿರಂತರ ಶಿಕ್ಷಣ ಕೇಂದ್ರಗಳು ಪಂಚಾಯತಿ ವ್ಯಾಪ್ತಿಯ ಮೂರು ಗ್ರಾಮಗಳಲ್ಲಿವೆ. ಗುಂಡ್ಲವದ್ದಿಗೆರೆಯಲ್ಲಿ ನಿರಂತರ ಶಿಕ್ಷಣ ಕೇಂದ್ರ ಇಲ್ಲ. ಗ್ರಂಥಾಲಯ ಪಂಚಾಯತಿ ಕೇಂದ್ರ ಸ್ಥಳವಾದ ಬೈಲುವದ್ದಗೆರೆಯಲ್ಲಿ ಮಾತ್ರ ಇದೆ. ಅಂಗನವಾಡಿಗಳ ಸಂಖ್ಯೆಯನ್ನು ನೋಡಿದಾಗ ಒಟ್ಟು 6 ಅಂಗನವಾಡಿಗಳಿವೆ. ಒಟ್ಟು 9 ಶಿಕ್ಷಕರು ಗ್ರಾಮದಲ್ಲಿ ವಾಸವಾಗಿದ್ದಾರೆ. ಶಿಕ್ಷಕರ ಅಭಿಪ್ರಾಯದಲ್ಲಿ ಗ್ರಾಮಪಂಚಾಯತಿ ಸದಸ್ಯರು ಸಹಕರಿಸುತ್ತಾರೆ ಎಂದು ಹೇಳಿದ್ದಾರೆ. ಗ್ರಾಮೀಣ ಶಿಕ್ಷಣ ಸಮಿತಿಯು ಬೈಲುವದ್ದಿಗೆರೆಯಲ್ಲಿ ಮಾತ್ರ ಇದೆ. ನಿರಂತರ ಶಿಕ್ಷಣ ಕೇಂದ್ರ, ಕಾಕುಬಾಳು ಮತ್ತು ಧರ್ಮಸಾಗರದಲ್ಲಿ ನಿರಂತರ ಕೇಂದ್ರ ಇದ್ದರೂ ಗ್ರಾಮೀಣ ಶಿಕ್ಷಣ ಸಮಿತಿಗಳು ನಿರಂತರ ಶಿಕ್ಷಣ ಕೇಂದ್ರಗಳ ಪ್ರೇರಕ ಮತ್ತು ಉಪಪ್ರೇರಕರನ್ನು ಗುರುತಿಸುವ ಕೆಲಸ ಮಾತ್ರ ಮಾಡಿದೆ. ಉಳಿದಂತೆ ದಾಖಲಾತಿ ಹೆಚ್ಚಳದಲ್ಲಿ ಶಾಲೆ ಬಿಟ್ಟವರ ಪ್ರಮಾಣವನ್ನು ಕಡಿಮೆ ಮಾಡುವಲ್ಲಿ ಈ ಸಮಿತಿಯು ಯಾವುದೇ ಕಾರ್ಯದಲ್ಲಿ ತೊಡಗಿಸಿಕೊಂಡಿಲ್ಲ. ಕೇವಲ ದಾಖಲೆಯಲ್ಲಿ ಮಾತ್ರ ಈ ಸಮಿತಿ ಇದೆ ಎಂದು ಹೇಳಬಹುದು.

ಗ್ರಾಮೀಣ ಜನರ ಅಭಿಪ್ರಾಯದಲ್ಲಿ ಶಿಕ್ಷಣದ ಸೌಲಭ್ಯದ ಬಗ್ಗೆ ಶೇ 90 ರಷ್ಟು ತೃಪ್ತಿದಾಯಕವೆಂದು ರೂಪಿಸಿದ್ದಾರೆ(ಕೋಷ್ಠಕ-27). ಒಣಭೂಮಿ ಪ್ರದೇಶವಾಗಿದ್ದರಿಂದ ಹೆಚ್ಚು ಶೈಕ್ಷಣಿಕ ಸೌಕರ್ಯಗಳನ್ನು ಕಲ್ಪಿಸಿದ್ದರೂ ಸಹ ದಾಖಲಾತಿ ಪ್ರಮಾಣದಲ್ಲಿ ಹೆಚ್ಚಾಗಿಲ್ಲ. ಶಾಲೆ ಬಿಟ್ಟವರ ಪ್ರಮಾಣ ಸಹ ಕಡಿಮೆಯಾಗಿಲ್ಲ. ಬೈಲುವದ್ದಿಗೆರೆ ಪಂಚಾಯತಿಯ ಎಲ್ಲಾ ಪ್ರದೇಶಗಳು ಒಣಭೂಮಿ ಪ್ರದೇಶವಾಗಿರುವುದರಿಂದ ಇಲ್ಲಿ ಕೃಷಿ ಕಾರ್ಮಿಕರೆ ಹೆಚ್ಚಾಗಿದ್ದಾರೆ. ಆರ್ಥಿಕವಾಗಿ ದುರ್ಬಲರಾಗಿದ್ದಾರೆ. ಆದಕಾರಣ ಇಲ್ಲಿ ಡ್ರಾಪ್-ಔಟ್ ಹೆಚ್ಚಿದೆ ಎಂದು ಗುರುತಿಸಬಹುದು. ಒಟ್ಟಾರೆ ಪಂಚಾಯತಿ ವ್ಯಾಪ್ತಿಯಲ್ಲಿ ಶೈಕ್ಷಣಿಕ ಸೌಲಭ್ಯಗಳು ತೃಪ್ತಿದಾಯಕ ವಾಗಿದ್ದರೂ ಡ್ರಾಪ್-ಔಟ್ ಕಡಿಮೆಯಾಗಿಲ್ಲ ಎಂದು ಹೇಳಬಹುದು. ಹೀಗೆ ಪಂಚಾಯತಿ ವ್ಯಾಪ್ತಿಯ ಗ್ರಾಮಗಳಲ್ಲಿ ಶಿಕ್ಷಣ ಕಾರ್ಯಕ್ರಮಗಳು ರೂಪಗೊಂಡಿವೆ.

### ಹಿರೇಹೆಗ್ಡಾಳ್ ಗ್ರಾಮಪಂಚಾಯತಿ

ಗ್ರಾಮಪಂಚಾಯತಿಯಲ್ಲಿ ಬರುವ ಗ್ರಾಮಗಳಲ್ಲಿ ಶಿಕ್ಷಣ ಸೌಲಭ್ಯಗಳನ್ನು ನೋಡಿದಾಗ, ಹಿರೇಹೆಗ್ಡಾಳ್ ಸಣ್ಣ ಗ್ರಾಮವಾದರೂ 10 ನೇ ತರಗತಿಯವರೆಗೆ ಶಿಕ್ಷಣ ಸೌಲಭ್ಯವಿದೆ. ಬೊಪ್ಪಲಪುರ ಮತ್ತು ಸಾಸಲವಾಡದಲ್ಲಿ

7ನೇ ತರಗತಿಯವರೆಗೆ ಮತ್ತು ಸಾಣೇಹಳ್ಳಿಯಲ್ಲಿ 5ನೇ ತರಗತಿಯವರೆಗೆ ಶಿಕ್ಷಣ ಸೌಲಭ್ಯವಿದೆ. ಪಂಚಾಯತಿ ವ್ಯಾಪ್ತಿಯ ಗ್ರಾಮಗಳಿಗೆ ಸರಿಯಾಗಿ ಶಿಕ್ಷಣ ಸೌಲಭ್ಯವನ್ನು ಕಲ್ಪಿಸಲಾಗಿದೆ. ಒಟ್ಟು 921 ವಿದ್ಯಾರ್ಥಿಗಳು ದಾಖಲಾತಿಯನ್ನು ಹೊಂದಿದ್ದಾರೆ. ಕಳೆದ 5 ವರ್ಷಗಳಿಂದ ಹಿರೇಹೆಗ್ಡಾಳ್ ಪಂಚಾಯತ್ ವ್ಯಾಪ್ತಿಯಲ್ಲಿ ದಾಖಲಾತಿ ಪ್ರಮಾಣ ಪ್ರತಿ ವರ್ಷ ಹೆಚ್ಚಾಗಿದೆ. ಶಾಲೆಯಲ್ಲಿ ಬಿಟ್ಟ ವಿದ್ಯಾರ್ಥಿಗಳ ಸಂಖ್ಯೆ ಸಹ ಕಳೆದ 5 ವರ್ಷದಿಂದ ಕಡಿಮೆಯಾಗುತ್ತಾ ಬಂದಿದೆ. 1997-98 ರಲ್ಲಿ ಶೇ 8.5ರಷ್ಟು ಇದ್ದು, 2000-01ರ ಹೊತ್ತಿಗೆ ಶೇ.6.82 ಡ್ರಾಪ್ ಔಟ್ ಕಡಿಮೆಯಾಗಿದೆ (ಕೋಷ್ಟಕ-26). ಈ ಪ್ರದೇಶ ನೀರಾವರಿಯಾಗಿದ್ದು ಇಲ್ಲಿ ಲಿಂಗಾಯಿತರೇ ಹೆಚ್ಚಾಗಿದ್ದು ಆರ್ಥಿಕವಾಗಿ ಉತ್ತಮ ವಾಗಿದ್ದಾರೆ. ಇಲ್ಲಿ ಕೆಳವರ್ಗಗಳು ಆರ್ಥಿಕವಾಗಿ ದುರ್ಬಲರಾಗಿದ್ದರೂ ಸಹ ಶಿಕ್ಷಣ ಪಡೆಯುವಲ್ಲಿ ಮುಂದಾಗಿದ್ದಾರೆ.

ಒಟ್ಟು ಗ್ರಾಮಪಂಚಾಯತಿಯ ಶಿಕ್ಷಕರ ಮತ್ತು ವಿದ್ಯಾರ್ಥಿಗಳ ಅನುಪಾತವನ್ನು ನೋಡಿದಾಗ 46 ವಿದ್ಯಾರ್ಥಿಗಳಿಗೆ ಒಬ್ಬ ಶಿಕ್ಷಕನಿದ್ದಾನೆ. ಗ್ರಾಮವಾರು ನೋಡಿದಾಗ ಹಿರೇಹೆಗ್ಡಾಳ್ 54 ವಿದ್ಯಾರ್ಥಿಗಳಿಗೆ ಸಾಸಲವಾಡದಲ್ಲಿ 27 ವಿದ್ಯಾರ್ಥಿಗಳಿಗೆ, ಬೊಪ್ಪಲಾಪುರದಲ್ಲಿ 51 ವಿದ್ಯಾರ್ಥಿಗಳಿಗೆ ಮತ್ತು ಸಾಣೇಹಳ್ಳಿಯಲ್ಲಿ 23 ವಿದ್ಯಾರ್ಥಿಗಳಿಗೆ ಒಬ್ಬ ಶಿಕ್ಷಕನಿದ್ದಾನೆ. ಈ ಪಂಚಾಯತಿ ವ್ಯಾಪ್ತಿಯ ಸಾಣೇಹಳ್ಳಿ ಮತ್ತು ಸಾಸಲವಾಡದಲ್ಲಿ 40 ವಿದ್ಯಾರ್ಥಿಗಳಿಗಿಂತ ಕಡಿಮೆ ವಿದ್ಯಾರ್ಥಿಗಳಿಗೆ ಒಬ್ಬ ಶಿಕ್ಷಕನಿದ್ದಾನೆ. ಪಂಚಾಯತಿಯ ಈ ಸರಾಸರಿಯನ್ನು ತಾಲೂಕಿಗೆ ಹೋಲಿಸಿದರೆ ಹೆಚ್ಚು ವಿದ್ಯಾರ್ಥಿಗಳಿಗೆ ಒಬ್ಬ ಶಿಕ್ಷಕನಿದ್ದಾನೆ. ತಾಲೂಕಿನಲ್ಲಿ 35 ವಿದ್ಯಾರ್ಥಿಗಳಿಗೆ ಒಬ್ಬ ಶಿಕ್ಷಕನಿದ್ದರೇ, ಗ್ರಾಮಪಂಚಾಯತಿ ಯಲ್ಲಿ 46 ವಿದ್ಯಾರ್ಥಿಗಳಿಗೆ ಒಬ್ಬ ಶಿಕ್ಷಕನಿದ್ದಾನೆ(ಕೋಷ್ಟಕ-25).

ನಿರಂತರ ಶಿಕ್ಷಣ ಕೇಂದ್ರಗಳು ಹಿರೇಹೆಗ್ಡಾಳ್ ಮತ್ತು ಸಾಸಲವಾಡದಲ್ಲಿ ಮಾತ್ರ ಇದ್ದು, ಉಳಿದ ಬೊಪ್ಪಲಪುರ ಮತ್ತು ಸಾಣೇಹಳ್ಳಿಯಲ್ಲಿ ಇರುವುದಿಲ್ಲ. ಹಿರೇಹೆಗ್ಡಾಳ್‌ನಲ್ಲಿ ಗ್ರಂಥಾಲಯವಿದೆ. ಆದರೆ ಇದಕ್ಕೆ ಕಟ್ಟಡವಿಲ್ಲ ಮತ್ತು ಯಾವುದೇ ಪತ್ರಿಕೆಗಳು ಬರುವುದಿಲ್ಲ ಎಂದು ಇಲ್ಲಿ ಜನತೆ ಅಭಿಪ್ರಾಯ ಪಟ್ಟಿದ್ದಾರೆ. ಇದರ ಬಗ್ಗೆ ಗ್ರಾಮಪಂಚಾಯತಿ ಯಾವುದೇ ಕ್ರಮ ತೆಗೆದುಕೊಂಡಿಲ್ಲ. ಪಂಚಾಯತಿ ವ್ಯಾಪ್ತಿಯಲ್ಲಿ ನಾಲ್ಕು ಅಂಗನವಾಡಿ ಕೇಂದ್ರಗಳು ಇದ್ದು, ಸಾಣೇಹಳ್ಳಿಯಲ್ಲಿ ಅಂಗನವಾಡಿ ಕೇಂದ್ರ ಇರುವುದಿಲ್ಲ.

ಗ್ರಾಮೀಣ ಜನತೆಯ ಅಭಿಪ್ರಾಯದ ಪ್ರಕಾರ ಶೇ 90 ರಷ್ಟು ಶೈಕ್ಷಣಿಕ ಸೌಲಭ್ಯ ತೃಪ್ತಿಕರವೆಂದು, ಶೇ 7 ರಷ್ಟು ಕುಟುಂಬಗಳು ಗೊತ್ತಿಲ್ಲವೆಂದು ಅಭಿಪ್ರಾಯ ಪಟ್ಟಿದ್ದಾರೆ. ಜಾತಿವಾರು ಅಭಿಪ್ರಾಯದಲ್ಲಿ ಪರಿಶಿಷ್ಟ ಜಾತಿಯವರು ಹೆಚ್ಚು ಗೊತ್ತಿಲ್ಲವೆಂದು ಉತ್ತರಿಸಿದ್ದಾರೆ(ಕೋಷ್ಟಕ-27). ಇನ್ನೂ ಗ್ರಾಮಗಳಲ್ಲಿ ಶಿಕ್ಷಕರ ವಾಸವನ್ನು ನೋಡಿದಾಗ 20 ಜನ ಶಿಕ್ಷಕರಲ್ಲಿ ಐದು ಜನ ಶಿಕ್ಷಕರು ಮಾತ್ರ ಗ್ರಾಮಗಳಲ್ಲಿ ವಾಸವಾಗಿದ್ದಾರೆ. ಪಂಚಾಯತಿ ವ್ಯಾಪ್ತಿಯ ಎಲ್ಲಾ ಗ್ರಾಮಗಳು ತಾಲೂಕಿಗೆ ಹತ್ತಿರವಿರುವುದರಿಂದ ಹೆಚ್ಚಿನ ಶಿಕ್ಷಕರು ಪಟ್ಟಣದಿಂದ ಬಂದು ಹೋಗುತ್ತಾರೆ. ಹೀಗೆ ಹಿರೇಹೆಗ್ಡಾಳ್ ಗ್ರಾಮಪಂಚಾಯತಿ ವ್ಯಾಪ್ತಿಯ ಗ್ರಾಮಗಳಲ್ಲಿ ಶಿಕ್ಷಣ ಸೌಲಭ್ಯಗಳಿವೆ ಎಂದು ಹೇಳಬಹುದು.

## ಉಜ್ಜನಿ ಗ್ರಾಮಪಂಚಾಯತಿ

ತಾಲ್ಲೂಕಿನ ಪ್ರಮುಖ ಸಾಂಸ್ಕೃತಿಕ ಸ್ಥಳವಾದ ಉಜ್ಜನಿಯು ಶಿಕ್ಷಣಕ್ಕೆ ಹೆಸರು ವಾಸಿಯಾಗಿದೆ. ಇಲ್ಲಿಗೆ ದೂರದ ಸ್ಥಳದಿಂದ ವಿದ್ಯಾರ್ಥಿಗಳು ಬಂದು ಶಿಕ್ಷಣವನ್ನು ಪಡೆಯುತ್ತಿದ್ದಾರೆ. ಪಂಚಪೀಠಗಳಲ್ಲಿ ಒಂದಾದ ಉಜ್ಜನಿಯಲ್ಲಿ ಮರಳುಸಿದ್ದೇಶ್ವರ ಮಠವು ದೊಡ್ಡ ಶಿಕ್ಷಣ ಕೇಂದ್ರವಾಗಿ ಈ ಭಾಗದಲ್ಲಿ ಹೆಸರುವಾಸಿಯಾಗಿದೆ. ಪದವಿ ಪೂರ್ವ ಶಿಕ್ಷಣದವರೆಗೆ ಶಿಕ್ಷಣದ ಸೌಲಭ್ಯವನ್ನು ಹೊಂದಿರುವ ಉಜ್ಜನಿಯಲ್ಲಿ ಆರು ಸರ್ಕಾರಿ ಪ್ರಾಥಮಿಕ ಶಾಲೆಗಳು, ಎರಡು ಖಾಸಗಿ ಶಾಲೆಗಳು ಇವೆ. ಉಜ್ಜನಿ ಯಲ್ಲಿ ಒಟ್ಟು 1575 ವಿದ್ಯಾರ್ಥಿಗಳು ಪ್ರಾಥಮಿಕ ಶಾಲೆಯಲ್ಲಿ ದಾಖಲಾತಿಯನ್ನು ಹೊಂದಿದ್ದಾರೆ. 32 ಶಿಕ್ಷಕರಿದ್ದು 49 ವಿದ್ಯಾರ್ಥಿಗಳಿಗೆ ಒಬ್ಬ ಶಿಕ್ಷಕನಿದ್ದಾನೆ. ಎಲ್ಲಾ ಶಾಲೆಗಳ ವಿದ್ಯಾರ್ಥಿಗಳು ಮತ್ತು ಶಿಕ್ಷಕರು ಇದರಲ್ಲಿ ಸೇರಿದ್ದಾರೆ(ಕೋಷ್ಟಕ-25). ಕಳೆದ 5 ವರ್ಷಗಳಿಂದ ವಿದ್ಯಾರ್ಥಿಗಳ ದಾಖಲಾತಿಯನ್ನು ನೋಡಿದಾಗ ಪ್ರತಿ ವರ್ಷ ಇದರ ಪ್ರಮಾಣ ಹೆಚ್ಚುತ್ತಾ ಹೋಗಿದೆ. ಅದೇ ರೀತಿ ಶಾಲೆ ಬಿಟ್ಟವರ ಪ್ರಮಾಣ ಸಹ 1995 ರಿಂದ ಪ್ರತಿ ವರ್ಷ ಇಳಿಕೆಯಾಗಿದೆ. 1995ರಲ್ಲಿ ಶೇ 10 ರಷ್ಟು ಇರುವ ಡ್ರಾಪ್-ಔಟ್ 2001-02 ಕ್ಕೆ 7ಕ್ಕೆ ಇಳಿದಿದೆ. ಶೇ 3 ರಷ್ಟು ಡ್ರಾಪ್ ಔಟ್ ಕಡಿಮೆಯಾಗಿದೆ. ಒಣಭೂಮಿ ಪ್ರದೇಶವಾಗಿರುವುದರಿಂದ ನೀರಾವರಿ ಪ್ರದೇಶಕ್ಕಿಂತ ಹೆಚ್ಚು ಡ್ರಾಪ್ ಔಟ್ ಇದೆ (ಕೋಷ್ಟಕ-26). ಈ ಪಂಚಾಯತಿ ವ್ಯಾಪ್ತಿಯಲ್ಲಿ ಬೆನಕನಹಳ್ಳಿ ಮತ್ತು ಬೈರದೇವರ ಗುಡ್ಡದಲ್ಲಿ ಆರನೇ ತರಗತಿಯವರೆಗೆ ಶಿಕ್ಷಣ ಸೌಲಭ್ಯವಿದೆ. ಇಲ್ಲಿ 46 ವಿದ್ಯಾರ್ಥಿಗಳಿಗೆ ಒಬ್ಬ ಶಿಕ್ಷಕನಿದ್ದಾನೆ. ಎಲ್ಲಾ ಗ್ರಾಮಗಳ ಶಿಕ್ಷಕರ ಮತ್ತು ವಿದ್ಯಾರ್ಥಿಗಳ ಅನುಪಾತ ತಾಲ್ಲೂಕು ಸರಾಸರಿಗಿಂತ ಹೆಚ್ಚು ಇದೆ. ಕೂಡ್ಲಿಗಿ ತಾಲ್ಲೂಕು ಹಿಂದುಳಿದ ಪ್ರದೇಶವಾದರೂ ಶಿಕ್ಷಕರ ಮತ್ತು ವಿದ್ಯಾರ್ಥಿಗಳ ಅನುಪಾತದಲ್ಲಿ ಇತರೆ ಜಿಲ್ಲೆಯ ತಾಲ್ಲೂಕುಗಳಿಗಿಂತ ಉತ್ತಮವಾಗಿದೆ. 35 ವಿದ್ಯಾರ್ಥಿಗಳಿಗೆ ಒಬ್ಬ ಶಿಕ್ಷಕರಿದ್ದರೆ ಪಂಚಾಯತಿಯಲ್ಲಿ 46 ವಿದ್ಯಾರ್ಥಿಗಳಿಗೆ ಒಬ್ಬ ಶಿಕ್ಷನಿದ್ದಾನೆ.

ನಿರಂತರ ಶಿಕ್ಷಣ ಕೇಂದ್ರ ಮತ್ತು ಗ್ರಂಥಾಲಯಗಳು ಉಜ್ಜನಿಯಲ್ಲಿ ಮಾತ್ರ ಇವೆ. ಉಳಿದ ಪಂಚಾಯತಿಗೆ ಸೇರಿದ ಎರಡು ಗ್ರಾಮಗಳಲ್ಲಿ ಶಿಕ್ಷಕರಲ್ಲಿ 20 ಶಿಕ್ಷಕರು ಮಾತ್ರ ವಾಸವಾಗಿದ್ದಾರೆ. ಉಜ್ಜನಿ ದೊಡ್ಡ ಗ್ರಾಮವಾಗಿದ್ದು, ಇಲ್ಲಿ ಎಲ್ಲಾ ಸೌಕರ್ಯಗಳು ಇರುವುದರಿಂದ ಹೆಚ್ಚು ಶಿಕ್ಷಕರು ಉಜ್ಜನಿಯಲ್ಲಿ ವಾಸವಾಗಿದ್ದಾರೆ. ಗ್ರಾಮಪಂಚಾಯತಿ ಸದಸ್ಯರು ಎಲ್ಲಾ ಕೆಲಸ ಕಾರ್ಯಗಳಲ್ಲಿ ಸಹಕರಿಸುತ್ತಾರೆ ಎಂದು ಶಿಕ್ಷಕರ ಅಭಿಪ್ರಾಯಪಟ್ಟಿದ್ದಾರೆ.

ಗ್ರಾಮೀಣ ಜನತೆಯ ಅಭಿಪ್ರಾಯದಲ್ಲಿ ಶೈಕ್ಷಣಿಕ ಸೌಲಭ್ಯವು ಬಹಳ ಚೆನ್ನಾಗಿದ್ದು, ಶೇ 86 ರಷ್ಟು ಕುಟುಂಬಗಳು ತೃಪ್ತಿಕರವೆಂದು, ಶೇ 4ರಷ್ಟು ಕುಟುಂಬಗಳು ಮಾತ್ರ ಅತೃಪ್ತಿಯನ್ನು ಮತ್ತು ಶೇ.8ರಷ್ಟು ಕುಟುಂಬಗಳು ಗೊತ್ತಿಲ್ಲವೆಂದು ಹೇಳಿದ್ದಾರೆ(ಕೋಷ್ಟಕ-27). ಉಜ್ಜನಿ ಯು ಶಿಕ್ಷಣ ಸೌಲಭ್ಯದಲ್ಲಿ ಚೆನ್ನಾಗಿದೆ. ಒಣ ಭೂಮಿ ಪ್ರದೇಶವಾದರೂ ಶಿಕ್ಷಣ ವಿಚಾರದಲ್ಲಿ ಪ್ರಗತಿಯಲ್ಲಿದೆ. ಗ್ರಾಮೀಣ ಶಿಕ್ಷಣ ಸಮಿತಿ ರಚನೆಯಾಗಿದ್ದು ಇದು ಯಾವುದೇ ಶೈಕ್ಷಣಿಕ ಪ್ರಗತಿಯಲ್ಲಿ ಭಾಗವಹಿಸಿಲ್ಲ. ಗ್ರಾಮಪಂಚಾಯತಿಯು

ಶೈಕ್ಷಣಿಕ ಪ್ರಗತಿಯಲ್ಲಿ ಕೆಲಸ ಮಾಡಿದ್ದರು ಶಿಕ್ಷಕರು ಗ್ರಾಮಸಭೆಗೆ ಭಾಗವಹಿಸಿ ಶೈಕ್ಷಣಿಕ ಬೇಡಿಕೆಗಳನ್ನು ಇಟ್ಟಿದ್ದಾರೆ. ಹೀಗೆ ಪಂಚಾಯತಿ ವ್ಯಾಪ್ತಿಯಲ್ಲಿ ಶೈಕ್ಷಣಿಕ ಸೌಲಭ್ಯಗಳಿವೆ.

## 4.11 ಗ್ರಾಮಪಂಚಾಯತಿಗಳ ತೌಲನಿಕ ವಿವರಣೆ

ಅಧ್ಯಯನ ಕೈಗೊಂಡ ನಾಲ್ಕು ಗ್ರಾಮಪಂಚಾಯತಿಗಳಿಂದ 17 ಗ್ರಾಮಗಳಲ್ಲಿ ಶೈಕ್ಷಣಿಕ ಸೌಲಭ್ಯಗಳನ್ನು ನೋಡಲಾಗಿದೆ. ಪಂಚಾಯತಿವಾರು ಶಿಕ್ಷಣ ಸೌಲಭ್ಯವನ್ನು ನೋಡಿದಾಗ, ನಾಗೇನಹಳ್ಳಿ, ಬೈಲುವದ್ದಿಗೆರೆಯಲ್ಲಿ ಒಂದರಿಂದ ಏಳನೇ ತರಗತಿವರೆಗೆ, ಹಿರೇಹೆಗ್ಡಾಳ್‌ನಲ್ಲಿ 1-10ನೇ ತರಗತಿವರೆಗೆ ಉಜ್ಜನಿಯಲ್ಲಿ ಒಂದರಿಂದ ಪದವಿಪೂರ್ವ ಶಿಕ್ಷಣದವರೆಗೆ ಸೌಲಭ್ಯವಿದೆ. ಈ ಅುಕಿ - ಅಂಶಗಳನ್ನು ಗಮನಿಸಿದಾಗ ಅಭಿವೃದ್ಧಿ ಹೊಸಪೇಟೆ ತಾಲೂಕಿನ ಗ್ರಾಮಪಂಚಾಯತಿ ಗಳಿಗಿಂತ ಹಿಂದುಳಿದ ಕೂಡ್ಲಿಗಿ ತಾಲೂಕಿನ ಗ್ರಾಮಪಂಚಾಯತಿಗಳಲ್ಲಿ ಶಿಕ್ಷಣದ ಸೌಲಭ್ಯ ಅಧಿಕವಾಗಿದೆ.

ಗ್ರಾಮವಾರು ಶಿಕ್ಷಣದ ಸೌಲಭ್ಯವನ್ನು ನೋಡಿದಾಗ, ಉಜ್ಜನಿಯಲ್ಲಿ ಪದವಿಪೂರ್ವ ಶಿಕ್ಷಣದವರೆಗೆ, ಹಿರೇಹೆಗ್ಡಾಳ್ 10 ನೇ ತರಗತಿಯವರೆಗೆ, ನಾಗೇನಹಳ್ಳಿ, ಬಸವನದುರ್ಗ, ಬೈಲುವದ್ದಿಗೆರೆ, ಕಾಕಬಾಳು, ಗುಂಡ್ಲವದ್ದಿಗೆರೆ, ಬೊಪ್ಪಲಪುರ ಮತ್ತು ಸಾಸಲವಾಡದಲ್ಲಿ 7ನೇ ತರಗತಿಯವರೆಗೆ, ಧರ್ಮಸಾಗರ, ಬೆನಕನಹಳ್ಳಿ ಮತ್ತು ಬೈರದೇವರಗುಡ್ಡ ಗ್ರಾಮಗಳಲ್ಲಿ 6ನೇ ತರಗತಿಯವರೆಗೆ, ಬೆನಕಾಪುರ, ಸಾಣೇಹಳ್ಳಿ ಮತ್ತು ಕಾಲಘಟ್ಟಗಳಲ್ಲಿ 5ನೇ ತರಗತಿಯವರೆಗೆ ಶಿಕ್ಷಣ ಸೌಲಭ್ಯವಿದೆ. ನೀರಾವರಿ ಪ್ರದೇಶಕ್ಕೆ ಸೇರಿದ ನಾಗೇನಹಳ್ಳಿ ಪಂಚಾಯತಿಯ ಬೆಳಗೋಡು ಮತ್ತು ಕಳ್ಳಿರಾಂಪುರದಲ್ಲಿ ಶೈಕ್ಷಣಿಕ ಸೌಲಭ್ಯ ಇಲ್ಲ. ಇವು ಸಣ್ಣ ಗ್ರಾಮಗಳಾಗಿರುವುದರಿಂದ ಶಾಲೆಯಾಗಲಿ, ಅಂಗನವಾಡಿಯಾಗಲಿ ಇಲ್ಲ. ಇಲ್ಲಿ ಜನತೆ ಇದರ ಬಗ್ಗೆ ಹೆಚ್ಚು ಅತೃಪ್ತಿಯನ್ನು ವ್ಯಕ್ತಪಡಿಸಿದ್ದಾರೆ. ಈ ಎರಡು ಗ್ರಾಮಗಳು ಹತ್ತಿರವಿರುವುದರಿಂದ ಎರಡು ಗ್ರಾಮಕ್ಕೆ ಸೇರಿ ಒಂದು ಶಾಲೆ ಇದ್ದು ಸಾಕು ಎಂದು ಅಭಿಪ್ರಾಯಪಟ್ಟಿದ್ದಾರೆ. ಉಳಿದಂತೆ ಎಲ್ಲಾ ಗ್ರಾಮಗಳಲ್ಲಿ ಕಿರಿಯ ಪ್ರಾಥಮಿಕ ಶಾಲೆಗಳಿವೆ. ಗ್ರಾಮವಾರು ಶಿಕ್ಷಣದ ಸೌಲಭ್ಯಗಳನ್ನು ಗಮನಿಸಿದಾಗ ಒಣಭೂಮಿ ಪ್ರದೇಶದ ಗ್ರಾಮಗಳಲ್ಲಿ ಶಿಕ್ಷಣದ ಸೌಲಭ್ಯಗಳು ಉತ್ತಮವಾಗಿವೆ.

ಗ್ರಾಮಪಂಚಾಯತಿಗಳಲ್ಲಿ ಶಾಲೆ ಬಿಡುವವರ ಪ್ರಮಾಣ (Drop-out)ವನ್ನು ನೋಡಿದಾಗ ಹೆಚ್ಚು ಒಣಭೂಮಿ ಪ್ರದೇಶಗಳಲ್ಲಿ ಕಂಡುಬಂದಿದೆ. 1997ರಿಂದ 2001ರವರೆಗೆ ಶೇ 15 ರಷ್ಟು ಡ್ರಾಪ್-ಔಟ್ ಇರುವುದು ಕಂಡುಬಂದಿದೆ. ಇದರಲ್ಲಿ ಹೆಚ್ಚು ಬಾಲಕಿಯರ ಡ್ರಾಪ್-ಔಟ್ ಇದೆ(ಕೋಷ್ಟಕ-26). ಇದರ ಬಗ್ಗೆ ಗ್ರಾಮಪಂಚಾಯತಿಯಾಗಲೀ, ಗ್ರಾಮೀಣ ಶಿಕ್ಷಣ ಸಮಿತಿಗಳಾಗಲಿ ಸರಿಯಾಗಿ ಕಾರ್ಯನಿರ್ವಹಿಸಿಲ್ಲ. ನಾಗೇನಹಳ್ಳಿಗೆ ಹೋಲಿಸಿದರೇ ಬೈಲುವದ್ದಿಗೆರೆಯಲ್ಲಿ ಶಾಲೆ ಬಿಡುವವರ ಸಂಖ್ಯೆ ಪ್ರತಿ ವರ್ಷ ಹೆಚ್ಚಾಗಿದೆ ಹಾಗೂ ಡ್ರಾಪ್-ಔಟ್‌ನಲ್ಲಿ ಸುಧಾರಣೆಯಾಗಿಲ್ಲ. ನಾಗೇನಹಳ್ಳಿ ಪಟ್ಟಣಕ್ಕೆ ಹತ್ತಿರವಿರುವುದರಿಂದ ಶಿಕ್ಷಕರು ವಾಸವಾಗಿಲ್ಲದಿದ್ದರು ಸಹ ದಾಖಲಾತಿ ಹೆಚ್ಚಿದೆ ಹಾಗೂ ಡ್ರಾಪ್-ಔಟ್ ಕಡಿಮೆ ಇದೆ. ಬೈಲುವದ್ದಿಗೆರೆಯಲ್ಲಿ ಪಟ್ಟಣಕ್ಕೆ ದೂರವಿರುವುದರಿಂದ ಶಿಕ್ಷಕರು ಅಲ್ಲೇ ವಾಸವಾಗಿದ್ದರೂ ಸಹ ದಾಖಲಾತಿ ಹೆಚ್ಚಿಲ್ಲ ಹಾಗೂ

ಡ್ರಾಪ್-ಔಟ್ ಕಡಿಮೆ ಆಗಿಲ್ಲ. ಪ್ರಸಕ್ತ ವರ್ಷದ ಡ್ರಾಪ್-ಔಟ್ ನೋಡಿದಾಗ, ನಾಗೇನಹಳ್ಳಿ ಪಂಚಾಯತಿಯಲ್ಲಿ ಶೇ 3ರಷ್ಟಿದ್ದರೆ, ಬೈಲುವದ್ದಿಗೆರೆಯಲ್ಲಿ ಶೇ 8ರಷ್ಟು ಡ್ರಾಪ್ ಔಟ್ ಇದೆ. ನಾಗೇನಹಳ್ಳಿ ನೀರಾವರಿ ಪ್ರದೇಶವಾಗಿರು ವುದರಿಂದ ಕಡಿಮೆ ಡ್ರಾಪ್-ಔಟ್ ಇದ್ದರೆ, ಬೈಲುವದ್ದಿಗೆರೆ ಪಂಚಾಯತಿಯ ನಾಲ್ಕು ಗ್ರಾಮಗಳಲ್ಲಿ ವಲಸೆ ಇರುವುದರಿಂದ ಹಾಗೂ ಆರ್ಥಿಕವಾಗಿ ದುರ್ಬಲರಾಗಿರುವುದರಿಂದ ಶಾಲೆ ಬಿಡುವವರ ಸಂಖ್ಯೆ ಹೆಚ್ಚು ಇದೆ.

ಉಜ್ಜಿನಿ ಒಣಭೂಮಿ ಪ್ರದೇಶವಾಗಿದ್ದು ನೀರಾವರಿ ಪ್ರದೇಶವಾದ ಹೀರೆಹೆಗ್ಡಾಳ್‌ಗೆ ಹೋಲಿಸಿದರೆ ಹೆಚ್ಚು ಡ್ರಾಪ್-ಔಟ್ ಇದೆ. ಇಲ್ಲಿ ಶಿಕ್ಷಣ ಸಂಸ್ಥೆಗಳು ಹೆಚ್ಚು ಇದ್ದರು ಸಹ ಶೇ 7ರಷ್ಟು ಡ್ರಾಪ್ ಔಟ್ ಆಗಿದೆ. ಇಲ್ಲಿ ಇದರ ಬಗ್ಗೆ ಗ್ರಾಮಪಂಚಾಯತಿಯು ಯಾವುದೇ ಕ್ರಮ ಕೈಗೊಂಡಿಲ್ಲ. ಗ್ರಾಮೀಣ ಶಿಕ್ಷಣ ಸಮಿತಿಗಳು ಸಹ ಕಾರ್ಯೋನ್ಮುಖವಾಗಿಲ್ಲ. ಅಧ್ಯಯನಕ್ಕೆ ಆಯ್ಕೆ ಮಾಡಿಕೊಂಡ ನಾಲ್ಕು ಗ್ರಾಮಪಂಚಾತಿಗಳಿಂದ 17 ಗ್ರಾಮಗಳಲ್ಲಿ ಶೈಕ್ಷಣಿಕ ಸೌಲಭ್ಯ ಮತ್ತು ಗ್ರಾಮಪಂಚಾಯತಿಯು ಹೇಗೆ ಶಿಕ್ಷಣ ಪ್ರಗತಿಯಲ್ಲಿ ಸಹಕರಿಸಿದೆ ಎಂಬುದನ್ನು ನೋಡಲಾಗಿದೆ.. ಒಣಭೂಮಿ ಮತ್ತು ನೀರಾವರಿ ಪ್ರದೇಶಗಳಲ್ಲಿ ಶಿಕ್ಷಣ ಕಾರ್ಯಕ್ರಮಗಳು, ವಿದ್ಯಾರ್ಥಿಗಳ ದಾಖಲಾತಿ, ಡ್ರಾಪ್-ಔಟ್, ಗ್ರಾಮೀಣ ಶಿಕ್ಷಣ ಸಮಿತಿಗಳ ಕಾರ್ಯಗಳನ್ನು ನಾವು ತುಲನೆ ಮಾಡಿದಾಗ ನೀರಾವರಿ ಪಂಚಾಯತಿ ಪ್ರದೇಶಗಳಲ್ಲಿ ವಿದ್ಯಾರ್ಥಿಗಳ ದಾಖಲಾತಿ ಪ್ರತಿ ವರ್ಷ ಹೆಚ್ಚಾಗಿದ್ದು, ಒಣಭೂಮಿ ಪ್ರದೇಶಗಳಲ್ಲಿ ದಾಖಲಾತಿಯು ನೀರಾವರಿ ಪ್ರದೇಶಗಳಿಗಿಂತ ಕಡಿಮೆಯಾಗಿದೆ. ಶಾಲೆ ಬಿಟ್ಟವರ ಪ್ರಮಾಣ ಸಹ ಒಣಭೂಮಿ ಪ್ರದೇಶದಲ್ಲಿ ಹೆಚ್ಚು ಮತ್ತು ನೀರಾವರಿ ಪ್ರದೇಶದಲ್ಲಿ ಕಡಿಮೆ ಇರುವುದು ಕಂಡುಬಂದಿದೆ. ಅಧ್ಯಯನದ ಎಲ್ಲಾ ಪಂಚಾಯತಿಗಳಲ್ಲೂ ಗ್ರಾಮೀಣ ಶಿಕ್ಷಣ ಸಮಿತಿಗಳು ಕಾರ್ಯೋನ್ಮುಖವಾಗಿಲ್ಲ. ಒಣಭೂಮಿ ಪ್ರದೇಶಗಳಲ್ಲಿ ಶಿಕ್ಷಣದ ಸೌಲಭ್ಯ ಹೆಚ್ಚಿದ್ದರು ವಿದಾರ್ಥಿಗಳ ದಾಖಲಾತಿಯಲ್ಲಿ ಹೆಚ್ಚಾಗಿಲ್ಲ ಮತ್ತು ಮಧ್ಯದಲ್ಲಿ ಶಾಲೆ ಬಿಡುವುವರ ಪ್ರಮಾಣ ಕಡಿಮೆಯಾಗಿಲ್ಲ. ಹಾಗಾಗಿ ನೀರಾವರಿ ಪ್ರದೇಶದಲ್ಲಿ ಶಿಕ್ಷಣದ ಸೌಲಭ್ಯ ಕಡಿಮೆ ಇದ್ದರೂ ಸಹ ವಿದಾರ್ಥಿಗಳ ದಾಖಲಾತಿಯಲ್ಲಿ ಹೆಚ್ಚಾಗಿದೆ ಮತ್ತು ಮಧ್ಯದಲ್ಲಿ ಶಾಲೆ ಬಿಡುವುವರ ಪ್ರಮಾಣ ಕಡಿಮೆಯಿದೆ.

ಅಧ್ಯಯನದ ನಾಲ್ಕು ಗ್ರಾಮಪಂಚಾಯಿತಿಗಳಲ್ಲಿ ಸರ್ಕಾರ ನಿಗಧಿ ಪಡಿಸಿದ ಹಾಗೆ 40 ವಿದ್ಯಾರ್ಥಿ ಗಳಿಗೆ ಒಬ್ಬ ಶಿಕ್ಷಕರಿರಬೇಕು ಆದರೆ ಯಾವ ಪಂಚಾಯತಿಗಳಲ್ಲಿ ಹೀಗೆ ಇಲ್ಲ. ಹೆಚ್ಚು ವಿದ್ಯಾರ್ಥಿಗಳಿಗೆ ಅಂದರೆ ನಾಗೇನಹಳ್ಳಿ 50ಕ್ಕೆ 1, ಬೈಲುವದ್ದಿಗೆರೆಯಲ್ಲಿ 51ಕ್ಕೆ ಒಬ್ಬರು, ಹಿರೇಹೆಗ್ಡಾಳ್ 46ಕ್ಕೆ ಒಬ್ಬ. ಉಜ್ಜಿನಿಯಲ್ಲಿ 50ಕ್ಕೆ ಒಬ್ಬ ಶಿಕ್ಷಕನಿದ್ದಾನೆ. ಹಾಗಾಗಿ ಪಂಚಾಯತಿಯ ಸರಾಸರಿಯನ್ನು ನೋಡಿದರೆ ಇನ್ನೂ ಶಿಕ್ಷಕರ ಅವಶ್ಯಕತೆ ಇದೆ ಎಂದು ಹೇಳಬಹುದು. ಎಲ್ಲ ಪಂಚಾಯತಿಗಳು ತಾಲ್ಲೂಕಿನ ಸರಾಸರಿಗಿಂತ ಹೆಚ್ಚು ವಿದ್ಯಾರ್ಥಿಗಳನ್ನು ಹೊಂದಿದೆ. ಒಟ್ಟು 15 ಗ್ರಾಮಗಳಲ್ಲಿ ನಾಲ್ಕು ಗ್ರಾಮಗಳಲ್ಲಿ ಮಾತ್ರ ಸರ್ಕಾರದ ನಿಯಮದ ಪ್ರಕಾರ ಶಿಕ್ಷಕರಿದ್ದಾರೆ(ಕೋಷ್ಟಕ-25).

ಹಾಜರಾತಿಯ ಹೆಚ್ಚಳಕ್ಕಾಗಿ ಸರ್ಕಾರವು 1ರಿಂದ 5ನೇ ತರಗತಿಯ ಮಕ್ಕಳಿಗೆ 3 ಕೆ.ಜಿ ಅಕ್ಕಿಯನ್ನು ಕೊಡಲಾಗುತ್ತದೆ. ಆದರೆ ಇದು ನಿಜಸ್ಥಿತಿಯಲ್ಲಿ ವಿದ್ಯಾರ್ಥಿಗಳು ಶಾಲೆಗೆ ಬಂದರೇನು ಬಿಟ್ಟರೇನು ಶೇ

80ರಷ್ಟು ಹಾಜರಾತಿ ಹಾಕಿ ಕೊಡಬೇಕು ಇಲ್ಲದಿದ್ದರೆ ಪಾಲಕರು ಜಗಳಕ್ಕೆ ಬರುತ್ತಾರೆ ಎಂದು ಶಿಕ್ಷಕರು ಹೇಳುತ್ತಾರೆ. ಸರ್ಕಾರದ ನಿಯಮಗಳನ್ನು ಶಿಕ್ಷಕರು ಪಾಲಿಸಿದರೆ ಗ್ರಾಮದಲ್ಲಿ ಜಗಳವಾಗುತ್ತದೆ ಎಂದು ಅಭಿಪ್ರಾಯಪಡುತ್ತಾರೆ. ಈಗ ಅಕ್ಕಿಯ ಬದಲು ಮಧ್ಯಾಹ್ನದ ಉಪಹಾರವನ್ನು ಆಯೋಜಿಸಿದೆ. ಇದರಿಂದ ಶಾಲೆ ಬಿಡುವವರ ಸಂಖ್ಯೆ ಕಡಿಮೆ ಮತ್ತು ಹಾಜರಾತಿಯಲ್ಲಿ ಹೆಚ್ಚಳವನ್ನು ಕಾದು ನೋಡಬೇಕಾಗಿದೆ. ನಾಲ್ಕು ಗ್ರಾಮಪಂಚಾಯತಿಗಳಲ್ಲಿ ಶೇಕಡ 80ರಷ್ಟು ಹಾಜರಾತಿ ತೋರಿಸಿವೆ.

ಗ್ರಾಮಪಂಚಾಯತಿಯು ಶಿಕ್ಷಣಕ್ಕೆ ನೇರವಾದ ಕಾರ್ಯಗಳನ್ನು ಇಲ್ಲದಿದ್ದರು ಶಾಲೆ ಕೊಠಡಿ ನಿರ್ಮಾಣ, ಕಾಂಪೌಂಡ್ ಕಟ್ಟಿಸುವುದು, ಶೌಚಾಲಯವನ್ನು ನಿರ್ಮಿಸುವುದು, ಕುಡಿಯುವ ನೀರನ್ನು ಒದಗಿಸುವುದು ಇಂಥಹ ಕಾರ್ಯಗಳನ್ನು ಕೆಲವು ಗ್ರಾಮಗಳಲ್ಲಿ ಆಗಿದೆ.ಶಿಕ್ಷಕರು ಸರಿಯಾದ ವೇಳೆಗೆ ಬರುತ್ತಾರೋ ಇಲ್ಲವೋ ಎಂಬುದರ ಬಗ್ಗೆ ಪಂಚಾಯತಿಗಳು ನಿಗಾವಹಿಸಿವೆ. ನಿರಂತರ ಶಿಕ್ಷಣ ಕೇಂದ್ರದ ನಿರ್ವಹಣೆ ಮತ್ತು ಗ್ರಂಥಾಲಯದ ನಿರ್ವಹಣೆ ಕಾರ್ಯಗಳನ್ನು ಪಂಚಾಯತಿಗಳು ನಿರ್ವಹಿಸುತ್ತಿವೆ ಎಂದು ಹೇಳಬಹುದು.

ಹೀಗೆ ಗ್ರಾಮಪಂಚಾಯತಿಯು ಶಿಕ್ಷಣ ಪ್ರಗತಿಗಾಗಿ ಪರೋಕ್ಷವಾಗಿ ತನ್ನ ಕಾರ್ಯಗಳನ್ನು ನಿರ್ವಹಿಸಿದೆ. ಗ್ರಾಮೀಣ ಶಿಕ್ಷಣ ಸಮಿತಿಗಳು ಕಾರ್ಯನ್ಮೋಖ ಸಾಧಿಸಿದರೆ ಇನ್ನೂ ಹೆಚ್ಚಿನ ಸಾಕ್ಷರತೆಯನ್ನು ಗ್ರಾಮಗಳು ಹೊಂದಬಹುದಾಗಿದೆ. ಹೀಗೆ ಗ್ರಾಮಪಂಚಾಯತಿಗಳ ವ್ಯಾಪ್ತಿಯಲ್ಲಿ ಶಿಕ್ಷಣ ಸೌಲಭ್ಯ ಮತ್ತು ನಿರ್ವಹಣೆಗಳು ಹೀಗಿವೆ ಎಂದು ಹೇಳಬಹುದು.

ಈ ಎಲ್ಲಾ ಅಂಶಗಳನ್ನು ಗಮನಿಸಿದಾಗ ಒಟ್ಟು ಗ್ರಾಮದ ಆರ್ಥಿಕ, ಸಾಮಾಜಿಕ ಸ್ಥಿತಿಗಳು ಬದಲಾಗದೇ ಅಭಿವೃದ್ಧಿ ಹೊಂದುವುದು ಕಷ್ಟ. ಹಾಗಾಗಿ ಆಯಾ ಪ್ರದೇಶಗಳ ಆರ್ಥಿಕ, ಸಾಮಾಜಿಕ ಸ್ಥಿತಿಗಳ ಮೇಲೆ ಶಿಕ್ಷಣದ ಪ್ರಗತಿ ಅವಲಂಬಿಸಿರುವುದು ಅಧ್ಯಯನದಿಂದ ಕಂಡುಬಂದಿದೆ. ಶಾಲೆ ಬಿಡುವ ಮಕ್ಕಳ ಸಂಖ್ಯೆ ಎಲ್ಲಿ ಹೆಚ್ಚಿದೆ, ಹಾಜರಾತಿ ಎಲ್ಲಿ ಕಡಿಮೆ ಇದೆ, ಹಾಗೂ ಸಾಕ್ಷರತೆಯಲ್ಲಿ ಹಿಂದುಳಿದಿರುವ ಪ್ರದೇಶಗಳಿಗೆ ಮೊದಲ ಆದ್ಯತೆಯನ್ನು ಕೊಡಬೇಕಾಗಿದೆ. ಹೀಗೆ ಶಿಕ್ಷಣದ ಕೆಲವು ಜವಾಬ್ದಾರಿಗಳನ್ನು ಗ್ರಾಮಪಂಚಾಯತಿ ನಿರ್ವಹಿಸಿವೆ ಎಂದು ಹೇಳಬಹುದು.

**ಅಡಿಟಿಪ್ಪಣಿಗಳು**

1. ಕುಮಾರ ಪಿ., ''ಗ್ರಾಮೀಣ ವಸತಿ ಯೋಜನೆ- ಮುನ್ನೋಟ'', *ಕರ್ನಾಟಕ ವಿಕಾಸ*, ಸಂಪುಟ 41, ಸಂಚಿಕೆ 9, ಆಗಸ್ಟ್ 2001, ಪುಟ.4-5
2. ಕರ್ನಾಟಕ ಸರ್ಕಾರ, *ಕರ್ನಾಟಕದಲ್ಲಿ ಮಾನವ ಅಭಿವೃದ್ಧಿ-1999*, ಬೆಂಗಳೂರು : ಯೋಜನಾ ಇಲಾಖೆ, 1999, ಪುಟ.149
3. ಅದೇ, ಪುಟ.151

4. ಕುಮಾರ ಪಿ., *ಪೂರ್ವೋಕ್ತ*, ಪುಟ.6

5. ಕರ್ನಾಟಕ ಸರ್ಕಾರ, *ಪೂರ್ವೋಕ್ತ*, 1999, ಪುಟ. 151

6. ಕುಮಾರ ಪಿ., *ಪೂರ್ವೋಕ್ತ*, ಪುಟ.5

7. ಅದೇ, ಪುಟ. 5

8. ಕರ್ನಾಟಕ ಸರ್ಕಾರ, *ವಾರ್ಷಿಕ ವರದಿ, 1992-1993,* ಬೆಂಗಳೂರು:ಗ್ರಾಮೀಣ ಅಭಿವೃದ್ಧಿ ಮತ್ತು ಪಂಚಾಯತ್‌ರಾಜ್ ಇಲಾಖೆ, 1993, ಪುಟ.5

9. ಕುಮಾರ ಪಿ., *ಪೂರ್ವೋಕ್ತ*, ಪುಟ.7

10. ಬಣಕಾರ ಬಿ.ಜಿ., ''ಗುರಿ ತಲುಪದ ವಸತಿ ಕ್ಷೇತ್ರ'', *ಕನ್ನಡ ಪ್ರಭ ದಿನಪತ್ರಿಕೆ,* ಬೆಂಗಳೂರು: ಅಕ್ಟೋಬರ್ 18, 2001, ಪುಟ.5

11. ಕರ್ನಾಟಕ ಸರ್ಕಾರ, *ಪೂರ್ವೋಕ್ತ*, 1999, ಪುಟ. 154

12. ಮುಖ್ಯ ಯೋಜನಾಧಿಕಾರಿಗಳು, ''ಅಂಬೇಡ್ಕರ್ ವಸತಿ ಯೋಜನೆ'', ಬಳ್ಳಾರಿ ಜಿಲ್ಲಾ ವಾರ್ತಾಪತ್ರ, ಬಳ್ಳಾರಿ: ಜಿಲ್ಲಾ ಪಂಚಾಯತ್, ಸೆಪ್ಟೆಂಬರ್, 2001

13. ಬಣಕಾರ ಬಿ.ಜಿ., *ಪೂರ್ವೋಕ್ತ*, ಪುಟ.5

14. ಮುಖ್ಯ ಯೋಜನಾಧಿಕಾರಿಗಳು, ''ಅಂಬೇಡ್ಕರ್ ವಸತಿ ಯೋಜನೆ ಪ್ರಗತಿ'', ಬಳ್ಳಾರಿ ಜಿಲ್ಲಾ ವಾರ್ತಾಪತ್ರ, ಬಳ್ಳಾರಿ: ಜಿಲ್ಲಾ ಪಂಚಾಯತ್, 2001

15. ಮುಖ್ಯ ಯೋಜನಾಧಿಕಾರಿಗಳು, '''ಆಶ್ರಯ ವಸತಿ ಯೋಜನೆಯ ನಿಯಮಾವಳಿ'', ಬಳ್ಳಾರಿ ಜಿಲ್ಲಾ ವಾರ್ತಾಪತ್ರ, ಬಳ್ಳಾರಿ: ಜಿಲ್ಲಾ ಪಂಚಾಯತ್, ಅಕ್ಟೋಬರ್, 2001

16. ಬಣಕಾರ ಬಿ.ಜಿ., *ಪೂರ್ವೋಕ್ತ*, ಪುಟ.5

17. ಕುಮಾರ ಪಿ., *ಪೂರ್ವೋಕ್ತ*, ಪುಟ.8

18. ಪಂಚಾಯತಿ ಕಾರ್ಯದರ್ಶಿಗಳು, *ಆಶ್ರಯ, ಅಂಬೇಡ್ಕರ ಮತ್ತು ಇಂದಿರಾ ಆವಾಸ್ ವಸತಿ ಯೋಜನೆಗಳ ಫಲಾನುಭವಿಗಳ ಪಟ್ಟಿ, 1995-2000,* ನಾಗೇನಹಳ್ಳಿ : ಗ್ರಾಮಪಂಚಾಯತಿ ಕಚೇರಿ, 2001

19. ಪಂಚಾಯತಿ ಕಾರ್ಯದರ್ಶಿಗಳು, *ಗ್ರಾಮೀಣ ಕುಟುಂಬಗಳ ಆರ್ಥಿಕ ಸಮೀಕ್ಷೆಯ ಗ್ರಾಮವಾರು ಯಾದಿ, 1997-98 ಮತ್ತು ಗ್ರಾಮಪಂಚಾಯತಿ ಬೇಡಿಕೆ ರಿಜಿಸ್ಟರ್,* ನಾಗೇನಹಳ್ಳಿ: ಗ್ರಾಮಪಂಚಾಯತಿ ಕಚೇರಿ, 2001

20. ಪಂಚಾಯತಿ ಕಾರ್ಯದರ್ಶಿಗಳು, *ಆಶ್ರಯ, ಅಂಬೇಡ್ಕರ ಮತ್ತು ಇಂದಿರಾ ಆವಾಸ್ ವಸತಿ ಯೋಜನೆಗಳ ಫಲಾನುಭವಿಗಳ ಪಟ್ಟಿ, 1995-2000,* ಬೈಲುವದ್ದಿಗೆರೆ : ಗ್ರಾಮಪಂಚಾಯತಿ ಕಚೇರಿ, 2001

21. ಪಂಚಾಯತಿ ಕಾರ್ಯದರ್ಶಿಗಳು, *ಗ್ರಾಮೀಣ ಕುಟುಂಬಗಳ ಆರ್ಥಿಕ ಸಮೀಕ್ಷೆಯ ಗ್ರಾಮವಾರು ಯಾದಿ, 1997-98* ಮತ್ತು *ಗ್ರಾಮಪಂಚಾಯತಿ ಬೇಡಿಕೆ ರಿಜಿಸ್ಟರ್*, ಬೈಲುವದ್ದಿಗೆರೆ: ಗ್ರಾಮಪಂಚಾಯತಿ ಕಚೇರಿ, 2001

22. ಪಂಚಾಯತಿ ಕಾರ್ಯದರ್ಶಿಗಳು, *ಆಶ್ರಯ, ಅಂಬೇಡ್ಕರ ಮತ್ತು ಇಂದಿರಾ ಆವಾಸ್ ವಸತಿ ಯೋಜನೆಗಳ ಫಲಾನುಭವಿಗಳ ಪಟ್ಟಿ, 1995-2000,* ಹಿರೇಹೆಗ್ಡಾಳ್ : ಗ್ರಾಮಪಂಚಾಯತಿ ಕಚೇರಿ, 2001

23. ಪಂಚಾಯತಿ ಕಾರ್ಯದರ್ಶಿಗಳು, *ಗ್ರಾಮೀಣ ಕುಟುಂಬಗಳ ಆರ್ಥಿಕ ಸಮೀಕ್ಷೆಯ ಗ್ರಾಮವಾರು ಯಾದಿ, 1997-98* ಮತ್ತು *ಗ್ರಾಮಪಂಚಾಯತಿ ಬೇಡಿಕೆ ರಿಜಿಸ್ಟರ್*, ಹಿರೇಹೆಗ್ಡಾಳ್ : ಗ್ರಾಮಪಂಚಾಯತಿ ಕಚೇರಿ, 2001

24. ಪಂಚಾಯತಿ ಕಾರ್ಯದರ್ಶಿಗಳು, *ಗ್ರಾಮೀಣ ಕುಟುಂಬಗಳ ಆರ್ಥಿಕ ಸಮೀಕ್ಷೆಯ ಗ್ರಾಮವಾರು ಯಾದಿ, 1997-98* ಮತ್ತು *ಗ್ರಾಮಪಂಚಾಯತಿ ಬೇಡಿಕೆ ರಿಜಿಸ್ಟರ್*, ಉಜ್ಜನಿ : ಗ್ರಾಮ ಪಂಚಾಯತಿ ಕಚೇರಿ, 2001

25. ಪಂಚಾಯತಿ ಕಾರ್ಯದರ್ಶಿ, *ಆಶ್ರಯ, ಅಂಬೇಡ್ಕರ ಮತ್ತು ಇಂದಿರಾ ಆವಾಸ್ ವಸತಿ ಯೋಜನೆಗಳ ಫಲಾನುಭವಿಗಳ ಪಟ್ಟಿ, 1995-2000,* ಉಜ್ಜನಿ : ಗ್ರಾಮಪಂಚಾಯತಿ ಕಚೇರಿ,2001

26. ಪಂಚಾಯತಿ ಕಾರ್ಯದರ್ಶಿಗಳು, *ಆಶ್ರಯ, ಅಂಬೇಡ್ಕರ ಮತ್ತು ಇಂದಿರಾ ಆವಾಸ್ ವಸತಿ ಯೋಜನೆಗಳ ಫಲಾನುಭವಿಗಳ ಪಟ್ಟಿ, 1995-2000,* ನಾಗೇನಹಳ್ಳಿ, ಬೈಲುವದ್ದಿಗೆರೆ, ಹಿರೇಹೆಗ್ಡಾಳ್ ಮತ್ತು ಉಜ್ಜನಿ: ಗ್ರಾಮಪಂಚಾಯತಿ ಕಚೇರಿಗಳು, 2001

27. ಕರ್ನಾಟಕ ಸರ್ಕಾರ, *ಪೂರ್ವೋಕ್ತ*, 1999, ಪುಟ. 151

28. ಅದೇ, ಪುಟ.91

29. ಅದೇ, ಪುಟ.91

30. ಮನ್ನಿಕಟ್ಟೆ ಎಲ್.ಬಿ., ''ಪ್ರದೇಶಾಭಿವೃದ್ಧಿ ಕಾರ್ಯಕ್ರಮಗಳು'', *ಕರ್ನಾಟಕ ವಿಕಾಸ*, ಸಂಪುಟ 40, ಸಂಚಿಕೆ 12, ಪುಟ.26

31. ಕರ್ನಾಟಕ ಸರ್ಕಾರ, *ಪೂರ್ವೋಕ್ತ*, 1999, ಪುಟ. 91

32. ಅದೇ, ಪುಟ.91

33. ಅದೇ, ಪುಟ.96

34. ಮನ್ನಿಕಟ್ಟೆ ಎಲ್.ಬಿ., *ಪೂರ್ವೋಕ್ತ*, ಪುಟ.26

35. ಕರ್ನಾಟಕ ಸರ್ಕಾರ, *ಗ್ರಾಮಪಂಚಾಯತಿ ಕಿರುಟಿಪ್ಪಣಿ*, ಮೈಸೂರು: ಅಬ್ದುಲ್ ನಜೀರ್‌ಸಾಬ್ ರಾಜ್ಯ ಗ್ರಾಮೀಣಾಭಿವೃದ್ಧಿ ಸಂಸ್ಥೆ, ಮೈಸೂರು, 1994, ಪುಟ.22-24

36. ಅದೇ, ಪುಟ. 23-26

37. ಅದೇ, ಪುಟ. 24

38. ಅದೇ, ಪುಟ. 24-25

39. ಅದೇ, ಪುಟ. 25

40. ಅದೇ, ಪುಟ.27-28

41. ಪಂಚಾಯಿತಿ ಕಾರ್ಯದರ್ಶಿ, *1995-2000ಸಾಲಿನ ಲೆಕ್ಕಪರಿಶೋಧನಾ ವರದಿಗಳು*, ನಾಗೇನಹಳ್ಳಿ : ಗ್ರಾಮಪಂಚಾಯತಿ ಕಚೇರಿ, 2001

42. ಪಂಚಾಯಿತಿ ಕಾರ್ಯದರ್ಶಿ, *1995-2000ಸಾಲಿನ ಲೆಕ್ಕಪರಿಶೋಧನಾ ವರದಿಗಳು*, ಬೈಲುವದ್ದಿಗೆರೆ: ಗ್ರಾಮ ಪಂಚಾಯತಿ ಕಚೇರಿ, 2001

43. ಪಂಚಾಯಿತಿ ಕಾರ್ಯದರ್ಶಿ, *1995-2000ಸಾಲಿನ ಲೆಕ್ಕಪರಿಶೋಧನಾ ವರದಿಗಳು*, ಹಿರೇಹೆಗ್ಡಾಳ್: ಗ್ರಾಮಪಂಚಾಯತಿ ಕಚೇರಿ, 2001

44. ಪಂಚಾಯಿತಿ ಕಾರ್ಯದರ್ಶಿ, *1995-2000ಸಾಲಿನ ಲೆಕ್ಕಪರಿಶೋಧನಾ ವರದಿಗಳು*, ಉಜ್ಜನಿ: ಗ್ರಾಮ ಪಂಚಾಯತಿ ಕಚೇರಿ, 2001

45. ಮಹಿಪಾಲ್, ''ಡಿಸೆಂಟ್ರಲೈಜ್ಡ್ ಮ್ಯಾನೇಜ್‌ಮೆಂಟ್ ಆಫ್ ಎಜುಕೇಶನ್'', *ಕುರುಕ್ಷೇತ್ರ*, ಸಂಚಿಕೆ 46, ಸಂಖ್ಯೆ 8, ಡಿಸೆಂಬರ್, 1999, ಪುಟ.7

46. ಯು.ಎನ್.ಡಿ.ಪಿ., *ಹ್ಯೂಮನ್ ಡೆವಲಪ್‌ಮೆಂಟ್ ರಿಪೋರ್ಟ್-1995*, ಆಕ್ಸ್‌ಫರ್ಡ್: ಯುನಿವರ್ಸಿಟಿ ಪ್ರೆಸ್, 1995

47. ಮಹಿಪಾಲ್, *ಪೂರ್ವೋಕ್ತ*, ಪುಟ.8

48. ದ್ವಾರಕನಾಥ್, ''ಸ್ಟೆಟಜಿಸ್ ಟೂ ಇಂಪ್ರೂ ಪ್ರೇಮರಿ ಎಜುಕೇಶನ್ ಇನ್ ರೂರಲ್ ಇಂಡಿಯಾ'', *ಕುರುಕ್ಷೇತ್ರ*, ಸಂಚಿಕೆ 46, ಸಂಖ್ಯೆ 4, ಸೆಪ್ಟೆಂಬರ್, 1999 ಪುಟ.3

49. ಮಹಿಪಾಲ್, *ಪೂರ್ವೋಕ್ತ*, ಪುಟ.8

50. ಮುಖ್ಯ ಯೋಜನಾಧಿಕಾರಿಗಳು, ''ನಿರಂತರ ಶಿಕ್ಷಣ ಕಾರ್ಯಕ್ರಮ'', *ಬಳ್ಳಾರಿ ಜಿಲ್ಲಾ ವಾರ್ತಪತ್ರ*, ಬಳ್ಳಾರಿ : ಜಿಲ್ಲಾಪಂಚಾಯತ್, ಡಿಸೆಂಬರ್, 2001

51. ಬಡ್ಡಿ ಎಂ. ಎಂ., *ಕರ್ನಾಟಕದಲ್ಲಿ ಪಂಚಾಯತ್‌ರಾಜ್‌ಕಾಯ್ದೆ-1993*, ಧಾರವಾಡ: ಆಕಳವಾಡಿ ಬುಕ್‌ಡಿಪೊ, 1994, ಪುಟ.77

52. ಮುಖ್ಯ ಯೋಜನಾಧಿಕಾರಿಗಳು, *ಪೂರ್ವೋಕ್ತ*, ಡಿಸೆಂಬರ್, 2001

## ಕೋಷ್ಟಕ -15

## ಗ್ರಾಮಪಂಚಾಯತಿವಾರು ಬಡತನ ರೇಖೆ ಕೆಳಗಿನ ಮತ್ತು ಮೇಲಿನ ಕುಟುಂಬಗಳ ವಿವರ 1997-98

| ಕ್ರ. ಸಂ. | ಜಾತಿವಾರು | ನಾಗೇನಹಳ್ಳಿ (ನೀರಾವರಿ) | | | ಬೈಲುವದ್ದಿಗೆರೆ (ಒಣಭೂಮಿ) | | | ಹಿರೇ ಹೆಗ್ಗಾಳ್(ನೀರಾವರಿ) | | | ಉಜ್ಜಿನಿ (ಒಣಭೂಮಿ) | | |
|---|---|---|---|---|---|---|---|---|---|---|---|---|---|
| | | ಬಿಪಿಎಲ್ ಕುಟುಂಬಗಳು | ಎಪಿಎಲ್ ಕುಟುಂಬಗಳು | ಒಟ್ಟು ಕುಟುಂಬಗಳು | ಬಿಪಿಎಲ್ ಕುಟುಂಬಗಳು | ಎಪಿಎಲ್ ಕುಟುಂಬಗಳು | ಒಟ್ಟು ಕುಟುಂಬಗಳು | ಬಿಪಿಎಲ್ ಕುಟುಂಬಗಳು | ಎಪಿಎಲ್ ಕುಟುಂಬಗಳು | ಒಟ್ಟು ಕುಟುಂಬಗಳು | ಬಿಪಿಎಲ್ ಕುಟುಂಬಗಳು | ಎಪಿಎಲ್ ಕುಟುಂಬಗಳು | ಒಟ್ಟು ಕುಟುಂಬಗಳು |
| 01 | ಪರಿಶಿಷ್ಟ ಜಾತಿ | 157<br>(5.90)<br>(36.43) | 129<br>(45.00)<br>(23.41) | 286<br>(100)<br>(29.12) | 215<br>(88.11)<br>(37.52) | 29<br>(11.89)<br>(3.92) | 244<br>(100)<br>(18.59) | 145<br>(80.56)<br>(40.50) | 35<br>(19.44)<br>(7.84) | 180<br>(100)<br>(22.39) | 146<br>(71.57)<br>(27.09) | 58<br>(28.43)<br>(5.17) | 204<br>(100)<br>(12.28) |
| 02 | ಪರಿಶಿಷ್ಟ ಪಂಗಡ | 86<br>(58.50)<br>(19.55) | 61<br>(41.50)<br>(11.07) | 147<br>(100)<br>(14.97) | 94<br>(67.63)<br>(16.40) | 45<br>(32.37)<br>(6.08) | 139<br>(100)<br>(10.59) | 17<br>(36.17)<br>(4.75) | 30<br>(63.83)<br>(6.73) | 47<br>(100)<br>(5.86) | 51<br>85.00)<br>(9.46) | 09<br>(15.00)<br>(0.80) | 60<br>(100)<br>(3.61) |
| 03 | ಹಿಂದುಳಿದ ವರ್ಗ | 158<br>(40.82)<br>(36.66) | 229<br>(59.17)<br>(41.50) | 387<br>(100)<br>(39.41) | 86<br>(23.63)<br>(15.00) | 278<br>(76.37)<br>(37.62) | 364<br>(100)<br>(27.74) | 58<br>(42.03)<br>(16.20) | 80<br>(57.97)<br>(17.39) | 138<br>(100)<br>(17.16) | 241<br>(27.08)<br>(44.71) | 649<br>(72.92)<br>(57.84) | 890<br>(100)<br>(53.58) |
| 04 | ಇತರೇ | 30<br>(18.52)<br>(6.96) | 132<br>(81.48)<br>(23.95) | 162<br>(100)<br>(16.50) | 178<br>(31.50)<br>(31.06) | 387<br>(68.50)<br>(52.37) | 565<br>(100)<br>(43.06) | 138<br>(31.44)<br>(38.55) | 301<br>(68.56)<br>(67.48) | 439<br>(100)<br>(54.60) | 101<br>(19.92)<br>(18.74) | 406<br>(80.08)<br>(36.18) | 507<br>(100)<br>(30.52) |
| 05 | ಒಟ್ಟು ಕುಟುಂಬಗಳು | 431<br>(43.89)<br>(100) | 551<br>(56.11)<br>(100) | 982<br>(100)<br>(100) | 573<br>(43.64)<br>(100) | 739<br>(56.36)<br>(100) | 1312<br>(100)<br>(100) | 358<br>(44.52)<br>(100) | 446<br>(55.48)<br>(100) | 804<br>(100)<br>(100) | 539<br>(32.45)<br>(100) | 1122<br>(67.55)<br>(100) | 1661<br>(100)<br>(100) |

ಸೂಚನೆ : 1. ಬಿ.ಪಿ.ಎಲ್ = ಬಡತನ ರೇಖೆಗಿಂತ ಕೆಳಗಿರುವ ಕುಟುಂಬಗಳು, 2. ಎ.ಪಿ.ಎಲ್.= ಬಡತನ ರೇಖೆಗಿಂತ ಮೇಲಿರುವ ಕುಟುಂಬಗಳು, 3. ಆವರಣದಲ್ಲಿರುವ ಪ್ರತಿ ಕ್ರಮಸಂಖ್ಯೆಯ ಮೊದಲನೆಯ ಶೇಕಡವಾರು ಪ್ರಮಾಣ ಜಾತಿವಾರು ಕುಟುಂಬಗಳ ಎ.ಪಿ.ಎಲ್., ಬಿ.ಪಿ.ಎಲ್.ಕುಟುಂಬಗಳನ್ನು ಸೂಚಿಸುತ್ತದೆ. ಪ್ರತಿ ಕ್ರಮಸಂಖ್ಯೆ ಶೇಕಡವಾರು ಪ್ರಮಾಣವು ಒಟ್ಟು ಕುಟುಂಬಗಳಲ್ಲಿ ಬಿ.ಪಿ.ಎಲ್. ಮತ್ತು ಎ.ಪಿ.ಎಲ್.ಕುಟುಂಬಗಳನ್ನು ಸೂಚಿಸುತ್ತದೆ.

ಮೂಲ : ಪಂಚಾಯತ್ ಕಾರ್ಯದರ್ಶಿಗಳು, *ಗ್ರಾಮೀಣ ಕುಟುಂಬಗಳ ಆರ್ಥಿಕ ಸಮೀಕ್ಷೆಯ ಗ್ರಾಮವಾರು ಯಾದಿಗಳು, 1997-98* ಮತ್ತು *ಬೇಡಿಕೆ ರಿಜಿಸ್ಟರ್ ಪುಸ್ತಕಗಳು, ಪಂಚಾಯತ್ ದಾಖಲೆಗಳು,* ನಾಗೇನಹಳ್ಳಿ, ಬೈಲುವದ್ದಿಗೆರೆ, ಹಿರೇಹೆಗ್ಗಾಳ ಮತ್ತು ಉಜ್ಜಿನಿ : ಗ್ರಾಮಪಂಚಾಯತ್ ಕಛೇರಿಗಳು, 2001

## ಕೋಷ್ಟಕ -16

## ಗ್ರಾಮಪಂಚಾಯತಿವಾರು ವಿವಿಧ ವಸತಿ ಯೋಜನೆಗಳಡಿಯಲ್ಲಿ ನಿರ್ಮಿಸಿರುವ ಮನೆಗಳ ವಿವರ 1995-2000

| ಕ್ರ. ಸಂ. | ವರ್ಷ | ನಾಗೇನಹಳ್ಳಿ(ನೀರಾವರಿ) | | | | ಬೈಲುವದ್ದಿಗೆರೆ(ಒಣಭೂಮಿ) | | | | ಹಿರೇಹೆಗ್ನಾಳ್(ನೀರಾವರಿ) | | | | ಉಜ್ಜಿನಿ(ಒಣಭೂಮಿ) | | | | ಒಟ್ಟು ಮನೆಗಳು | | | |
|---|---|---|---|---|---|---|---|---|---|---|---|---|---|---|---|---|---|---|---|---|---|
| | | ಆಶ್ರಯ | ಐ.ಎ.ವೈ | ಅಂಬೇಡ್ಕರ್ | ಒಟ್ಟು | ಆಶ್ರಯ | ಐ.ಎ.ವೈ | ಅಂಬೇಡ್ಕರ್ | ಒಟ್ಟು | ಆಶ್ರಯ | ಐ.ಎ.ವೈ | ಅಂಬೇಡ್ಕರ್ | ಒಟ್ಟು | ಆಶ್ರಯ | ಐ.ಎ.ವೈ | ಅಂಬೇಡ್ಕರ್ | ಒಟ್ಟು | ಆಶ್ರಯ | ಐ.ಎ.ವೈ | ಅಂಬೇಡ್ಕರ್ | ಒಟ್ಟು |
| 1. | 1995-96 | 12 | 20 | 13 | 45 | 06 | 14 | --- | 20 | 13 | 21 | 05 | 39 | 10 | 10 | 08 | 28 | 41 | 65 | 26 | 132 |
| 2 | 1996-97 | 08 | 12 | 14 | 34 | 10 | 12 | 03 | 25 | 11 | 30 | 04 | 45 | 07 | 04 | 02 | 13 | 36 | 58 | 23 | 117 |
| 3. | 1997-98 | 20 | 17 | 17 | 54 | 06 | 15 | 04 | 25 | 05 | 23 | 04 | 32 | --- | ---- | 15 | 15 | 31 | 55 | 40 | 126 |
| 4 | 1998-99 | 09 | 14 | 09 | 32 | 06 | 22 | --- | 28 | --- | 08 | 19 | 27 | --- | 14 | 24 | 38 | 15 | 58 | 52 | 125 |
| 5 | 1999-00 | 37 | 18 | 08 | 63 | --- | --- | 20 | 20 | --- | --- | 04 | 04 | 05 | 04 | 05 | 14 | 42 | 22 | 37 | 101 |
| | ಒಟ್ಟು | 86 (37.72) | 81 (35.53) | 61 (26.75) | 228 (100) | 28 (23.73) | 63 (53.39) | 27 (22.88) | 118 (100) | 29 (19.73) | 82 (55.78) | 38 (24.48) | 147 (100) | 22 (20.37) | 32 (29.63) | 54 (50.00) | 108 (100) | 165 (27.45) | 258 (42.93) | 178 (29.62) | 601 (100) |

ಸೂಚನೆ : ಐ.ಎ.ವೈ. = ಇಂದಿರಾ ಆವಾಸ್ ಯೋಜನೆಯಲ್ಲಿ ನಿರ್ಮಿಸಿದ ಮನೆಗಳು, ಆವರಣದಲ್ಲಿರುವ ಆಶ್ರಯ ಇಂದಿರಾ ಅವಾಸ್ ಮತ್ತು ಅಂಬೇಡ್ಕರ್ ವಸತಿಗಳ ಸಂಖ್ಯೆಯನ್ನು ಶೇಕಡವಾರು ಪ್ರಮಾಣವನ್ನು ಸೂಚಿಸುತ್ತದೆ.

ಮೂಲ : ಪಂಚಾಯತ್ ಕಾರ್ಯದರ್ಶಿಗಳು, *ವಿವಿಧ ವಸತಿ ಯೋಜನೆಗಳಲ್ಲಿಯ ಫಲಾನುಭವಿಗಳ ಪಟ್ಟಿ, ಆಶ್ರಯ ಇಂದಿರಾ ಅವಾಸ್ ಮತ್ತು ಅಂಬೇಡ್ಕರ್ ವಸತಿ ಯೋಜನೆಗಳ ಫಲಾನುಭವಿಗಳ ಪಟ್ಟಿ, 1995-2000 ಪಂಚಾಯತ್ ದಾಖಲೆಗಳು,* ನಾಗೇನಹಳ್ಳಿ, ಬೈಲುವದ್ದಿಗೆರೆ, ಹಿರೇಹೆಗ್ನಾಳ್ ಮತ್ತು ಉಜ್ಜಿನಿ : ಗ್ರಾಮ ಪಂಚಾಯತಿ ಕಚೇರಿಗಳು, 2001

## ಕೋಷ್ಟಕ -17

### ಗ್ರಾಮಪಂಚಾಯತಿವಾರು ವಿವಿಧ ವಸತಿ ಯೋಜನೆಗಳಡಿಯಲ್ಲಿ ಜಾತಿವಾರು ಹಂಚಿಕೆಯ ವಿವರ 1995-2000

| ಕ್ರ. ಸಂ. | ವಸತಿ ಯೋಜನೆಗಳು | ನಾಗೇನಹಳ್ಳಿ(ನೀರಾವರಿ) | | | ಬೈಲುವದ್ದಿಗೆರಿ(ಒಣಭೂಮಿ) | | | ಹಿರೇಹೆಗ್ಡಾಳ್(ನೀರಾವರಿ) | | | ಉಜ್ಜಿನಿ(ಒಣಭೂಮಿ) | | |
|---|---|---|---|---|---|---|---|---|---|---|---|---|---|
| | | ಪರಿಶಿಷ್ಟರು | ಇತರೆ | ಒಟ್ಟು | ಪರಿಶಿಷ್ಟರು | ಇತರೆ | ಒಟ್ಟು | ಪರಿಶಿಷ್ಟರು | ಇತರೆ | ಒಟ್ಟು | ಪರಿಶಿಷ್ಟರು | ಇತರೆ | ಒಟ್ಟು |
| 1. | ಆಶ್ರಯ | 38 (43.18) | 50 (56.82) | 88 (100) | 13 (46.42) | 15 (53.57) | 28 (100) | 20 (62.5) | 12 (37.5) | 32 (100) | 02 (11.79) | 15 (88.21) | 17 (100) |
| 2. | ಇಂದಿರಾ ಆವಾಸಿ | 09 (52.97) | 07 (47.06) | 16 (100) | 34 (58.62) | 24 (41.38) | 58 (100) | 46 (58.97) | 32 (41.03) | 78 (100) | 15 (39.47) | 23 (60.52) | 38 (100) |
| 3. | ಅಂಬೇಡ್ಕರ್ | 22 (100) | ---- ---- | 22 (100) | 27 (100) | ---- ---- | 27 (100) | 26 (100) | ---- ---- | 26 (100) | 41 (100) | ----- ---- | 41 (100) |
| | ಒಟ್ಟು ಮನೆಗಳು | 69 (54.76) | 57 (45.24) | 126 (100) | 74 (65.49) | 39 (34.51) | 113 (100) | 92 (67.64) | 44 (32.35) | 136 (100) | 58 (60.41) | 38 (39.59) | 96 (100) |

ಸೂಚನೆ : ಪರಿಶಿಷ್ಟರು = ಒಟ್ಟು ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ಪಂಗಡದ ಕುಟುಂಬಗಳನ್ನು ಒಳಗೊಂಡಿರುತ್ತದೆ. ಆವರಣದಲ್ಲಿ ಕೊಟ್ಟಿರುವ ಶೇಕಡವಾರು ಪ್ರಮಾಣವು ಪರಿಶಿಷ್ಟರಿಗೆ ಮತ್ತು ಇತರೆ ವರ್ಗದ ಕುಟುಂಬಗಳಿಗೆ ಹಂಚಿಕೆಯಾದ ವಿವರವನ್ನು ತಿಳಿಸುತ್ತದೆ.

ಮೂಲ : ಪಂಚಾಯತ್ ಕಾರ್ಯದರ್ಶಿಗಳು, *ವಿವಿಧ ವಸತಿ ಯೋಜನೆಗಳಲ್ಲಿಯ ಫಲಾನುಭವಿಗಳ ಪಟ್ಟಿ, ಆಶ್ರಯ ಇಂದಿರಾ ಅವಾಸ್ ಮತ್ತು ಅಂಬೇಡ್ಕರ್ ವಸತಿ ಯೋಜನೆಗಳ ಫಲಾನುಭವಿಗಳ ಪಟ್ಟಿ, 1995-2000 ಪಂಚಾಯತ್ ದಾಖಲೆಗಳು*, ನಾಗೇನಹಳ್ಳಿ, ಬೈಲುವದ್ದಿಗೆರೆ, ಹಿರೇಹೆಗ್ಡಾಳ್ ಮತ್ತು ಉಜ್ಜಿನಿ : ಗ್ರಾಮ ಪಂಚಾಯತಿ ಕಚೇರಿಗಳು, 2001

## ಕೋಷ್ಟಕ -18

## ಒಟ್ಟು ಜಾತಿವಾರು ಕುಟುಂಬಗಳು ಮತ್ತು ಜಾತಿವಾರು ಹಂಚಿಕೆಯಾದ ಮನೆಗಳು 1995-2000

| ಕ್ರ. ಸಂ | ಜಾತಿ/ವರ್ಗವಾರು | ನಾಗೇನಹಳ್ಳಿ(ನೀರಾವರಿ) | | ಬೈಲುವದ್ದಿಗೆರೆ(ಒಣಭೂಮಿ) | | ಹಿರೇಹೆಗ್ಡಾಳ್(ನೀರಾವರಿ) | | ಉಜ್ಜನಿ(ಒಣಭೂಮಿ) | |
|---|---|---|---|---|---|---|---|---|---|
| | | ಕುಟುಂಬಗಳು | ಹಂಚಿಕೆಯಾದ ಮನೆಗಳು | ಕುಟುಂಬಗಳು | ಹಂಚಿಕೆಯಾದ ಮನೆಗಳು | ಕುಟುಂಬಗಳು | ಹಂಚಿಕೆಯಾದ ಮನೆಗಳು | ಕುಟುಂಬಗಳು | ಹಂಚಿಕೆಯಾದ ಮನೆಗಳು |
| 1. | ಪರಿಶಿಷ್ಟ ಜಾತಿ | 286 (29.12) | 46 (36.51) | 234 (17.94) | 51 (45.13) | 178 (22.13) | 76 (55.88) | 204 (12.28) | 36 (36.17) |
| 2. | ಪರಿಶಿಷ್ಟ ಪಂಗಡ | 147 (14.96) | 23 (18.21) | 165 (12.52) | 19 (16.82) | 47 (5.83) | 16 (11.76) | 60 (3.61) | 22 (22.34) |
| 3. | ಹಿಂದುಳಿದ ವರ್ಗ | 387 (39.41) | 20 (15.87) | 283 (21.57) | 17 (15.04) | 136 (16.92) | 22 (16.17) | 668 (40.21) | 20 (24.46) |
| 4. | ಇತರೇ ವರ್ಗಗಳು | 162 (16.50) | 37 (29.37) | 630 (48.01) | 26 (23.01) | 443 (55.10) | 22 (16.17) | 729 (43.89) | 18 (17.02) |
| 5. | ಒಟ್ಟು | 982 (100.00) | 126 (100.00) | 1312 (100.00) | 113 (100.00) | 804 (100.00) | 136 (16.91) | 1661 (100.00) | 96 (5.66) |

ಸೂಚನೆ : ಆವರಣದಲ್ಲಿರುವುದು ಒಟ್ಟು ಕುಟುಂಬಗಳನ್ನು ಮತ್ತು ವಸತಿ ಹಂಚಿಕೆಯನ್ನು ಶೇಕಡವಾರು ಪ್ರಮಾಣದಲ್ಲಿ ತಿಳಿಸುತ್ತದೆ.

ಮೂಲ : ಪಂಚಾಯತ್ ಕಾರ್ಯದರ್ಶಿಗಳು, *ವಿವಿಧ ವಸತಿ ಯೋಜನೆಗಳಲ್ಲಿಯ ಫಲಾನುಭವಿಗಳ ಪಟ್ಟಿ, ಆಶ್ರಯ ಇಂದಿರಾ ಅವಾಸ್ ಮತ್ತು ಅಂಬೇಡ್ಕರ್ ವಸತಿ ಯೋಜನೆಗಳ ಫಲಾನುಭವಿಗಳ ಪಟ್ಟಿ, 1995-2000 ಪಂಚಾಯತ್ ದಾಖಲೆಗಳು,* ನಾಗೇನಹಳ್ಳಿ, ಬೈಲುವದ್ದಿಗೆರೆ, ಹಿರೇಹೆಗ್ಡಾಳ್ ಮತ್ತು ಉಜ್ಜನಿ : ಗ್ರಾಮ ಪಂಚಾಯತಿ ಕಚೇರಿಗಳು, 2001

## ಕೋಷ್ಟಕ -19

## ಗ್ರಾಮವಾರು ಕುಟುಂಬಗಳು ಮತ್ತು ಹಂಚಿಕೆಯಾದ ವಸತಿಗಳ ವಿವರ 1995 - 2000

| ಕ್ರ. ಸಂ. | ವಿವರಗಳು | ಹೊಸಪೇಟೆ ತಾಲ್ಲೂಕು | | | | | | | | | | ಕೂಡ್ಲಿಗಿ ತಾಲ್ಲೂಕು | | | | | | |
|---|---|---|---|---|---|---|---|---|---|---|---|---|---|---|---|---|---|---|
| | | ನಾಗೇನಹಳ್ಳಿ (ನೀರಾವರಿ) | | | | | | ಬೈಲುವದ್ದಿಗೆರೆ (ಒಣಭೂಮಿ) | | | | ಹಿರೇ ಹೆಗ್ಡಾಳ್ (ನೀರಾವರಿ) | | | | ಉಜ್ಜಿನಿ (ಒಣಭೂಮಿ) | | |
| | | ನಾಗೇನಹಳ್ಳಿ | ಬಸವನದುರ್ಗ | ಚಿನಾಪುರ | ಕಾಳಘಟ್ಟ | ಬೆಳಗೋಡು | ಕಬ್ಬಿರಾಂಪುರ | ಬೈಲುವದ್ದಿಗೆರೆ | ಕಾಕುಬಾಳು | ಧರ್ಮಸಾಗರ | ಗುಂಡ್ಲವದ್ದಿಗೆರೆ | ಹಿರೇಹೆಗ್ಡಾಳ್ | ಸಾಸಲವಾಡ | ಬೊಪ್ಪಲಾಪುರ | ಸಾಣೆಹಳ್ಳಿ | ಉಜ್ಜಿನಿ | ಚಿನಕನಹಳ್ಳಿ | ಬೈರದೇವರಗುಡ್ಡ |
| 01 | ವಸತಿ ರಹಿತರು | 05 (0.97) | 05 (1.61) | --- ---- | --- ---- | ---- ---- | --- ---- | 01 (0.25) | 39 (9.38) | 13 (3.93) | 01 (0.83) | 08 (2.05) | ---- ---- | 02 (34.48) | ---- --- | 40 (3.17) | 12 (4.48) | 08 (6.15) |
| | ವಸತಿ ಹಂಚಿಕೆ | 03 (1.32) | 02 (11.76) | --- ---- | --- ---- | --- ---- | --- ---- | 01 (2.94) | 02 (6.25) | 02 (6.45) | 02 (12.50) | 04 (5.26) | --- --- | 02 (9.09) | --- ---- | 04 (6.15) | 01 (6.66) | 01 (6.25) |
| 02 | ಬಿ.ಪಿ.ಎಲ್. | 221 (43.54) | 116 (38.91) | 56 (58.33) | 13 (43.33) | 07 53.8) | 08 (50.00) | 176 (44.25) | 181 (47.72) | 103 (35.04) | 59 (50.00) | 149 (40.25) | 110 (48.03) | 39 (70.08) | 50 (39.37) | 301 (27.00) | 119 (48.00) | 59 (51.54) |
| | ವಸತಿ ಹಂಚಿಕೆ | 40 (52.63) | 01 (5.88) | --- --- | 01 (16.66) | 01 (16.66) | --- ---- | 08 (23.53) | 10 (31.25) | 07 (22.58) | 02 12.50) | 32 (42.10) | 04 (19.04) | 03 (13.63) | 11 (64.70) | 21 (32.31) | 05 (33.33) | 04 (25.00) |
| 03 | ಎ.ಪಿ.ಎಲ್. | 290 (56.20) | 190 (61.09) | 40 (41.66) | 17 (56.66) | 06 (46.15) | 08 (50.00) | 223 (55.75) | 241 (57.93) | 215 (64.95) | 60 (50.00) | 233 (59.74) | 119 (51.97) | 17 (29.31) | 77 (60.63) | 922 (73.00) | 1137 (51.11) | 63 (48.46) |
| | ವಸತಿ ಹಂಚಿಕೆ | 33 (43.42) | 14 (82.35) | 17 (10.00) | 05 (83.33) | 05 (83.33) | 04 (10.00) | 25 (73.53) | 20 (62.50) | 22 (70.97) | 12 (75.00) | 30 (39.47) | 17 (80.95) | 17 (77.27) | 06 (35.29) | 40 (61.53) | 09 (60.00 | 11 (68.75) |
| 04 | ಒಟ್ಟು ಕುಟುಂಬಗಳು | 516 (100) | 311 (100) | 96 (100) | 30 (100) | 13 (100) | 16 (100) | 400 (100) | 416 (100) | 331 (100) | 120 (100) | 390 (100) | 229 (100) | 58 (100) | 127 (100) | 1263 (100) | 268 (100) | 130 (100) |
| | ವಸತಿ ಹಂಚಿಕೆ | 76 (100) | 17 (100) | 17 (100) | 06 (100) | 06 (100) | 04 (100) | 34 (100) | 32 (100) | 31 (100) | 16 (100) | 76 (100) | 21 (100) | 22 (100) | 17 (100) | 65 (100) | 15 (100) | 16 (100) |

ಸೂಚನೆ : 1. ಬಿ.ಪಿ.ಎಲ್.= ಬಡತನ ರೇಖೆ ಕೆಳಗಿನ ಕುಟುಂಬಗಳು, 2. ಎ.ಪಿ.ಎಲ್. = ಬಡತನ ರೇಖೆ ಮೇಲಿನ ಕುಟುಂಬಗಳನ್ನು ಸೂಚಿಸುತ್ತದೆ. 3. ಆವರಣದಲ್ಲಿರುವ ಶೇಕಡವಾರು ಪ್ರಮಾಣವು ಗ್ರಾಮವಾರು ಕುಟುಂಬಗಳನ್ನು ವಸತಿ ಹಂಚಿಕೆಯನ್ನು ಸೂಚಿಸುತ್ತದೆ.

ಮೂಲ : *ಪಂಚಾಯತ್ ಕಾರ್ಯದರ್ಶಿಗಳು, ಗ್ರಾಮೀಣ ಕುಟುಂಬಗಳ ಆರ್ಥಿಕ ಸಮೀಕ್ಷೆಯ ಗ್ರಾಮವಾರು ಯಾದಿಗಳು, 1997-98 , ಬೇಡಿಕೆ ರಿಜಿಸ್ಟರ್ ಪುಸ್ತಕಗಳು ಮತ್ತು ವಿವಿಧ ವಸತಿ ಯೋಜನೆಗಳಲ್ಲಿಯ ಫಲಾನುಭವಿಗಳ ಪಟ್ಟಿ, ಆಶ್ರಯ ಇಂದಿರಾ ಆವಾಸ್ ಮತ್ತು ಅಂಬೇಡ್ಕರ್ ವಸತಿ ಯೋಜನೆಗಳ ಫಲಾನುಭವಿಗಳ ಪಟ್ಟಿ, 1995-2000* ನಾಗೇನಹಳ್ಳಿ, ಬೈಲುವದ್ದಿಗೆರೆ, ಹಿರೇಹೆಗ್ಡಾಳ ಮತ್ತು ಉಜ್ಜಿನಿ : ಗ್ರಾಮಪಂಚಾಯತ್ ಕಛೇರಿಗಳು, 2001

**ಕೋಷ್ಟಕ-19.1**

**ಗ್ರಾಮವಾರು ಕುಟುಂಬಗಳು ಮತ್ತು ಹಂಚಿಕೆಯಾದ ವಸತಿಗಳ ರೇಖಾಚಿತ್ರ 1995 - 2000**




ಮೂಲ : ಪಂಚಾಯತ್ ಕಾರ್ಯದರ್ಶಿಗಳು, *ಗ್ರಾಮೀಣ ಕುಟುಂಬಗಳ ಆರ್ಥಿಕ ಸಮೀಕ್ಷೆಯ ಗ್ರಾಮವಾರು ಯಾದಿಗಳು, 1997-98*, *ಬೇಡಿಕೆ ರಿಜಿಸ್ಟರ್ ಪುಸ್ತಕಗಳು* ಮತ್ತು *ವಿವಿಧ ವಸತಿ ಯೋಜನೆಗಳಲ್ಲಿಯ ಫಲಾನುಭವಿಗಳ ಪಟ್ಟಿ, ಆಶ್ರಯ ಇಂದಿರಾ ಆವಾಸ್ ಮತ್ತು ಅಂಬೇಡ್ಕರ್ ವಸತಿ ಯೋಜನೆಗಳ ಫಲಾನುಭವಿಗಳ ಪಟ್ಟಿ, 1995-2000* ನಾಗೇನಹಳ್ಳಿ, ಬೈಲುವದ್ದಿಗೆರೆ, ಹಿರೇಹೆಗ್ನಾಳ ಮತ್ತು ಉಜ್ಜಿನಿ : ಗ್ರಾಮಪಂಚಾಯತ್ ಕಛೇರಿಗಳು, 2001

## ಕೋಷ್ಟಕ -20

## ಗ್ರಾಮಪಂಚಾಯತಿವಾರು ವಿವಿಧ ವಸತಿ ಯೋಜನೆಯಡಿಯಲ್ಲಿ ಹಂಚಿಕೆಯಾದ ವಸತಿಗಳ ಕುಟುಂಬವಾರು ವಿವರ 1995-2000

| ಕ್ರ. ಸಂ. | ವಿವರಗಳು | ನಾಗೇನಹಳ್ಳಿ(ನೀರಾವರಿ) | | ಬೈಲುವದ್ದಿಗೆರೆ (ಒಣಭೂಮಿ) | | ಹಿರೇಹೆಗ್ಡಾಳ್(ನೀರಾವರಿ) | | ಉಜ್ಜನಿ(ಒಣಭೂಮಿ) | |
|---|---|---|---|---|---|---|---|---|---|
| | | ಕುಟುಂಬಗಳು | ಹಂಚಿಕೆ | ಕುಟುಂಬಗಳು | ಹಂಚಿಕೆ | ಕುಟುಂಬಗಳು | ಹಂಚಿಕೆ | ಕುಟುಂಬಗಳು | ಹಂಚಿಕೆ |
| 1 | ವಸತಿ ಹೀನ ಕುಟುಂಬಗಳು | 10 (1.02) | 05 (3.97) | 54 (4.16) | 07 (6.19) | 08 (0.91) | 06 (4.41) | 60 (3.12) | 06 (6.31) |
| 2. | ಬಿ.ಪಿ.ಎಲ್ ಕುಟುಂಬಗಳು | 421 (42.87) | 43 (34.12) | 519 (39.56) | 27 (23.89) | 380 (43.53) | 50 (36.76) | 479 (28.83) | 30 (31.25) |
| 3. | ಎ.ಪಿ.ಎಲ್ ಕುಟುಂಬಗಳು | 551 (56.12) | 78 (61.90) | 739 (56.33) | 79 (69.91) | 446 (55.48) | 80 (58.82) | 1122 (47.55) | 60 (62.50) |
| | ಒಟ್ಟು ಕುಟುಂಬಗಳು | 982 (100.00) | 126 (100.00) | 1312 (100.00) | 113 (100.00) | 804 (100.00) | 136 (100.00) | 1661 (100.00) | 96 (100.00) |

ನಾಗೇನಹಳ್ಳಿ(ನೀರಾವರಿ)




ಬೈಲುವದ್ದಿಗೆರೆ(ಒಣಭೂಮಿ)




ಹಿರೇಹೆಗ್ಡಾಳ್(ನೀರಾವರಿ)




ಉಜ್ಜನಿ(ಒಣಭೂಮಿ)




ಸೂಚನೆ : 1. ಬಿ.ಪಿ.ಎಲ್.= ಬಡತನ ರೇಖೆ ಕೆಳಗಿನ ಕುಟುಂಬಗಳು, 2. ಎ.ಪಿ.ಎಲ್. = ಬಡತನ ರೇಖೆ ಮೇಲಿನ ಕುಟುಂಬಗಳನ್ನು ಸೂಚಿಸುತ್ತದೆ. 3. ಆವರಣದಲ್ಲಿರುವ ಶೇಕಡವಾರು ಪ್ರಮಾಣವು ಪಂಚಾಯತಿವಾರು ಕುಟುಂಬಗಳ ವಸತಿ ಹಂಚಿಕೆಯನ್ನು ಸೂಚಿಸುತ್ತದೆ.

ಮೂಲ : *ಪಂಚಾಯತ್ ಕಾರ್ಯದರ್ಶಿಗಳು, ಗ್ರಾಮೀಣ ಕುಟುಂಬಗಳ ಆರ್ಥಿಕ ಸಮೀಕ್ಷೆಯ ಗ್ರಾಮವಾರು ಯಾದಿಗಳು, 1997-98 , ಬೇಡಿಕೆ ರಿಜಿಸ್ಟರ್ ಪುಸ್ತಕಗಳು* ಮತ್ತು *ವಿವಿಧ ವಸತಿ ಯೋಜನೆಗಳಲ್ಲಿಯ ಫಲಾನುಭವಿಗಳ ಪಟ್ಟಿ, ಆಶ್ರಯ ಇಂದಿರಾ ಆವಾಸ್ ಮತ್ತು ಅಂಬೇಡ್ಕರ್ ವಸತಿ ಯೋಜನೆಗಳ ಫಲಾನುಭವಿಗಳ ಪಟ್ಟಿ, 1995-2000* ನಾಗೇನಹಳ್ಳಿ, ಬೈಲುವದ್ದಿಗೆರೆ, ಹಿರೇಹೆಗ್ಡಾಳ ಮತ್ತು ಉಜ್ಜನಿ : ಗ್ರಾಮಪಂಚಾಯತ್ ಕಛೇರಿಗಳು, 2001

## ಕೋಷ್ಟಕ-21

## ಗ್ರಾಮೀಣ ವಸತಿ ಯೋಜನೆ ಕುರಿತು ಗ್ರಾಮೀಣ ಜನತೆಯ ಜಾತಿವಾರು ಅಭಿಪ್ರಾಯ

| ಕ್ರ. ಸಂ. | ಜಾತಿಗಳು | ನಾಗೇನಹಳ್ಳಿ(ನೀರಾವರಿ) | | | | ಬೈಲುವದ್ದಿಗೆರೆ(ಒಣಭೂಮಿ) | | | | ಹಿರೇಹೆಗ್ನಾಳ್(ನೀರಾವರಿ) | | | | ಉಜ್ಜಿನಿ(ಒಣಭೂಮಿ) | | | |
|---|---|---|---|---|---|---|---|---|---|---|---|---|---|---|---|---|---|
| | | ತೃಪ್ತಿಕರ | ಸರಿಇಲ್ಲ | ಗೊತ್ತಿಲ್ಲ | ಒಟ್ಟು | ತೃಪ್ತಿಕರ | ಸರಿಇಲ್ಲ | ಗೊತ್ತಿಲ್ಲ | ಒಟ್ಟು | ತೃಪ್ತಿಕರ | ಸರಿಇಲ್ಲ | ಗೊತ್ತಿಲ್ಲ | ಒಟ್ಟು | ತೃಪ್ತಿಕರ | ಸರಿಇಲ್ಲ | ಗೊತ್ತಿಲ್ಲ | ಒಟ್ಟು |
| 1. | ಪರಿಶಿಷ್ಟ ಜಾತಿ | 05 (1.86) | 10 (37.71) | 13 (46.43) | 28 (100) | 04 (16.66) | 10 (41.67) | 10 (41.67) | 24 (100) | 08 (44.44) | 04 (22.22) | 06 (33.34) | 18 (100) | 04 (18.18) | 10 (45.45) | 08 (36.36) | 22 (100) |
| 2. | ಪರಿಶಿಷ್ಟ ಪಂಗಡ | 02 (12.50) | 06 (37.50) | 08 (50.00) | 16 (100) | 02 (12.50) | 06 (37.50) | 08 (50.00) | 16 (100) | 03 (50.00) | 02 (33.33) | 01 (16.64) | 06 (100) | 02 (33.33) | 02 (33.33) | 02 (33.34) | 06 (100) |
| 3. | ಹಿಂದುಳಿದವರ್ಗ | 10 (26.31) | 14 (36.84) | 14 (36.84) | 38 (100) | 06 (21.43) | 10 (35.71) | 12 (42.86) | 28 (100) | 08 (57.14) | 02 (14.29) | 04 (28.57) | 14 (100) | 10 (14.71) | 28 (41.18) | 30 (44.12) | 68 (100) |
| 4. | ಇತರೇ ವರ್ಗ | 09 (5.00) | 05 (27.78) | 04 (22.22) | 18 (100) | 08 (12.50) | 30 (46.88) | 26 (40.63) | 64 (100) | 14 (31.82) | 10 (22.73) | 20 (45.45) | 44 (100) | 12 (17.14) | 28 (40.00) | 30 (42.86) | 70 (100) |
| | ಒಟ್ಟು | 26 (26.00) | 35 (35.00) | 39 (39.00) | 100 (100) | 20 (15.15) | 56 (42.42) | 56 (42.42) | 132 (100) | 33 (40.24) | 18 (21.95) | 31 (37.80) | 82 (100) | 28 (16.87) | 68 (40.96) | 70 (42.17) | 166 (100) |

ನಾಗೇನಹಳ್ಳಿ(ನೀರಾವರಿ)




ಬೈಲುವದ್ದಿಗೆರೆ(ಒಣಭೂಮಿ)




ಹಿರೇಹೆಗ್ನಾಳ್(ನೀರಾವರಿ)




ಉಜ್ಜಿನಿ(ಒಣಭೂಮಿ)




ಸೂಚನೆ : ಆವರಣದಲ್ಲಿರುವ ಶೇಕಡ ಪ್ರಮಾಣವು ಜಾತಿವಾರು ಜನತೆಯ ಅಭಿಪ್ರಾಯವನ್ನು ತಿಳಿಸುತ್ತದೆ. ಮೂಲ :ಪ್ರಾಥಮಿಕ ಮಾಹಿತಿ,

## ಕೋಷ್ಟಕ -22

## ಗ್ರಾಮಪಂಚಾಯತಿವಾರು ಜವಾಹರ್ ಗ್ರಾಮಸಮೃದ್ಧಿ ಯೋಜನೆಯ ವೆಚ್ಚದ ವಿವರ 1995-2000 (ರೂ.ಗಳಲ್ಲಿ)

| ಕ್ರ. ಸಂ. | ವರ್ಷ | ನಾಗೇನಹಳ್ಳಿ (ನೀರಾವರಿ) | | | ಬೈಲುವದ್ದಿಗೆರೆ (ಒಣಭೂಮಿ) | | | ಹಿರೇಹೆಗ್ಡಾಳ್(ನೀರಾವರಿ) | | | ಉಜ್ಜಿನಿ(ಒಣಭೂಮಿ) | | |
|---|---|---|---|---|---|---|---|---|---|---|---|---|---|
| | | ಕಾಮಗಾರಿಗಳು 52.5% | ಸಾಮಾಜಿಕ ಅರಣ್ಯ 25% | ಪ.ಜಾತಿ/ಪಂಗಡ 22.5% | ಕಾಮಗಾರಿಗಳು 52.5% | ಸಾಮಾಜಿಕ ಅರಣ್ಯ 25% | ಪ.ಜಾತಿ/ಪಂಗಡ 22.5% | ಕಾಮಗಾರಿಗಳು 52.5% | ಸಾಮಾಜಿಕ ಅರಣ್ಯ 25% | ಪ.ಜಾತಿ/ಪಂಗಡ 22.5% | ಕಾಮಗಾರಿಗಳು 52.5% | ಸಾಮಾಜಿಕ ಅರಣ್ಯ 25% | ಪ.ಜಾತಿ/ಪಂಗಡ 22.5% |
| 1. | 1995-96 | 166320 | 79200 | 71280 | 98017 | 46675 | 42007 | 72450 | 34500 | 31050 | 123612 | 58863 | 52976 |
| 2. | 1996-97 | 195507 | 93575 | 84217 | 92341 | 43972 | 39575 | 80850 | 38500 | 34650 | 147449 | 70214 | 63192 |
| 3. | 1997-98 | 198240 | 94440 | 84960 | 40743 | 19401 | 17461 | 88725 | 42250 | 38025 | 104350 | 49694 | 44724 |
| 4. | 1998-99 | 112260 | 53457 | 48111 | 119017 | 56675 | 51007 | 74655 | 35550 | 31995 | 123340 | 58737 | 52863 |
| 5. | 1999-00 | 147420 | 70200 | 63180 | 90300 | 43000 | 38700 | 71137 | 33875 | 30487 | 114462 | 54506 | 49054 |
| | ಒಟ್ಟು | 820747 | 390833 | 351749 | 447468 | 213080 | 191772 | 387817 | 184675 | 166207 | 613229 | 292014 | 262809 |
| | ಮೊತ್ತ | 1563328-00 | | | 852320-00 | | | 738700-00 | | | 1168053-00 | | |

ಮೂಲ : ಪಂಚಾಯತಿ ಕಾರ್ಯದರ್ಶಿಗಳು, *ಜವಾಹರ್ ರೋಜಗಾರ್ ಯೋಜನೆ 1995 ರಿಂದ 2000 ಸಾಲಿನ ಲೆಕ್ಕಪರಿಶೋಧನಾ ವರದಿಗಳು,* ನಾಗೇನಹಳ್ಳಿ, ಬೈಲುವದ್ದಿಗೆರೆ, ಹಿರೇಹೆಗ್ಡಾಳ್ ಮತ್ತು ಉಜ್ಜಿನಿ : ಗ್ರಾಮ ಪಂಚಾಯತ್ ಕಚೇರಿಗಳು, 2001

## ಕೋಷ್ಟಕ -23

### ಗ್ರಾಮಪಂಚಾಯತಿವಾರು ಜವಾಹರ್ ಗ್ರಾಮಸಮೃದ್ಧಿ ಯೋಜನೆಯ ಅನುಷ್ಠಾನದ ವಿವರ 1995-2000 (ರೂ.ಗಳಲ್ಲಿ)

| ಕ್ರ. ಸಂ. | ವರ್ಷ | ನಾಗೇನಹಳ್ಳಿ (ನೀರಾವರಿ) | | | ಬೈಲುವದ್ದಿಗೆರೆ (ಒಣಭೂಮಿ) | | | ಹಿರೇಹೆಗ್ಡಾಳ್ (ನೀರಾವರಿ) | | | ಉಜ್ಜಿನಿ (ಒಣಭೂಮಿ) | | |
|---|---|---|---|---|---|---|---|---|---|---|---|---|---|
| | | ಭೌತಿಕಗುರಿ | ಸಾಧನೆ | ಮಾನವ ದಿನಗಳು | ಭೌತಿಕಗುರಿ | ಸಾಧನೆ | ಮಾನವ ದಿನಗಳು | ಭೌತಿಕಗುರಿ | ಸಾಧನೆ | ಮಾನವ ದಿನಗಳು | ಭೌತಿಕಗುರಿ | ಸಾಧನೆ | ಮಾನವ ದಿನಗಳು |
| 01 | 1995-96 | 316800-00 | 316800-00 | 2650 | 186700-00 | 186700-00 | 1285 | 138000-00 | 138000-00 | 1440 | 235450-00 | 235450-00 | 1014 |
| 02 | 1996-97 | 374300-00 | 374300-00 | 3144 | 181000-00 | 175889-00 | 2112 | 154000-00 | 154000-00 | 880 | 280856-00 | 280856-00 | 1109 |
| 03 | 1997-98 | 377600-00 | 377600-00 | 3171 | 149000-00 | 77606-00 | 1112 | 169000-00 | 169000-00 | 1400 | 198777-85 | 198777-85 | 819 |
| 04 | 1998-99 | 213829-00 | 213829-00 | 2518 | 238600-00 | 236700-00 | 4600 | 142200-00 | 142200-00 | 1836 | 234948-00 | 234948-00 | 783 |
| 05 | 1999-00 | 280800-00 | 280800-00 | 2358 | 184600-00 | 172000-00 | 2104 | 135500-00 | 135500-00 | 1997 | 218022-00 | 218022-00 | 1567 |
| 06 | ಒಟ್ಟು | 1563329-00 (100-00) | 1563329-00 (100-00) | 13841 | 939900-00 (90.68) | 852321-00 (100-00) | 11213 | 738700-00 (100.00) | 738700-00 (100-00) | 7553 | 1168053-85 (100.00) | 168053-85 (100-00) | 5192 |

ಸೂಚನೆ : ಮಾನವ ದಿನ ಸರ್ಕಾರವು ದುಡಿಮೆಯನ್ನು ಕಲ್ಪಿಸಿದ ದಿನಗಳನ್ನು ಮಾನವ ದಿನಗಳೆಂದು ಕರೆಯಲಾಗುತ್ತದೆ. ಪ್ರತಿವರ್ಷದ ಪಂಚಾಯಿತಿ ಕಲ್ಪಿಸಿದ ಮಾನವ ದಿನಗಳನ್ನು ತಿಳಿಸಲಾಗಿದೆ.

ಮೂಲ : ಪಂಚಾಯತಿ ಕಾರ್ಯದರ್ಶಿಗಳು, *ಜವಾಹರ್ ರೋಜಗಾರ್ ಯೋಜನೆ 1995 ರಿಂದ 2000 ಸಾಲಿನ ಲೆಕ್ಕಪರಿಶೋಧನಾ ವರದಿಗಳು,* ನಾಗೇನಹಳ್ಳಿ, ಬೈಲುವದ್ದಿಗೆರೆ, ಹಿರೇಹೆಗ್ಡಾಳ್ ಮತ್ತು ಉಜ್ಜಿನಿ : ಗ್ರಾಮ ಪಂಚಾಯತ್ ಕಚೇರಿಗಳು, 2001

## ಕೋಷ್ಟಕ -24

## ಜವಾಹರ್ ಗ್ರಾಮ ಸಮೃದ್ಧಿ ಯೋಜನೆಯ ಬಗ್ಗೆ ಗ್ರಾಮೀಣ ಜನತೆಯ ಜಾತಿವಾರು ಅಭಿಪ್ರಾಯ ಗ್ರಾಮಪಂಚಾಯಿತಿವಾರು

| ಕ್ರ. ಸಂ. | ಜಾತಿ/ವರ್ಗವಾರು | ನಾಗೇನಹಳ್ಳಿ (ನೀರಾವರಿ) | | | | ಬೈಲುವದ್ದಿಗೆರೆ (ಒಣಭೂಮಿ) | | | | ಹಿರೇಹೆಗ್ಡಾಳ್ (ನೀರಾವರಿ) | | | | ಉಜ್ಜಿನಿ (ಒಣಭೂಮಿ) | | | |
|---|---|---|---|---|---|---|---|---|---|---|---|---|---|---|---|---|---|
| | | ಸಿಕ್ಕಿದೆ | ಗೊತ್ತಿದೆ | ಗೊತ್ತಿಲ್ಲ | ಒಟ್ಟು | ಸಿಕ್ಕಿದೆ | ಗೊತ್ತಿದೆ | ಗೊತ್ತಿಲ್ಲ | ಒಟ್ಟು | ಸಿಕ್ಕಿದೆ | ಗೊತ್ತಿದೆ | ಗೊತ್ತಿಲ್ಲ | ಒಟ್ಟು | ಸಿಕ್ಕಿದೆ | ಗೊತ್ತಿದೆ | ಗೊತ್ತಿಲ್ಲ | ಒಟ್ಟು |
| 01 | ಪರಿಶಿಷ್ಟ ಜಾತಿ | 10 (35.71) | 04 (14.29) | 14 (50.00) | 28 (100) | 11 (45.83) | 02 (8.34) | 11 (45.83) | 24 (100) | 11 (61.11) | 02 (11.11) | 05 (27.78) | 18 (100) | 05 (22.33) | 05 (22.33) | 12 (54.54) | 22 (100) |
| 02 | ಪರಿಶಿಷ್ಟ ಪಂಗಡ | 05 (31.26) | 06 (37.27) | 05 (31.26) | 16 (100) | 04 (25.00) | 04 (25.00) | 08 (50.00) | 16 (100) | 03 (50.00) | 02 (33.34) | 01 (16.66) | 06 (100) | 01 (16.66) | 02 (33.34) | 03 (50.00) | 06 (100) |
| 03 | ಹಿಂದುಳಿದ ವರ್ಗ | 05 (13.16) | 09 (23.68) | 24 (63.16) | 38 (100) | 03 (10.71) | 06 (21.43) | 19 (67.86) | 28 (100) | 05 (35.71) | 05 (35.71) | 04 (28.57) | 14 (100) | 06 (8.82) | 10 (14.71) | 52 (76.47) | 68 (100) |
| 04 | ಇತರೆ ವರ್ಗ | 01 (5.56) | 08 (44.44) | 09 (50.00) | 18 (100) | 03 (4.69) | 05 (7.81) | 46 (71.86) | 64 (100) | 04 (9.09) | 20 (45.45) | 20 (45.46) | 44 (100) | 03 (4.29) | 25 (35.71) | 42 (60.00) | 70 (100) |
| | ಒಟ್ಟು | 21 (21.00) | 27 (27.00) | 52 (52.00) | 100 (100) | 21 (15.90) | 27 (20.45) | 84 (63.63) | 132 (100) | 23 (28.05) | 29 (35.37) | 20 (24.39) | 82 (100) | 15 (9.50) | 42 (23.30) | 109 (65.66) | 166 (100) |

ನಾಗೇನಹಳ್ಳಿ(ನೀರಾವರಿ)




ಬೈಲುವದ್ದಿಗೆರೆ(ಒಣಭೂಮಿ)




ಹಿರೇಹೆಗ್ಡಾಳ್(ನೀರಾವರಿ)




ಉಜ್ಜಿನಿ(ಒಣಭೂಮಿ)




ಸೂಚನೆ : ಆವರಣದಲ್ಲಿರುವುದು ಗ್ರಾಮೀಣ ಜನತೆಯ ಶೇಕಡವಾರು ಅಭಿಪ್ರಾಯವನ್ನು ತಿಳಿಸುತ್ತದೆ. ಮೂಲ : ಪ್ರಾಥಮಿಕ ಮಾಹಿತಿ

## ಕೋಷ್ಟಕ -25

### ಗ್ರಾಮಪಂಚಾಯತಿಗಳ ಗ್ರಾಮಗಳಲ್ಲಿನ ಶೈಕ್ಷಣಿಕ ಸೌಲಭ್ಯಗಳ ವಿವರ 2001- 02

| ಕ್ರ. ಸಂ. | ವಿವರಗಳು | ಹೋಸಪೇಟೆ ತಾಲ್ಲೂಕು | | | | | | | | ಕೂಡ್ಲಿಗಿ ತಾಲ್ಲೂಕು | | | | | | |
|---|---|---|---|---|---|---|---|---|---|---|---|---|---|---|---|---|
| | | ನಾಗೇನಹಳ್ಳಿ (ನೀರಾವರಿ) | | | | ಬೈಲುವದ್ದಿಗೆರೆ (ಒಣಭೂಮಿ) | | | | ಹಿರೇ ಹೆಗ್ಡಾಳ್(ನೀರಾವರಿ) | | | | ಉಜ್ಜಿನಿ (ಒಣಭೂಮಿ) | | |
| | | ನಾಗೇನಹಳ್ಳಿ | ಬಸವನದುರ್ಗ | ಚಿನಾಪುರ | ಕಾಳಘಟ್ಟ | ಬೈಲುವದ್ದಿಗೆರೆ | ಕಾಕುಬಾಳು | ಧರ್ಮಸಾಗರ | ಗುಂಡ್ಲುವದ್ದಿಗೆರೆ | ಹಿರೇಹೆಗ್ಡಾಳ್ | ಸಾಕಲವಾಡಿ | ಬೊಮ್ಮಲಾಪುರ | ಸಾಣೇಹಳ್ಳಿ | ಉಜ್ಜಿನಿ | ಚಿಕನಹಳ್ಳಿ | ಬೋರನಗುಡ್ಡ |
| ೦೧ | ತರಗತಿ | 1-7 | 1-7 | 1-5 | 1-5 | 1-7 | 1-7 | 1-6 | 1-7 | 1-10 | 1-7 | 1-7 | 1-5 | 1-12 | 1-6 | 1-6 |
| ೦೨ | ವಿದ್ಯಾರ್ಥಿಗಳು | 408 | 267 | 86 | 54 | 260 | 283 | 205 | 151 | 384 | 307 | 133 | 46 | 1575 | 231 | 131 |
| ೦೩ | ಶಿಕ್ಷಕರು | 09 | 06 | 01 | 02 | 06 | 07 | 05 | 03 | 07 | 05 | 06 | 02 | 32 | 05 | 03 |
| ೦೪ | ವಿದ್ಯಾರ್ಥಿಗಳ ಶಿಕ್ಷಕ ಅನುಪಾತ (Ratio) | 45:1 | 44:1 | 86:1 | 27:1 | 43:1 | 40:1 | 41:1 | 50:1 | 54:1 | 27:1 | 51:1 | 23:1 | 49:1 | 46:1 | 43:1 |
| ೦೫ | ಶಿಕ್ಷಕರ ವಾಸ | 02 | 02 | ---- | --- | 02 | 03 | 01 | 03 | 02 | 01 | ---- | ---- | 20 | ---- | ---- |
| ೦೬ | ಕಾಂಪೌಂಡ್ | ಇದೆ | ಇಲ್ಲ | ಇಲ್ಲ | ಇಲ್ಲ | ಇಲ್ಲ | ಇಲ್ಲ | ಇದೆ | ಇಲ್ಲ | ಇದೆ | ಇದೆ | ಇಲ್ಲ | ಇಲ್ಲ | ಅ.ಇ. | ಇದೆ | ಇಲ್ಲ |
| ೦೭ | ಕೊಠಡಿಗಳು | 07 | 07 | 05 | 04 | 09 | 07 | 06 | 04 | 09 | 07 | 04 | 04 | 32 | 04 | 03 |
| ೦೮ | ಕುಡಿಯುವ ನೀರು | ಇದೆ | ಇದೆ | ಇದೆ | ಇದೆ | ಇದೆ | ಇಲ್ಲ | ಇದೆ | ಇಲ್ಲ | ಇದೆ | ಇದೆ | ಇಲ್ಲ | ಇಲ್ಲ | ಅ.ಇ. | ಇಲ್ಲ | ಇಲ್ಲ |
| ೦೯ | ಶೌಚಾಲಯ | ಇದೆ | ಇಲ್ಲ | ಇಲ್ಲ | ಇಲ್ಲ | ಇದೆ | ಇಲ್ಲ | ಇದೆ | ಇಲ್ಲ | ಇದೆ | ಇಲ್ಲ | ಇಲ್ಲ | ಇಲ್ಲ | ಅ.ಇ. | ಇಲ್ಲ | ಇಲ್ಲ |
| ೧೦ | ನಿರಂತರ ಶಿಕ್ಷಣಕೇಂದ್ರ | ಇದೆ | ಇದೆ | ಇಲ್ಲ | ಇಲ್ಲ | ಇದೆ | ಇದೆ | ಇದೆ | ಇದೆ | ಇಲ್ಲಾ | ಇದೆ | ಇದೆ | ಇಲ್ಲ | ಇದೆ | ಇಲ್ಲ | ಇಲ್ಲ |
| ೧೧ | ಗ್ರಂಥಾಲಯ | ಇದೆ | ಇಲ್ಲ | ಇಲ್ಲ | ಇಲ್ಲ | ಇದೆ | ಇಲ್ಲ | ಇಲ್ಲ | ಇಲ್ಲ | ಇದೆ | ಇಲ್ಲ | ಇದೆ | ಇಲ್ಲ | ಇದೆ | ಇಲ್ಲ | ಇಲ್ಲ |
| ೧೨ | ಅಂಗನವಾಡಿ | 03 | 01 | 01 | ಇಲ್ಲ | 02 | 02 | 01 | 01 | 02 | 01 | 01 | ಇಲ್ಲ | 02 | 01 | ಇಲ್ಲ |

ಸೂಚನೆ : ಅ.ಇ. ಅನ್ವಯಿಸುವುದಿಲ್ಲ. ಉಜ್ಜಿನಿಯಲ್ಲಿ ಹೆಚ್ಚು ಶಾಲೆಗಳಿರುವುದರಿಂದ ಶಾಲೆಗಳ ಮೂಲಭೂತ ಸೌಲಭ್ಯಗಳ ಬಗ್ಗೆ ತಿಳಿಸಿರುವುದಿಲ್ಲ. ವಿದ್ಯಾರ್ಥಿಗಳ ದಾಖಲಾತಿ ಮತ್ತು ಶಾಲಾ ಬಿಟ್ಟವರ ಸಂಖ್ಯೆಯನ್ನು ಒಂದರಿಂದ ಏಳನೇ ತರಗತಿಯ ವಿದ್ಯಾರ್ಥಿಗಳನ್ನು ಮಾತ್ರ ಪರಿಗಣಿಸಲಾಗಿದೆ.

ಮೂಲ : ಗ್ರಾಮಪಂಚಾಯತಿಯ ವ್ಯಾಪ್ತಿಯಲ್ಲಿ ಎಲ್ಲಾ ಗ್ರಾಮಗಳಲ್ಲಿಯ ಶಾಲಾ ಮುಖ್ಯೋಪಾಧ್ಯಾಯರಿಂದ ಪಡೆಯಲಾಗಿದೆ. 2001

## ಕೋಷ್ಟಕ-25.1

### ರಾಜ್ಯ, ಜಿಲ್ಲಾ ಮತ್ತು ತಾಲ್ಲೂಕಿಗೆ ಹೋಲಿಸಿ ಗ್ರಾಮಪಂಚಾಯತಿಗಳಲ್ಲಿ ವಿದ್ಯಾರ್ಥಿಗಳ ಮತ್ತು ಶಿಕ್ಷಕರ ಅನುಪಾತ(Ratio) 2001

| ಕ್ರ. ಸಂ. | ವಿವರಗಳು | ಗ್ರಾ.ಪಂ. ನಾಗೇನಹಳ್ಳಿ (ನೀರಾವರಿ) | ಗ್ರಾ.ಪಂ. ಬೈಲುವದ್ದಿಗೆರೆ (ಒಣಭೂಮಿ) | ತಾಲೂಕು ಹೊಸಪೇಟೆ (ನೀರಾವರಿ) | ಗ್ರಾ.ಪಂ. ಹಿರೇಹೆಗ್ಡಾಳ್ (ನೀರಾವರಿ) | ಗ್ರಾ.ಪಂ. ಉಜ್ಜಿನಿ (ಒಣಭೂಮಿ) | ತಾಲೂಕು ಕೂಡ್ಲಿಗಿ (ಒಣಭೂಮಿ) | ಜಿಲ್ಲೆ ಬಳ್ಳಾರಿ | ರಾಜ್ಯ ಕರ್ನಾಟಕ |
|---|---|---|---|---|---|---|---|---|---|
| 1. | ವಿದ್ಯಾರ್ಥಿಗಳ ಮತ್ತು ಶಿಕ್ಷಕ ಅನುಪಾತ(Ratio) | 50:1 | 51:1 | 40:1 | 46:1 | 50:1 | 38:1 | 42:1 | 34:1 |




ಮೂಲ : 1. *ಗವರ್ನ್‌ಮೆಂಟ್ ಆಫ್ ಕರ್ನಾಟಕ, ಹೈ ಪವರ್ ಕಮಿಟಿ ಫಾರ್ ರಿ ಅಡ್ರೆಸೆಲ್ ಆಫ್ ರೀಜನಲ್ ಇಂಬ್ಯಾಲೆನ್ಸ್ ಫೈನಲ್ ರಿಪೋರ್ಟ್, ಪಾರ್ಟ್-VII ಅಪೆಂಡಿಕ್ಸ್,* ಜೂನ್ 2002, ಬೆಂಗಳೂರು: 2002

2. *ಗ್ರಾಮಪಂಚಾಯತಿಯ ವ್ಯಾಪ್ತಿಯಲ್ಲಿ ಎಲ್ಲಾ ಗ್ರಾಮಗಳಲ್ಲಿಯ ಶಾಲಾ ಮುಖ್ಯೋಪಾಧ್ಯಾಯರಿಂದ ಪಡೆಯಲಾಗಿದೆ.* ನಾಗೇನಹಳ್ಳಿ, ಬೈಲುವದ್ದಿಗೆರೆ, ಹಿರೇಹೆಗ್ಡಾಳ್ ಮತ್ತು ಉಜ್ಜಿನಿ : ಪಂಚಾಯತಿಗಳು, 2001

## ಕೋಷ್ಟಕ -26

## ಗ್ರಾಮಪಂಚಾಯತಿವಾರು ವಿದ್ಯಾರ್ಥಿಗಳ ದಾಖಲಾತಿ ಮತ್ತು ಶಾಲೆಬಿಟ್ಟವರ (Drop-out)ವಿವರ 1997-2002

| ಕ್ರ. ಸಂ. | ವರ್ಷ | ನಾಗೇನಹಳ್ಳಿ(ನೀರಾವರಿ) | | | ಬೈಲುವದ್ದಿಗೇರೆ(ಒಣಭೂಮಿ) | | | ಹಿರೇಹೆಗ್ದಾಳ್(ನೀರಾವರಿ) | | | ಉಜ್ಜನಿ(ಒಣಭೂಮಿ) | | |
|---|---|---|---|---|---|---|---|---|---|---|---|---|---|
| | | ಬಾಲಕರು | ಬಾಲಕಿಯರು | ಒಟ್ಟು | ಬಾಲಕರು | ಬಾಲಕಿಯರು | ಒಟ್ಟು | ಬಾಲಕರು | ಬಾಲಕಿಯರು | ಒಟ್ಟು | ಬಾಲಕರು | ಬಾಲಕಿಯರು | ಒಟ್ಟು |
| 01 | 1997-98 ದಾಖಲಾತಿ | 421 | 373 | 794 | 552 | 487 | 1039 | 448 | 398 | 846 | 930 | 908 | 1838 |
| | ಶಾಲೆ ಬಿಟ್ಟವರು (Drop-out) | 49 (11.64) | 47 (12.60) | 96 (12.09) | 85 15.40) | 74 (15.20) | 159 (15.30) | 35 (7.81) | 36 (9.04) | 71 (8.39) | 90 (9.67) | 98 (10.79) | 188 (10.22) |
| 02 | 1998-99 ದಾಖಲಾತಿ | 514 | 443 | 957 | 576 | 532 | 1108 | 459 | 405 | 864 | 951 | 919 | 1870 |
| | ಶಾಲೆ ಬಿಟ್ಟವರು (Drop-out) | 60 (11.67) | 42 (9.48) | 102 (10.66) | 70 (12.15) | 70 (13.16) | 140 (12.64) | 32 (6.97) | 30 (7.40) | 62 (7.18) | 92 (9.67) | 86 (9.35) | 178 (9.52) |
| 03 | 1999-2000 ದಾಖಲಾತಿ | 549 | 504 | 1053 | 597 | 514 | 1111 | 461 | 416 | 877 | 960 | 924 | 1884 |
| | ಶಾಲೆ ಬಿಟ್ಟವರು (Drop-out) | 58 (10.56) | 56 (11.11) | 111 (10.54) | 62 (10.39) | 64 (12.45) | 126 (11.34) | 26 (5.64) | 27 (6.49) | 53 (6.04) | 90 (9.38) | 85 (9.19) | 175 (9.28) |
| 04 | 2000-2001 ದಾಖಲಾತಿ | 452 | 411 | 863 | 560 | 531 | 1091 | 472 | 425 | 897 | 977 | 936 | 1913 |
| | ಶಾಲೆ ಬಿಟ್ಟವರು (Drop-out) | 54 (11.94) | 22 (5.35) | 76 (8.81) | 76 (13.57) | 89 (16.76) | 165 (15.12) | 28 (5.93) | 29 (6.82) | 57 (6.35) | 92 (9.41) | 90 (9.61) | 182 (9.51) |
| 05 | 2001-2002 ದಾಖಲಾತಿ | 458 | 456 | 914 | 570 | 512 | 1082 | 484 | 437 | 921 | 988 | 949 | 1937 |
| | ಶಾಲೆ ಬಿಟ್ಟವರು (Drop-out) | 19 (4.15) | 17 (3.72) | 36 (3.94) | 31 (5.44) | 54 (10.56) | 85 (7.86) | 25 (5.16) | 26 (5.94) | 51 (5.53) | 78 (7.89) | 72 (7.58) | 150 (7.74) |

ಸೂಚನೆ : ಆವರಣದಲ್ಲಿರುವುದು ವಿದ್ಯಾರ್ಥಿಗಳ ಮಧ್ಯದಲ್ಲಿ ಶಾಲಾ ಬಿಟ್ಟವರ ಶೇಕಡವಾರು ಪ್ರಮಾಣವನ್ನು ಸೂಚಿಸುತ್ತದೆ. 2001-02 ರ ವಾರ್ಷಿಕ ವರ್ಷದಲ್ಲಿ ಶಾಲೆ ಬಿಟ್ಟವರ ಪ್ರಮಾಣವನ್ನು ಆಗಸ್ಟ್ ತಿಂಗಳವರೆಗೆ ಮಾತ್ರ ಲಭ್ಯವಿದೆ.

ಮೂಲ : ಗ್ರಾಮಪಂಚಾಯತಿಯ ವ್ಯಾಪ್ತಿಯಲ್ಲಿ ಎಲ್ಲಾ ಗ್ರಾಮಗಳಲ್ಲಿಯ ಶಾಲಾ ಮುಖ್ಯೋಪಾಧ್ಯಾಯರಿಂದ ಪಡೆಯಲಾಗಿದೆ. 2001

## ಕೋಷ್ಟಕ 26.1

ಗ್ರಾಮಪಂಚಾಯತಿವಾರು ವಿದ್ಯಾರ್ಥಿಗಳ ದಾಖಲಾತಿ ಮತ್ತು ಶಾಲೆಬಿಟ್ಟವರ (Drop-out)ವಿವರವನ್ನು ರೇಖಾಚಿತ್ರದ ಮೂಲಕ ತೋರಿಸಲಾಗಿದೆ.

| 2000-2001 | ನಾಗೇನಹಳ್ಳಿ(ನೀರಾವರಿ) | | | ಬೈಲುವದ್ದಿಗೇರೆ(ಒಣಭೂಮಿ) | | | ಹಿರೇಹೆಗ್ಡಾಳ್(ನೀರಾವರಿ) | | | ಉಜ್ಜಿನಿ(ಒಣಭೂಮಿ) | | |
|---|---|---|---|---|---|---|---|---|---|---|---|---|
| ದಾಖಲಾತಿ | 452 | 411 | 863 | 560 | 531 | 1091 | 472 | 425 | 897 | 977 | 936 | 1913 |
| ಶಾಲೆ ಬಿಟ್ಟವರು (Drop-out) | 54 (11.94) | 22 (5.35) | 76 (8.81) | 76 (13.57) | 89 (16.76) | 165 (15.12) | 28 (5.93) | 29 (6.82) | 57 (6.35) | 92 (9.41) | 90 (9.61) | 182 (9.51) |




ಸೂಚನೆ : ಆವರಣದಲ್ಲಿರುವುದು ವಿದ್ಯಾರ್ಥಿಗಳ ಮಧ್ಯದಲ್ಲಿ ಶಾಲಾ ಬಿಟ್ಟವರ ಶೇಕಡವಾರು ಪ್ರಮಾಣವನ್ನು ಸೂಚಿಸುತ್ತದೆ.

ಮೂಲ : ಗ್ರಾಮಪಂಚಾಯತಿಯ ವ್ಯಾಪ್ತಿಯಲ್ಲಿ ಎಲ್ಲಾ ಗ್ರಾಮಗಳಲ್ಲಿಯ ಶಾಲಾ ಮುಖ್ಯೋಪಾಧ್ಯಾಯರಿಂದ ಪಡೆಯಲಾಗಿದೆ. 2001

## ಕೋಷ್ಟಕ-27

### ಶಿಕ್ಷಣ ಕುರಿತು ಗ್ರಾಮೀಣ ಜನತೆಯ ಜಾತಿವಾರು ಅಭಿಪ್ರಾಯ ಗ್ರಾಮಪಂಚಾಯತಿವಾರು

| ಕ್ರ. ಸಂ. | ಜಾತಿ/ವರ್ಗವಾರು | ನಾಗೇನಹಳ್ಳಿ(ನೀರಾವರಿ) | | | | ಬೈಲುವದ್ದಿಗೆರೆ(ಒಣಭೂಮಿ) | | | | ಹಿರೇಹೆಗ್ಡಾಳ್(ನೀರಾವರಿ) | | | | ಉಜ್ಜಿನಿ(ಒಣಭೂಮಿ) | | | |
|---|---|---|---|---|---|---|---|---|---|---|---|---|---|---|---|---|---|
| | | ತೃಪ್ತಿಕರ | ಸರಿಇಲ್ಲ | ಗೊತ್ತಿಲ್ಲ | ಒಟ್ಟು | ತೃಪ್ತಿಕರ | ಸರಿಇಲ್ಲ | ಗೊತ್ತಿಲ್ಲ | ಒಟ್ಟು | ತೃಪ್ತಿಕರ | ಸರಿಇಲ್ಲ | ಗೊತ್ತಿಲ್ಲ | ಒಟ್ಟು | ತೃಪ್ತಿಕರ | ಸರಿಇಲ್ಲ | ಗೊತ್ತಿಲ್ಲ | ಒಟ್ಟು |
| 1. | ಪರಿಶಿಷ್ಟ ಜಾತಿ | 15<br>(75.00) | ----<br>---- | 05<br>(25.00) | 20<br>(100) | 14<br>(58.33) | 02<br>(8.33) | 8<br>(33.33) | 24<br>(100) | 14<br>(77.78) | ---<br>---- | 04<br>(22.22) | 18<br>(100) | 17<br>(77.27) | 01<br>(45.45) | 04<br>(18.18) | 22<br>(100) |
| 2. | ಪರಿಶಿಷ್ಟ ಪಂಗಡ | 15<br>(93.75) | ---<br>--- | 01<br>(6.25) | 16<br>(100) | 14<br>(87.50) | ---<br>--- | 02<br>(12.50) | 16<br>(100) | 05<br>(83.33) | ---<br>--- | 01<br>(16.66) | 06<br>(100) | 04<br>(66.66) | 01<br>(16.67) | 01<br>(16.68) | 06<br>(100) |
| 3. | ಹಿಂದುಳಿದವರ್ಗ | 35<br>(92.10) | ----<br>---- | 03<br>(7.90) | 38<br>(100) | 25<br>(89.29) | 02<br>(7.14) | 01<br>(3.57) | 28<br>(100) | 13<br>(92.86) | ---<br>--- | 01<br>(7.14) | 14<br>(100) | 62<br>(91.18) | 01<br>(1.47) | 05<br>(7.35) | 68<br>(100) |
| 4. | ಇತರೇ ವರ್ಗ | 15<br>(93.75) | ---<br>--- | 01<br>(6.25) | 16<br>(100) | 55<br>(85.93) | 04<br>(6.25) | 05<br>(7.81) | 64<br>(100) | 44<br>(100) | ---<br>---- | ---<br>---- | 44<br>(100) | 65<br>(92.86) | 01<br>(1.43) | 04<br>(5.71) | 70<br>(100) |
| | ಒಟ್ಟು | 90<br>(90.00) | ----<br>---- | 10<br>(10.00) | 100<br>(100) | 104<br>(78.78) | 08<br>(6.06) | 20<br>(15.15) | 132<br>(100) | 76<br>(92.68) | ----<br>---- | 06<br>(7.32) | 82<br>(100) | 148<br>(86.75) | 04<br>(4.81) | 14<br>(8.43) | 166<br>(100) |

ನಾಗೇನಹಳ್ಳಿ(ನೀರಾವರಿ)




ಬೈಲುವದ್ದಿಗೆರೆ(ಒಣಭೂಮಿ)




ಹಿರೇಹೆಗ್ಡಾಳ್(ನೀರಾವರಿ)




ಉಜ್ಜಿನಿ(ಒಣಭೂಮಿ)




ಸೂಚನೆ : ಆವರಣದಲ್ಲಿರುವುದು ಗ್ರಾಮೀಣ ಜನತೆಯ ಶೇಕಡವಾರು ಅಭಿಪ್ರಾಯವನ್ನು ತಿಳಿಸುತ್ತದೆ.

ಮೂಲ : ಪ್ರಾಥಮಿಕ ಮಾಹಿತಿ

ಗ್ರಾಮಪಂಚಾಯತಿಗಳು ತಳಮಟ್ಟದಲ್ಲಿ ತನಗೆ ವಹಿಸಿರುವ ಪ್ರಕಾರ್ಯಗಳಾದ ಕುಡಿಯುವ ನೀರು, ನೈರ್ಮಲೀಕರಣ ಮತ್ತು ಬಡತನ ನಿರ್ಮೂಲನಾ ಕಾರ್ಯಕ್ರಮವಾದ ಜವಾಹರ್ ಗ್ರಾಮಸಮೃದ್ಧಿ ಯೋಜನೆಯನ್ನು ಹೇಗೆ ಅನುಷ್ಠಾನವನ್ನು ಮಾಡಿವೆ. ಗ್ರಾಮಸಭೆಗಳ ಮೂಲಕ ವಸತಿ ಯೋಜನೆಗಳ ವಿತರಣೆಯನ್ನು ಮತ್ತು ಶಿಕ್ಷಣದ ನಿರ್ವಹಣೆಯನ್ನು ಹೇಗೆ ನಿರ್ವಹಿಸಿದೆ ಎಂಬುದನ್ನು ಹಿಂದಿನ ಅಧ್ಯಾಯಗಳಲ್ಲಿ ನೋಡಲಾಗಿದೆ. ಒಣಭೂಮಿ ಮತ್ತು ನೀರಾವರಿ ಪಂಚಾಯತಿಗಳಲ್ಲಿ ಈ ಮೂಲಭೂತ ಅವಶ್ಯಕತೆಗಳ ಪೂರೈಕೆ ಮತ್ತು ನಿರ್ವಹಣೆಯನ್ನು ತೌಲನಿಕವಾಗಿ ಚರ್ಚಿಸಲಾಗಿದೆ.

ಈ ಅಧ್ಯಾಯದಲ್ಲಿ ಗ್ರಾಮಪಂಚಾಯತಿಗೆ ವಹಿಸಿರುವ ಮೇಲಿನ ಪ್ರಕಾರ್ಯಗಳನ್ನು ಯಾವ ರೀತಿ ನಿರ್ವಹಿಸಿದೆ ಎಂಬುದನ್ನು ಕೆಲವು ಸೂಚ್ಯಂಕಗಳ ಮೂಲಕ ಗುರುತಿಸಲು ಪ್ರಯತ್ನಿಸಲಾಗಿದೆ. ಕಾರ್ಯಕ್ಷಮತೆಯನ್ನು ಮಾಪನ ಮಾಡಲು ಮುಖ್ಯ ಎರಡು ಸೂಚ್ಯಂಕಗಳನ್ನು ಇಲ್ಲಿ ಬಳಸಲಾಗಿದೆ. ಇದರಲ್ಲಿ ಒಂದು ಪಂಚಾಯತ್ ವ್ಯವಸ್ಥೆಗೆ ಸಂಬಂಧಪಟ್ಟಂತೆ ಇದೆ. ಪಂಚಾಯತ್ ವ್ಯವಸ್ಥೆಯ ಆಂತರಿಕ ಅಂಶಗಳಾದ ಜಾತಿವಾರು ಪ್ರಾತಿನಿಧ್ಯ, ಗ್ರಾಮಸಭೆ, ತೆರಿಗೆ ಸಂಗ್ರಹ, ತಾಲೂಕು ಮತ್ತು ಜಿಲ್ಲಾ ಪಂಚಾಯತ್ ಸದಸ್ಯರ ಪಾತ್ರ, ಸದಸ್ಯರ ಮತ್ತು ಜನರ ಅರಿವು/ ಭಾಗವಹಿಸುವಿಕೆ ಪಂಚಾಯತಿಯ ಕಾರ್ಯಕ್ಷಮತೆಯನ್ನು ಯಾವ ರೀತಿ ಪ್ರಭಾವಿಸಿದೆ ಎಂದು ಪರೀಕ್ಷಿಸಿಲಾಗಿದೆ. ಎರಡು, ಪಂಚಾಯತ್ ವ್ಯವಸ್ಥೆ ಕಾರ್ಯನಿರ್ವಹಿಸುವ ಸಾಮಾಜಿಕ ಹಾಗೂ ಆರ್ಥಿಕ ಪರಿಸರ ಪಂಚಾಯತಿಯ ಕಾರ್ಯಕ್ಷಮತೆ ಯನ್ನು ಹೇಗೆ ಪ್ರಭಾವಿಸಿದೆ ಎಂದು ವಿಶ್ಲೇಷಿಸಿಲಾಗಿದೆ. ಇದಕ್ಕಾಗಿ ಉಪಯೋಗಿಸಿದ ಸೂಚ್ಯಂಕಗಳು ಇಂತಿವೆ. ಪಂಚಾಯತಿ ಮತ್ತು ಪಟ್ಟಣದ ನಡುವಿನ ಅಂತರ, ನೀರಾವರಿ ಮತ್ತು ಒಣಭೂಮಿ ಪ್ರದೇಶದ ಪಂಚಾಯತಿ, ಮೂರು ಸ್ತರಗಳಲ್ಲಿನ ರಾಜಕೀಯ ಪಕ್ಷ, ತೆರಿಗೆ ಸಂಗ್ರಹ, ವಿವಿಧ ಜಾತಿಗಳ ಪ್ರಾತಿನಿಧ್ಯ ಮತ್ತು ಭಾಗವಹಿಸುವಿಕೆ. ಈ ಸೂಚ್ಯಂಕಗಳನ್ನು ಬಳಸಿಕೊಂಡು ನೀರಾವರಿ ಮತ್ತು ಒಣಭೂಮಿ ಪಂಚಾಯತಿಗಳ ಕಾರ್ಯಕ್ಷಮತೆಯನ್ನು ತೌಲನಿಕವಾಗಿ ಚರ್ಚಿಸಲಾಗಿದೆ.

ಗ್ರಾಮಪಂಚಾಯತಿಗಳ ಕಾರ್ಯಕ್ಷಮತೆಯನ್ನು ಗುರುತಿಸಲು ಪಂಚಾಯತ್ ವ್ಯವಸ್ಥೆಯ ಕೆಲವು ಮುಖ್ಯ ಅಂಶಗಳನ್ನು ಸೂಚ್ಯಂಕಗಳನ್ನಾಗಿ ಬಳಸಲಾಗಿದೆ. ಗ್ರಾಮಪಂಚಾಯತಿಗಳ ಜಾತಿವಾರು ಪ್ರಾತಿನಿಧ್ಯ, ಗ್ರಾಮಸಭೆ ಮತ್ತು ತೆರಿಗೆ ಸಂಗ್ರಹ ಈ ಮೂರು ಅಂಶಗಳು ಅರಿವು/ ಭಾಗವಹಿಸುವಿಕೆಯ ಸೂಚ್ಯಂಕಗಳೆಂದು ಗ್ರಹಿಸಲಾಗಿದೆ. ಇಂದು ಅರಿವು ಮತ್ತು ಭಾಗವಹಿಸುವಿಕೆಯು ಅಭಿವೃದ್ಧಿಯ ಪ್ರಮುಖ ಅಂಶವಾಗಿದೆ. ಆದ್ದರಿಂದಲೇ ಇಂದು ಸಹಭಾಗಿತ್ವಅಭಿವೃದ್ಧಿಯ ಕಡೆಗೆ ಹೆಚ್ಚು ಗಮನಹರಿಸಲಾಗಿದೆ. ಸ್ವಾತಂತ್ರ್ಯಾನಂತರ ಕೈಗೊಂಡ ಅಭಿವೃದ್ಧಿ ಯೋಜನೆಗಳ ವಿಫಲತೆಗೆ ಜನತೆಯ ಭಾಗವಹಿಸುವಿಕೆ ಇಲ್ಲದ್ದರಿಂದ ಯೋಜನೆಗಳು ನಿರೀಕ್ಷಿತ ಗುರಿಯನ್ನು ಸಾಧಿಸಲಿಲ್ಲ ಎಂಬುದು ಈಗಾಗಲೇ ಗೊತ್ತಿರುವ ವಿಚಾರವಾಗಿದೆ. ತದನಂತರ ವಿಕೇಂದ್ರೀಕರಣ

ಅಭಿವೃದ್ಧಿಯಲ್ಲಿ ಸಹಭಾಗಿತ್ವದ ಕಡೆಗೆ ಹೆಚ್ಚು ಗಮನಹರಿಸಲಾಗಿದೆ. ಹಾಗಾಗಿ ತಳಮಟ್ಟದ ಅಭಿವೃದ್ಧಿಯಲ್ಲಿ ಸಹಭಾಗಿತ್ವ ಬಹಳ ಮುಖ್ಯವಾಗಿದೆ. ಈ ಸಹಭಾಗಿತ್ವವು ಅರಿವು ಮತ್ತು ಭಾಗವಹಿಸುವಿಕೆಯ ಮೇಲೆ ನಿರ್ಧಾರವಾಗುತ್ತದೆ. ಜನತೆ ಮತ್ತು ಪಂಚಾಯತಿ ಸದಸ್ಯರ ಭಾಗವಹಿಸುವಿಕೆಯನ್ನು ಮೂರು ಸೂಚ್ಯಂಕಗಳಾದ ಜಾತಿವಾರು ಪ್ರಾತಿನಿಧ್ಯ, ಗ್ರಾಮಸಭೆ ಮತ್ತು ತೆರಿಗೆ ಸಂಗ್ರಹದ ಮೂಲಕ ಮಾಪನ ಮಾಡಲಾಗಿದೆ. ಇವುಗಳ ಮೂಲಕ ಗ್ರಾಮಪಂಚಾಯತಿಗಳ ಕಾರ್ಯಕ್ಷಮತೆಯನ್ನು ಗುರುತಿಸಲಾಗಿದೆ.

## 5.1 ಜಾತಿವಾರು ಪ್ರಾತಿನಿಧ್ಯ

ಸಂವಿಧಾನದ 73ನೇ ತಿದ್ದುಪಡಿ ಅನ್ವಯ ಸಮಾಜದ ಎಲ್ಲ ಜಾತಿ-ವರ್ಗಗಳು ಆಯಾ ಜನಸಂಖ್ಯೆಗೆ ಅನುಗುಣವಾಗಿ ಪಂಚಾಯತ್‌ರಾಜ್ ಸಂಸ್ಥೆಗಳಲ್ಲಿ ಮೀಸಲಾತಿಯನ್ನು ಒದಗಿಸಲಾಗಿದೆ. ಹಾಗಾಗಿ ಆಧುನಿಕ ಪಂಚಾಯತಿಗಳಲ್ಲಿ ಎಲ್ಲಾ ಜಾತಿ-ವರ್ಗಗಳ ಪ್ರತಿನಿಧಿಕರಣವಾಗಿದೆ. ಮೀಸಲಾತಿ ಪ್ರಕ್ರಿಯೆಯಿಂದ ಕೆಳಜಾತಿ-ವರ್ಗಗಳು ಸಾಕಷ್ಟು ಪ್ರಾತಿನಿಧ್ಯವನ್ನು ಈ ಸಂಸ್ಥೆಗಳಲ್ಲಿ ಹೊಂದಿವೆ. ಅದರಲ್ಲೂ ಕೆಲವು ಪಂಚಾಯತಿಗಳಲ್ಲಿ ಕೆಳಜಾತಿ/ವರ್ಗಗಳೇ ಹೆಚ್ಚು ಪ್ರತಿನಿಧಿಕರಣಗೊಂಡಿದ್ದಾರೆ. ಜನತಂತ್ರ ವ್ಯವಸ್ಥೆಯಲ್ಲಿ ಎರಡು ಬಗೆಯ ರೂಪಗಳಿರುತ್ತದೆ. ಪ್ರಾತಿನಿಧಿಕ (ರೆಪ್ರೆಜೆಂಟಿಟೀವ್) ಜನತಂತ್ರ ಮತ್ತು ಪಾಲುದಾರಿಕೆ (ಪಾರ್ಟಿಸಿಪೇಟರಿ) ಜನತಂತ್ರ ಎಂದು. ಕರ್ನಾಟಕದ ಈ ವ್ಯವಸ್ಥೆ ಪ್ರಾತಿನಿಧಿಕ ಜನತಂತ್ರವನ್ನು ಸಾಕಷ್ಟು ಪರಿಣಾಮಕಾರಿ ರೀತಿಯಲ್ಲಿ ಸೃಷ್ಟಿಸಿದೆ. ಹೆಂಗಸರು ಮತ್ತು ಇತರೆ ಕೆಳಜಾತಿ-ವರ್ಗದವರಿಗೆ ಕೊಟ್ಟಿರುವ ಪ್ರಾತಿನಿಧ್ಯ ತುಂಬಾ ಸ್ವಾಗತಾರ್ಹ. ಹೆಚ್ಚು ವ್ಯಾಪಕವಾದ ಪ್ರಾತಿನಿಧಿಕ ಜನತಂತ್ರ ಇದು. ಆದರೆ ಪಾರ್ಟಿಸಿಪೇಟರಿ ಜನತಂತ್ರದ ರೂಪ ಬೇರೆ. ಅದೊಂದು ಸಂಸ್ಥೆಯಲ್ಲಿ ಹೋರಾಟದ ಮತ್ತು ಜನತೆಯ ಎಚ್ಚರದ ಸ್ಥಿತಿ ಆದು. ಪ್ರಾತಿನಿಧಿಕ ಜನತಂತ್ರ ವೊಂದು ಕ್ರಿಯಾಶೀಲಾ ಪಾಲುದಾರಿಕೆಯ ಜನತಂತ್ರವಾಗಿ ಮಾರ್ಪಾಡಾಗಬೇಕಾದರೆ ಜನತೆಯ ಆಂದೋಲನ ವೊಂದು ಅನಿವಾರ್ಯ. ಈ ದೃಷ್ಟಿಯಿಂದ ಈಗಿರುವ ಪಂಚಾಯತ್ ರಾಜ್ ವ್ಯವಸ್ಥೆಯನ್ನು ನಿಜವಾಗಿಯೂ ಅರ್ಥಪೂರ್ಣಗೊಳಿಸಬಲ್ಲ ರೀತಿಯ ಹೋರಾಟ ಇನ್ನೂ ಹುಟ್ಟಬೇಕಾಗಿದೆ.[1] ಅಂದರೆ ಇಲ್ಲಿ ಮೀಸಲಾತಿಯಿಂದ ಎಲ್ಲ ಜಾತಿ-ವರ್ಗಗಳಿಗೆ ಪ್ರಾತಿನಿಧ್ಯ ದೊರಕಿದೆ. ಈ ಪ್ರಾತಿನಿಧ್ಯವು ಸದಸ್ಯರ ಸಹಭಾಗಿತ್ವದ ಮೇಲೆ ವಿಕೇಂದ್ರೀಕರಣದ ಆಶಯ ನಿಂತಿದೆ ಎಂದು ಹೇಳಬಹುದು. ಈ ಹಿನ್ನೆಲೆಯಲ್ಲಿ ಪ್ರಸ್ತುತ ಅಧ್ಯಯನದ ನಾಲ್ಕು ಗ್ರಾಮಪಂಚಾಯತಿಗಳ ಗ್ರಾಮಗಳಲ್ಲಿರುವ ಜಾತಿ-ವರ್ಗಗಳು ಜಾತಿಗೆ ಅನುಗುಣವಾಗಿ ಪ್ರಾತಿನಿಧ್ಯವನ್ನು ಹೊಂದಿದ್ದಾರೆಯೇ? ಈ ಪ್ರಾತಿನಿಧ್ಯದಿಂದ ಆ ವರ್ಗಗಳ ಹಿತಾಸಕ್ತಿಗಳು ಈಡೇರಿವೆಯೋ? ಕೆಳಜಾತಿಗಳು ಪ್ರಾತಿನಿಧ್ಯ ಹೊಂದಿದ ಗ್ರಾಮಪಂಚಾಯತಿಗಳ ಕಾರ್ಯಕ್ಷಮತೆ ಉತ್ತಮವಾಗಿದೆಯೇ? ಇತ್ಯಾದಿ ಅಂಶಗಳು ಕೂಡ ಈ ಅಧ್ಯಾಯದ ಭಾಗವಾಗಿವೆ.

### ನಾಗೇನಹಳ್ಳಿ ಗ್ರಾಮಪಂಚಾಯತಿ

ನಾಗೇನಹಳ್ಳಿ ಗ್ರಾಮಪಂಚಾಯತಿಯು 13 ಜನ ಸದಸ್ಯರನ್ನು ಹೊಂದಿದ್ದು, 1999ರಲ್ಲಿ ನಡೆದ ಗ್ರಾಮ ಪಂಚಾಯತಿ ಚುನಾವಣೆಯಲ್ಲಿ ಆಯ್ಕೆಯಾಗಿದ್ದಾರೆ. ಪಂಚಾಯತಿಯ ಒಟ್ಟು 13 ಸದಸ್ಯರಲ್ಲಿ 07(53.85)ರಷ್ಟು

ಪುರುಷರು, 07(46.15)ರಷ್ಟು ಮಹಿಳೆಯರು ಪ್ರತಿನಿಧಿಕರಣ ಗೊಂಡಿದ್ದಾರೆ. 13 ಜನ ಸದಸ್ಯರ ಆಯ್ಕೆ ಪ್ರಕ್ರಿಯೆಯನ್ನು ನೋಡಿದಾಗ 12 ಜನ ಚುನಾವಣೆ ಮೂಲಕ ಮತ್ತು ಒಬ್ಬರು ಅವಿರೋಧವಾಗಿ ಆಯ್ಕೆಯಾಗಿದ್ದಾರೆ. ನಾಗೇನಹಳ್ಳಿ ಗ್ರಾಮ ಒಂದೇ 08(61.50)ರಷ್ಟು ಸದಸ್ಯರನ್ನು ಹೊಂದಿದೆ.[2] ಗ್ರಾಮಪಂಚಾಯತಿಯ ಸಂಪೂರ್ಣ ಆಡಳಿತ ನಾಗೇನಹಳ್ಳಿ ಸದಸ್ಯರಲ್ಲಿ ಕೇಂದ್ರೀಕೃತಗೊಂಡಿದೆ. ಇನ್ನುಳಿದ 5 ಸದಸ್ಯರಲ್ಲಿ ಬಸವನದುರ್ಗದಿಂದ 3 ಜನ ಸದಸ್ಯರು, ಕಳ್ಳಿರಾಂಪುರ ಮತ್ತು ಕಾಳಘಟ್ಟ ಗ್ರಾಮಗಳಿಂದ ತಲಾ ಒಬ್ಬರು ಸದಸ್ಯರು ಪ್ರಾತಿನಿಧ್ಯವನ್ನು ಹೊಂದಿದ್ದಾರೆ. ಪಂಚಾಯತ್ ವ್ಯಾಪ್ತಿಗೆ ಸೇರಿದ ಬೆನಕಾಪುರ ಮತ್ತು ಬೆಳಗೋಡು ಗ್ರಾಮಗಳಲ್ಲಿ ಸದಸ್ಯರಿಲ್ಲ. ಈ ಗ್ರಾಮಗಳು ವಾರ್ಡುವಾರು ಹಂಚಿಕೆಯಲ್ಲಿ ಕ್ರಮವಾಗಿ ನಾಗೇನಹಳ್ಳಿ ಮತ್ತು ಕಳ್ಳಿರಾಂಪುರಕ್ಕೆ ಸೇರಿವೆ. ಆದ್ದರಿಂದ ಈ ಗ್ರಾಮಗಳು ಪ್ರಾತಿನಿಧ್ಯಗಳಿಂದ ವಂಚಿತವಾಗಿವೆ.

ಗ್ರಾಮಪಂಚಾಯತಿಯ ಸದಸ್ಯರ ಜಾತಿವಾರು ಪ್ರಾತಿನಿಧ್ಯವನ್ನು ನೋಡಿದಾಗ ಪಂಚಾಯತಿಯು ಪ್ರಮುಖ ಸಮುದಾಯಗಳಾದ, ಶೇ.19ರಷ್ಟಿರುವ ಮುಸ್ಲಿಂರು ಶೇ.16ರಷ್ಟು ಪ್ರಾತಿನಿಧ್ಯವನ್ನು, ಶೇ.15ರಷ್ಟಿರುವ ಮಾದಿಗರು ಶೇ.15ರಷ್ಟು, ಶೇ.15ರಷ್ಟಿರುವ ನಾಯಕ ಜನಾಂಗವು ಶೇ.23ರಷ್ಟು ಶೇ.13ರಷ್ಟಿರುವ ಕುರುಬರು ಶೇ.8ರಷ್ಟು, ಶೇ.14ರಷ್ಟಿರುವ ವೀರಶೈವರು ಶೇ.8ರಷ್ಟು ಪ್ರಾತಿನಿಧ್ಯವನ್ನು ಹೊಂದಿದ್ದಾರೆ(ಕೋಷ್ಟಕ-28).[3] ಪ್ರಾತಿನಿಧ್ಯದ ಅಂಕಿ-ಅಂಶಗಳ ವಿವರಣೆಯಲ್ಲಿ ನಾಯಕ ಜನಾಂಗವು ಶೇಕಡಾವಾರು ಕುಟುಂಬಗಳಿಗಿಂತ ಹೆಚ್ಚು ಪ್ರಾತಿನಿಧ್ಯವನ್ನು ಹೊಂದಿದೆ. ಒಟ್ಟಾರೆ ಪಂಚಾಯತಿಯ ಜಾತಿವಾರು ಪ್ರಾತಿನಿಧ್ಯದಲ್ಲಿ ಶೇ.90ರಷ್ಟು ಸದಸ್ಯರು ಕೆಳವರ್ಗಗಳು ಮತ್ತು ಹಿಂದುಳಿದ ವರ್ಗಗಳೇ ಪ್ರಾತಿನಿಧ್ಯವನ್ನು ಪಡೆದಿದ್ದಾರೆ. ಶೇ.90ರಷ್ಟು ಸದಸ್ಯರಿದ್ದರು ಅಧ್ಯಕ್ಷಸ್ಥಾನವನ್ನು ಕ್ಷತ್ರಿಯ ಜನಾಂಗಕ್ಕೆ ಬಿಟ್ಟುಕೊಡಲಾಗಿದೆ. ಉಪಾಧ್ಯಕ್ಷರ ಸ್ಥಾನ ಪರಿಶಿಷ್ಟಜಾತಿ ಮಹಿಳೆಯ ಪಾಲಾಗಿದೆ. ಬಸವನದುರ್ಗ ಗ್ರಾಮಕ್ಕೆ ಸೇರಿದ ತಮಿಳು ಬೋವಿ ಜನಾಂಗದ ಮಹಿಳೆ ಉಪಾಧ್ಯಕ್ಷರಾಗಿದ್ದಾರೆ. ಪರಿಶಿಷ್ಟ ಜಾತಿಯಲ್ಲಿ ಮಾದಿಗರು ಹೆಚ್ಚು ಸಂಖ್ಯೆಯಲ್ಲಿದ್ದರೂ ಈ ಸ್ಥಾನವನ್ನು ಪಡೆಯಲು ಸಾಧ್ಯವಾಗಿಲ್ಲ. ಇದಕ್ಕೆ ಸಾಮಾಜಿಕವಾಗಿ ಮತ್ತು ಆರ್ಥಿಕವಾಗಿ ಬೋವಿಗಳು ಪ್ರಬಲವಾಗಿರುವುದೇ ಕಾರಣವಾಗಿರಬಹುದು. ಎಲ್ಲಾ ಗ್ರಾಮಗಳಲ್ಲಿನ ಪ್ರಮುಖ ಸಮುದಾಯಗಳು ಸರಾಸರಿ ಪ್ರಾತಿನಿಧ್ಯವನ್ನು ಪಡೆದುಕೊಂಡಿವೆ. ಆಯ್ಕೆಗೊಂಡ 13 ಜನ ಸದಸ್ಯರಲ್ಲಿ 10 ಜನ ಕಾಂಗ್ರೇಸ್ ಪಕ್ಷಕ್ಕೆ, ಉಳಿದ ಮೂವರು ಜನತದಳಕ್ಕೆ ಸೇರಿದ್ದು, ಗ್ರಾಮಪಂಚಾಯತಿ ಆಡಳಿತವು ಕಾಂಗ್ರೇಸ್ ಪಕ್ಷದವರ ಕೈಯಲ್ಲಿದೆ. ಹೀಗೆ ಗ್ರಾಮಪಂಚಾಯತ್ ಸದಸ್ಯರ ಆಯ್ಕೆ, ಪಕ್ಷ ಮತ್ತು ಜಾತಿವಾರು ಪ್ರಾತಿನಿಧ್ಯವನ್ನು ಹೊಂದಿದ್ದಾರೆ.

ನಾಗೇನಹಳ್ಳಿ ಪಂಚಾಯತಿ ಸದಸ್ಯರ ಪ್ರಾತಿನಿಧ್ಯವನ್ನು ನೋಡಿದಾಗ ಹೆಚ್ಚು ಕೆಳಜಾತಿಗಳು ಮತ್ತು ಹಿಂದುಳಿದ ವರ್ಗಗಳು ಪ್ರತಿನಿಧಿಕರಣಗೊಂಡಿವೆ. ಪಂಚಾಯತ್ ಸದಸ್ಯರು ತಮ್ಮ ವಾರ್ಡಿನ ಕಾಮಗಾರಿಗಳನ್ನು ಸರಿಯಾದ ರೀತಿಯಲ್ಲಿ ನಿಭಾಯಿಸಿದ್ದಾರೆ. ಎಲ್ಲ ವಾರ್ಡುಗಳಂತೆ ಪರಿಶಿಷ್ಟ ಜಾತಿಯ ಕಾಲೋನಿಗಳಲ್ಲಿ ಕಾಮಾಗಾರಿಗಳನ್ನು ಕೈಗೊಳ್ಳಲಾಗಿದೆ. ಇದರಲ್ಲಿ ಮುಖ್ಯವಾಗಿ ಬಂಡೆಹಾಕಿಸುವುದು. ನೀರಿನತೊಟ್ಟಿ ಕಟ್ಟಿಸುವ ಕಾಮಗಾರಿಗಳು ನಡೆದಿವೆ. ಹೆಚ್ಚು ಕಾಮಗಾರಿಗಳು ಪಂಚಾಯತ್ ಕೇಂದ್ರಸ್ಥಳದಲ್ಲಿ ಅನುಷ್ಠಾನಗೊಂಡಿವೆ. ಗ್ರಾಮ ಪಂಚಾಯತಿಯು ಗ್ರಾಮಗಳಲ್ಲಿನ ಮೂಲಭೂತ ಅವಶ್ಯಕತೆಗಳಾದ ಕುಡಿಯುವ ನೀರಿನ ಸೌಲಭ್ಯವನ್ನು

ಹೇಗೆ ನಿರ್ವಹಿಸಿದೆ ಎಂಬುದನ್ನು ನೋಡಿದಾಗ ಪಂಚಾಯತಿ ಕೇಂದ್ರ ಸ್ಥಳವಾದ ನಾಗೇನಹಳ್ಳಿ ಹೊರತುಪಡಿಸಿ ಉಳಿದ ಎಲ್ಲಾ ಪಂಚಾಯತಿ ವ್ಯಾಪ್ತಿಯ ಕುಡಿಯುವ ನೀರಿನ ಪೂರೈಕೆ ಉತ್ತಮವಾಗಿದೆ. ನೈರ್ಮಲ್ಯ ಕಾರ್ಯಕ್ರಮಗಳು ಮಾತ್ರ ಸೀಮಿತವಾಗಿ ಅನುಷ್ಠಾನಗೊಂಡಿವೆ. ವಸತಿ ಯೋಜನೆಗಳ ವಿತರಣೆಗಳು ಸಹ ನಿಜವಾದ ಬಡವರಿಗೆ ತಲುಪದೆ ಬಡತನ ರೇಖೆ ಮೇಲಿನ ಕುಟುಂಬಗಳಿಗೆ ಹಂಚಲಾಗಿದೆ. ಪಂಚಾಯತಿ ದಾಖಲೆಗಳ ಪ್ರಕಾರ ಜವಾಹರ್ ಗ್ರಾಮಸಮೃದ್ದಿ ಯೋಜನೆಯಲ್ಲಿ ನಿಗದಿತ ಭೌತಿಕ ಗುರಿಯನ್ನು ಸಾಧಿಸಿದೆ. ಆದರೆ ಈ ಕಾರ್ಯಕ್ರಮಗಳ ಬಗ್ಗೆ ಊರವರು ಹೆಚ್ಚು ಅತೃಪ್ತಿಯನ್ನು ಸೂಚಿಸಿದ್ದಾರೆ. ಬಹುತೇಕ ಪಂಚಾಯತಿ ಸದಸ್ಯರು ಕೆಳಜಾತಿ/ವರ್ಗಗಳಿಂದ ಬಂದಿದ್ದರೂ ಸಹ ಆದೇ ವರ್ಗದ ಜನತೆಯ ಸಮಸ್ಯೆಗಳು, ಬೇಡಿಕೆಗಳು ಪರಿಹಾರವಾಗಿಲ್ಲ. ಈ ಗ್ರಾಮಪಂಚಾಯತಿಯಲ್ಲಿ ಹೆಚ್ಚು ಕೆಳಜಾತಿಗಳು ಪ್ರಾತಿನಿಧ್ಯ ಹೊಂದಿದ್ದರೂ ಸಹ ಸ್ಥಳೀಯ ರಾಜಕೀಯದಲ್ಲಿ ಅಂಥಹ ಪ್ರಭಾವವನ್ನು ಬೀರಿಲ್ಲ. ಇಲ್ಲಿ ಮೇಲ್ವರ್ಗಗಳ ಹಿಡಿತ ಸ್ಥಳೀಯ ರಾಜಕೀಯದಲ್ಲಿ ಇನ್ನೂ ಇದೆ. ಹಾಗಾಗಿ ಗ್ರಾಮಪಂಚಾಯತಿ ಆಡಳಿತದಲ್ಲಿ ಸಹ ಇವರ ಪ್ರಭಾವವನ್ನು ತಳ್ಳಿ ಹಾಕುವಂತಿಲ್ಲ. ಇಲ್ಲಿ ಕೆಳಜಾತಿ-ವರ್ಗಗಳು ಆರ್ಥಿಕವಾಗಿ ಅಷ್ಟೊಂದು ಉತ್ತಮವಾಗಿಲ್ಲ. ಸದಸ್ಯರು ತಮ್ಮ ವಾರ್ಡುಗಳಲ್ಲಿ ಕಾಮಗಾರಿಗಳನ್ನು ಕೈಗೊಂಡಿದ್ದರೂ, ಎಲ್ಲಾ ವಾರ್ಡುಗಳಂತೆ ಇಲ್ಲಿಯೂ ಕಾಮಗಾರಿಗಳನ್ನು ಕೈಗೊಂಡಿದ್ದಾರೆ. ಅಂದರೆ ಈ ಜಾತಿಗಳು ಪ್ರಾತಿನಿಧ್ಯದಿಂದ ಅಭಿವೃದ್ಧಿ ಕಾರ್ಯಗಳು ನಡೆದಿವೆ ಎಂದು ಹೇಳಬಹುದು. ಹೆಚ್ಚು ಪರಿಶಿಷ್ಟರು ಮತ್ತು ಹಿಂದುಳಿದ ವರ್ಗದವರು ಇರುವುದರಿಂದ ಬಡತನ ರೇಖೆ ಕೆಳಗಿನ ಕುಟುಂಬಗಳು ಹೆಚ್ಚು ಇವೆ. ಆದರೆ ಪ್ರಾತಿನಿಧ್ಯವು ಸಹ ಈ ವರ್ಗಗಳಿಗೆ ಪೂರಕವಾಗಿಲ್ಲ. ಒಟ್ಟಾರೆ ಜಾತಿವಾರು ಪ್ರಾತಿನಿಧ್ಯದಿಂದ ಅಭಿವೃದ್ಧಿ ಕಾರ್ಯಗಳು ವಾರ್ಡುಗಳಲ್ಲಿ ನಡೆದಿವೆ ಎಂದು ಹೇಳಬಹುದು. ಹೆಚ್ಚು ಪರಿಶಿಷ್ಟರು ಮತ್ತು ಹಿಂದುಳಿದ ವರ್ಗದವರು ಇರುವುದರಿಂದ ಬಡತನ ರೇಖೆ ಕೆಳಗಿನ ಕುಟುಂಬಗಳು ಹೆಚ್ಚು ಇವೆ. ಆದರೆ ಸದಸ್ಯರ ಪಾಲುದಾರಿಕೆಯು ಅವರ ಜಾತಿ-ವರ್ಗಗಳಿಗೆ ಪೂರಕವಾಗಿಲ್ಲ. ಒಟ್ಟಾರೆ ಜಾತಿವಾರು ಪ್ರಾತಿನಿಧ್ಯದಿಂದ ಗ್ರಾಮ ಪಂಚಾಯತಿಯ ಕೆಲವು ಅಭಿವೃದ್ಧಿ ಕಾಮಗಾರಿಗಳು ಎಲ್ಲಾ ವಾರ್ಡುಗಳಲ್ಲಿ ಅನುಷ್ಠಾನಗೊಳಿಸಲಾಗಿದೆ. ಗ್ರಾಮ ಪಂಚಾಯತಿಯ ಕಾರ್ಯಕ್ಷಮತೆಯಲ್ಲಿ ಕೆಳಜಾತಿ-ವರ್ಗಗಳ ಪಾತ್ರ ಅಷ್ಟೊಂದು ಪರಿಣಾಮಕಾರಿಯಾಗಿಲ್ಲ.

### ಬೈಲುವದ್ದಿಗೆರೆ ಗ್ರಾಮಪಂಚಾಯತಿ

ಬೈಲುವದ್ದಿಗೆರೆ ಗ್ರಾಮಪಂಚಾಯತಿ ವ್ಯಾಪ್ತಿಯ ನಾಲ್ಕು ಗ್ರಾಮಗಳಿಂದ ಒಟ್ಟು 15 ಜನ ಸದಸ್ಯರಿದ್ದಾರೆ. ಇದರಲ್ಲಿ 09(60.00)ಜನ ಪುರುಷರು, 06(40.00) ಮಹಿಳಾ ಸದಸ್ಯರಿದ್ದಾರೆ. ಗ್ರಾಮವಾರು ಸದಸ್ಯರನ್ನು ನೋಡಿದಾಗ ಬೈಲುವದ್ದಿಗೆರೆ ಮತ್ತು ಕಾಕಬಾಳು ಗ್ರಾಮದಿಂದ ತಲಾ ಐವರು ಸದಸ್ಯರನ್ನು, ಧರ್ಮಸಾಗರ ಮೂರು ಜನ ಸದಸ್ಯರನ್ನು ಮತ್ತು ಗುಂಡ್ಲವದ್ದಿಗೆರೆ ಇಬ್ಬರು ಸದಸ್ಯರನ್ನು ಹೊಂದಿದೆ.[4] ಪಂಚಾಯತಿ ಸದಸ್ಯರ ಆಯ್ಕೆ ಪ್ರಕ್ರಿಯೆಯನ್ನು ನೋಡಿದಾಗ 13 ಜನ ಚುನಾವಣೆಯ ಮೂಲಕ, ಇಬ್ಬರು ಅವಿರೋಧವಾಗಿ ಆಯ್ಕೆಯಾಗಿದ್ದಾರೆ. ಅವಿರೋಧವಾಗಿ ಆಯ್ಕೆಯಾಗಿರುವ ಇಬ್ಬರು ಸದಸ್ಯರು ಗುಂಡ್ಲವದ್ದಿಗೆರೆ ಗ್ರಾಮದವರು. ಈ ಗ್ರಾಮದ ಎರಡು ಸ್ಥಾನಗಳ ಅವಿರೋಧವಾಗಿ ಆಯ್ಕೆಯಾಗಲು ಮುಖ್ಯ ಕಾರಣ ಇದು, ಚಿಕ್ಕಗ್ರಾಮವಾಗಿದ್ದು, ಗೊಲ್ಲರು ಪ್ರಬಲ ಜಾತಿಯವರಾಗಿದ್ದಾರೆ. ಆದ್ದರಿಂದ ಈ ಜಾತಿಯಲ್ಲಿ ಒಬ್ಬರು,

ಇನ್ನೊಂದು ಸ್ಥಾನವನ್ನು ಸಣ್ಣ ಸಮುದಾಯವಾದ ಮಾದಿಗರಿಗೆ ಮೀಸಲಿರುವುದರಿಂದ ಈ ಜನಾಂಗಕ್ಕೆ ಸೇರಿದ ಒಬ್ಬರು ಅವಿರೋಧವಾಗಿ ಆಯ್ಕೆಯಾಗಿದ್ದಾರೆ. ಒಟ್ಟಾರೆ ಈ ಗ್ರಾಮದಲ್ಲಿ ಜಾತಿ-ಜಾತಿಗಳ ನಡುವೆ ಹೊಂದಾಣಿಕೆ ಇರುವುದರಿಂದ ಅವಿರೋಧವಾಗಿ ಆಯ್ಕೆ ನಡೆದಿದೆ.

ಪಂಚಾಯತಿ ಸದಸ್ಯರ ಪ್ರಾತಿನಿಧ್ಯವನ್ನು ಜಾತಿವಾರು ನೋಡಿದಾಗ, ಶೇ.40ರಷ್ಟಿರುವ ಲಿಂಗಾಯ್ತರು ಶೇ.33ರಷ್ಟು ಪ್ರಾತಿನಿಧ್ಯವನ್ನು, ಶೇ.20ರಷ್ಟಿರುವ ಮಾದಿಗರು ಶೇ.20ರಷ್ಟು ಪ್ರಾತಿನಿಧ್ಯವನ್ನು, ಶೇ.11ರಷ್ಟಿರುವ ನಾಯಕರು ಶೇ.20ರಷ್ಟು, ಶೇ.13ರಷ್ಟಿರುವ ಕುರುಬರು ಶೇ.20ರಷ್ಟು ಮತ್ತು ಶೇ.6ರಷ್ಟಿರುವ ಗೊಲ್ಲರು ಶೇ.6ರಷ್ಟು ಪ್ರಾತಿನಿಧ್ಯವನ್ನು ಹೊಂದಿದ್ದಾರೆ (ಕೋಷ್ಟಕ-28).[5] ಪ್ರಾತಿನಿಧ್ಯದ ಅಂಕಿ-ಅಂಶಗಳನ್ನು ಗಮನಿಸಿದಾಗ ಶೇಕಡವಾರು ಕುಟುಂಬಗಳಿಗಿಂತ ಹೆಚ್ಚು ಪ್ರಾತಿನಿಧ್ಯವನ್ನು ನಾಯಕ ಹಾಗೂ ಕುರುಬ ಜನಾಂಗಗಳು ಹೊಂದಿವೆ. ಉಳಿದಂತೆ ಆಯಾ ಜಾತಿವಾರು ಕುಟುಂಬಗಳು ಪ್ರಾತಿನಿಧ್ಯವನ್ನು ಹೊಂದಿದ್ದಾರೆ. ಇಲ್ಲಿ ಜಾತಿವಾರು ಪ್ರಾತಿನಿಧ್ಯದಲ್ಲಿ ಹೆಚ್ಚು ಮೇಲ್ವರ್ಗಗಳೇ ಅಧಿಕ ಸದಸ್ಯತ್ವವನ್ನು ಹೊಂದಿದ್ದಾರೆ. ಅದೇ ರೀತಿ ಕುಟುಂಬವಾರು ಸಹ ಹೆಚ್ಚಾಗಿದ್ದಾರೆ. ಗ್ರಾಮಪಂಚಾಯತಿ ಅಧ್ಯಕ್ಷ ಸ್ಥಾನವು ಪರಿಶಿಷ್ಟಪಂಗಡ ಮಹಿಳೆಗೆ ಮೀಸಲಿಟ್ಟಿದ್ದು ಈ ಸ್ಥಾನವು ಕಾಕಬಾಳು ಗ್ರಾಮದ ಪಾಲಾಗಿದೆ. ಉಪಾಧ್ಯಕ್ಷ ಸ್ಥಾನ ಗುಂಡ್ಲವದ್ದಿಗೆರೆಯ ಗೊಲ್ಲರ ಜನಾಂಗಕ್ಕೆ ಹೋಗಿದೆ. ಕಳೆದ ಬಾರಿ ಅಧ್ಯಕ್ಷ ಮತ್ತು ಉಪಾಧ್ಯಕ್ಷ ಸ್ಥಾನಗಳು ಬೈಲುವದ್ದಿಗೆರೆ ಮತ್ತು ಧರ್ಮಸಾಗರದ ಗ್ರಾಮಗಳ ಪಾಲಾಗಿದ್ದವು. ಈ ಬಾರಿ ಕಾಕಬಾಳು ಮತ್ತು ಗುಂಡ್ಲವದ್ದಿಗೆರೆ ಗ್ರಾಮಗಳಿಗೆ ಹೋಗಿದೆ. ಅಂದರೆ ಪಂಚಾಯತಿ ಸದಸ್ಯರ ಮತ್ತು ಊರವರ ಅಭಿಪ್ರಾಯದ ಪ್ರಕಾರ ಗ್ರಾಮಗ್ರಾಮಗಳ ನಡುವೆ ಹೊಂದಾಣಿಕೆಯಲ್ಲಿ ಅಧ್ಯಕ್ಷ ಮತ್ತು ಉಪಾಧ್ಯಕ್ಷ ಸ್ಥಾನಗಳು ಹಂಚಿಕೆಯಾಗಿವೆ ಎಂದು ಹೇಳಿದ್ದಾರೆ.

ಬೈಲುವದ್ದಿಗೆರೆ ಪಂಚಾಯತಿ ವ್ಯಾಪ್ತಿಯ ಗ್ರಾಮಗಳಲ್ಲಿ ಹೆಚ್ಚು ಮೇಲ್ವರ್ಗಗಳೇ ಇದ್ದು ಇವರೇ ಹೆಚ್ಚು ಪ್ರಾತಿನಿಧ್ಯವನ್ನು ಹೊಂದಿದ್ದಾರೆ. ಒಟ್ಟಾರೆ ಶೇ. 40ರಷ್ಟು ಪರಿಶಿಷ್ಟರು ಪ್ರತಿನಿಧಿಕರಣ ಗೊಂಡಿದ್ದಾರೆ. ಗ್ರಾಮಪಂಚಾಯತಿ ಪ್ರಕಾರ್ಯಗಳನ್ನು ಹೇಗೆ ನಿರ್ವಹಿಸಿದೆ ಎಂಬುದನ್ನು ನೋಡಿದಾಗ ಕಾಕಬಾಳು ಮತ್ತು ಧರ್ಮಸಾಗರ ಗ್ರಾಮಗಳಲ್ಲಿ ಮೂಲಭೂತ ಅವಶ್ಯಕತೆಗಳಾದ ಕುಡಿಯುವ ನೀರು ಪೂರೈಕೆ ಸರ್ಕಾರ ನಿಗದಿಪಡಿಸಿದ ಹಾಗೇ ಲಭ್ಯವಿಲ್ಲ. ಅಧ್ಯಕ್ಷರ ಗ್ರಾಮವಾದ ಕಾಕಬಾಳು ನಲ್ಲಿ ವಿಶ್ವಬ್ಯಾಂಕ್ ಯೋಜನೆ ಅನುಷ್ಠಾನಗೊಂಡಿದ್ದರೂ ಸಹ ನೀರು ಪೂರೈಕೆ ಸರಿಯಾಗಿ ಆಗುತ್ತಿಲ್ಲ. ನೈರ್ಮಲ್ಯ ಕಾರ್ಯಕ್ರಮಗಳಲ್ಲಿ ಸಮುದಾಯ ಮಹಿಳಾ ಶೌಚಲಯಗಳು ಹೆಚ್ಚು ಅನುಷ್ಠಾನಗೊಂಡಿವೆ. ವಸತಿ ಯೋಜನೆಗಳ ವಿತರಣೆಯನ್ನು ನೋಡಿದಾಗ ನಿಜವಾದ ಬಡವರಿಗೆ ತಲುಪಿಲ್ಲ. ಹಾಗಾಗಿ ಉದ್ದೇಶಿತವರ್ಗಕ್ಕೆ ವಸತಿ ಯೋಜನೆಗಳು ತಲುಪಿಲ್ಲ. ಮೇಲ್ವರ್ಗಗಳು ಹೆಚ್ಚು ಪ್ರಾತಿನಿಧ್ಯ ಹೊಂದಿರುವುದು ಇದಕ್ಕೆ ಕಾರಣವಾಗಿರಬಹುದು. ಬಡತನರೇಖೆ ಕೆಳಗಿರುವ ಪರಿಶಿಷ್ಟರಿಗೆ ತಲುಪದೇ, ಬಡತನ ರೇಖೆ ಮೇಲಿರುವ ಪರಿಶಿಷ್ಟರಿಗೆ ತಲುಪಿವೆ. ಹೆಚ್ಚು ಮೇಲ್ವರ್ಗಗಳ ಪ್ರಾತಿನಿಧ್ಯ ಹೊಂದಿದ್ದರೂ ಸಹ ಮೂಲಭೂತ ಅವಶ್ಯಕತೆಗಳ ಪೂರೈಕೆ ಉತ್ತಮವಾಗಿಲ್ಲ. ಇಲ್ಲಿ ಕೆಳಜಾತಿ-ವರ್ಗಗಳ ಸದಸ್ಯರು ಕಡಿಮೆ ಪ್ರಾತಿನಿಧ್ಯವನ್ನು ಹೊಂದಿದ್ದು ಈ ವರ್ಗಗಳ ಸಬಲೀಕರಣಕ್ಕೆ ಯಾವುದೇ ಪ್ರಯತ್ನಗಳು ನಡೆದಿಲ್ಲ. ಇಲ್ಲಿನ ಕೆಳಜಾತಿ-ವರ್ಗಗಳು ಆರ್ಥಿಕ ಮತ್ತು ಸಾಮಾಜಿಕವಾಗಿ ಹೆಚ್ಚು

ದುರ್ಬಲವಾಗಿದ್ದಾರೆ. ಈ ಜನತೆ ಆರ್ಥಿಕತೆಯ ದೃಷ್ಟಿಯಿಂದ ಸ್ಥಳೀಯ ಮೇಲ್ವರ್ಗಗಳನ್ನು ಅವಲಂಬಿಸಿವೆ. ಇವರು ಭೂರಹಿತರಾಗಿದ್ದು, ಆಯ್ಕೆಗೊಂಡ ಪಂಚಾಯತಿ ಸದಸ್ಯರ ವಾರ್ಡುಗಳಲ್ಲಿನ ಕೆಲವು ಕಾಮಗಾರಿಗಳಾದ ಬಂಡೆಹಾಕಿಸುವುದು, ನೀರಿನ ತೊಟ್ಟಿಕಟ್ಟಿಸುವ ಕಾರ್ಯಗಳನ್ನು ಕೈಗೊಳ್ಳಲಾಗಿದೆ. ಈ ಕಾಮಗಾರಿಗಳನ್ನು ಆಯಾ ಸದಸ್ಯವಾರು ಹಂಚಲಾಗಿದೆ. ಹಾಗಾಗಿ ಎಲ್ಲ ವಾರ್ಡುಗಳಲ್ಲಿ ಈ ಕೆಲಸಗಳು ಆಗಿವೆ. ಜಾತಿವಾರು ಪ್ರಾತಿನಿಧ್ಯದಿಂದ ಆಯಾ ವಾರ್ಡಿನ ಕಾಮಗಾರಿಗಳು ಅನುಷ್ಠಾನಗೊಂಡಿವೆ. ಆದರೇ ಕೆಳಜಾತಿ-ವರ್ಗಗಳ ಪ್ರಾತಿನಿಧ್ಯದಿಂದ ಸ್ಥಳೀಯ ಆಡಳಿತದಲ್ಲಿ ಈ ವರ್ಗಗಳ ಬೇಡಿಕೆಗಳು, ಹಿತಾಸಕ್ತಿಗಳು ಈಡೇರಿಲ್ಲ. ಅದಕ್ಕೆ ಕಾರಣ ಹೆಚ್ಚು ಪಂಚಾಯತಿ ಸದಸ್ಯರು ಮೇಲ್ವರ್ಗದರಾಗಿದ್ದು ಮತ್ತು ಈ ಗ್ರಾಮಗಳು ಊಳಿಗಮಾನ್ಯ ಲಕ್ಷಣಗಳಿಂದ ಮುಕ್ತವಾಗಿಲ್ಲ ಎಂದು ಹೇಳಬಹುದು. ಗ್ರಾಮಪಂಚಾಯತಿಯ ಕಾರ್ಯಕ್ಷಮತೆಯಲ್ಲಿ ಇವರ ಪ್ರಾತಿನಿಧ್ಯ ಮಾತ್ರ ಇದ್ದು, ಯಾವುದೇ ಪಾಲುದಾರಿಕೆ ಇಲ್ಲ ಎಂಬುವುದು ಅಧ್ಯಯನದಿಂದ ಸ್ಪಷ್ಟವಾಗಿದೆ.

**ಹಿರೇಹೆಗ್ಡಾಳ್ ಗ್ರಾಮಪಂಚಾಯತಿ**

ಹಿರೇಹೆಗ್ಡಾಳ್ ಚಿಕ್ಕ ಗ್ರಾಮಪಂಚಾಯತಿಯಾಗಿದ್ದು, ನಾಲ್ಕು ಗ್ರಾಮಗಳಿಂದ ಒಟ್ಟು 10 ಪಂಚಾಯತಿ ಸದಸ್ಯರನ್ನು ಹೊಂದಿದೆ. ಲಿಂಗವಾರು ಪ್ರಾತಿನಿಧ್ಯವನ್ನು ನೋಡಿದಾಗ 06(60.00) ಪುರುಷ ಸದಸ್ಯರು, 04(40.00) ಮಹಿಳಾ ಸದಸ್ಯರು ಆಯ್ಕೆಗೊಂಡಿದ್ದಾರೆ. ಗ್ರಾಮವಾರು ಪಂಚಾಯತಿ ಸದಸ್ಯರಲ್ಲಿ ಹಿರೇಹೆಗ್ಡಾಳ್ 04, ಸಾಸಲವಾಡ 03, ಬೊಪ್ಪಲಪುರದಿಂದ 02, ಮತ್ತು ಸಾಣೇಹಳ್ಳಿ ಗ್ರಾಮಗಳಿಂದ ಒಬ್ಬ ಸದಸ್ಯರು ಪ್ರತಿನಿಧಿಕರಣಗೊಂಡಿದ್ದಾರೆ.[6] ಆಯಾ ಗ್ರಾಮಗಳ ಜನಸಂಖ್ಯೆಗೆ ಅನುಗುಣವಾಗಿ ಸದಸ್ಯರನ್ನು ಹೊಂದಿದೆ. ಇದರಲ್ಲಿ 10 ಜನ ಸದಸ್ಯರು ಚುನಾವಣೆಯ ಮೂಲಕ ಆಯ್ಕೆಗೊಂಡಿದ್ದಾರೆ. ಅಧ್ಯಯನ ಕೈಗೊಂಡ ಗ್ರಾಮಪಂಚಾಯತಿಗಳಲ್ಲಿ ಈ ಪಂಚಾಯತಿಯಲ್ಲಿ ಮಾತ್ರ ಅವಿರೋದ ಆಯ್ಕೆಯಾಗಿಲ್ಲ. ಇದು ಉತ್ತಮ ಬೆಳವಣಿಗೆ ಎನ್ನಬಹುದು. ಏಕೆಂದರೆ ಎಲ್ಲಾ ಸದಸ್ಯರು ಜನರಿಂದಲೇ ಚುನಾಯಿತರಾಗಿರುತ್ತಾರೆ.

ಪಂಚಾಯತಿ ಸದಸ್ಯರ ಜಾತಿವಾರು ಪ್ರಾತಿನಿಧ್ಯವನ್ನು ನೋಡಿದಾಗ ಶೇ.54ರಷ್ಟಿರುವ ಲಿಂಗಾಯ್ತರು ಶೇ.30ರಷ್ಟು ಪ್ರಾತಿನಿಧ್ಯವನ್ನು ಹೊಂದಿದ ಇದು ಬಹುಸಂಖ್ಯಾತ ಸಮುದಾಯವಾಗಿದೆ. ಶೇ.15 ರಷ್ಟಿರುವ ಮಾದಿಗರು ಶೇ.30ರಷ್ಟು ಪ್ರಾತಿನಿಧ್ಯವನ್ನು ಹೊಂದಿದ ಪಂಚಾಯತಿಯ ಎರಡನೇ ದೊಡ್ಡ ಸಮುದಾಯವಾಗಿದೆ. ಶೇ.7ರಷ್ಟಿರುವ ಬೋವಿಗಳು ಶೇ.10ರಷ್ಟು, ಶೇ.6ರಷ್ಟಿರುವ ಕುರುಬರು ಶೇ.10ರಷ್ಟು, ಶೇ.5ರಷ್ಟಿರುವ ನಾಯಕರು ಶೇ.10ರಷ್ಟು ಮತ್ತು ಶೇ.2ರಷ್ಟಿರುವ ವಿಶ್ವಕರ್ಮ ಜಾತಿಯವರು ಶೇ.10ರಷ್ಟು ಪ್ರಾತಿನಿಧ್ಯವನ್ನು ಹೊಂದಿದ್ದಾರೆ(ಕೋಷ್ಟಕ-28).[7] ಈ ಜಾತಿವಾರು ಪ್ರಾತಿನಿಧ್ಯದ ಅಂಕಿ-ಅಂಶಗಳ ವಿವರಗಳನ್ನು ಗಮನಿಸಿದಾಗ ಬಹುಸಂಖ್ಯಾತರಾಗಿರುವ ಲಿಂಗಾಯತರು ಕಡಿಮೆ ಪ್ರಾತಿನಿಧ್ಯವನ್ನು, ಕಡಿಮೆ ಕುಟುಂಬಗಳನ್ನು ಹೊಂದಿರುವ ಕೆಳವರ್ಗಗಳು ಹೆಚ್ಚು ಪ್ರಾತಿನಿಧ್ಯವನ್ನು ಪಡೆದುಕೊಂಡಿದ್ದಾರೆ. ಹಾಗಾಗಿ ಇಲ್ಲಿ ಮೀಸಲಾತಿ ಜಾರಿಯಿಂದ ಕೆಳವರ್ಗಗಳು ಹೆಚ್ಚು ಪ್ರತಿನಿಧಿಕರಣಗೊಂಡಿದ್ದಾರೆ. ಪರಿಶಿಷ್ಟಜಾತಿಗೆ ಮೀಸಲಿದ್ದ ಅಧ್ಯಕ್ಷ ಸ್ಥಾನವನ್ನು ಹಿರೇಹೆಗ್ಡಾಳ್ ಗ್ರಾಮದ ಮಾದಿಗ ಜಾತಿಗೆ ಸೇರಿದ ವ್ಯಕ್ತಿ ಪಡೆದುಕೊಂಡಿದ್ದಾನೆ. ಇನ್ನೂ ಉಪಾಧ್ಯಕ್ಷ

ಸ್ಥಾನವು ಬೊಪ್ಪಲಪುರ ಗ್ರಾಮದ ಕುರುಬ ಜನಾಂಗಕ್ಕೆ ಹೋಗಿದೆ. ಹೀಗೆ ಗ್ರಾಮಪಂಚಾಯತಿ ಸದಸ್ಯರ ಆಯ್ಕೆ, ಜಾತಿವಾರು ಪ್ರಾತಿನಿಧ್ಯವನ್ನು ಹೊಂದಿದ್ದಾರೆ. ಇಲ್ಲಿ ಮೇಲ್ವರ್ಗಗಳೇ ಹೆಚ್ಚಾಗಿದ್ದರೂ ಸಹ ಮೀಸಲಾತಿ ಪ್ರಕ್ರಿಯೆಯಿಂದ ಕೆಳಜಾತಿಗಳು ಪ್ರಮುಖ ಸ್ಥಾನಗಳನ್ನು ಪಡೆದುಕೊಳ್ಳುವಲ್ಲಿ ಯಶಸ್ವಿಯಾಗಿವೆ.

ಪಂಚಾಯತಿ ಪ್ರದೇಶದಲ್ಲಿ ಲಿಂಗಾಯ್ತರೆ ಬಹುಸಂಖ್ಯಾತರಾಗಿದ್ದು, ಎಲ್ಲಾ ಜಾತಿ ವರ್ಗಗಳು ಪಂಚಾಯತಿ ಪ್ರಾತಿನಿಧ್ಯವನ್ನು ಹೊಂದಿವೆ. ಮೀಸಲಾತಿ ಪ್ರಕ್ರಿಯೆಯಿಂದ ಹೆಚ್ಚು ಕೆಳಜಾತಿಗಳು ಪ್ರಾತಿನಿಧ್ಯವನ್ನು ಪಡೆದಿವೆ. ಗ್ರಾಮಪಂಚಾಯತಿ ಚಿಕ್ಕದಾಗಿದ್ದು, ಇದರ ವ್ಯಾಪ್ತಿಯಲ್ಲಿ ಬರುವ ಗ್ರಾಮಗಳು ಚಿಕ್ಕದಾಗಿರುವುದರಿಂದ, ಜಾತಿ-ಜಾತಿಗಳ ನಡುವೆ ಹೊಂದಾಣಿಕೆಗಳನ್ನು ಕಾಣಬಹುದು. ಮೂಲಭೂತ ಅವಶ್ಯಕತೆಗಳಾದ ಕುಡಿಯುವ ನೀರು, ವಸತಿ ಯೋಜನೆಗಳ ವಿತರಣೆ ಮತ್ತು ಬಡತನ ನಿರ್ಮೂಲನೆ ಕಾರ್ಯಕ್ರಮಗಳು ಅನುಷ್ಠಾನವನ್ನು ನೋಡಿದರೆ ಇತರೆ ಪಂಚಾಯತಿಗಳಿಗಿಂತ ಉತ್ತಮವಾಗಿದೆ. ನೈರ್ಮಲ್ಯ ಕಾರ್ಯಕ್ರಮಗಳು ಪೂರ್ಣವಾಗಿ ಕೈಗೊಂಡಿಲ್ಲ. ಸ್ಥಳೀಯ ರಾಜಕೀಯದಲ್ಲಿ ಮೇಲ್ವರ್ಗಗಳ ಪ್ರಾಬಲ್ಯ ಇನ್ನೂ ಇದೆ. ಕೆಳಜಾತಿಯವರೇ ಅಧ್ಯಕ್ಷರಾಗಿರುವುದರಿಂದ ಮೇಲ್ವರ್ಗದವರು ಗ್ರಾಮದ ಅಭಿವೃದ್ಧಿಯಲ್ಲಿ ಸಹಕರಿಸಿದ್ದಾರೆ. ಕೆಳಜಾತಿ-ವರ್ಗಗಳ ಪ್ರಾತಿನಿಧ್ಯದಿಂದ ಈ ವರ್ಗದ ಸಮಸ್ಯೆಗಳು ನಿವಾರಣೆಯಾಗಿಲ್ಲ. ಕೆಳಜಾತಿಗಳ ವಾರ್ಡಿನಲ್ಲಿ ನಡೆದ ಕಾಮಗಾರಿಗಳು ಇತರೆ ಜಾತಿ ವಾರ್ಡುಗಳಲ್ಲಿ ನಡೆದಂತೆ ನಡೆದಿವೆ. ಇಲ್ಲಿ ಪರಿಶಿಷ್ಟರ ಯೋಜನೆಯಡಿಯಲ್ಲಿ ಹೆಚ್ಚು ವಸತಿಗಳನ್ನು ನಿರ್ಮಿಸಲಾಗಿದೆ. ಆದರೆ ಈ ವಸತಿಗಳು ನಿಜವಾದ ಬಡವರಿಗೆ ತಲುಪಿಲ್ಲ. ಜಾತಿವಾರು ಪ್ರಾತಿನಿಧ್ಯ ಪಡೆದಾಗಲೂ ಆ ವರ್ಗದ ಜನತೆಯ ಸಬಲೀಕರಣ ಆಗುತ್ತಿಲ್ಲ. ಜಾತಿವಾರು ಪ್ರಾತಿನಿಧ್ಯದಿಂದ ವಾರ್ಡಿನ ಕಾಮಗಾರಿಗಳು ಅನುಷ್ಠಾನಗೊಂಡಿವೆ. ಆದರೆ ಆ ವರ್ಗಗಳ ಬೇಡಿಕೆಗಳ ಹಿತಾಸಕ್ತಿಗಳು ಈಡೇರಿಲ್ಲ ಎಂದು ಹೇಳಬಹುದು. ಜಾತಿವಾರು ಪ್ರಾತಿನಿಧ್ಯದಿಂದ ಕೆಲವು ಪಂಚಾಯತಿ ಪ್ರಕಾರ್ಯಗಳು ಸರಿಯಾಗಿ ಅನುಷ್ಠಾನಗೊಳಿಸಲಾಗಿದೆ. ಹೀಗೆ ಎಲ್ಲಾ ಜಾತಿ-ವರ್ಗಗಳ ಪ್ರಾತಿನಿಧ್ಯದಿಂದ ಗ್ರಾಮಪಂಚಾಯತಿ ಕಾರ್ಯಕ್ಷಮತೆ ಇತರೆ ಪಂಚಾಯತಿಗಳಿಗಿಂತ ಉತ್ತಮವಾಗಿದೆ ಎಂದು ಹೇಳಬಹುದು.

## ಉಜ್ಜನಿ ಗ್ರಾಮಪಂಚಾಯತಿ

ಅಧ್ಯಯನ ಕೈಗೊಂಡ ಗ್ರಾಮಪಂಚಾಯತಿಗಳಲ್ಲಿ ಉಜ್ಜನಿಯು ದೊಡ್ಡ ಗ್ರಾಮಪಂಚಾಯತಿ ಯಾಗಿದೆ. ಈ ಪಂಚಾಯತಿಯು ಮೂರು ಗ್ರಾಮಗಳನ್ನು ಹೊಂದಿದ್ದು, 17 ಜನ ಪಂಚಾಯತಿ ಸದಸ್ಯರನ್ನು ಹೊಂದಿದೆ. ಇದರಲ್ಲಿ 11(64.71)ಜನ ಪುರುಷರು, ಮತ್ತು 07(55.29) ಮಹಿಳಾ ಸದಸ್ಯರಿದ್ದಾರೆ. ಸದಸ್ಯರ ಪ್ರಾತಿನಿಧ್ಯವನ್ನು ಗ್ರಾಮವಾರು ನೋಡಿದಾಗ ಉಜ್ಜನಿಯಿಂದ 13(76.50) ರಷ್ಟು, ಬೆನಕನಹಳ್ಳಿ ಮತ್ತು ಬೈರದೇವರಗುಡ್ಡ ಗ್ರಾಮಗಳಲ್ಲಿ ತಲಾ 02(11.75)ರಷ್ಟು ಸದಸ್ಯರು ಪ್ರಾತಿನಿಧ್ಯವನ್ನು ಹೊಂದಿದ್ದಾರೆ.[8] ಸದಸ್ಯರ ಆಯ್ಕೆ ಪ್ರಕ್ರಿಯೆಯನ್ನು ನೋಡಿದಾಗ 15 ಜನ ಸದಸ್ಯರು ಚುನಾವಣೆಯ ಮೂಲಕ ಆಯ್ಕೆಯಾಗಿದ್ದು, ಪರಿಶಿಷ್ಟ ಪಂಗಡಕ್ಕೆ ಸೇರಿದ ಒಬ್ಬ ಮಹಿಳೆ ಮತ್ತು ಹಿಂದುಳಿದ ವರ್ಗದ ಒಬ್ಬ ಮಹಿಳೆ ಅವಿರೋಧವಾಗಿ ಆಯ್ಕೆಯಾಗಿದ್ದಾರೆ. ಇಲ್ಲಿ ಮಹಿಳೆಯು ಮಾತ್ರ ಅವಿರೋಧವಾಗಿ ಆಯ್ಕೆಯಾಗಿದ್ದಾರೆ.

ಪಂಚಾಯತಿ ಸದಸ್ಯರ ಜಾತಿವಾರು ಪ್ರಾತಿನಿಧ್ಯವನ್ನು ನೋಡಿದಾಗ, ಶೇ.26ರಷ್ಟಿರುವ ಲಿಂಗಾಯ್ತರು ಶೇ.23ರಷ್ಟು ಪ್ರಾತಿನಿಧ್ಯವನ್ನು, ಶೇ.20ರಷ್ಟಿರುವರು ಕುರುಬರು ಶೇ.17ರಷ್ಟು, ಶೇ.16ರಷ್ಟಿರುವ ನೇಕಾರರು ಶೇ.11ರಷ್ಟು, ಆಯ್ಕೆಗೊಂಡಿದ್ದಾರೆ. ಇನ್ನೂ ಕೆಳಜಾತಿಗಳಾದ, ಮಾದಿಗರು ಶೇ.6ರಷ್ಟು ಇದ್ದು ಶೇ.17ರಷ್ಟು. ಶೇ.3ರಷ್ಟಿರುವ ಚೆಲುವಾದಿ ಶೇ.5ರಷ್ಟು, ಶೇ.3ರಷ್ಟಿರುವ ನಾಯಕರು ಶೇ.11ರಷ್ಟು ಮತ್ತು ಶೇ.10ರಷ್ಟಿರುವ ಅಲ್ಪಸಂಖ್ಯಾತ ಮುಸ್ಲಿಂರು, ಶೇ.11ರಷ್ಟು ಪ್ರತಿನಿಧಿಕರಣ ಗೊಂಡಿದ್ದಾರೆ (ಕೋಷ್ಟಕ-28).[9] ಮೀಸಲಾತಿಯಿಂದ ಕೆಳವರ್ಗ, ಹಿಂದುಳಿದ ವರ್ಗಗಳು ಹೆಚ್ಚು ಪ್ರಾತಿನಿಧ್ಯವನ್ನು ಹೊಂದಿದ್ದಾರೆ. ಹೀಗೆ ಈ ಪಂಚಾಯತಿಯಲ್ಲಿ ಜಾತಿವಾರು ಪ್ರಾತಿನಿಧ್ಯ ಪಂಚಾಯತಿ ವ್ಯಾಪ್ತಿಯ ಗ್ರಾಮಗಳಲ್ಲಿ ಉಜ್ಜನಿಯು ದೊಡ್ಡ ಗ್ರಾಮವಾಗಿದ್ದು ಪಂಚಾಯತಿ ಕೆಲಸಗಳು ಈ ಗ್ರಾಮದಲ್ಲಿ ಹೆಚ್ಚು ಅನುಷ್ಠಾನಗೊಂಡಿವೆ. ಈ ಗ್ರಾಮಪಂಚಾಯತಿಯಲ್ಲಿ ವೀರಶೈವರು ಪ್ರಬಲರಾಗಿದ್ದು, ಸ್ಥಳೀಯ ಆಡಳಿತದಲ್ಲಿ ಇವರ ರಾಜಕೀಯ ಪ್ರಾಬಲ್ಯ ಇನ್ನೂ ಗಟ್ಟಿಯಾಗಿದೆ. ಈ ಪ್ರಾಬಲ್ಯಕ್ಕೆ ಕಾರಣ ಕೊಟ್ಟೂರು ವಿಧಾನಸಭಾ ಕ್ಷೇತ್ರದ ಶಾಸಕರು ಉಜ್ಜನಿಯವರೇ ಆಗಿದ್ದು ಅವರು ವೀರಶೈವರಾಗಿದ್ದಾರೆ ಮತ್ತು ಪಂಚಪೀಠಗಳಲ್ಲಿ ಒಂದಾಗಿರುವ ಉಜ್ಜನಿ ಯ ಪೀಠವು ವೀರಶೈವರಿಗೆ ಸೇರಿದೆ. ಈ ಅಂಶಗಳೇ ವೀರಶೈವರ ಪ್ರಾಬಲ್ಯಕ್ಕೆ ಕಾರಣವಾಗಿದೆ. ಆರ್ಥಿಕ ಮತ್ತು ಸಾಮಾಜಿಕವಾಗಿ ಇವರು ಉತ್ತಮ ಸ್ಥಿತಿಯಲ್ಲಿದ್ದಾರೆ. ಗ್ರಾಮ ಪಂಚಾಯತಿಗೆ ವಹಿಸಿರುವ ಪ್ರಕಾರ್ಯಗಳನ್ನು ಪಂಚಾಯತಿ ಸದಸ್ಯರು ಹೇಗೆ ನಿರ್ವಹಿಸಿದ್ದಾರೆ ಎಂಬುದನ್ನು ಮೂಲಭೂತ ಅವಶ್ಯಕತೆಗಳಾದ ಕುಡಿಯುವ ನೀರಿನ ಸೌಲಭ್ಯವನ್ನು ನೋಡಿದಾಗ, ಪಂಚಾಯತಿಯ ಎಲ್ಲಾ ಗ್ರಾಮಗಳಲ್ಲಿ ಉತ್ತಮವಾಗಿ ಪೂರೈಕೆಯಾಗುತ್ತಿಲ್ಲ. ನೈರ್ಮಲ್ಯ ಕಾರ್ಯಕ್ರಮಗಳು ಸಹ ಸೀಮಿತವಾಗಿ ಅನುಷ್ಠಾನಗೊಂಡಿವೆ. ವಸತಿ ಯೋಜನೆಗಳ ವಿತರಣೆಗಳು ನಿಜವಾದ ಬಡವರಿಗೆ ತಲುಪದೇ ಬಡತನ ರೇಖೆ ಮೇಲಿನ ಕುಟುಂಬಗಳಿಗೆ ಹೆಚ್ಚು ಹಂಚಲಾಗಿದೆ. ವಸತಿ ಯೋಜನೆಗಳ ವಿತರಣೆಗಳು ಸಹ ಉದ್ದೇಶಿತ ವರ್ಗಕ್ಕೆ ತಲುಪಿಲ್ಲ. ಪಂಚಾಯತಿ ದಾಖಲೆಗಳ ಪ್ರಕಾರ ಕೆಳವರ್ಗದವರ ವಾರ್ಡಿನಲ್ಲಿ ಕೆಲವು ಸೀಮಿತ ಕಾಮಗಾರಿಗಳನ್ನು ಕೈಗೊಳ್ಳಲಾಗಿದೆ. ಜವಾಹರ್ ಗ್ರಾಮಸಮೃದ್ಧಿ ಯೋಜನೆಯಲ್ಲಿ ನಿಗದಿತ ಭೌತಿಕ ಗುರಿಯನ್ನು ಸಾಧಿಸಿಲ್ಲ. ಕೆಳಜಾತಿ-ವರ್ಗದವರ ಪ್ರಾತಿನಿಧ್ಯದಿಂದ ಆ ಜಾತಿಗಳ ಆಸಕ್ತಿಗಳು, ಸಮಸ್ಯೆಗಳು ನಿವಾರಣೆಯಾಗಿಲ್ಲ. ಈ ಜನತೆ ಆರ್ಥಿಕವಾಗಿ ದುರ್ಬಲರಾಗಿದ್ದಾರೆ. ಒಟ್ಟಾರೆ ಗ್ರಾಮಪಂಚಾಯತಿಯಲ್ಲಿ ಎಲ್ಲಾ ಜಾತಿ/ವರ್ಗಗಳಿಗೂ ಪ್ರಾತಿನಿಧ್ಯ ಇದ್ದಾಗಲೂ ಗ್ರಾಮ ಪಂಚಾಯತಿಯ ಕಾರ್ಯಕ್ಷಮತೆ ಉತ್ತಮವಾಗಿಲ್ಲ ಎಂದು ಹೇಳಬಹುದು.

## ಗ್ರಾಮಪಂಚಾಯತಿಗಳ ತೌಲನಿಕ ವಿವರಣೆ

ಅಧ್ಯಯನ ಕೈಗೊಂಡ ಪಂಚಾಯತಿಗಳಲ್ಲಿ ಜಾತಿವಾರು ಪ್ರಾತಿನಿಧ್ಯ ಮತ್ತು ಅದರ ಪ್ರಭಾವ ಗ್ರಾಮ ಪಂಚಾಯತಿಗಳ ಕಾರ್ಯಕ್ಷಮತೆಯ ಮೇಲೆ ಹೇಗಿದೆ ಎನ್ನುವುದನ್ನು ನೋಡಿದ್ದೇವೆ. ಮೇಲಿನ ವಿವರಗಳ ಪ್ರಕಾರ ಆಯಾ ಜಾತಿವಾರು ಪ್ರಾತಿನಿಧ್ಯದಿಂದ ಆ ಜಾತಿಗಳ ಹಿತಾಸಕ್ತಿಗಳು, ಬೇಡಿಕೆಗಳು ನೇರವಾಗಿ ಯಾವ ಪಂಚಾಯತಿಗಳಲ್ಲಿ ಆಗಿಲ್ಲ. ಈ ಪ್ರಾತಿನಿಧ್ಯದಿಂದ ಆಯಾ ವಾರ್ಡಿನ ಕಾಮಗಾರಿಗಳು ಮಾತ್ರ ಅನುಷ್ಠಾನಗೊಂಡಿವೆ. ಮೀಸಲಾತಿಯ ಪ್ರಕ್ರಿಯೆಯಿಂದ ಕೆಳಜಾತಿ-ವರ್ಗಗಳು ಕೆಲವು ಪಂಚಾಯತಿಯಲ್ಲಿ

ಹೆಚ್ಚು ಪ್ರಾತಿನಿಧ್ಯವನ್ನು ಪಡೆದುಕೊಂಡಿವೆ. ಈ ಪ್ರಕಾರ ಇಲ್ಲದಿದ್ದರೆ ತಾಂತ್ರಿಕ ಲೋಪವಾಗುತ್ತವೆ. ಇದು ಮೇಲ್ನೋಟಕ್ಕೆ ಕಾಣುವ ಲೋಪವಾಗಿದೆ. ಇದನ್ನು ಯಾರಾದರೂ ಕೂಡ ಪ್ರಶ್ನಿಸಬಹುದು. ಆದುದರಿಂದ ಯಾವ ಪಂಚಾಯತಿಯೂ ಈ ನಿಯಮಗಳನ್ನು ಮುರಿಯಲು ಪ್ರಯತ್ನಿಸುವುದಿಲ್ಲ. ಇದನ್ನೆ ತಾಂತ್ರಿಕ ಪ್ರತಿನಿಧಿಕರಣ ಎಂದು ಹೇಳಿದ್ದಾರೆ.[10] ಈ ಪ್ರತಿನಿಧಿಕರಣವನ್ನು ಅಧ್ಯಯನ ಕೈಗೊಂಡ ಪಂಚಾಯತಿಯಲ್ಲಿ ಯಾರು ಮುರಿದಿಲ್ಲ. ಬೈಲುವದ್ದಿಗೆರೆ ಮತ್ತು ಹಿರೇಹೆಗ್ಡಾಳ್‌ನಲ್ಲಿ ಹೆಚ್ಚು ಮೇಲ್ವರ್ಗಗಳು ಇದ್ದರೂ ಸಹ ಮೀಸಲಾತಿಯಿಂದ ಕೆಳಜಾತಿಯವರೇ ಅಧ್ಯಕ್ಷರಾಗಿದ್ದಾರೆ. ಕೆಳಜಾತಿ ಅಧ್ಯಕ್ಷರಾಗಿರುವ ಹಿರೇಹೆಗ್ಡಾಳ್ ಪಂಚಾಯತಿಯಲ್ಲಿ ಕೆಲವು ಈ ಜಾತಿಗಳ ಕಾರ್ಯಕ್ರಮಗಳು ಚೆನ್ನಾಗಿ ಅನುಷ್ಠಾನಗೊಂಡಿವೆ. ಈ ಪಂಚಾಯತಿಯ ಅಧ್ಯಕ್ಷರು ಪದವೀಧರರಾಗಿದ್ದು, ದಲಿತ ಸಂಘರ್ಷ ಸಮಿತಿಯಲ್ಲಿ ಕೆಲಸಮಾಡಿದವರಾಗಿದ್ದಾರೆ. ಹಾಗಾಗಿ ಗ್ರಾಮಪಂಚಾಯತಿಯಲ್ಲಿ ಕೆಲವು ಪರಿಶಿಷ್ಟರ ಯೋಜನೆಗಳು ಅನುಷ್ಠಾನ ಗೊಂಡಿವೆ. ಉದಾಹರಣೆಗೆ ಹೆಚ್ಚು ಪರಿಶಿಷ್ಟರ ಯೋಜನೆಗಳಲ್ಲಿ ವಸತಿಗಳನ್ನು ನಿರ್ಮಿಸಲಾಗಿದೆ. ಅದೇ ಬೈಲುವದ್ದಿಗೆರೆಯಲ್ಲಿ ಪರಿಶಿಷ್ಟ ಪಂಗಡಕ್ಕೆ ಸೇರಿದ ಮಹಿಳೆ ಅಧ್ಯಕ್ಷರಾಗಿದ್ದು, ಈ ಸದಸ್ಯೆ ಆರ್ಥಿಕವಾಗಿ ಮತ್ತು ಸಾಮಾಜಿಕವಾಗಿ ದುರ್ಬಲರಾಗಿರುವುದರಿಂದ ಪರಿಶಿಷ್ಟರ ಕಾರ್ಯಗಳು ಸರಿಯಾಗಿ ಜಾರಿಗೊಂಡಿಲ್ಲ. ಇನ್ನೂ ನಾಗೇನಹಳ್ಳಿಯಲ್ಲಿ ಹೆಚ್ಚು ಪರಿಶಿಷ್ಟರನ್ನು ಹೊಂದಿದ್ದರೂ ಸಹ ಮೇಲ್ವರ್ಗದವರೇ ಅಧ್ಯಕ್ಷರಾಗಿದ್ದಾರೆ. ಆದರೆ ಕೆಳಜಾತಿ/ ವರ್ಗದ ಸದಸ್ಯರು ಹೆಚ್ಚಾಗಿದ್ದಾರೂ ಇಲ್ಲಿ ಕೆಳಜಾತಿಗಳ ಸದಸ್ಯರ ಭಾಗವಹಿಸುವಿಕೆ ಸರಿಯಿಲ್ಲವಾದ್ದರಿಂದ ಇಲ್ಲಿಯೂ ಸಹ ಪರಿಶಿಷ್ಟರ ಕಾರ್ಯಕ್ರಮಗಳು ಕಡಿಮೆ ಅನುಷ್ಠಾನಗೊಂಡಿವೆ. ಉಜ್ಜನಿಯಲ್ಲಿ ಮೇಲ್ವರ್ಗಗಳೇ ಹೆಚ್ಚು ಇದ್ದು ಲಿಂಗಾಯ್ತರೆ ಪಂಚಾಯತಿ ಅಧ್ಯಕ್ಷರಾಗಿದ್ದಾರೆ. ಹಾಗಾಗಿ ಪರಿಶಿಷ್ಟರ ಕಾರ್ಯಕ್ರಮಗಳು ಇಲ್ಲಿ ಕಡಿಮೆ ಅನುಷ್ಠಾನಗೊಂಡಿವೆ.

ಒಟ್ಟಾರೇ ನೀರಾವರಿ ಪ್ರದೇಶದ ಗ್ರಾಮಪಂಚಾಯತಿಗಳ ಕಾರ್ಯಕ್ಷಮತೆಯ ಒಣಭೂಮಿ ಪ್ರದೇಶದ ಪಂಚಾಯತಿಗಳಿಗಿಂತ ಉತ್ತಮವಾಗಿದೆ. ಆರ್ಥಿಕ ಮತ್ತು ಸಾಮಾಜಿಕ ಅಂಶಗಳು ಪಂಚಾಯತಿಯಲ್ಲಿ ಭಾಗವಹಿಸುವಿಕೆಯಲ್ಲಿ ಹೆಚ್ಚು ಪ್ರಭಾವ ಬೀರಿರುವುದರಿಂದ ನೀರಾವರಿ ಪ್ರದೇಶದ ಪಂಚಾಯತಿಗಳ ಕಾರ್ಯಕ್ಷಮತೆ ಒಣಭೂಮಿ ಪ್ರದೇಶದ ಪಂಚಾಯತಿಗಳಿಗೆ ಹೋಲಿಸಿದರೆ ಉತ್ತಮವಾಗಿದೆ.ಅಂದರೆ ಪಂಚಾಯತಿ ವ್ಯವಸ್ಥೆಯ ಮೇಲೆ ಆಯಾ ಪ್ರದೇಶದ ಆರ್ಥಿಕ ಮತ್ತು ಸಾಮಾಜಿಕ ಅಂಶಗಳು ಹೆಚ್ಚು ಪರಿಣಾಮ ಬೀರಿರುವುದು ಅಧ್ಯಯನದಿಂದ ಕಂಡುಬಂದಿದೆ. ಹಾಗಾಗಿ ಜಾತಿವಾರು ಪ್ರಾತಿನಿಧ್ಯದಲ್ಲಿ ಆರ್ಥಿಕ ಮತ್ತು ಸಾಮಾಜಿಕ ಅಂಶಗಳು ಹೆಚ್ಚು ಪ್ರಭಾವ ಬೀರಿರುವುದು ಅಧ್ಯಯನದಿಂದ ಕಂಡುಬಂದಿದೆ.

## 5.2 ಗ್ರಾಮಸಭೆಗಳು

ಅಭಿವೃದ್ಧಿಯಲ್ಲಿ ಪಂಚಾಯತಿ ಸದಸ್ಯರ ಮತ್ತು ಗ್ರಾಮೀಣ ಜನತೆಯ ಭಾಗವಹಿಸುವಿಕೆಯನ್ನು ನಿರ್ಧರಿಸುವ ಬಹುಮುಖ್ಯವಾದ ಸೂಚ್ಯಂಕ ಗ್ರಾಮಸಭೆಯಾಗಿದೆ. ಏಕೆಂದರೆ ಗ್ರಾಮದಲ್ಲಿರುವ ಎಲ್ಲಾ ಮತದಾರರು ಗ್ರಾಮಸಭೆಯ ಸದಸ್ಯರಾಗಿದ್ದು, ವಿಕೇಂದ್ರೀಕರಣ ವ್ಯವಸ್ಥೆಯ ಅತೀ ತಳಮಟ್ಟದ ಸಂಸ್ಥೆಯಾಗಿದ್ದು ಜನತೆಯ ನೇರ ಪ್ರತಿನಿಧಿಗಳನ್ನು ಈ ಸಭೆ ಹೊಂದಿದೆ. ಜನತಾಂತ್ರಿಕ ವ್ಯವಸ್ಥೆಯಲ್ಲಿ

ಇದರಂತೆ ಬೇರ್ಯಾವ ಸಂಸ್ಥೆಯು ನೇರ ಪ್ರಾತಿನಿಧ್ಯವನ್ನು ಹೊಂದಿಲ್ಲ.[11] ಆದ್ದರಿಂದ ಗ್ರಾಮಸಭೆ ತಳಮಟ್ಟದಲ್ಲಿ ಮುಖ್ಯವಾದ ಸಭೆಯಾಗಿದೆ.

ರಾಷ್ಟ್ರಕ್ಕೆ ಸಂಸತ್ತು ಹೇಗೆ ಅವಶ್ಯಕವೋ ಗ್ರಾಮಕ್ಕೆ ಗ್ರಾಮಸಭೆಯೂ ಅಷ್ಟೆ ಅವಶ್ಯಕ. ಸಂಸತ್ತಿನಲ್ಲಿ ನಮ್ಮ ಪ್ರತಿನಿಧಿಗಳಿದ್ದರೆ, ಗ್ರಾಮಸಭೆಯಲ್ಲಿ ಪ್ರತಿನಿಧಿಗಳ ಜೊತೆಗೆ ಗ್ರಾಮದ ಮತದಾರರು ನೇರವಾಗಿ ಭಾಗವಹಿಸುವ ಅವಕಾಶವಿದೆ. ಸ್ಥಳೀಯ ಸಮಸ್ಯೆಗಳನ್ನು ಚರ್ಚಿಸಿ, ಊರವರ ಬೇಕು-ಬೇಡಗಳನ್ನು ನಿರ್ಧರಿಸುವ, ಜನತೆಯ ಹಿತಾಸಕ್ತಿಗೆ ಪೂರಕವಾಗಿ ಯೋಜನೆಗಳನ್ನು ಅನುಷ್ಠಾನಗೊಳಿಸುವ ಸಂಸ್ಥೆ ಇದಾಗಿದೆ. ಹಾಗಾಗಿ ಗ್ರಾಮಸಭೆಗೆ ಇಂದು ಹೆಚ್ಚು ಪ್ರಾಮುಖ್ಯತೆ ಕೊಡಲಾಗಿದೆ. ಈ ಪ್ರಾಮುಖ್ಯತೆಗೆ ಕೆಲವು ಪ್ರಮುಖ ಕಾರಣಗಳನ್ನು ಕೊಡಬಹುದು. ಕೆಳವರ್ಗಗಳ ಮತ್ತು ಬಡವರ ನೇರ ಭಾಗವಹಿಸುವಿಕೆ ಇರುವುದರಿಂದ ಇವರ ಸ್ಥಿತಿಗತಿಗಳನ್ನು ಸುಧಾರಿಸಬಹುದೆಂಬ ನಂಬಿಕೆ ಇಲ್ಲಿದೆ. ಸರ್ಕಾರ ರೂಪಿಸಿರುವ ಬಹುತೇಕ ಯೋಜನೆಗಳನ್ನು ಜಾರಿಗೆ ತರುವಲ್ಲಿ ಮತ್ತು ಜನತೆಗೆ ತಲುಪಿಸುವಲ್ಲಿ ಸಹಭಾಗಿತ್ವ ಉದ್ದೇಶವನ್ನು ಈ ಸಭೆ ಹೊಂದಿದೆ. ಗ್ರಾಮದ ಎಲ್ಲಾ ಜಾತಿ-ವರ್ಗಗಳು ಭಾಗವಹಿಸುವುದರಿಂದ ಬಡವರು ಯಾರು ಎಂಬ ವಿಚಾರವನ್ನು ಇಲ್ಲಿ ನಿರ್ಧರಿಸಬಹುದಾಗಿದೆ. ಇದರಿಂದ ಸ್ಥಳೀಯ ಆಡಳಿತದಲ್ಲಿ ಪಾರದರ್ಶಕತೆಯನ್ನು ತರಬಹುದಾಗಿದೆ. ಪಂಚಾಯತಿಯು ಪ್ರತಿವರ್ಷ ಕೈಗೊಳ್ಳಬೇಕಾದ ಕಾರ್ಯಗಳನ್ನು ಗ್ರಾಮೀಣ ಜನತೆಗೆ ತಿಳಿಯಪಡಿಸಬಹುದಾಗಿದ. ಹೀಗೆ ಗ್ರಾಮಸಭೆಗಳು ಕೇಂದ್ರ ಮತ್ತು ರಾಜ್ಯ ಸರ್ಕಾರಗಳು ಆಯೋಜಿಸಿರುವ ಯೋಜನೆಗಳನ್ನು ತಳಮಟ್ಟದಲ್ಲಿ ಉದ್ದೇಶಿತ ವರ್ಗಕ್ಕೆ ತಲುಪಿಸುವ ಸಾಂಸ್ಥಿಕ ವ್ಯವಸ್ಥೆ ಇದಾಗಿದೆ. ಹಾಗಾಗಿ ಜನತಾಂತ್ರಿಕ ವ್ಯವಸ್ಥೆಯಲ್ಲಿ ಕೆಳಹಂತದಲ್ಲಿ ಪ್ರಮುಖ ಸಭೆಯಾಗಿದೆ.

ಗ್ರಾಮಸಭೆಯ ಪ್ರಾಮುಖ್ಯತೆ, ಮತ್ತು ಗ್ರಾಮಸಭೆಯ ಕಾರ್ಯಗಳನ್ನು ಈಗಾಗಲೇ ನೋಡಿದ್ದೇವೆ. ವಾಸ್ತವದಲ್ಲಿ ಗ್ರಾಮಸಭೆಗಳು ನಡೆದಿರುವ ಬಗ್ಗೆ ಹಲವಾರು ಅಧ್ಯಯನಗಳು ಈಗಾಗಲೇ ನಡೆದಿದ್ದು, ಒಟ್ಟಾರೇ ಅಧ್ಯಯನದ ಮುಖ್ಯ ಫಲಿತಗಳನ್ನು ಈ ರೀತಿ ಹೇಳಬಹುದು. ಗ್ರಾಮಸಭೆಗಳಲ್ಲಿ ಕೆಳವರ್ಗಗಳ, ಮಹಿಳೆಯರ ಭಾಗವಹಿಸುವಿಕೆ ಕಡಿಮೆ ಇದೆ. ಸ್ಥಳ, ದಿನಾಂಕ, ವೇಳೆಯ ಬಗ್ಗೆ ಊರವರಿಗೆ ಸರಿಯಾದ ಮಾಹಿತಿ ಇಲ್ಲದೇ ಇರುವುದು, ಗ್ರಾಮಸಭೆಗಳನ್ನು ಹೆಚ್ಚು ಪಂಚಾಯತಿ ಇರುವ ಸ್ಥಳಗಳಲ್ಲಿ ಕರೆಯಲಾಗಿದೆ. ಫಲಾನುಭವಿಗಳ ಆಯ್ಕೆ ಗ್ರಾಮಸಭೆಯಲ್ಲಿ ಆಗುವುದಿಲ್ಲ ಮತ್ತು ಹೆಚ್ಚು ಜಗಳಗಳು ಆಗುತ್ತವೆ ಎಂದು ಗುರುತಿಸಬಹುದು. ಈ ತಥ್ಯಗಳನ್ನು ಗಮನದಲ್ಲಿಟ್ಟುಕೊಂಡು ಪ್ರಸ್ತುತ ಅಧ್ಯಯನದ ನಾಲ್ಕು ಗ್ರಾಮಪಂಚಾಯತಿಗಳಲ್ಲಿ ಸದಸ್ಯರ ಮತ್ತು ಗ್ರಾಮೀಣ ಜನತೆಯ ಗ್ರಾಮಸಭೆಯ ಬಗ್ಗೆ ಅರಿವು, ಭಾಗವಹಿಸುವಿಕೆ, ಹೇಗಿದೆ? ಗ್ರಾಮಪಂಚಾಯತಿಯ ಕಾರ್ಯಕ್ಷಮತೆಯಲ್ಲಿ ಗ್ರಾಮಸಭೆಯ ಪಾತ್ರ ಯಾವರೀತಿಯದ್ದು? ಗ್ರಾಮಸಭೆಯಿಂದ ಕೆಳವರ್ಗ ಬಡವರು ಹೇಗೆ ಲಾಭವನ್ನು ಪಡೆದಿದ್ದಾರೆ? ಮುಖ್ಯವಾಗಿ ನೀರಾವರಿ ಮತ್ತು ಒಣಭೂಮಿ ಪಂಚಾಯತಿಗಳಲ್ಲಿ ಗ್ರಾಮಸಭೆಗಳು ಹೇಗೆ ನಡೆದಿವೆ ಎಂಬುದನ್ನು ತೌಲನಿಕವಾಗಿ ಅಧ್ಯಯನ ಮಾಡಲಾಗಿದೆ. ಅಧ್ಯಯನಕ್ಕೆ ಕೈಗೊಂಡ ಗ್ರಾಮಪಂಚಾಯತಿ ವ್ಯಾಪ್ತಿಯ ಗ್ರಾಮಗಳಲ್ಲಿ ಕಳೆದ ಮೂರು ವರ್ಷಗಳಿಂದ ಗ್ರಾಮಸಭೆಗಳು ಹೇಗೆ ನಡೆದಿವೆ ಎಂಬುದನ್ನು ತೌಲನಿಕವಾಗಿ ಚರ್ಚಿಸಲಾಗಿದೆ.

## ನಾಗೇನಹಳ್ಳಿ ಗ್ರಾಮಪಂಚಾಯತಿಯ ಗ್ರಾಮಸಭೆಗಳು

ನಾಗೇನಹಳ್ಳಿ ಗ್ರಾಮಪಂಚಾಯತಿ ವ್ಯಾಪ್ತಿಯಲ್ಲಿ 1998 ರಿಂದ 2000 ವರೆಗೆ ಆರು ಗ್ರಾಮಸಭೆಗಳು ನಡೆದಿದ್ದು, ಆ ಗ್ರಾಮಸಭೆಗಳ ಉದ್ದೇಶ, ಸ್ಥಳ, ಭಾಗವಹಿಸುವಿಕೆ, ಫಲಾನುಭವಿಯ ಆಯ್ಕೆ ಮತ್ತು ಗ್ರಾಮಸಭೆಯಲ್ಲಿ ತೆಗೆದುಕೊಂಡ ನಿರ್ಧಾರಗಳನ್ನು ಇಲ್ಲಿ ವಿವರಿಸಲಾಗಿದೆ. ಕಳೆದ ಮೂರು ವರ್ಷದಿಂದ ನಡೆದ ಗ್ರಾಮಸಭೆಗಳನ್ನು ನೋಡಿದಾಗ ಎರಡು ಗ್ರಾಮಸಭೆಗಳ ಅಂತರ ಆರು ತಿಂಗಳಿಗಿಂತ ಹೆಚ್ಚು ಇದೆ. ಗ್ರಾಮಸಭೆಗಳಲ್ಲಿ ಸರಾಸರಿ 5 ರಿಂದ 7 ಜನ ಸದಸ್ಯರು ಭಾಗವಹಿಸಿದ್ದಾರೆ. ಅಂದರೆ ಶೇ.33ರಷ್ಟು ಭಾಗವಹಿಸುವಿಕೆ ಇದೆ. ಊರವರ ಭಾಗವಹಿಸುವಿಕೆಯನ್ನು ನೋಡಿದಾಗ, ಸರಾಸರಿಯಾಗಿ ಕನಿಷ್ಠ 70 ರಿಂದ ಗರಿಷ್ಟ220 ಜನರು ಭಾಗವಹಿಸಿದ್ದಾರೆ. ಇದು ಗ್ರಾಮದ ಕನಿಷ್ಠ ಶೇ.1.37 ರಿಂದ ಗರಿಷ್ಟ ಶೇ.4.28ರಷ್ಟು ಜನರು ಪಾಲ್ಗೊಂಡಂತಾಯಿತು. ಪಂಚಾಯತಿ ಮಹಿಳಾ ಸದಸ್ಯರು ಮತ್ತು ಗ್ರಾಮದ ಮಹಿಳೆಯರ ಭಾಗವಹಿಸುವಿಕೆ ತುಂಬಾ ಕಡಿಮೆ ಇದೆ. ಪ್ರತಿವರ್ಷ ಊರವರ ಭಾಗವಹಿಸುವಿಕೆಯ ಪ್ರಮಾಣದಲ್ಲಿ ಏರಿಕೆಯಾಗಿದೆ. ಇದು ಪ್ರಗತಿದಾಯಕ ಬೆಳವಣಿಗೆಯಾಗಿದೆ. ಆದರೆ ಮಹಿಳೆಯರ ಭಾಗವಹಿಸುವಿಕೆಯಲ್ಲಿ ಏರಿಕೆಯ ಅಂಶ ಕಂಡುಬಂದಿಲ್ಲ.

ಗ್ರಾಮಸಭೆಗಳು ನಡೆದಿರುವ ಉದ್ದೇಶಗಳನ್ನು ನೋಡಿದಾಗ ಹೆಚ್ಚು ವಸತಿ ಯೋಜನೆಗಳಲ್ಲಿ ಫಲಾನುಭವಿಗಳ ಆಯ್ಕೆಗಾಗಿ, ಭಾಗ್ಯಜ್ಯೋತಿ ಫಲಾನುಭವಿಗಳನ್ನು ಗುರುತಿಸಲು ಮತ್ತು ಜವಾಹರ್ ಗ್ರಾಮಸಮೃದ್ಧಿ ಯೋಜನೆ ಕುರಿತು ಕೈಗೊಳ್ಳಲಾಗಿದೆ. ಗ್ರಾಮಸಭೆಗಳಲ್ಲಿ ಹೆಚ್ಚು ಶಾಲಾಶಿಕ್ಷಕರು, ಅಂಗನವಾಡಿ ಕಾರ್ಯಕರ್ತೆಯರು, ಪುರುಷ ಸದಸ್ಯರು, ಮತ್ತು ಸರ್ಕಾರಿ ಇಲಾಖೆಗಳ ಪ್ರತಿನಿಧಿಗಳು ಭಾಗವಹಿಸಿದ್ದಾರೆ. ಸರಾಸರಿಯಾಗಿ 5-7 ಜನ ಸರ್ಕಾರಿ ಅಧಿಕಾರಿಗಳು ಭಾಗವಹಿಸಿದ್ದಾರೆ. ಪಂಚಾಯತಿ ವ್ಯಾಪ್ತಿಯ ಎಲ್ಲಾ ಗ್ರಾಮಗಳಲ್ಲಿ ಗ್ರಾಮಸಭೆಗಳನ್ನು ನಡೆಸಿಲ್ಲ. ಅದರಲ್ಲೂ ಬೆಳಗೊಡು ಮತ್ತು ಕಳ್ಳಿರಾಂಪುರ ಚಿಕ್ಕ ಗ್ರಾಮಗಳಾಗಿರುವುದರಿಂದ ಇಲ್ಲಿ ಗ್ರಾಮಸಭೆಗಳನ್ನು ನಡೆಸಿಲ್ಲ ಎಂದು ಪಂಚಾಯತಿ ಸದಸ್ಯರು ಮತ್ತು ಅಧಿಕಾರಿಗಳು ಹೇಳಿದ್ದಾರೆ. ಉಳಿದ ನಾಲ್ಕು ಗ್ರಾಮಗಳಲ್ಲಿ ಗ್ರಾಮಸಭೆಗಳನ್ನು ನಡೆಸಲಾಗಿದೆ. ಗ್ರಾಮಸಭೆಗಳಲ್ಲಿ ಚರ್ಚೆಯಾದ ವಿಷಯಗಳೆಂದರೆ ಕುಡಿಯುವ ನೀರು, ವಾರ್ಷಿಕ ಯೋಜನೆ ಮತ್ತು ಕಾಮಗಾರಿಗಳ ಬಗ್ಗೆ ಚರ್ಚೆ ನಡೆದಿದೆ.

ಫಲಾನುಭವಿ ಆಯ್ಕೆಯಲ್ಲಿ ಕೆಲವು ಗ್ರಾಮಸಭೆಗಳಲ್ಲಿ ಜಗಳಗಳು ನಡೆದಿವೆ. ಫಲಾನುಭವಿ ಅಂತಿಮ ಆಯ್ಕೆ ಕುರಿತು ಯಾವ ಗ್ರಾಮಸಭೆಗಳಲ್ಲಿ ನಿಖರವಾಗಿ ಪುಸ್ತಕದಲ್ಲಿ ನಮೂದಿಸಿಲ್ಲ. ಅಧಿಕಾರಿಗಳು ಹೆಚ್ಚು ಭಾಗವಹಿಸಿರುವುದು ಕಂಡುಬಂದಿದೆ. ಜನತೆಯ ಬೇಡಿಕೆಗಳನ್ನು ಸರಿಯಾಗಿ ನಮೂದಿಸಿಲ್ಲ. ಪಂಚಾಯತಿ ಸದಸ್ಯರ ಮತ್ತು ಸಂದರ್ಶಿಸಿದ ಊರವರು ಗ್ರಾಮಸಭೆಯ ಬಗ್ಗೆ ಹೊಂದಿರುವ ಅರಿವು ಮತ್ತು ಭಾಗವಹಿಸುವಿಕೆಯನ್ನು ನೋಡಿದಾಗ ಪಂಚಾಯತಿಯ ಎಲ್ಲಾ ಪುರುಷ ಸದಸ್ಯರಿಗೂ ಮತ್ತು ಶೇ.50ರಷ್ಟು ಮಹಿಳಾ ಸದಸ್ಯರಿಗೆ ಗ್ರಾಮಸಭೆಯ ಬಗ್ಗೆ ಅರಿವು ಇದೆ. ಅರಿವು ಇದ್ದವರಲ್ಲಿ ಭಾಗವಹಿಸುವಿಕೆಯನ್ನು ನೋಡಿದಾಗ, ಶೇ. 85 ರಷ್ಟು ಪುರುಷರು ಮತ್ತು ಶೇ.60ರಷ್ಟು ಮಹಿಳೆಯರು ಮಾತ್ರ ಗ್ರಾಮಸಭೆಯಲ್ಲಿ

ಭಾಗವಹಿಸಿದ್ದಾರೆ(ಕೋಷ್ಠಕ-36). ಮಹಿಳೆಯರಿಗಿಂತ ಹೆಚ್ಚು ಪುರುಷರು ಗ್ರಾಮಸಭೆಯಲ್ಲಿ ಭಾಗವಹಿಸಿದ್ದಾರೆ. ಗ್ರಾಮಸಭೆಯಲ್ಲಿ ಗ್ರಾಮೀಣ ಜನತೆ ಭಾಗವಹಿಸುವಿಕೆ ಬಹಳ ಮುಖ್ಯವಾಗಿದೆ. ಸಂದರ್ಶಿಸಿದವರಲ್ಲಿ ಶೇ.46ರಷ್ಟು ಪುರುಷರಿಗೆ ಅರಿವು ಇದ್ದು, ಶೇ.30ರಷ್ಟು ಭಾಗವಹಿಸಿದ್ದಾರೆ. ಶೇ.17ರಷ್ಟು ಮಹಿಳೆಯರಿಗೆ ಅರಿವು ಇದ್ದು ಶೇ.12ರಷ್ಟು ಭಾಗವಹಿಸಿದ್ದಾರೆ. ಗ್ರಾಮಸಭೆಗೆ ಭಾಗವಹಿಸದೇ ಇರುವುದಕ್ಕೆ ಕೆಲವು ಕಾರಣಗಳನ್ನು ಕೋಷ್ಠಕ 37ರಲ್ಲಿ ಕೊಡಲಾಗಿದೆ. ಒಟ್ಟಾರೆ ಕಳೆದ ಮೂರು ವರ್ಷದಿಂದ ನಡೆದ ಗ್ರಾಮಸಭೆಗಳು ಮತ್ತು ಸದಸ್ಯರ ಊರವರ ಭಾಗವಹಿಸುವಿಕೆಯನ್ನು ನೋಡಿದಾಗ, ಗ್ರಾಮಸಭೆಗಳ ದಾಖಲೆಗಳಲ್ಲಿ ಮಾತ್ರ ಸರಿಯಾಗಿ ನಡೆಸಿದ್ದೇವೆ ಎಂಬುದು ಸ್ಪಷ್ಟವಾಗಿದೆ. ಫಲಾನುಭವಿಗಳ ಆಯ್ಕೆಯ ಬಗ್ಗೆ ನಿಖರವಾದ ಮಾಹಿತಿ ಪುಸ್ತಕದಲ್ಲಿ ನಮೂದಿಸಿಲ್ಲ. ಜನತೆಯ ಬೇಡಿಕೆಗಳ ಪಟ್ಟಿ ಮಾತ್ರ ಇದ್ದು, ಈ ಬೇಡಿಕೆಗಳ ಪರಿಹರಿಸಿರುವ ಬಗ್ಗೆ ದಾಖಲೆ ಇಲ್ಲ. ಗ್ರಾಮಸಭೆಯ ಉದ್ದೇಶಕ್ಕನುಗುಣವಾಗಿ ನಡೆದಿಲ್ಲವೆಂದು ಎಂದು ಹೇಳಬಹುದು.

## ಬೈಲುವದ್ದಿಗೆರೆ ಗ್ರಾಮಪಂಚಾಯತಿಯ ಗ್ರಾಮಸಭೆಗಳು

ಬೈಲುವದ್ದಿಗೆರೆ ಪಂಚಾಯತಿಯಲ್ಲಿ 1998 ರಿಂದ ನಡೆದ ಗ್ರಾಮಸಭೆಗಳ ಮಾಹಿತಿ ಲಭ್ಯವಿದ್ದು ಒಟ್ಟು ಏಳು ಗ್ರಾಮಸಭೆಗಳನ್ನು ನಡೆಸಿರುವ ಬಗ್ಗೆ ಗ್ರಾಮಸಭೆಯ ರಿಜಿಸ್ಟರ್ ಪುಸ್ತಕದಲ್ಲಿ ನಮೂದಿಸಲಾಗಿದೆ. ಗ್ರಾಮಸಭೆ ನಡೆಸಿರುವ ಸ್ಥಳ, ಉದ್ದೇಶ ಮತ್ತು ಭಾಗವಹಿಸಿದವರ ಬಗ್ಗೆ ಮಾಹಿತಿ ಇದೆ. ಪ್ರತಿ ವರ್ಷ ನಡೆಸಿರುವ ಗ್ರಾಮಸಭೆಯ ದಿನಾಂಕಗಳನ್ನು ಗಮನಿಸಿದರೆ ಎರಡು ಗ್ರಾಮಸಭೆಗಳ ನಡುವೆ ಆರು ತಿಂಗಳ ಅಂತರ ಇಲ್ಲ. ಎಂಟು ತಿಂಗಳಿಗೆ ಒಂದು ಗ್ರಾಮಸಭೆಯನ್ನು ಮಾಡಲಾಗಿದೆ. ಏಳು ಗ್ರಾಮಸಭೆಗಳಲ್ಲಿ ಐದು ಗ್ರಾಮಸಭೆಗಳನ್ನು ಗ್ರಾಮಪಂಚಾಯತಿ ಕಛೇರಿಯಲ್ಲಿ ಮತ್ತು ಉಳಿದ ಮೂರು ಗ್ರಾಮ ಸಭೆಗಳನ್ನು ಗ್ರಾಮಪಂಚಾಯತಿ ಎದುರಿನ ಅಗಸಿ ಕಟ್ಟೆಯ ಮೇಲೆ ನಡೆಸಲಾಗಿದೆ. ಗ್ರಾಮಪಂಚಾಯತಿ ಕಛೇರಿ ಬಹಳ ಚಿಕ್ಕದಿದ್ದು ಇದರಲ್ಲಿ ಸುಮಾರು 30 ರಿಂದ 40 ಜನ ಮಾತ್ರ ಕೂಡಬಹುದು. ಅದರೂ ಸಹ ಗ್ರಾಮಸಭೆಗಳನ್ನು ಇಲ್ಲೆ ನಡೆಸಲಾಗಿದೆ. ಕೆಲವು ಮುಖ್ಯ ಉದ್ದೇಶಗಳನ್ನು ಇಟ್ಟುಕೊಂಡು ಗ್ರಾಮಸಭೆಗಳನ್ನು ನಡೆಸಲಾಗಿದೆ. ಬಡತನ ರೇಖೆ ಕೆಳಗೆ ಇರುವ ಕುಟುಂಬಗಳ ಪಟ್ಟಿ ಕುರಿತು, ಭಾಗ್ಯಜ್ಯೋತಿ ಫಲಾನುಭವಿಗಳ ಆಯ್ಕೆಗಾಗಿ, ವಸತಿ ಯೋಜನೆಗಳ ಫಲಾನುಭವಿಗಳ ಆಯ್ಕೆ, ಪಂಚಾಯತ್ ವಾರ್ಷಿಕ ಯೋಜನೆ ಮತ್ತು ಕಾಮಾಗಾರಿಗಳ ಬಗ್ಗೆ ನಡೆದಿವೆ ಎಂದು ದಾಖಲೆಗಳು ತಿಳಿಸಿವೆ.

ಗ್ರಾಮಸಭೆಯಲ್ಲಿ ಜನತೆ ಮತ್ತು ಪಂಚಾಯತಿ ಸದಸ್ಯರ ಭಾಗವಹಿಸುವಿಕೆಯನ್ನು ನೋಡಿದಾಗ ಕನಿಷ್ಠ 45(0.14) ಗರಿಷ್ಠ 150(2.50)ರಷ್ಟು ಜನರು ಭಾಗವಹಿಸಿದ್ದಾರೆ. ಮಹಿಳೆಯರ ಭಾಗವಹಿಸುವಿಕೆ ನಾಲ್ಕರಿಂದ ಐದು ಜನ ಮಾತ್ರ ಭಾಗವಹಿಸಿದ್ದಾರೆ. ಪಂಚಾಯತಿ ಸದಸ್ಯರ ಭಾಗವಹಿಸುವಿಕೆಯನ್ನು ನೋಡಿದಾಗ, ಶೇ.40ರಷ್ಟು ಪುರುಷ ಸದಸ್ಯರು ಮತ್ತು ಶೇ.50ರಷ್ಟು ಮಹಿಳಾ ಸದಸ್ಯರು ಭಾಗವಹಿಸಿದ್ದಾರೆ(ಕೋಷ್ಠಕ-36). ಇಲ್ಲಿ ಮಹಿಳೆಯರ ಭಾಗವಹಿಸುವಿಕೆ ಬಹಳ ಕಡಿಮೆ ಇದೆ. ಸರ್ಕಾರಿ ಇಲಾಖೆಯ ವಿವಿಧ ಅಧಿಕಾರಿಗಳಾದ ಶಾಲಾ ಶಿಕ್ಷಕರು, ಸಮಾಜಕಲ್ಯಾಣ ಇಲಾಖೆ, ಕೃಷಿ ಇಲಾಖೆಯ ಸಹಾಯಕರು, ಪಶು ವೈದ್ಯಕೀಯ ಮುಂತಾದ ಇಲಾಖೆಗಳ ಪ್ರತಿನಿಧಿಗಳು ಭಾಗವಹಿಸಿರುವ ಬಗ್ಗೆ ದಾಖಲೆ ಇದೆ. ಆದರೆ ಈ ಇಲಾಖೆಗಳಿಂದ ಯೋಜನೆಗಳು

ಜನತೆಗೆ ಹೇಗೆ ತಲುಪಿವೆ ಮತ್ತು ಹೇಗೆ ಪ್ರಯೋಜನ ಪಡೆದಿದ್ದಾರೆ ಎಂಬುದರ ಬಗ್ಗೆ ಯಾವುದೇ ಮಾಹಿತಿ ಇಲ್ಲ. ಸರ್ಕಾರಿ ಅಧಿಕಾರಿಗಳು ಅವರ ಇಲಾಖೆಗೆ ಸಂಬಂಧಪಟ್ಟಂತ ಪ್ರಯೋಜನಗಳು ಹೇಳಿದ್ದಾರೆ. ಆದರೆ ಈ ಇಲಾಖೆಗಳಿಂದ ಯಾವ ರೀತಿ ಪ್ರಯೋಜನ ಪಡೆದಿರುವ ಬಗ್ಗೆ ಸರಿಯಾದ ಮಾಹಿತಿಯನ್ನು ಗ್ರಾಮಪಂಚಾಯತಿ ಯಲ್ಲಿ ಇಟ್ಟಿಲ್ಲ. ಗ್ರಾಮಸಭೆಗಳಲ್ಲಿ ತೆಗೆದುಕೊಂಡಿರುವ ನಿರ್ಧಾರಗಳನ್ನು ಸಹ ಸರಿಯಾಗಿ ನಮೂದಿಸಿಲ್ಲ. ಗ್ರಾಮಸ್ಥರ ಬೇಡಿಕೆಗಳು ಮಾತ್ರ ಪುಸ್ತಕದಲ್ಲಿವೆ. ಈ ಬೇಡಿಕೆಗಳಲ್ಲಿ ಮುಖ್ಯವಾಗಿ ಕುಡಿಯುವ ನೀರು, ಚರಂಡಿ, ಪಶು ವೈದ್ಯ ಶಾಲೆ, ಗ್ರಂಥಾಲಯ ಈ ಬೇಡಿಕೆಗಳು ಇವೆ. ಆದರೆ ಈ ಬೇಡಿಕೆಗಳನ್ನು ಪೂರೈಯಿಸಿದ್ದಾರೆಯೆ ಅಥವಾ ಇಲ್ಲವೋ ಎಂಬುದರ ಬಗ್ಗೆ ಸರಿಯಾದ ಸ್ಪಷ್ಟನೆ ಇಲ್ಲ.

ಗ್ರಾಮಸಭೆಯಲ್ಲಿ ಫಲಾನುಭವಿ ಆಯ್ಕೆ ಕುರಿತು ಹೇಳಬೇಕೆಂದರೆ ಫಲಾನುಭವಿ ಅಂತಿಮ ಆಯ್ಕೆಯ ಬಗ್ಗೆ ಸರಿಯಾಗಿ ನಮೂದಿಸಿಲ್ಲ. ಹಾಗಾಗಿ ಗ್ರಾಮಸಭೆಯಲ್ಲಿ ಫಲಾನುಭವಿ ಅಂತಿಮ ಆಯ್ಕೆ ಆಗಿಲ್ಲ ಎಂದು ಹೇಳಬಹುದು. ತಾಲೂಕು ಪಂಚಾಯತಿ ಸದಸ್ಯರು ಮತ್ತು ತಾಲ್ಲೂಕು ಮಟ್ಟದ ಅಧಿಕಾರಿಗಳು ಗ್ರಾಮಸಭೆಗಳಿಗೆ ಭಾಗವಹಿಸಿದ್ದಾರೆ. ಫಲಾನುಭವಿ ಆಯ್ಕೆಯಲ್ಲಿ ಗ್ರಾಮಪಂಚಾಯತ್ ಸದಸ್ಯರಿಗೂ ಮತ್ತು ತಾಲೂಕ್ ಪಂಚಾಯತಿ ಸದಸ್ಯರ ನಡುವೆ ಭಿನ್ನಭಿಪ್ರಾಯದಿಂದ ಗ್ರಾಮಸಭೆಗಳಲ್ಲಿ ಫಲಾನುಭವಿ ಆಯ್ಕೆ ಆಗಿಲ್ಲ ಎಂದು ಹೇಳಬಹುದು. ಇದಕ್ಕೆ ಉದಾಹರಣೆ 2000-2001ನೇ ಸಾಲಿನ ಗ್ರಾಮಸಭೆಗೆ ಖುದ್ದಾಗಿ ಭೇಟಿ ನೀಡಿದ್ದು,ಗ್ರಾಮಸಭೆ ನಡೆಸಿರುವ ಕುರಿತು ಕೆಲವು ಅಂಶಗಳನ್ನು ದಾಖಲಿಸಲಾಗಿದೆ. ಇಂದಿರಾ ಆವಾಸ್ ವಸತಿ ಯೋಜನೆಯ ಫಲಾನುಭವಿಗಳನ್ನು ಆಯ್ಕೆ ಕುರಿತು ನಡೆಸಲಾಗಿದೆ. ಹತ್ತು ಘಂಟೆಗೆ ಪ್ರಾರಂಭವಾಗಬೇಕಾಗಿದ್ದ ಗ್ರಾಮಸಭೆ 12 ಘಂಟೆಗೆ ಆರಂಭವಾಯಿತು. ಸಭೆಯು ಆರಂಭದಲ್ಲಿ ಕಾರ್ಯದರ್ಶಿ ಗ್ರಾಮಸಭೆ ಪ್ರಾಮುಖ್ಯತೆ ಮತ್ತು ಉದ್ದೇಶವನ್ನು ಜನತೆಗೆ ತಿಳಿಸಿದರು. ಗ್ರಾಮಪಂಚಾಯತಿ ಕಛೇರಿ ಚಿಕ್ಕದಾಗಿದ್ದರಿಂದ ಗ್ರಾಮೀಣ ಜನರು ಪಂಚಾಯತಿಯ ಹೊರಗಡೆ ಕುತಿದ್ದರು ಅದರೂ ಸಹ ಇದರ ಬಗ್ಗೆ ಅಧಿಕಾರಿಗಳಾಗಲಿ, ಪಂಚಾಯತಿ ಸದಸ್ಯರಾಗಲಿ ಮತ್ತು ಮಾರ್ಗದರ್ಶಿ ಅಧಿಕಾರಿಯಾಗಲಿ ಗಮನ ಕೊಡಲಿಲ್ಲ. ಫಲಾನುಭವಿ ಆಯ್ಕೆ ಕುರಿತು ಚರ್ಚೆ ಪ್ರಾರಂಭವಾಯಿತು. ಫಲಾನುಭವಿ ಆಯ್ಕೆಯಲ್ಲಿ ತಾಲೂಕು ಪಂಚಾಯತಿ ಸದಸ್ಯರಿಗೂ ಮತ್ತು ಗ್ರಾಮಪಂಚಾಯತಿ ಸದಸ್ಯರಿಗೂ ಮಾತಿನ ಚಕಮುಖಿ ನಡೆಯಿತು. ಕೊನೆಗೂ ಫಲಾನುಭವಿ ಆಯ್ಕೆ ಅಂತಿಮವಾಗಲಿಲ್ಲ. ಗದ್ದಲ ಮತ್ತು ಜಗಳ ನಡುವೆ ಗ್ರಾಮಸಭೆಯನ್ನು ಮುಗಿಸಲಾಯಿತು. ಈ ಗ್ರಾಮಸಭೆಯಲ್ಲಿ ಗ್ರಾಮದ ಜನತೆಯ ಬೇಡಿಕೆಗಳು ಗೊತ್ತಾಗಲಿಲ್ಲ, ಗ್ರಾಮಪಂಚಾಯತಿಯ ಯೋಜನೆಗಳ ಕುರಿತು ಜನತೆಗೆ ಏನೂ ತಿಳಿಯಲಿಲ್ಲ ಮತ್ತು ಫಲಾನುಭವಿಗಳ ಆಯ್ಕೆಯಾಗಲಿಲ್ಲ. ಇವು ಗ್ರಾಮಸಭೆಯ ಫಲಿತಗಳಾಗಿವೆ.[12] ಹಾಗಾಗಿ ಗ್ರಾಮಸಭೆಯಲ್ಲಿ ತಯಾರಾದ ಪಟ್ಟಿಯೇ ಅಂತಿಮ ಎಂದು ಹೇಳುವುದು ಕಷ್ಟ.

ಗ್ರಾಮಸಭೆಗಳಲ್ಲಿ ಅಧಿಕಾರಿಗಳು ಗ್ರಾಮೀಣರ ಬೇಡಿಕೆಗಳನ್ನು ಬರೆದುಕೊಳ್ಳುತ್ತಾರೆ, ಹೋಗುತ್ತಾರೆ. ಮತ್ತೆ ಗ್ರಾಮಸಭೆ ಇರುವ ದಿನ ಮತ್ತೆ ನಾವು ನಮ್ಮ ಗ್ರಾಮಕ್ಕೆ ಬರುತ್ತಾರೆ ಎಂದು ಊರವರು ಅತೃಪ್ತಿ ಸೂಚಿಸಿದ್ದಾರೆ. ಅದರಲ್ಲೂ ಪಂಚಾಯತಿ ವ್ಯಾಪ್ತಿಯ ಗ್ರಾಮಗಳಲ್ಲಿ ಹೆಚ್ಚು ಅತೃಪ್ತಿಯನ್ನು ಊರವರು ವ್ಯಕ್ತಪಡಿಸಿದ್ದಾರೆ. ಗ್ರಾಮಸಭೆಯ ಬಗ್ಗೆ ಅರಿವು ಮತ್ತು ಭಾಗವಹಿಸುವಿಕೆಯನ್ನು ನೋಡಿದಾಗ ಪಂಚಾಯತಿಯ ಎಲ್ಲಾ ಪುರುಷರಿಗೂ ಗ್ರಾಮಸಭೆಯ ಬಗ್ಗೆ ಅರಿವು ಇದ್ದು ಶೇ.66ರಷ್ಟು ಭಾಗವಹಿಸಿದ್ದಾರೆ. ಶೇ.33ರಷ್ಟು

ಮಹಿಳಾ ಸದಸ್ಯರಿಗೆ ಗ್ರಾಮಸಭೆಯ ಬಗ್ಗೆ ಅರಿವು ಇದ್ದು ಶೇ.16ರಷ್ಟು ಭಾಗವಹಿಸಿದ್ದಾರೆ. ಸಂದರ್ಶಿಸಿದ ಊರವರ ಅರಿವು ಮತ್ತು ಭಾಗವಹಿಸುವಿಕೆಯಲ್ಲಿ ಶೇ.33ರಷ್ಟು ಪುರುಷರಿಗೆ ಗ್ರಾಮಸಭೆಯ ಬಗ್ಗೆ ಅರಿವು ಇದ್ದು ಶೇ.17ರಷ್ಟು, ಶೇ.13ರಷ್ಟು ಮಹಿಳೆಯರಿಗೆ ಅರಿವು ಇದ್ದು ಶೇ.3ರಷ್ಟು ಭಾಗವಹಿಸಿದ್ದಾರೆ. ಭಾಗವಹಿಸದೇ ಇರುವುದಕ್ಕೆ ಕಾರಣಗಳನ್ನು ಜನರು ಮತ್ತು ಪಂಚಾಯತಿ ಸದಸ್ಯರು ಸೂಚಿಸಿದ್ದಾರೆ(ಕೋಷ್ಟಕ-37). ಇವು ಪಂಚಾಯತಿ ವ್ಯಾಪ್ತಿಯಲ್ಲಿ ನಡೆದ ಗ್ರಾಮಸಭೆಗಳ ವಿವರಗಳಾಗಿವೆ.

## ಹಿರೇಹೆಗ್ಡಾಳ್ ಗ್ರಾಮಪಂಚಾಯತಿಯ ಗ್ರಾಮಸಭೆಗಳು

ಹಿರೇಹೆಗ್ಡಾಳ್ ಪಂಚಾಯತ್ ವ್ಯಾಪ್ತಿಯಲ್ಲಿ ನಡೆದ ಗ್ರಾಮಸಭೆಗಳ ವಿವರಗಳನ್ನು ನೋಡಿದಾಗ, ಕಳೆದ ಐದು ವರ್ಷದಲ್ಲಿ ನಡೆದ ಗ್ರಾಮಸಭೆಗಳಲ್ಲಿ ಎಂಟು ಗ್ರಾಮಸಭೆಗಳ ಮಾಹಿತಿ ಲಭ್ಯವಿದೆ. ಪ್ರತಿ ವರ್ಷದ ಎರಡು ಗ್ರಾಮಸಭೆಗಳ ಅಂತರ ಆರು ತಿಂಗಳಿಗಿಂತ ಹೆಚ್ಚು ಇದೆ. ಗ್ರಾಮಸಭೆಯಲ್ಲಿ ಪಂಚಾಯತಿ ಸದಸ್ಯರ ಮತ್ತು ಊರವರ ಭಾಗವಹಿಸುವಿಕೆಯನ್ನು ನೋಡಿದಾಗ ಕನಿಷ್ಠ ಶೇ.50 ರಿಂದ ಗರಿಷ್ಠ ಶೇ.60ರಷ್ಟು ಪಂಚಾಯತಿ ಸದಸ್ಯರು ಭಾಗವಹಿಸಿದ್ದಾರೆ. ಮಹಿಳಾ ಸದಸ್ಯರು ಶೇ.15 ರಿಂದ ಶೇ.25ರಷ್ಟು ಮಾತ್ರ ಭಾಗವಹಿಸಿದ್ದಾರೆ. ಊರವರ ಭಾಗವಹಿಸುವಿಕೆಯನ್ನು ಕನಿಷ್ಠ ಶೇ.3 ರಿಂದ ಶೇ.5ರಷ್ಟು ಜನರು ಭಾಗವಹಿಸಿದ್ದು ಪ್ರತಿವರ್ಷ ಊರವರ ಭಾಗವಹಿಸುವಿಕೆಯಲ್ಲಿ ಪ್ರಗತಿ ಕಂಡುಬಂದಿದೆ. ಆದರೆ ಮಹಿಳಾ ಸದಸ್ಯರು ಮತ್ತು ಗ್ರಾಮೀಣ ಮಹಿಳೆಯರ ಭಾಗವಹಿಸುವಿಕೆ ಉತ್ತಮವಾಗಿಲ್ಲ.

ಇದರಲ್ಲಿ 1995 ರಿಂದ 97ರಲ್ಲಿ ನಡೆದ ಎಲ್ಲಾ ಗ್ರಾಮಸಭೆಗಳಲ್ಲಿ ಸಮಗ್ರ ಗ್ರಾಮೀಣಾಭಿವೃದ್ಧಿ ಯೋಜನೆಯಡಿಯಲ್ಲಿ (ಐ.ಆರ್.ಡಿ.ಪಿ) ಫಲಾನುಭವಿಗಳ ಆಯ್ಕೆಗಾಗಿ ಗ್ರಾಮಸಭೆಗಳಲ್ಲಿ ಸರ್ಕಾರಿ ಅಧಿಕಾರಿಗಳ ಭಾಗವಹಿಸುವಿಕೆಯಲ್ಲಿ ತಾಲೂಕು ಮಟ್ಟದ ಅಧಿಕಾರಿಗಳು, ಸರ್ಕಾರಿ ಇಲಾಖೆಗಳ ಪ್ರತಿನಿಧಿಗಳು, ಶಾಲಾ ಶಿಕ್ಷಕರು, ಗ್ರಾಮಮಟ್ಟದ ಅಧಿಕಾರಿಗಳು, ಗ್ರಾಮ ಸೇವಕರು, ಗ್ರಾಮ ಲೆಕ್ಕಧಿಕಾರಿಗಳು, ಮತ್ತು ಅಂಗನವಾಡಿ ಕಾರ್ಯಕರ್ತೆಯರು ಭಾಗವಹಿಸಿದ್ದಾರೆ. ಈ ಸರ್ಕಾರಿ ಪ್ರತಿನಿಧಿಗಳಿಂದ ಗ್ರಾಮದ ಜನತೆಗೆ ಯಾವ ರೀತಿ ಪ್ರಯೋಜನವಾಗಿದೆ ಎಂಬುದರ ಬಗ್ಗೆ ಮಾಹಿತಿಯಿಲ್ಲ.

ಗ್ರಾಮಸಭೆಯ ಚರ್ಚೆಯ ವಿಷಯಗಳನ್ನು ತೆಗೆದುಕೊಂಡಾಗ ಅದರಲ್ಲಿ ಮುಖ್ಯವಾಗಿ, ಫಲಾನುಭವಿ ಆಯ್ಕೆ, ಪ್ರತಿವರ್ಷ ಕೈಗೊಳ್ಳಬೇಕಾದ ಕಾರ್ಯಗಳು, ಶೈಕ್ಷಣಿಕ ಚಟುವಟಿಕೆಗಳ ಬಗ್ಗೆ, ಗ್ರಾಮದ ಜನತೆಯ ಕೆಲವು ಬೇಡಿಕೆಗಳನ್ನು ಪಟ್ಟಿ ಮಾಡಲಾಗಿದೆ. ವಸತಿ ಯೋಜನೆಗಳು, ಭಾಗ್ಯಜ್ಯೋತಿ, ಕ್ರಿಯಾಯೋಜನೆಯ ಬಗ್ಗೆ, ಪರಿಶಿಷ್ಟ ಜಾತಿ-ವರ್ಗ ಸಣ್ಣ ರೈತರಿಗೆ ಪ್ರಯೋಜನ ಕುರಿತು, ಬಿ.ಪಿ.ಎಲ್ ಪಟ್ಟಿ ಮತ್ತು ಹಸಿರು ಕಾರ್ಡುಗಳ ಬಗ್ಗೆ ಚರ್ಚಿಸಲಾಗಿದೆ. ಗ್ರಾಮಸಭೆಯಲ್ಲಿ ತೆಗೆದುಕೊಂಡ ನಿರ್ಧಾರಗಳಲ್ಲಿ ಮುಖ್ಯವಾಗಿ ಕ್ರಿಯಾಯೋಜನೆಯನ್ನು ಅನುಮೋದಿಸಲಾಗಿದೆ. ಫಲಾನುಭವಿಗಳ ಆಯ್ಕೆ ಕೆಲವು ಗ್ರಾಮಸಭೆಗಳಲ್ಲಿ ಮಾಡಲಾಗಿದೆ. ಆದರೆ ಈ ಫಲಾನುಭವಿಗಳ ಪಟ್ಟಿಯೇ ಅಂತಿಮವೆಂದು ಸ್ಪಷ್ಟವಾಗಿ ಗೊತ್ತಾಗಿಲ್ಲ. ಗ್ರಾಮದ ಜನತೆಯ ಬೇಡಿಕೆಗಳ ಈಡೇರಿಕೆ ಕುರಿತು ಮಾಹಿತಿಯಿಲ್ಲ ಎಂದು ಹೇಳಬಹುದು. ಗ್ರಾಮಸಭೆಗಳನ್ನು ಸಮುದಾಯ ಭವನದಲ್ಲಿ ಮಾಡಲಾಗಿದೆ. ಪಂಚಾಯತಿ ವ್ಯಾಪ್ತಿಯ ಗ್ರಾಮಗಳಲ್ಲಿ ಸಾಣೇಹಳ್ಳಿ ಮತ್ತು

ಬೊಪ್ಪಲಪುರದಲ್ಲಿ ಕಡಿಮೆ ಗ್ರಾಮಸಭೆಗಳು ನಡೆದಿವೆ. ಹಿರೇಹೆಗ್ಡಾಳ್ ಮತ್ತು ಸಾಸಲವಾಡ ಗ್ರಾಮಗಳು ದೊಡ್ಡ ಗ್ರಾಮಗಳಾಗಿದ್ದರಿಂದ ಇಲ್ಲಿ ಹೆಚ್ಚು ಗ್ರಾಮಸಭೆಗಳು ನಡೆದಿವೆ.

ಪಂಚಾಯತಿ ಸದಸ್ಯರ ಮತ್ತು ಸಂದರ್ಶಿಸಿದ ಊರವರ ಗ್ರಾಮಸಭೆಯ ಬಗ್ಗೆ ಅರಿವು ಮತ್ತು ಭಾಗವಹಿಸುವಿಕೆಯನ್ನು ನೋಡಿದಾಗ ಒಟ್ಟು 10 ಜನ ಸದಸ್ಯರಲ್ಲಿ ಎಲ್ಲ ಪುರುಷ ಸದಸ್ಯರಿಗೆ ಗ್ರಾಮಸಭೆಯ ಬಗ್ಗೆ ಅರಿವು ಇದ್ದು, ಶೇ.83ರಷ್ಟು ಭಾಗವಹಿಸಿದ್ದಾರೆ. ಶೇ.50ರಷ್ಟು ಮಹಿಳಾ ಸದಸ್ಯರಿಗೆ ಗ್ರಾಮಸಭೆಯ ಬಗ್ಗೆ ಅರಿವು ಇದ್ದು ಶೇ.25ರಷ್ಟು ಮಹಿಳೆಯರು ಭಾಗವಹಿಸಿದ್ದಾರೆ. ಒಟ್ಟಾರೇ ಶೇ.80ರಷ್ಟು ಪಂಚಾಯತಿ ಸದಸ್ಯರಿಗೆ ಅರಿವು ಇದ್ದು ಶೇ.60ರಷ್ಟು ಸದಸ್ಯರು ಭಾಗವಹಿಸಿದ್ದಾರೆ(ಕೋಷ್ಟಕ-36). ಪಂಚಾಯತಿ ಸದಸ್ಯರಿಗೆ ಗ್ರಾಮಸಭೆಯ ಬಗ್ಗೆ ಉತ್ತಮ ಅರಿವು ಇದ್ದು, ಗ್ರಾಮಸಭೆಯ ಭಾಗವಹಿಸುವಿಕೆಯಲ್ಲಿ ಸಹ ಇತರೇ ಪಂಚಾಯತಿಗಳಿಗಿಂತ ಉತ್ತಮವಾಗಿದೆ. ಸಂದರ್ಶಿಸಿದ 82 ಜನರಲ್ಲಿ ಶೇ.57ರಷ್ಟು ಪುರುಷರಿಗೆ ಗ್ರಾಮಸಭೆಯ ಬಗ್ಗೆ ಅರಿವು ಇದ್ದು, ಶೇ.30ರಷ್ಟು ಊರವರು ಗ್ರಾಮಸಭೆಗೆ ಭಾಗವಹಿಸಿದ್ದಾರೆ(ಕೋಷ್ಟಕ-37). ಶೇ.33ರಷ್ಟು ಗ್ರಾಮೀಣ ಮಹಿಳೆಯರು ಗ್ರಾಮಸಭೆಯ ಬಗ್ಗೆ ಅರಿವು ಇದ್ದು ಶೇ.16ರಷ್ಟು ಭಾಗವಹಿಸಿದ್ದಾರೆ. ಒಟ್ಟಾರೆ ಗ್ರಾಮಸಭೆಯ ಅರಿವು ಮತ್ತು ಭಾಗವಹಿಸುವಿಕೆಯನ್ನು ನೋಡಿದಾಗ ಅರಿವು ಭಾಗವಹಿಸುವಿಕೆ ಇತರೆ ಪಂಚಾಯತಿಗಳಿಗಿಂತ ಉತ್ತಮವಾಗಿದೆ.

## ಉಜ್ಜನಿ ಗ್ರಾಮಪಂಚಾಯತಿಯ ಗ್ರಾಮಸಭೆಗಳು

ಉಜ್ಜನಿ ಪಂಚಾಯತಿ ವ್ಯಾಪ್ತಿಯಲ್ಲಿ ಮೂರು ಗ್ರಾಮಗಳಿದ್ದು ಇದರಲ್ಲಿ ಉಜ್ಜನಿ ಪ್ರಮುಖ ಗ್ರಾಮವಾಗಿದೆ. ಕಳೆದ ಐದು ವರ್ಷದಲ್ಲಿ ಒಟ್ಟು ಆರು ಗ್ರಾಮಸಭೆಗಳನ್ನು ನಡೆಸಿರುವ ಬಗ್ಗೆ ಮಾಹಿತಿ ಲಭ್ಯವಿದೆ. ಪಂಚಾಯತಿ ವ್ಯಾಪ್ತಿಗೆ ಸೇರಿದ ಬೆನಕನಹಳ್ಳಿ ಮತ್ತು ಬೈರದೇವರಗುಡ್ಡ ಗ್ರಾಮಗಳಲ್ಲಿ ಗ್ರಾಮಸಭೆಗಳೆ ನಡೆದಿಲ್ಲ. ಈ ಎರಡು ಗ್ರಾಮಗಳು ಸಣ್ಣ ಗ್ರಾಮಗಳಾಗಿದ್ದು ಈ ಗ್ರಾಮಗಳು ತಲಾ ಇಬ್ಬರು ಪಂಚಾಯತಿ ಸದಸ್ಯರನ್ನು ಹೊಂದಿದೆ. ಆದರೂ ಇಲ್ಲಿ ಗ್ರಾಮಸಭೆಗಳು ನಡೆದಿಲ್ಲ. ಗ್ರಾಮಸಭೆಗಳು ಪ್ರತಿವರ್ಷ ನಡೆಸಿದ್ದು ಎರಡು ಗ್ರಾಮಸಭೆಗಳ ನಡುವೆ 6ತಿಂಗಳಿಗಿಂತ ಹೆಚ್ಚು ಇದೆ. ಪಂಚಾಯತಿ ಸದಸ್ಯರ ಭಾಗವಹಿಸುವಿಕೆಯನ್ನು ನೋಡಿದಾಗ ಕನಿಷ್ಠ 5ರಿಂದ 8ಜನ ಪಂಚಾಯತಿ ಸದಸ್ಯರು ಭಾಗವಹಿಸಿದ್ದಾರೆ. ಶೇ.30 ರಿಂದ ಶೇ.49ರಷ್ಟು ಸದಸ್ಯರು ಭಾಗವಹಿಸಿದ್ದಾರೆ. ಇದರಲ್ಲಿ ಮಹಿಳಾ ಸದಸ್ಯರ ಸಂಖ್ಯೆ ಒಂದರಿಂದ ಇಬ್ಬರು ಮಹಿಳೆಯರು ಮಾತ್ರ ಭಾಗವಹಿಸಿದ್ದಾರೆ. ಊರವರ ಭಾಗವಹಿಸುವಿಕೆಯನ್ನು ನೋಡಿದಾಗ ಕನಿಷ್ಠ 50 ರಿಂದ 100 ಜನ ಭಾಗವಹಿಸಿದ್ದಾರೆ. ಶೇ.1 ರಿಂದ ಶೇ.6ರಷ್ಟು ಮಾತ್ರ. ಇದರಲ್ಲಿ ಮಹಿಳೆಯರ ಭಾಗವಹಿಸುವಿಕೆ 5 ರಿಂದ 8 ಜನ ಮಾತ್ರ ಭಾಗವಹಿಸಿದ್ದಾರೆ. ಗ್ರಾಮಸಭೆಯ ಮಹಿಳೆಯರ ಭಾಗವಹಿಸುವಿಕೆ ಇತರ ಪಂಚಾಯತಿಗಳಂತೆ ಇಲ್ಲಿಯೂ ಸಹ ಕಡಿಮೆ ಇದೆ.

ಗ್ರಾಮಸಭೆಗಳನ್ನು ಸದ್ಧರ್ಮ ಭವನದಲ್ಲಿ ಕರೆಯಲಾಗಿದೆ. ಇಲ್ಲಿ ಕೆಳವರ್ಗದ ಜನತೆ ಹೋಗಲು ಇಷ್ಟಪಡುವುದಿಲ್ಲ. ಏಕೆಂದರೆ ಈ ಭವನ ಪಂಚಪೀಠಕ್ಕೆ ಸೇರಿದ್ದು, ಕೆಳಜಾತಿಗಳಿಗೆ ಪ್ರವೇಶ ಇಲ್ಲದಿರುವುದರಿಂದ

ಇಲ್ಲಿ ಕೆಳಜಾತಿ-ವರ್ಗಗಳ ಭಾಗವಹಿಸುವಿಕೆ ಕಡಿಮೆ ಇದೆ. ಎಲ್ಲ ಗ್ರಾಮಸಭೆಗಳಿಗೆ ಮಾರ್ಗದರ್ಶಿ ಅಧಿಕಾರಿಯಾಗಿ ಕ್ಷೇತ್ರ ಶಿಕ್ಷಣ ಅಧಿಕಾರಿಗಳು ಭಾಗವಹಿಸಿದ್ದಾರೆ. ಆದ್ದರಿಂದ ಇಲ್ಲಿ ಪ್ರತಿ ಗ್ರಾಮಸಭೆಯಲ್ಲಿ ಹೆಚ್ಚಿನ ಸಂಖ್ಯೆಯಲ್ಲಿ ಶಾಲಾ ಶಿಕ್ಷಕರು ಭಾಗವಹಿಸಿದ್ದಾರೆ. ಹೆಚ್ಚು ಶೈಕ್ಷಣಿಕ ಚಟುವಟಿಕೆಗಳ ಬಗ್ಗೆ ಚರ್ಚಿಸಲಾಗಿದೆ. ತಾಲೂಕ್ ಮಟ್ಟದ ಅಧಿಕಾರಿಗಳು, ಆರೋಗ್ಯ ಇಲಾಖೆ, ಕೃಷಿ ಇಲಾಖೆ, ಸಮಾಜಕಲ್ಯಾಣ ಇಲಾಖೆ, ಪಶು ಇಲಾಖೆಯವರು ಅಂಗನವಾಡಿ ಕಾರ್ಯಕರ್ತೆಯರು, ಭಾಗವಹಿಸಿದ್ದಾರೆ. ಜಿಲ್ಲಾ ಪಂಚಾಯತ್ ಮತ್ತು ತಾಲೂಕ್ ಪಂಚಾಯತ್ ಸದಸ್ಯರು ಸರಿಯಾಗಿ ಗ್ರಾಮಸಭೆಗೆ ಭಾಗವಹಿಸುವುದಿಲ್ಲ ಕಾರಣ ಅವರು ಕಾಂಗ್ರೆಸ್ ಪಕ್ಷಕ್ಕೆ ಸೇರಿದ್ದು, ಗ್ರಾಮಪಂಚಾಯತಿ ಆಡಳಿತ ಜನತಾದಳದವರ ಕೈಯಲ್ಲಿದೆ. ಹಾಗಾಗಿ ಪಕ್ಷ ರಾಜಕೀಯದಿಂದ ಅವರು ಸರಿಯಾಗಿ ಭಾಗವಹಿಸುವುದಿಲ್ಲ. ಪ್ರತಿ ಗ್ರಾಮಸಭೆಯಲ್ಲಿ ಸರ್ಕಾರಿ ಅಧಿಕಾರಿಗಳು ಭಾಗವಹಿಸುತ್ತಾರೆ. ಆದರೆ ಆ ಇಲಾಖೆಗಳಿಂದ ಗ್ರಾಮೀಣ ಜನತೆಗೆ ಯಾವ ರೀತಿ ಪ್ರಯೋಜನವಾಗಿದೆ ಎಂಬುದು ಗ್ರಾಮಸಭೆಯ ಪುಸ್ತಕದಲ್ಲಿ ತಿಳಿಸಿಲ್ಲ. ಗ್ರಾಮಸಭೆಗಳು ನಡೆದ ಉದ್ದೇಶಗಳನ್ನು ನೋಡಿದಾಗ ಬಿ.ಪಿ.ಎಲ್ ಪಟ್ಟಿ ತಯಾರಿಕೆ, ಹಸಿರು ಕಾರ್ಡುಗಳ ವಿತರಣೆ, ವಸತಿ ಯೋಜನೆಗಳ ಫಲಾನುಭವಿ ಆಯ್ಕೆ, ಕ್ರಿಯಾಯೋಜನೆ, ಗ್ರಾಮಪಂಚಾಯತಿ ಕಾಮಗಾರಿಗಳು ಇವುಗಳ ಬಗ್ಗೆ ನಡೆಸಲಾಗಿದೆ.

ಗ್ರಾಮಸಭೆಯಲ್ಲಿ ಚರ್ಚೆಯಾದ ವಿಷಯಗಳನ್ನು ನೋಡಿದಾಗ, ಕುಡಿಯುವ ನೀರಿನ ಬಗ್ಗೆ ಹೆಚ್ಚು ಚರ್ಚೆಯಾಗಿದೆ. ಆದರೆ ಕುಡಿಯುವ ನೀರಿನ ಪೂರೈಕೆ ಸರಿಯಾಗಿಲ್ಲ. ವಿಶ್ವಬ್ಯಾಂಕ್ ಯೋಜನೆಯಲ್ಲಿ ನೀರಿನ ಪೂರೈಕೆ ಮಾಡಲಾಗಿದ್ದು ವಿಶ್ವಬ್ಯಾಂಕಿನ ದಾಖಲೆಗಳು ಗ್ರಾಮ ಪಂಚಾಯತಿಯಲ್ಲಿ ಇಲ್ಲದ ಕಾರಣ ಸಂಬಂಧಪಟ್ಟವರಿಂದ ತನಿಖೆಗೆ ಒಳಪಡಿಸಲು ಸಭೆಯಲ್ಲಿ ನಿರ್ಧರಿಸಿದರೂ ಸಹ ಯಾವುದೇ ಪ್ರಯೋಜನವಾಗಿಲ್ಲ. ಪ್ರಾಥಮಿಕ ಆರೋಗ್ಯ ಕೇಂದ್ರದ ವೈದ್ಯರ ಬಗ್ಗೆ ಚರ್ಚೆಯಾಗದೇ ಅವರು ಸರಿಯಾಗಿ ಬರುವುದಿಲ್ಲ. ಹಣವನ್ನು ತೆಗೆದುಕೊಳ್ಳುತ್ತಾರೆ. ಇವರ ಬಗ್ಗೆ ಗ್ರಾಮಸಭೆಯಲ್ಲಿ ಚರ್ಚೆಯಾದರು ಈ ಸಮಸ್ಯೆ ಬಗೆಹರಿಸಿಲ್ಲ. ಶಾಲಾ ಶಿಕ್ಷಕರು ಶಾಲೆಗೆ ಅವಶ್ಯವಿರುವ ಶೌಚಾಲಯ, ಕುಡಿಯುವ ನೀರಿನ ಬಗ್ಗೆ ಚರ್ಚೆಯಾಗದೆ, ನಿರ್ಮಲ ಗ್ರಾಮ ಯೋಜನೆಯಲ್ಲಿ ಮೂರು ಸಾಮೂಹಿಕ ಶೌಚಾಲಯಗಳನ್ನು ನಿರ್ಮಿಸಲು ತಿರ್ಮಾನ ತೆಗೆದುಕೊಳ್ಳಲಾಯಿತು. ವಾರ್ಷಿಕ ಯೋಜನೆಯ ಬಗ್ಗೆ ಚರ್ಚಿಸಲಾಗಿದೆ ಎಂದು ಗ್ರಾಮಸಭೆಯ ಪುಸ್ತಕದಲ್ಲಿ ತಿಳಿಸಲಾಗಿದೆ. ಫಲಾನುಭವಿಗಳ ಆಯ್ಕೆಯನ್ನು ನೋಡಿದಾಗ ಭಾಗ್ಯಜ್ಯೋತಿ ಯೋಜನೆ ಮತ್ತು ವಿವಿಧ ವಸತಿ ಯೋಜನೆಗಳ ಫಲಾನುಭವಿಗಳ ಆಯ್ಕೆಯು ಚರ್ಚೆಯಾಗಿದೆ. ಆದರೆ ಫಲಾನುಭವಿಗಳ ಹೆಸರುಗಳು ಇಲ್ಲ. ಅಂತಿಮ ಆಯ್ಕೆ ಇಲ್ಲಿಯೂ ಆಗಿಲ್ಲ ಎಂಬುದು ಸ್ಪಷ್ಟವಾಗಿದೆ. ಸಂದರ್ಶಿಸಿದ ಪಂಚಾಯತಿ ಸದಸ್ಯರ ಮತ್ತು ಊರವರ ಅರಿವು ಭಾಗವಹಿಸುವಿಕೆಯನ್ನು ನೋಡಿದಾಗ, ಶೇ.6ರಷ್ಟು ಪುರುಷ ಸದಸ್ಯರಿಗೆ ಗ್ರಾಮಸಭೆ ಬಗ್ಗೆ ಅರಿವು ಇದ್ದು, ಶೇ.63ರಷ್ಟು ಗ್ರಾಮಸಭೆಗೆ ಭಾಗವಹಿಸಿದ್ದಾರೆ. ಶೇ.33ರಷ್ಟು ಮಹಿಳಾ ಸದಸ್ಯರಿಗೆ ಅರಿವು ಇದ್ದು, ಶೇ.16ರಷ್ಟು ಮಾತ್ರ ಪಾಲ್ಗೊಂಡಿದ್ದಾರೆ(ಕೋಷ್ಟಕ-36). ಊರವರ ಭಾಗವಹಿಸುವಿಕೆಯನ್ನು ನೋಡಿದಾಗ ಶೇ.28ರಷ್ಟು ಜನರಿಗೆ ಗ್ರಾಮಸಭೆಯ ಬಗ್ಗೆ ಅರಿವು ಇದ್ದು ಶೇ.13ರಷ್ಟು ಜನರು ಭಾಗವಹಿಸಿದ್ದಾರೆ. ಶೇ.17ರಷ್ಟು ಮಹಿಳೆಯರಿಗೆ ಅರಿವು ಇದ್ದು ಶೇ.5ರಷ್ಟು ಮಹಿಳೆಯರು

ಪಾಲ್ಗೊಂಡಿದ್ದಾರೆ(ಕೋಷ್ಟಕ-37). ಒಟ್ಟಾರೆ ಮಹಿಳೆ ಮತ್ತು ಕೆಳವರ್ಗದ ಜನರ ಭಾಗವಹಿಸುವಿಕೆ ಕಡಿಮೆ ಇರುವುದಾಗಿ ತಿಳಿದುಬಂದಿತು.

## ಗ್ರಾಮಸಭೆಗಳ ತೌಲಾನಿಕ ವಿವರಣೆ

ಅಧ್ಯಯನ ಕೈಗೊಂಡ ಗ್ರಾಮಪಂಚಾಯತಿಗಳಲ್ಲಿ ಕಳೆದ ಐದು ವರ್ಷಗಳಿಂದ ನಡೆದ ಗ್ರಾಮಸಭೆಗಳ ವಿವರಣೆಯನ್ನು ಈಗಾಗಲೇ ನೋಡಿದ್ದೇವೆ. ಗ್ರಾಮಸಭೆಯ ಬಗ್ಗೆ ಅರಿವು ಮತ್ತು ಭಾಗವಹಿಸುವಿಕೆ ಯಾವ ಪಂಚಾಯತಿಯಲ್ಲಿ ಚೆನ್ನಾಗಿದೆ ಮತ್ತು ಚೆನ್ನಾಗಿಲ್ಲ ಎಂಬುದನ್ನು ನೋಡಲಾಗಿದೆ. ಆ ಮೂಲಕ ಗ್ರಾಮಪಂಚಾಯತಿಗಳ ಕಾರ್ಯಕ್ಷಮತೆ ಮಾಪನ ಮಾಡಲಾಗಿದೆ. ಗ್ರಾಮಸಭೆಯನ್ನು ಯಾವ ಪಂಚಾಯತಿಯು ಚೆನ್ನಾಗಿ ಆಯೋಜಿಸಿದೆಯೊ ಅಂತಹ ಪಂಚಾಯತಿಯಲ್ಲಿ ಭಾಗವಹಿಸುವಿಕೆ ಚೆನ್ನಾಗಿದೆ. ಅಂದರೆ ಎಲ್ಲ ವರ್ಗದ ಜನರು ಪ್ರವೇಶಿಸುವ ಸಾರ್ವಜನಿಕ ಸ್ಥಳಗಳಲ್ಲಿ ಏರ್ಪಡಿಸಿದ ಗ್ರಾಮಸಭೆಗಳಲ್ಲಿ ಹೆಚ್ಚು ಭಾಗವಹಿಸುವಿಕೆ ಇದೆ. ಗ್ರಾಮಪಂಚಾಯತಿಯ ಏನೆಲ್ಲ ಕಾರ್ಯ ಮಾಡುತ್ತದೆ ಎಂಬುದರ ಬಗ್ಗೆ ಊರವರಿಗೆ ಗ್ರಾಮಸಭೆಯಿಂದ ಗೊತ್ತಾಗುತ್ತಿದೆ. ಆದರೆ ಫಲಾನುಭವಿಯ ಅಂತಿಮ ಆಯ್ಕೆ ಯಾವ ಗ್ರಾಮಪಂಚಾಯತಿಯ ಆಗಿಲ್ಲ. ಆರ್ಥಿಕ ಮತ್ತು ಸಾಮಾಜಕವಾಗಿ ಉತ್ತಮ ಸ್ಥಿತಿಯಲ್ಲಿರುವ ಗ್ರಾಮಗಳಲ್ಲಿ, ಹೆಚ್ಚು ಮೇಲ್ವರ್ಗಗಳು ಇರುವ ಗ್ರಾಮಗಳಲ್ಲಿ ಅರಿವು ಮತ್ತು ಭಾಗವಹಿಸುವಿಕೆ ಉತ್ತಮವಾಗಿದೆ. ಇಲ್ಲಿ ಗ್ರಾಮಪಂಚಾಯತಿಯ ಕಾರ್ಯಕ್ಷಮತೆಯು ಸಹ ಚೆನ್ನಾಗಿದೆ. ಅಭಿವೃದ್ಧಿ ವಿತರಣೆಗಳು ಈ ಪಂಚಾಯತಿಗಳಲ್ಲಿ ಉದ್ದೇಶಿತ ವರ್ಗಕ್ಕೆ ಹೆಚ್ಚಿನದಾಗಿ ತಲುಪಿವೆ.

ನೀರಾವರಿ ಮತ್ತು ಒಣಭೂಮಿ ಪಂಚಾಯತಿ ಪ್ರದೇಶಗಳಲ್ಲಿ ನಡೆದ ಗ್ರಾಮಸಭೆಗಳನ್ನು ತೌಲನಿಕವಾಗಿ ನೋಡಿದಾಗ, ಒಣಭೂಮಿ ಪಂಚಾಯತಿಗಳಲ್ಲಿ ನಡೆದ ಗ್ರಾಮಸಭೆಗಳಿಗಿಂತ ನೀರಾವರಿ ಪಂಚಾಯತಿಗಳಲ್ಲಿ ನಡೆದ ಗ್ರಾಮಸಭೆಗಳು ಉತ್ತಮವಾಗಿವೆ. ನೀರಾವರಿ ಪಂಚಾಯತಿಗಳಾದ ನಾಗೇನಹಳ್ಳಿ ಮತ್ತು ಹಿರೇಹೆಗ್ಡಾಳ್‌ನ ಪಂಚಾಯತಿ ವ್ಯಾಪ್ತಿಯ ಗ್ರಾಮಗಳು ನೀರಾವರಿ ಪ್ರದೇಶಗಳಾಗಿವೆ. ಆರ್ಥಿಕ ಮತ್ತು ಸಾಮಾಜಿಕ ಅಂಶಗಳು ಒಣಭೂಮಿ ಪಂಚಾಯತಿಗಳಿಗಿಂತ ಉತ್ತಮವಾಗಿವೆ. ಈ ಅಂಶಗಳು ಭಾಗವಹಿಸುವಿಕೆ ಮೇಲೆ ಪ್ರಭಾವ ಬೀರಿವೆ. ಹಾಗೆಯೇ ಪಂಚಾಯತ್ ಸದಸ್ಯರ ಮತ್ತು ಊರವರ ಅರಿವು ಮತ್ತು ಭಾಗವಹಿಸುವಿಕೆ ಸಹ ಒಣಭೂಮಿ ಪಂಚಾಯತಿಗಳಿಗಿಂತ ಆಶಾದಾಯಕವಾಗಿದೆ. ಪಂಚಾಯತಿ ವ್ಯಾಪ್ತಿಯ ಗ್ರಾಮಗಳಿಗಿಂತ ಹೆಚ್ಚು ಗ್ರಾಮಸಭೆಗಳನ್ನು ಪಂಚಾಯತಿ ಕೇಂದ್ರ ಸ್ಥಳದಲ್ಲಿ ಮಾಡಲಾಗಿದೆ. ಪಂಚಾಯತಿ ಇರುವ ಸ್ಥಳಗಳಲ್ಲಿ ಹೆಚ್ಚು ಕಾಲ ಗ್ರಾಮಸಭೆಯನ್ನು ಮಾಡಿದರೆ, ಗ್ರಾಮಗಳಲ್ಲಿ ಕಡಿಮೆ ಅವಧಿಯಲ್ಲಿ ಗ್ರಾಮಸಭೆಗಳನ್ನು ಮಾಡಲಾಗುತ್ತದೆ. ಇದರ ಬಗ್ಗೆ ಎಲ್ಲ ಪಂಚಾಯತಿಗಳಲ್ಲಿ ಊರವರು ಹೆಚ್ಚು ಅತೃಪ್ತಿಯನ್ನು ವ್ಯಕ್ತಪಡಿಸಿದ್ದಾರೆ. ಕಾಮಗಾರಿಗಳು ಮತ್ತು ವಸತಿಗಳ ಹಂಚಿಕೆ ಸಹ ಪಂಚಾಯತಿ ಇರುವ ಕೇಂದ್ರ ಸ್ಥಳಗಳಲ್ಲಿ ಅಧಿಕವಾಗಿ ಅನುಷ್ಠಾನಗೊಂಡಿದೆ.

ಕೆಲವು ಪಂಚಾಯತಿ ವ್ಯಾಪ್ತಿಯ ಗ್ರಾಮಗಳಲ್ಲಿ ಗ್ರಾಮಸಭೆಗಳೆ ನಡೆದಿಲ್ಲ. ನಾಗೇನಹಳ್ಳಿ ಪಂಚಾಯತಿಗೆ ಸೇರಿದ ಬೆಳಗೊಡು ಮತ್ತು ಕಳ್ಳಿರಾಂಪುರದಲ್ಲಿ ಮತ್ತು ಉಜ್ಜನಿ ಪಂಚಾಯತಿಯ ಬೆನಕನಹಳ್ಳಿ ಮತ್ತು

ಬೈರದೇವರಗುಡ್ಡದಲ್ಲಿ ಒಂದು ಬಾರಿಯು ಗ್ರಾಮಸಭೆ ನಡೆದಿಲ್ಲ. ಹಿರೇಹೆಗ್ಡಾಳ್ ಪಂಚಾಯತಿ ವ್ಯಾಪ್ತಿಗೆ ಸೇರಿದ ಸಾಣೇಹಳ್ಳಿ, ಬೊಪ್ಪಲಪುರಗಳಲ್ಲಿ ವರ್ಷಕ್ಕೆ ಒಂದು ಬಾರಿ ಗ್ರಾಮಸಭೆ ನಡೆಸಿದ್ದಾರೆ. ಆದರೆ ಬೈಲುವದ್ದಿಗೆರೆ ಪಂಚಾಯತಿಯ ಎಲ್ಲ ಗ್ರಾಮಗಳಲ್ಲಿ ಗ್ರಾಮಸಭೆಗಳನ್ನು ನಡೆಸಿದ್ದಾರೆ. ಪಂಚಾಯತಿ ಕೇಂದ್ರ ಸ್ಥಳದಲ್ಲಿ ಆಯೋಜಿಸಿರುವ ಗ್ರಾಮಸಭೆಗಳ ಬಗ್ಗೆ ನಮಗೆ ಮಾಹಿತಿ ಸಿಗುವುದಿಲ್ಲ. ಗ್ರಾಮದ ಪಂಚಾಯತಿ ಸದಸ್ಯರು ತಿಳಿಸುವುದಿಲ್ಲ ಎಂದು ಈ ಗ್ರಾಮಗಳ ಜನತೆ ಅತೃಪ್ತಿಯನ್ನು ವ್ಯಕ್ತಪಡಿಸಿದ್ದಾರೆ.

ನಾಲ್ಕು ಗ್ರಾಮಪಂಚಾಯತಿಗಳ ಗ್ರಾಮಸಭೆಗಳ ಆಯೋಜನೆ ಅರಿವು, ಭಾಗವಹಿಸುವಿಕೆ ಮತ್ತು ಯೋಜನೆಗಳ ವಿತರಣೆಯ ಆಧಾರದ ಮೇಲೆ ಅಂಕಗಳನ್ನು ಕೊಡಲಾಗಿದೆ. ಯಾವ ಪಂಚಾಯತಿಯೊಂದರಲ್ಲಿ ಈ ಮೂರು ಅಂಶಗಳು ಚೆನ್ನಾಗಿದ್ದರೆ ಅಂತಹ ಪಂಚಾಯತಿ ಹೆಚ್ಚು ಅಂಕಗಳನ್ನು ಪಡೆದಿದೆ. ಹೀಗೆ ಯಾವ ಪಂಚಾಯತಿಯು ಹೆಚ್ಚು ಅಂಕಗಳನ್ನು ಪಡೆಯುತ್ತದೆಯೋ ಆ ಪಂಚಾಯತಿಯ ಕಾರ್ಯಕ್ಷಮತೆ ಉತ್ತಮವಾಗಿದೆ ಎಂದು ನಿರ್ಧರಿಸಲಾಗಿದೆ. ಅಧ್ಯಯನದ ಪಂಚಾಯತಿಗಳಲ್ಲಿ ನೀರಾವರಿ ಪ್ರದೇಶ ಪಂಚಾಯತಿ ಯಾದ ಹಿರೇಹೆಗ್ಡಾಳ್ ಹೆಚ್ಚು ಅಂಕಗಳನ್ನು ಪಡೆದು ಒಂದನೇ ಸ್ಥಾನದಲ್ಲಿದೆ(ಕೋಷ್ಟಕ-46). ಅಂದರೆ, ಗ್ರಾಮಸಭೆಯಿಂದ ಹೆಚ್ಚು ಮನೆಗಳನ್ನು ಪರಿಶಿಷ್ಟರಿಗೆ, ಬಡತನರೇಖೆ ಕೆಳಗಿರುವ ಕುಟುಂಬಗಳಿಗೆ ಹಂಚಿದ್ದಾರೆ. ಇಲ್ಲಿ ಲಿಂಗಾಯ್ತರೆ ಹೆಚ್ಚು ಇರುವುದರಿಂದ ಅರಿವು ಭಾಗವಹಿಸುವಿಕೆ ಸಹ ಉತ್ತಮವಾಗಿದೆ. ನಾಗೇನಹಳ್ಳಿ ಪಂಚಾಯತಿಯು ಎರಡನೆ ಸ್ಥಾನದಲ್ಲಿದೆ. ಈ ಪಂಚಾಯತಿಯು ನೀರಾವರಿ ಪ್ರದೇಶವಾಗಿದ್ದು ಇಲ್ಲಿ ಹೆಚ್ಚು ಪರಿಶಿಷ್ಟರೆ ಇರುವುದರಿಂದ ಅರಿವು ಮತ್ತು ಭಾಗವಹಿಸುವಿಕೆ ಹಿರೇಹೆಗ್ಡಾಳ್ ಗ್ರಾಮಪಂಚಾಯತಿಗಿಂತ ಕಡಿಮೆ ಇದೆ. ಈ ಎರಡು ನೀರಾವರಿ ಪಂಚಾಯತಿಗಳನ್ನು ಹೋಲಿಕೆ ಮಾಡಿದರೆ ಹಿರೇಹೆಗ್ಡಾಳ್ ಮೊದಲ ಸ್ಥಾನದಲ್ಲಿದ್ದು ನಾಗೇನಹಳ್ಳಿ ಎರಡನೇ ಸ್ಥಾನದಲ್ಲಿದೆ. ನಾಲ್ಕು ಪಂಚಾಯತಿಗಳಲ್ಲಿ ಈ ಎರಡು ಪಂಚಾಯತಿಗಳು ಗ್ರಾಮಸಭೆಗಳು ಉತ್ತಮ ರೀತಿಯಲ್ಲಿ ನಡೆದರೆ ಒಣಭೂಮಿ ಪಂಚಾಯತಿ ಗಳಾದ ಬೈಲುವದ್ದಿಗೆರೆ ಮತ್ತು ಉಜ್ಜನಿ ಪಂಚಾಯತಿಗಳು ನಂತರದ ಸ್ಥಾನದಲ್ಲಿವೆ.

ಬೈಲುವದ್ದಿಗೆರೆ ಗ್ರಾಮಪಂಚಾಯತಿಯ ಗ್ರಾಮಸಭೆಗಳು ಮೂರನೇ ಸ್ಥಾನ ಹೊಂದಿದ್ದರೆ, ಉಜ್ಜನಿಯು ನಾಲ್ಕನೇ ಸ್ಥಾನ ಹೊಂದಿದೆ. ಒಣಭೂಮಿ ಪಂಚಾಯತಿಯಾದರೂ ಬೈಲುವದ್ದಿಗೆರೆಯಲ್ಲಿ ಹೆಚ್ಚು ಜನರು ಭಾಗವಹಿಸಿದ್ದಾರೆ. ಉಜ್ಜನಿಯಲ್ಲಿ ಹೆಚ್ಚು ಸಾಕ್ಷರತೆಯನ್ನು ಹೊಂದಿದ್ದರೂ ಭಾಗವಹಿಸುವಿಕೆ ಕಡಿಮೆ ಇದೆ. ಹೀಗೆ ಗ್ರಾಮಸಭೆಗಳ ಕಾರ್ಯಕ್ಷಮತೆಯನ್ನು ಹೋಲಿಕೆ ಮಾಡಿದರೆ ನೀರಾವರಿ ಪಂಚಾಯತಿ ಪ್ರದೇಶಗಳಲ್ಲಿ ಗ್ರಾಮಸಭೆಗಳು ಉತ್ತಮವಾಗಿವೆ ಎಂದು ಹೇಳಬಹುದು. ಇದರಿಂದ ಗ್ರಾಮಪಂಚಾಯತಿಯ ಕಾರ್ಯಕ್ಷಮತೆ ಸಹ ಉತ್ತಮವಾಗಿದೆ. ಎಲ್ಲಾ ಗ್ರಾಮಪಂಚಾಯತಿಗಳ ವ್ಯಾಪ್ತಿಗೆ ಬರುವ ಗ್ರಾಮದ ಜನರಲ್ಲಿ ಹೆಚ್ಚಿನ ಜನ ಗ್ರಾಮಸಭೆಯ ಬಗ್ಗೆ ನಿರಾಸೆಯನ್ನು ವ್ಯಕ್ತಪಡಿಸಿದ್ದಾರೆ. ಈ ನಿರಾಸೆಗೆ ಹಲವು ಕಾರಣಗಳನ್ನು ಕೊಟ್ಟಿದ್ದಾರೆ. ಗ್ರಾಮಸಭೆಯನ್ನು ಕರೆಯುತ್ತಾರೆ, ಅಲ್ಲಿ ಜನತೆಯ ಬೇಡಿಕೆಗಳ ಪಟ್ಟಿಯನ್ನು ಬರೆದುಕೊಳ್ಳುತ್ತಾರೆ. ಆದರೆ ಇನ್ನೊಂದು ಗ್ರಾಮಸಭೆ ನಡೆಯುವವರೆಗೆ ಆ ಬೇಡಿಕೆಗಳು ಹಾಗೇಯೇ ಇರುತ್ತವೆ. ಒಂದೂ ಈಡೇರಿರುವುದಿಲ್ಲ. ಸರ್ಕಾರಿ ಇಲಾಖೆಗಳ ಪ್ರತಿನಿಧಿಗಳು ಬರುತ್ತಾರೆ. ಅವರು ತಮ್ಮ ತಮ್ಮ ಇಲಾಖೆಯ

ಸೌಲಭ್ಯಗಳ ಕುರಿತು ಹೇಳುತ್ತಾರೆ. ಆದರೆ ಇವುಗಳ ಪ್ರಯೋಜನ ಹೇಗೆ ಪಡೆಯಬೇಕು, ಯಾರಿಗೆ ಸಿಗುತ್ತದೆ ಎಂಬುದರ ಬಗ್ಗೆ ಸ್ಪಷ್ಟನೆ ಇಲ್ಲ.

ಫಲಾನುಭವಿಗಳ ಆಯ್ಕೆಯಲ್ಲಂತೂ ಉತ್ತಮ ನಿರ್ಧಾರ ಯಾವ ಪಂಚಾಯತಿಯಲ್ಲಿಯೂ ಕಂಡುಬಂದಿಲ್ಲ. ಜನರು ಇದರ ಬಗ್ಗೆ ಫಲಾನುಭವಿಗಳ ಪಟ್ಟಿಯನ್ನು ಗ್ರಾಮಸಭೆಯಲ್ಲಿ ತಯಾರಿಸುತ್ತಾರೆ. ಪುನಃ ತಾಲ್ಲೂಕು, ಜಿಲ್ಲಾಪಂಚಾಯತ್ ಸದಸ್ಯರಿಂದ, ಶಾಸಕರಿಂದ ಮತ್ತು ಸ್ಥಳೀಯ ರಾಜಕಾರಣದಿಂದ ಬದಲಾವಣೆಯಾಗುತ್ತದೆ. ಒಂದು ವಸತಿಗೆ ಇಷ್ಟು ಹಣ ಎಂದು ನಿಗಧಿಮಾಡಿರುತ್ತಾರೆ. ಇದು ಎಲ್ಲರಿಗೂ ಗೊತ್ತಿರುವ ಗುಪ್ತ ವಿಚಾರ ಎಂದು ಹೇಳಿದ್ದಾರೆ. ವಿಕೇಂದ್ರೀಕರಣದ ಆಶಯವೆಲ್ಲ ಗ್ರಾಮಸಭೆಯ ಮೇಲೆ ನಿರ್ಧಾರವಾಗುತ್ತದೆ. ಆದರೆ ಆ ಗ್ರಾಮಸಭೆಗಳೆ ಇಲ್ಲಿ ವಿಫಲವಾದರೆ ವಿಕೇಂದ್ರೀಕರಣ ಆಶಯ ಯಾವ ಪಂಚಾಯತಿಯಲ್ಲೂ ನಡೆದಿಲ್ಲ ನೇರವೇರಿಲ್ಲ ಎಂದು ಹೇಳಬಹುದು. ಗ್ರಾಮಸಭೆ ವಿಫಲಕ್ಕೆ ಗ್ರಾಮಪಂಚಾಯತಿಯು ಕಾರಣವಾಗಿದೆ. ಗ್ರಾಮ ಪಂಚಾಯತಿಗಿಂತ ಹೆಚ್ಚು ಕಾರಣ ರಾಜಕಾರಣ ಎಂದು ಹೇಳಬಹುದು. ಮೇಲ್‌ಸ್ತರಗಳ ಮತ್ತು ಸ್ಥಳೀಯ ರಾಜಕಾರಣ ಇಲ್ಲದಿದ್ದರೆ ಕೆಲವು ಪ್ರಯೋಜನಗಳು ಬಡವರಿಗೆ ಉದ್ದೇಶಿತ ವರ್ಗಕ್ಕೆ ತಲುಪಬಹುದಿತ್ತು. ಆದರೆ ಇಲ್ಲಿ ಯಾವ ಪಂಚಾಯತಿಯಲ್ಲಿ ರಾಜಕಾರಣ ಹೊರತುಪಡಿಸಿ ಗ್ರಾಮಸಭೆಗಳೆ ನಡೆದಿಲ್ಲ. ಹೀಗೆ ಗ್ರಾಮಸಭೆಯ ಕೆಲವು ದೋಷಗಳನ್ನು ಗುರುತಿಸಬಹುದಾಗಿದೆ.

## 5.3 ತೆರಿಗೆ ಸಂಗ್ರಹ

ಕರ್ನಾಟಕ ಪಂಚಾಯತ್‌ರಾಜ್ ಅಧಿನಿಯಮ 212ರ ಪ್ರಕಾರ ರಾಜ್ಯದ ಪ್ರತಿಯೊಂದು ಗ್ರಾಮ ಪಂಚಾಯತಿಗಳು ಸ್ವಂತ ನಿಧಿಯನ್ನು ಹೊಂದಿದೆ.[13] ಈ ನಿಧಿಯು ಕೇಂದ್ರ ಮತ್ತು ರಾಜ್ಯ ಸರ್ಕಾರದ ಅನುದಾನಗಳು ಹಾಗೂ ಗ್ರಾಮಪಂಚಾಯತಿಗಳು ಸ್ಥಳೀಯವಾಗಿ ಸಂಗ್ರಹಿಸಿದ ಸಂಪನ್ಮೂಲಗಳನ್ನು ಒಳಗೊಂಡಿರುತ್ತದೆ. ಈ ಎಲ್ಲಾ ಸಂಪನ್ಮೂಲಗಳಿಂದ ಸ್ಥಳೀಯ ಅಭಿವೃದ್ಧಿ ಕಾರ್ಯಗಳನ್ನು ಕೈಗೊಳ್ಳುವಂತೆ ನಿಯಮಗಳನ್ನು ರೂಪಿಸಲಾಗಿದೆ. ಸ್ಥಳೀಯ ಅಭಿವೃದ್ಧಿಯ ದೃಷ್ಟಿಯಿಂದ ಮತ್ತು ಈ ಅಭಿವೃದ್ಧಿಯನ್ನು ಪಡೆಯುವ ಪ್ರತಿಯೊಬ್ಬ ನಾಗರೀಕನು ಅಲ್ಲಿಯ ಅಭಿವೃದ್ಧಿಯ ವೆಚ್ಚದ ಭಾರವನ್ನು ಸ್ವಲ್ಪಮಟ್ಟಿಗಾದರೂ ಹೊರಬೇಕಾಗಿದೆ. ಜನತೆಯು ಪ್ರಭುತ್ವದ ಹಕ್ಕುಗಳನ್ನು ಅನುಭವಿಸಬೇಕಾದರೇ ಆ ಹಕ್ಕಿಗೆ ತಕ್ಕಂತೆ ಕೆಲವು ಜವಾಬ್ದಾರಿಗಳನ್ನು ಹೊರಬೇಕಾಗಿದೆ. ಆಗಾದಾಗ ಮಾತ್ರ ಅವನು ಅಭಿವೃದ್ಧಿಯಲ್ಲಿ ಪಾಲುದಾರನಾಗುತ್ತಾನೆ, ಹಾಗೆಯೇ ಭಾಗವಹಿಸಿದಂತಾಗುತ್ತದೆ. ಹೀಗಾಗಿ ತೆರಿಗೆ ಪಾವತಿಸುವುದು ಸ್ಥಳೀಯ ಸಂಪನ್ಮೂಲ ಸಂಗ್ರಹಕ್ಕೆ ಆದಾಯದ ಮೂಲವಾಗಿದೆ. ಆದ್ದರಿಂದ ತೆರಿಗೆ ಪಾವತಿಸುವುದು ಅಭಿವೃದ್ಧಿಯ ಪ್ರಮುಖ ಸೂಚ್ಯಂಕವೆಂದು ತಿಳಿಯಲಾಗಿದೆ.

ಗ್ರಾಮಪಂಚಾಯತಿಯ ಸಂಪನ್ಮೂಲಗಳಲ್ಲಿ ತೆರಿಗೆ ಸಂಗ್ರಹವು ಪ್ರಮುಖ ಆದಾಯ ಮೂಲ. ಏಕೆಂದರೇ ಸ್ಥಳೀಯರಿಗೆ ಮೂಲಭೂತ ಅವಶ್ಯಕತೆಗಳ ಪೂರೈಕೆಯ ಜವಾಬ್ದಾರಿಯನ್ನು ಗ್ರಾಮಪಂಚಾಯತಿಗೆ

ವಹಿಸಲಾಗಿದೆ. ಪಂಚಾಯತಿ ಸಿಬ್ಬಂದಿ ವೆಚ್ಚವನ್ನು ಸ್ಥಳೀಯರಿಂದ ಸಂಗ್ರಹವಾದ ಮೊತ್ತದಲ್ಲಿ ವಿತರಿಸಲಾಗುತ್ತಿದೆ. ಹಾಗಾಗಿ ಪ್ರತಿ ಗ್ರಾಮಪಂಚಾಯತಿಗಳು ಸ್ಥಳೀಯರಿಂದ ಮನೆತೆರಿಗೆ, ಇದರಲ್ಲಿ ನೀರಿನ ಕರ, ಆರೋಗ್ಯ ಕರ, ದೀಪದ ಕರ, ಶಿಕ್ಷಣ, ಗ್ರಂಥಾಲಯ ಮತ್ತು ಭೂ ತೆರಿಗೆಗಳಲ್ಲಿ ಪಾಲು ಇವನ್ನೆಲ್ಲಾ ಸೇರಿಸಿ ಮನೆ ತೆರಿಗೆ ರೂಪದಲ್ಲಿ ಪಂಚಾಯತಿಗಳು ಸಂಗ್ರಹಿಸುತ್ತಿವೆ. ಇತರೆ ಕರಗಳೆಂದರೆ, ಗ್ರಾಮಪಂಚಾಯತಿಯ ಸ್ವತ್ತುಗಳಿಂದ, ಹೋಟೆಲ್, ಅಂಗಡಿ, ಹಿಟ್ಟಿನ ಗಿರಿಣಿ, ಸಾರಾಯಿ ಅಂಗಡಿ, ನಳಗಳ ಕರ ಇತ್ಯಾದಿ ಮೂಲಗಳಿಂದ ಸಂಗ್ರಹಿಸುತ್ತಿವೆ. ಆಯಾ ಪಂಚಾಯತಿಗಳು ತೆರಿಗೆಗಳನ್ನು ನಿರ್ಧರಿಸುತ್ತವೆ. ಹೀಗೆ ತೆರಿಗೆಯು ಸ್ಥಳೀಯ ಸಂಪನ್ಮೂಲ ಕ್ರೋಢಿಕರಣದಲ್ಲಿ ಪ್ರಮುಖ ಭಾಗವಾಗಿದೆ. ಹಾಗೂ ಅಭಿವೃದ್ಧಿಯಲ್ಲಿ ಜನತೆಯ ಭಾಗವಹಿಸುವಿಕೆಯ ಸೂಚ್ಯಂಕವಾಗಿದೆ. ಅಧ್ಯಯನ ಕೈಗೊಂಡ ಗ್ರಾಮಪಂಚಾಯತಿ ಗಳಲ್ಲಿ ತೆರಿಗೆ ಸಂಗ್ರಹದ ಮೂಲಕ ಜನತೆಯ ಭಾಗವಹಿಸುವಿಕೆ ಹೇಗಿದೆ ಎಂಬುದನ್ನು ತಿಳಿಯುತ್ತ ಗ್ರಾಮಪಂಚಾಯತಿಗಳ ಕಾರ್ಯಕ್ಷಮತೆಯನ್ನು ಗುರುತಿಸಲಾಗುವುದು. ಅಧ್ಯಯನ ಕೈಗೊಂಡ ನಾಲ್ಕು ಗ್ರಾಮಪಂಚಾಯತಿಗಳಲ್ಲಿ ಸ್ಥಳೀಯ ತೆರಿಗೆ ಸಂಗ್ರಹ ಹೇಗೆ ಸಂಗ್ರಹವಾಗಿದೆ? ತೆರಿಗೆ ಸಂಗ್ರಹ ಕ್ರಮವಾಗಿ ಸಂಗ್ರಹವಾಗುತ್ತಿದೆಯೋ ಅಥವಾ ಇಲ್ಲವೇ? ಪಂಚಾಯತಿಗಳ ಬೇಡಿಕೆ, ವಸೂಲಿ, ಇವೆರಡರ ನಡುವಿನ ಅಂತರ? ತೆರಿಗೆ ಸಂಗ್ರಹಿಸುವಲ್ಲಿ ಇರುವ ತೊಡುಕುಗಳೇನು? ಪಂಚಾಯತಿ ಸದಸ್ಯರ ಮತ್ತು ಊರವರ ಅಭಿಪ್ರಾಯದಲ್ಲಿ ತೆರಿಗೆ ಸಂಗ್ರಹ ಹೇಗಿದೆ? ಗ್ರಾಮಪಂಚಾಯತಿ ಕಾರ್ಯಕ್ಷಮತೆ ಯಲ್ಲಿ ತೆರಿಗೆಯ ಪಾತ್ರವನ್ನು ಗುರುತಿಸಲಾಗಿದೆ.

### ನಾಗೇನಹಳ್ಳಿ ಗ್ರಾಮಪಂಚಾಯತಿ

ನಾಗೇನಹಳ್ಳಿ ಪಂಚಾಯತಿಯಲ್ಲಿ 1995ರಿಂದ 2000ರ ವರೆಗಿನ ತೆರಿಗೆ ಸಂಗ್ರಹವನ್ನು ನೋಡಿದಾಗ, ಕನಿಷ್ಠ ಶೇ.40 ರಿಂದ ಗರಿಷ್ಠ ಶೇ.63ರವರೆಗೆ ತೆರಿಗೆ ಸಂಗ್ರಹವಾಗಿದೆ(ಕೋಷ್ಠಕ-40).[14] ಈ ಪಂಚಾಯತಿಯಲ್ಲಿ ತೆರಿಗೆ ಸಂಗ್ರಹವು ಕಳೆದ ಐದು ವರ್ಷದಿಂದ ಅಷ್ಟೊಂದು ಸಮಾಧಾನಕಾರ ವಾಗಿಲ್ಲ. ಪಂಚಾಯತಿಯು ನೀರಾವರಿ ಪ್ರದೇಶದಿಂದ ಕೂಡಿದ್ದು ತೆರಿಗೆ ಕಟ್ಟದೇ ಇರುವಂಥ ಬಡಜನರು ಯಾರು ಇಲ್ಲ. ಅದರೂ ಸಹ ಪ್ರತಿವರ್ಷ ತೆರಿಗೆ ಸಂಗ್ರಹದಲ್ಲಿ ಏರಿಳಿತವಾಗಿದೆ. ಪ್ರತಿ ವರ್ಷದ ಬೇಡಿಕೆ ರೂ.46500ಗಳಿಷ್ಟಿದೆ. ನಾಗೇನಹಳ್ಳಿ ಪಂಚಾಯತಿಯಲ್ಲಿ ಮನೆಗಳ ನಮೂನೆಯ ಮೇಲೆ ತೆರಿಗೆಯನ್ನು ವಿಧಿಸಲಾಗುತ್ತಿದೆ. ಕನಿಷ್ಠ ರೂ.35ಗಳಿಂದ ಗರಿಷ್ಠ ರೂ. 80ಗಳವರೆಗೆ ಮನೆ ತೆರಿಗೆಯನ್ನು ಸಂಗ್ರಹಿಸಲಾಗುತ್ತಿದೆ.[15] ಮನೆತೆರಿಗೆ ಭೂಮಿಕರ ಶಿಕ್ಷಣ, ನೀರು, ಆರೋಗ್ಯ, ದೀಪ ಮತ್ತು ಗ್ರಂಥಾಲಯ ಕರಗಳು ಸೇರಿರುತ್ತವೆ. ಒಟ್ಟು ತೆರಿಗೆಯ ಸಂಗ್ರಹದಲ್ಲಿ ಶೇ.65ರಷ್ಟು ಮನೆತೆರಿಗೆಯಾದರೇ ಶೇ.35ರಷ್ಟು ಇತರೇ ಕರಗಳಿಂದ ಬರುತ್ತವೆ(ಕೋಷ್ಠಕ-4). ಇತರೆ ಕರಗಳಲ್ಲಿ ಹೋಟೆಲ್‌ಗಳು, ಖಾತೆ ಬದಲಾವಣೆ, ಸಾರಾಯಿ ಅಂಗಡಿಗಳಿಂದ ಸಂಗ್ರಹವಾಗುತ್ತದೆ. ತೆರಿಗೆಯ ಬಗ್ಗೆ ಪಂಚಾಯತಿ ಸದಸ್ಯರ ಮತ್ತು ಊರವರ ಅರಿವನ್ನು ನೋಡಿದಾಗ, ಹೆಚ್ಚು ಅರಿವನ್ನು ಪಂಚಾಯತಿ ಸದಸ್ಯರು ಹೊಂದಿದ್ದು, ಮಹಿಳಾ ಸದಸ್ಯರಿಗೂ ಮತ್ತು ಗ್ರಾಮೀಣ ಮಹಿಳೆಯರಿಗೂ ತೆರಿಗೆಯ ಬಗ್ಗೆ ಅರಿವು ಬಹಳ ಕಡಿಮೆ ಇದೆ. ಜಾತಿವಾರು ತೆರಿಗೆ ಅರಿವನ್ನು ನೋಡಿದಾಗ ಹೆಚ್ಚು ಪರಿಶಿಷ್ಟೇತರರು ತೆರಿಗೆಯ ಬಗ್ಗೆ ಅರಿವನ್ನು ಹೊಂದಿದ್ದು, ಕೆಳ ಜಾತಿಗಳು ತೆರಿಗೆಯ ಬಗ್ಗೆ ಕಡಿಮೆ ಅರಿವನ್ನು ಹೊಂದಿದ್ದಾರೆ. ತೆರಿಗೆ ಸಂಗ್ರಹದ ಕುರಿತು ಪಂಚಾಯತಿ ಸದಸ್ಯರು ಮತ್ತು ಅಧಿಕಾರಿಗಳು ಹೀಗೆ ಹೇಳುತ್ತಾರೆ. ಗ್ರಾಮ ಪಂಚಾಯತಿಯಿಂದ

ಏನಾದರೂ ಕೆಲಸವಾಗಬೇಕಾದಾಗ ಹೆಚ್ಚು ಜನರು ತೆರಿಗೆಯನ್ನು ಕಟ್ಟುತ್ತಾರೆ. ಉದಾಹರಣೆಗೆ ಖಾತೆ ಬದಲಾವಣೆ, ಚುನಾವಣೆಗೆ ಸ್ಪರ್ಧಿಸಲು, ಫಲಾನುಭವಿಯಾಗಿ ಆಯ್ಕೆಯಾದಾಗ ಮಾತ್ರ ತೆರಿಗೆಯನ್ನು ಪಾವತಿಸುತ್ತಾರೆ. ಹಾಗಾಗಿ ಸರ್ಕಾರದ ಯೋಜನೆಗಳು ಹೆಚ್ಚು ಅನುಷ್ಠಾನಗೊಂಡರೆ ಹೆಚ್ಚು ತೆರಿಗೆಯ ಸಂಗ್ರಹವಾಗುತ್ತದೆ.

ತೆರಿಗೆ ಪಾವತಿಸುವುದು ಅಭಿವೃದ್ಧಿಯಲ್ಲಿ ಭಾಗವಹಿಸುವಂತಾಗುತ್ತದೆ. ಹಾಗಾಗಿ ಪ್ರಸ್ತುತ ಗ್ರಾಮಪಂಚಾಯತಿಯಲ್ಲಿ ಜನತೆಯ ಭಾಗವಹಿಸುವಿಕೆಯನ್ನು ತೆರಿಗೆಯಿಂದ ಮಾಪನ ಮಾಡುವುದಾದರೆ ಜನತೆಯ ಭಾಗವಹಿಸುವಿಕೆ ಉತ್ತಮವಾಗಿದೆ. ಅದೇ ರೀತಿ ತೆರಿಗೆ ಸಂಗ್ರಹವು ಗ್ರಾಮಪಂಚಾಯತಿಯ ಕೆಲಸವಾಗಿರುವುದರಿಂದ ಕಾರ್ಯಕ್ಷಮತೆ ಉತ್ತಮವಾಗಿದೆ. ಪಂಚಾಯತಿ ಪ್ರದೇಶದಲ್ಲಿ ಪರಿಶಿಷ್ಟರೇ ಹೆಚ್ಚು ಇದ್ದರೂ ಸಹ ತೆರಿಗೆ ಕಟ್ಟದೆ ಇರುವಷ್ಟು ಬಡವರು ಯಾರು ಇಲ್ಲ. ಏಕೆಂದರೆ ಪಂಚಾಯತಿ ಪ್ರದೇಶವು ನೀರಾವರಿಯಿಂದ ಕೂಡಿದ್ದು, ಪಟ್ಟಣಕ್ಕೆ ಹತ್ತಿರವಿದೆ. ಉತ್ತಮ ಕೂಲಿ ಮತ್ತು ಉದ್ಯೋಗಕ್ಕೆ ಕೊರತೆ ಇಲ್ಲ ಎಂದು ಹೇಳಬಹುದು. ನೀರಾವರಿ ಪ್ರದೇಶವಾಗಿರುವುದರಿಂದ ಇನ್ನೂ ಹೆಚ್ಚಿನ ತೆರಿಗೆ ಸಂಗ್ರಹವಾಗಬೇಕಿತ್ತು, ಇತರೆ ಒಣಭೂಮಿ ಪಂಚಾಯತಿಗಳಿಗೆ ಹೋಲಿಸಿದರೆ ತೆರಿಗೆ ಸಂಗ್ರಹ ಉತ್ತಮವಾಗಿದೆ. ಒಟ್ಟು ಬೇಡಿಕೆಯಲ್ಲಿ ಶೇ.56ರಷ್ಟು ತೆರಿಗೆ ಸಂಗ್ರಹವಾಗುತ್ತಿದೆ ಎಂದರೆ ತೆರಿಗೆ ಪಾವತಿ ಮಾಡಿದ ಕುಟುಂಬಗಳು ಗ್ರಾಮ ಪಂಚಾಯತಿಯಲ್ಲಿ ಭಾಗವಹಿಸಿವೆ ಎಂದು ಗ್ರಹಿಸಬಹುದಾಗಿದೆ.

### ಬೈಲುವದ್ದಿಗೆರೆ ಗ್ರಾಮಪಂಚಾಯತಿ

ಬೈಲುವದ್ದಿಗೆರೆ ಗ್ರಾಮಪಂಚಾಯತಿ ವ್ಯಾಪ್ತಿಯಲ್ಲಿ ಬರುವ ಗ್ರಾಮಗಳು ಒಣಭೂಮಿ ಪ್ರದೇಶಗಳೆಂದು ಈಗಾಗಲೇ ನೋಡಿದ್ದೇವೆ. ಈ ಪಂಚಾಯತಿಯಲ್ಲಿ 1995-2000 ಇಸವಿವರೆಗಿನ ತೆರಿಗೆ ಸಂಗ್ರಹವನ್ನು ನೋಡಿದಾಗ ಕನಿಷ್ಠ ಶೇ.13 ರಿಂದ ಗರಿಷ್ಟ ಶೇ.20ರಷ್ಟು ತೆರಿಗೆ ಸಂಗ್ರಹವಾಗಿದೆ. ಐದು ವರ್ಷದ ಒಟ್ಟು ತೆರಿಗೆಯಲ್ಲಿ ಸರಾಸರಿ ಶೇ.16ರಷ್ಟು ತೆರಿಗೆ ಸಂಗ್ರಹವಾಗಿದೆ(ಕೋಷ್ಟಕ-40).[16] ಗ್ರಾಮಪಂಚಾಯತಿಗೆ ಸ್ಥಳೀಯವಾಗಿ ತೆರಿಗೆ ಸಂಗ್ರಹವು ಪ್ರಮುಖ ಆದಾಯ ಮೂಲವಾಗಿದೆ. ಆದರೆ ಈ ಪಂಚಾಯತಿಯಲ್ಲಿ ತೆರಿಗೆ ಸಂಗ್ರಹ ಬಹಳ ಕಡಿಮೆಯಾಗಿದ್ದು, ಇದಕ್ಕೆ ಕೆಲವು ಕಾರಣಗಳನ್ನು ಕೊಡಬಹುದು. ಒಂದು, ಒಣಭೂಮಿ ಎರಡು, ಆರ್ಥಿಕವಾಗಿ ದುರ್ಬಲರು. ಮೂರು, ಕೃಷಿ ಕೂಲಿಕಾರರು ಮತ್ತು ನಿರುದ್ಯೋಗಿಗಳು ಹೆಚ್ಚಾಗಿದ್ದಾರೆ ಎಂದು ಹೇಳಬಹುದು. ಅಷ್ಟೆ ಅಲ್ಲ ಈ ಪ್ರದೇಶ ಪಟ್ಟಣದಿಂದ ದೂರವಿದ್ದು ಕೃಷಿ ಬಿಟ್ಟು ಬೇರೆ ಉದ್ಯೋಗ ಇಲ್ಲ. ಹೀಗಾಗಿ ತೆರಿಗೆ ಸಂಗ್ರಹ ಕಡಿಮೆಯಾಗುವುದಕ್ಕೆ ಇವೆ ಕೆಲವು ಪ್ರಮುಖ ಕಾರಣಗಳೆಂದು ತಿಳಿಯಲಾಗಿದೆ. ತೆರಿಗೆಯ ಬಾಕಿ ಪ್ರತಿ ವರ್ಷ ಹೆಚ್ಚುತ್ತ ಹೋಗಿದೆ. ಇಲ್ಲಿಯೂ ಸಹ ಹೆಚ್ಚು ಜನರು ಪಂಚಾಯತಿಯಿಂದ ಯೋಜನೆಗಳ ಲಭಿಸಿದಾಗ, ಚುನಾವಣೆಗೆ ನಿಲ್ಲುವಾಗ, ಮನೆಯ ಖಾತೆ ಬದಲಾವಣೆಯ ಸಂದರ್ಭದಲ್ಲಿ ಮಾತ್ರ ಅವರ ಪೂರ್ಣ ತೆರಿಗೆಯನ್ನು ಪಾವತಿ ಮಾಡುತ್ತಾರೆ ಎಂದು ಕ್ಷೇತ್ರಕಾರ್ಯ ಸಂದರ್ಭದಲ್ಲಿ ಪಂಚಾಯತಿ ಸದಸ್ಯರು ಮತ್ತು ಅಧಿಕಾರಿಗಳು ತಿಳಿಸಿದ್ದಾರೆ. ತೆರಿಗೆ ಸಂಗ್ರಹದ ಪ್ರಮಾಣವನ್ನು ನೋಡಿದಾಗ ಬಹಳ ಕಡಿಮೆ ಇದೆ. ತೆರಿಗೆ ಕಟ್ಟದೆ ಇರುವಷ್ಟು ಬಡವರು ಯಾರು ಇಲ್ಲ

ಆದರೂ ಪಂಚಾಯತಿಗೆ ಹಣ ಪಾವತಿ ಮಾಡಬೇಕು ಎಂದರೆ ಅವರಿಗೆ ಆದರ ಬಗ್ಗೆ ಆಸಕ್ತಿ ಇಲ್ಲ. ಪಂಚಾಯತಿ ನಮಗೆ ಏನು ಮಾಡಿದೆ? ನಾವು ಹೋಗಿ ಪಂಚಾಯತಿಗೆ ತೆರಿಗೆ ಕಟ್ಟಬೇಕು? ಎಲ್ಲರೂ ಕಟ್ಟಲಿ ನಾವು ಕಟ್ಟುತ್ತೇವೆ? ಹೀಗೆ ಇತ್ಯಾದಿ ಪ್ರಶ್ನೆಗಳು ಸಾರ್ವಜನಿಕರಿಂದ ಬಂದಿವೆ.

ಪ್ರತಿವರ್ಷ ತೆರಿಗೆ ಸಂಗ್ರಹವು ಸುಮಾರು ರೂ.80,000 ರೂ.ಗಳಷ್ಟು ಬೇಡಿಕೆ ಇದೆ. ಆದರೆ ಇದರಲ್ಲಿ ಕೇವಲ ಪ್ರತಿವರ್ಷ ರೂ.20,000 ದಿಂದ ರೂ 25,000 ಮಾತ್ರ ಸಂಗ್ರಹವಾಗುತ್ತದೆ. ಪಂಚಾಯತಿ ವ್ಯಾಪ್ತಿಯ ಎಲ್ಲಾ ಮನೆಗಳಿಗೂ ಒಂದೇ ತೆರಿಗೆಯನ್ನು ವಿಧಿಸಲಾಗುತ್ತಿದೆ(ಕೋಷ್ಟಕ-41). ಬಡವರಿಗೂ ಮತ್ತು ಶ್ರೀಮಂತರಿಗೂ ಸಹ ಸಮಾನವಾಗಿ ರೂ.43ಗಳನ್ನು ವಿಧಿಸಲಾಗುತ್ತಿದೆ. ಗುಡಿಸಲಿಗೂ, ದೊಡ್ಡ ಮನೆಗಳಿಗೂ ಒಂದೆ ಎಂದರೆ ಹೇಗೆ ಎಂದು ಸಾರ್ವಜನಿಕರು ಪ್ರಶ್ನೆ ಮಾಡಿದ್ದಾರೆ. ಹಾಗಾಗಿ ಪಂಚಾಯತಿ ಸದಸ್ಯರು ಮತ್ತು ಅಧಿಕಾರಿಗಳು ಇದರ ಬಗ್ಗೆ ಗಮನವಹಿಸಿದರೆ ಸೂಕ್ತ ಎಂದು ಗ್ರಾಮೀಣ ಜನರು ಹೇಳಿದ್ದಾರೆ. ಪಂಚಾಯತಿ ವ್ಯಾಪ್ತಿಯಲ್ಲಿ ಲಿಂಗಾಯತ ಮೇಲ್ವರ್ಗಗಳೆ ಹೆಚ್ಚು ಇರುವುದು ಸಹ ಕಾರಣವಾಗಿರಬಹುದು. ಪಂಚಾಯತಿ ವ್ಯಾಪ್ತಿಯ ಪರಿಶಿಷ್ಟರು ಹೆಚ್ಚು ಭೂರಹಿತ ಕೂಲಿಕಾರರಿದ್ದಾರೆ. ಆದ್ದರಿಂದ ಪರಿಶಿಷ್ಟರು ಆರ್ಥಿಕವಾಗಿ ಬಹಳ ದುರ್ಬಲರಾಗಿದ್ದಾರೆ. ಆದ್ದರಿಂದ ಮನೆಯ ಮಾದರಿಯ ಮೇಲೆ ತೆರಿಗೆಯನ್ನು ವಿಧಿಸಿದರೆ ಸಮಾನತೆಯನ್ನು ಪಾಲಿಸಿದಂತಾಗುತ್ತದೆ. ಈ ಪಂಚಾಯತಿಯ ಪಕ್ಕದಲ್ಲಿರುವ ಪಾಪಿನಾಯಕನಹಳ್ಳಿ ಗ್ರಾಮಪಂಚಾಯತಿಯು ಮೂರು ವಿಧದ ಮನೆ ತೆರಿಗೆಗಳನ್ನು ಸಂಗ್ರಹಿಸುತ್ತದೆ. ಒಂದು ಆರ್.ಸಿ.ಸಿ. ಮನೆಗಳಿಗೆ ವಾರ್ಷಿಕ ರೂ.80ನ್ನು, ಮಧ್ಯಮ ಗಾತ್ರದ ಮನೆಗಳಿಗೆ ರೂ.53ನ್ನು ಮತ್ತು ಸಣ್ಣ ಮನೆಗಳಿಗೆ ರೂ.32ರಂತೆ ಸಂಗ್ರಹಿಸಲಾಗುತ್ತಿದೆ.[17] ಈ ಪಂಚಾಯತಿಯು ಬೈಲುವದ್ದಿಗೆರೆಯಿಂದ ಮೂರು ಕಿ.ಮೀ. ದೂರದಲ್ಲಿದೆ. ಇದೇ ಮಾದರಿಯಲ್ಲಿ ಮಾಡಿ ಎಂದು ಸದಸ್ಯರನ್ನು, ಮತ್ತು ಅಧಿಕಾರಿಗಳನ್ನು ಕೇಳಿದಾಗ ನಾವೇನು ಮಾಡಬೇಕು, ಹಿಂದಿನ ಸದಸ್ಯರೆ ಇದನ್ನು ನಿರ್ಧರಿಸಿವೆ ಎಂದು ಹೇಳಿದ್ದಾರೆ. ಗ್ರಾಮಪಂಚಾಯತಿಯ ಸ್ಥಳೀಯ ಆದಾಯದಲ್ಲಿ ಮನೆತೆರಿಗೆ ಮತ್ತು ಭೂಮಿ ಕರದ ಪಾಲು ಹೆಚ್ಚಿವೆ.

ಪಂಚಾಯತಿ ಸದಸ್ಯರ ಮತ್ತು ಊರವರ ತೆರಿಗೆಯ ಅರಿವನ್ನು ನೋಡಿದಾಗ ಶೇ.73ರಷ್ಟು ಪಂಚಾಯತಿ ಸದಸ್ಯರಿಗೆ, ಶೇ.25ರಷ್ಟು ಗ್ರಾಮೀಣ ಜನರು ತೆರಿಗೆಯ ಬಗ್ಗೆ ಅರಿವನ್ನು ಹೊಂದಿದ್ದಾರೆ. ತೆರಿಗೆಯ ಬಗ್ಗೆ ಹೆಚ್ಚು ಅರಿವನ್ನು ಮೇಲ್ವರ್ಗಗಳೆ ಹೊಂದಿವೆ. ಕಡಿಮೆ ಅರಿವನ್ನು ಪರಿಶಿಷ್ಟರು ಹೊಂದಿದ್ದಾರೆ. ತೆರಿಗೆ ಮೊತ್ತದ ಬಗ್ಗೆ ಊರವರ ಅಭಿಪ್ರಾಯವನ್ನು ನೋಡಿದಾಗ ಶೇ.10ರಷ್ಟು ಜನರು ಸರಿಯಿದೆ ಮತ್ತು ಶೇ.15ರಷ್ಟು ಜನರು ತೆರಿಗೆ ಹೆಚ್ಚಾದೆ ಎಂದು ಮತ್ತು ಶೇ.75ರಷ್ಟು ತೆರಿಗೆ ಬಗ್ಗೆ ಗೊತ್ತಿಲ್ಲವೆಂದು ಅಭಿಪ್ರಾಯಪಟ್ಟಿದ್ದಾರೆ(ಕೋಷ್ಟಕ-43). ಹೆಚ್ಚು ತೆರಿಗೆ ಇದೆ ಎಂದು ಹೆಚ್ಚು ಪರಿಶಿಷ್ಟರೇ ಹೇಳಿದ್ದಾರೆ. ಕ್ರಮ ಪ್ರಕಾರ ತೆರಿಗೆ ಸಂಗ್ರಹ ಆಗದಿರಲು ಕಾರಣಗಳನ್ನು ಪಂಚಾಯತಿ ಸದಸ್ಯರಿಂದ ಅಧಿಕಾರಿಗಳಿಂದ ಮತ್ತು ಊರವರಿಂದ ಸಂಗ್ರಹಿಸಲಾಗಿದೆ. ಶೇ.40ರಷ್ಟು ಪಂಚಾಯತಿ ಸದಸ್ಯರು, ಗ್ರಾಮದವರಿಗೆ ಪಂಚಾಯತಿ ಬಗ್ಗೆ ನಿರ್ಲಕ್ಷ್ಯ ಮತ್ತು ಶೇ.26ರಷ್ಟು ಆರ್ಥಿಕವಾಗಿ ದುರ್ಬಲರಾಗಿದ್ದಾರೆ ಎಂದು ಅಭಿಪ್ರಾಯಪಟ್ಟಿದ್ದಾರೆ (ಕೋಷ್ಟಕ-44). ಅಧಿಕಾರಿಗಳು ಸಹ ಇದೆ ಉತ್ತರವನ್ನು ಹೇಳಿದ್ದಾರೆ. ಊರವರ ಪ್ರಕಾರ ವಸೂಲಿಗೆ

ಸರಿಯಾಗಿ ಬರುವುದಿಲ್ಲ, ನಮ್ಮಲ್ಲಿ ಹಣವಿದ್ದಾಗ ವಸೂಲಿಗೆ ಬರುವುದಿಲ್ಲ, ಪಂಚಾಯತಿ ಸಿಬ್ಬಂದಿಯು ಅವರಿಗೆ ಸಂಬಳ ಕೊಡುವಾಗ ವಸೂಲಿಗೆ ಕಳುಹಿಸುತ್ತಾರೆ. ನಾವು ಬಡವರಿದ್ದೇವೆ. ಹೀಗೆ ಇತ್ಯಾದಿ ಅಂಶಗಳು ಕ್ರಮ ಪ್ರಕಾರ ತೆರಿಗೆ ಆಗದೇ ಇರುವುದಕ್ಕೆ ಕಾರಣವಾಗಿವೆ ಎಂದು ಹೇಳಬಹುದು. ಈ ಎಲ್ಲಾ ಅಂಶಗಳನ್ನು ಗಮನಿಸಿದಾಗ, ತೆರಿಗೆ ಸಂಗ್ರಹದಿಂದ ಜನತೆಯ ಭಾಗವಹಿಸುವಿಕೆಯನ್ನು ಅಳೆಯುವುದಾವರೆ, ಇಲ್ಲಿಯ ಜನತೆಯು ಅಭಿವೃದ್ಧಿಯಲ್ಲಿ ಭಾಗವಹಿಸುವಿಕೆ ಬಹಳ ಕಡಿಮೆ ಇದೆ. ಅದೇ ರೀತಿ ಗ್ರಾಮಪಂಚಾಯತಿಯು ಕಾರ್ಯಕ್ಷಮತೆಯನ್ನು ತೆರಿಗೆಯಿಂದ ನಿರ್ಧರಿಸುವುದಾದರೆ, ತೆರಿಗೆ ಸಂಗ್ರಹದಲ್ಲಿ ಗ್ರಾಮಪಂಚಾಯತಿ ಕಾರ್ಯಕ್ಷಮತೆ ಸರಿಯಿಲ್ಲ ಎಂಬುವ ನಿರ್ಧಾರಕ್ಕೆ ಬರಬಹುದಾಗಿದೆ. ಗ್ರಾಮಪಂಚಾಯತಿಯು ಸರಿಯಾಗಿ ನಾಗರಿಕ ಸಮಾಜಕ್ಕೆ ಮೂಲಭೂತ ಸೌಕರ್ಯಗಳ ಪೂರೈಕೆ ಸರಿಯಾಗಿ ನಿರ್ವಹಿಸಿದಲ್ಲಿ ಮತ್ತು ಪಂಚಾಯತಿ ಸಿಬ್ಬಂದಿ ಪ್ರತಿ ತಿಂಗಳ ಅಥವಾ ಸುಗ್ಗಿಯ ವೇಳೆಯಲ್ಲಿ ತೆರಿಗೆಯನ್ನು ಸಂಗ್ರಹಿಸಿದರೆ ಇನ್ನೂ ಹೆಚ್ಚು ತೆರಿಗೆ ಸಂಗ್ರಹವಾಗುತ್ತವೆ. ಇದರಿಂದ ಗ್ರಾಮೀಣ ಜನತೆಯ ಉತ್ತಮ ಭಾಗವಹಿಸುವಿಕೆ ಹಾಗೂ ಗ್ರಾಮಪಂಚಾಯತಿಯ ಕಾರ್ಯಕ್ಷಮತೆಯು ಸುಧಾರಿಸಬಹುದಾಗಿದೆ.

## ಹಿರೇಹೆಗ್ಡಾಳ್ ಗ್ರಾಮಪಂಚಾಯತಿ

ಹಿರೇಹೆಗ್ಡಾಳ್ ಗ್ರಾಮಪಂಚಾಯತಿ ತೆರಿಗೆ ಸಂಗ್ರಹವನ್ನು ಕಳೆದ 1995 ರಿಂದ 2000 ಇಸವಿವರೆಗೂ ನೋಡಲಾಗಿದೆ. ತೆರಿಗೆ ಸಂಗ್ರಹವು ಪ್ರತಿವರ್ಷ ಏರಿಳಿತವಾದರು ಶೇ.52ಕ್ಕಿಂತ ಕಡಿಮೆ ತೆರಿಗೆ ಸಂಗ್ರಹ ಯಾವ ವರ್ಷವು ಆಗಿಲ್ಲ. ತೆರಿಗೆ ಸಂಗ್ರಹವನ್ನು ಕಳೆದ ಐದು ವರ್ಷದ ಸರಾಸರಿಯನ್ನು ಗಮನಿಸಿದಾಗ ಶೇ.68ರಷ್ಟು ತೆರಿಗೆ ಸಂಗ್ರಹವಾಗಿದೆ(ಕೋಷ್ಟಕ-40).[18] ಹೆಚ್ಚು ತೆರಿಗೆ ಸಂಗ್ರಹಕ್ಕೆ ಹಲವಾರು ಕಾರಣಗಳನ್ನು ಕೊಡಬಹುದು. 1. ಇದು ನೀರಾವರಿ ಪ್ರದೇಶವಾಗಿದ್ದು ಮೇಲ್ವರ್ಗಗಳು ಹೆಚ್ಚು ಇವೆ, 2. ಪ್ರತಿ ವರ್ಷ ಹುಣಸೆಮರದ ಹರಾಜಿನಿಂದ ಹೆಚ್ಚು ಹಣ ಸಂಗ್ರಹವಾಗಿದೆ, 3. ಆರ್ಥಿಕವಾಗಿ ಉತ್ತಮವಾಗಿದ್ದಾರೆ ಮತ್ತು ಗ್ರಾಮ ಪಂಚಾಯತಿಯ ಹೆಚ್ಚು ಯೋಜನೆಗಳು ಜಾರಿಯಾಗಿರುವುದು ಎಂದು ಹೇಳಬಹುದು. ಗ್ರಾಮಪಂಚಾಯತಿಯು ಐ.ಆರ್.ಡಿ.ಪಿ ಯೋಜನೆಯಡಿ ಫಲಾನುಭವಿಗಳನ್ನು ಗುರುತಿಸುವುದು ಮತ್ತು ವಸತಿ ಯೋಜನೆಗಳು ಹೆಚ್ಚು ಅನುಷ್ಠಾನಗೊಂಡಿರುವುದು ಅಧಿಕ ತೆರಿಗೆ ಸಂಗ್ರಹಕ್ಕೆ ಕಾರಣವಾಗಿವೆ ಎಂದು ಗ್ರಹಿಸಲಾಗಿದೆ. ಗ್ರಾಮಪಂಚಾಯತಿಯ ಬಗ್ಗೆ ಅರಿವಿನ ಪ್ರಮಾಣ ಸಹ ಹೆಚ್ಚು ಇದೆ. ಸ್ಥಳೀಯ ತೆರಿಗೆಯ ಪ್ರತಿ ವರ್ಷದ ಬೇಡಿಕೆ 36354 ರೂ.ಗಳಿದ್ದು ಮನೆತೆರಿಗೆಯ ಜೊತೆಯಲ್ಲಿ ಪಂಚಾಯತಿ ವ್ಯಾಪ್ತಿಯ ಇತರೆ ಆದಾಯಗಳು ಸಹ ಸೇರಿವೆ. ಪಂಚಾಯತಿಯಲ್ಲಿರುವ ಇತರೆ ಮೂಲಗಳೆಂದರೆ ಹುಣಸೆ ಮರದ ಟೆಂಡರ್, ಹೋಟೆಲ್‌ಗಳು, ಫ್ಲೋರ್‌ಮಿಲ್ ಮತ್ತು ವೈಯಕ್ತಿಕ ನೀರಿನ ನಳದ ತೆರಿಗೆಗಳು ಸಹ ಸೇರಿವೆ. ಇತರೆ ಆದಾಯಗಳಿಂದಲೇ ಹೆಚ್ಚು ಸಂಪನ್ಮೂಲ ಕ್ರೋಢೀಕರಣವಾಗುತ್ತಿದೆ. ಪ್ರತಿ ವರ್ಷ ಸುಮಾರು 25,000 ರೂ.ಗಳಷ್ಟು ಹಣ ಇತರೇ ಆದಾಯಗಳಿಂದ ಬರುತ್ತದೆ.

ಇಲ್ಲಿಯೂ ಸಹ ಎಲ್ಲಾ ಮನೆಗಳಿಗೆ ಒಂದೇ ತರಹ ತೆರಿಗೆಯನ್ನು ವಿಧಿಸಲಾಗುತ್ತಿದೆ. ಪ್ರತಿಮನೆಗೆ 35 ರೂ.ಗಳನ್ನು ವಾರ್ಷಿಕವಾಗಿ ತೆರಿಗೆಯನ್ನು ಸಂಗ್ರಹಿಸಲಾಗುತ್ತಿದೆ(ಕೋಷ್ಟಕ-41). ಸುಮಾರು ಐದು ವರ್ಷದಿಂದ

ತೆರಿಗೆಯನ್ನು ಹೆಚ್ಚಿಸಿಲ್ಲ. ಒಂದೆ ತರಹ ತೆರಿಗೆಯನ್ನು ಎಲ್ಲಾ ಮನೆಗಳಿಗೂ ಹಾಕಲಾಗುತ್ತದೆ. ಮನೆತೆರಿಗೆಯಿಂದ ರೂ.12,000ಗಳಷ್ಟು ಹಣ ಸಂಗ್ರಹವಾಗುತ್ತದೆ. ಅಂದರೆ ಈ ಪಂಚಾಯತಿಯಲ್ಲಿ ಇತರೆ ಆದಾಯಗಳಾದ ಸ್ಥಳೀಯ ಸಂಪನ್ಮೂಲಗಳಿಂದ ಹೆಚ್ಚು ಸಂಗ್ರಹವಾಗುತ್ತದೆ. ಇದು ನೀರಾವರಿ ಪ್ರದೇಶವಾದ್ದರಿಂದ ತೆರಿಗೆಯ ಭಾರ ಇಲ್ಲ ಮತ್ತು ತೆರಿಗೆಯ ಮೊತ್ತ ಸಹ ಬಹಳ ಕಡಿಮೆ ಇದೆ. ಮೇಲ್ವರ್ಗಗಳೇ ಹೆಚ್ಚು ಇರುವುದು ಅಧಿಕ ಸಂಗ್ರಹಕ್ಕೆ ಕಾರಣ, ಹಾಗೂ ಇವರು ಆರ್ಥಿಕವಾಗಿ ಸಬಲರಾಗಿದ್ದಾರೆ. ತೆರಿಗೆ ಸಂಗ್ರಹ ಚೆನ್ನಾಗಿರುವುದಕ್ಕೆ ಅರಿವಿನ ಅಂಶಗಳು ಕಾರಣವಾಗಿರಬಹುದೇ ಎಂಬುದನ್ನು ನೋಡಿದಾಗ ಶೇ.80ರಷ್ಟು ಪಂಚಾಯತಿ ಸದಸ್ಯರಿಗೆ, ಶೇ.50ರಷ್ಟು ಊರವರಿಗೆ ತೆರಿಗೆಯ ಬಗ್ಗೆ ಅರಿವು ಇರುವುದು ಕಂಡುಬಂದಿದೆ. ಈ ಅಂಶವು ಉತ್ತಮ ಪಂಚಾಯತಿ ಕಾರ್ಯಕ್ಷಮತೆಗೆ ಕಾರಣವಾಗಬಹುದು ಎಂದು ನಂಬಲಾಗಿದೆ. ಇಲ್ಲಿ ಪಂಚಾಯತಿ ಸದಸ್ಯರಿಗೆ ಮತ್ತು ಊರವರಿಗೆ ಗ್ರಾಮಪಂಚಾಯತಿಯ ಬಗ್ಗೆ ಅಧಿಕ ಅರಿವು ಹೆಚ್ಚಿನ ತೆರಿಗೆ ಸಂಗ್ರಹಕ್ಕೆ ಕಾರಣವು ಎಂದು ಹೇಳಬಹುದು.

ಚಾಲ್ತಿಯಲ್ಲಿರುವ ತೆರಿಗೆಯ ಮೊತ್ತದ ಬಗ್ಗೆ ಊರವರಿಂದ ಅಭಿಪ್ರಾಯವನ್ನು ಸಂಗ್ರಹಿಸಲಾಗಿದೆ. ಸಂದರ್ಶಿಸಿದ ಊರವರಲ್ಲಿ ಶೇ.46ರಷ್ಟು ಜನರು ತೆರಿಗೆ ಮೊತ್ತ ಸರಿಯಿದೆ, ಶೇ.2ರಷ್ಟು ಹೆಚ್ಚಿದೆ ಮತ್ತು ಶೇ.52ರಷ್ಟು ಜನರು ತೆರಿಗೆ ಬಗ್ಗೆ ಗೊತ್ತಿಲ್ಲವೆಂದು ಅಭಿಪ್ರಾಯಪಟ್ಟಿದ್ದಾರೆ. ತೆರಿಗೆಯ ಬಗ್ಗೆ ಅರಿವು ಇದ್ದವರು ಶೇ.90ರಷ್ಟು ಜನರು ತೆರಿಗೆ ಮೊತ್ತದ ಬಗ್ಗೆ ಸರಿಯಿದೆ ಎಂದು ಉತ್ತರಿಸಿದ್ದಾರೆ (ಕೋಷ್ಟಕ-43). ವಾರ್ಷಿಕ 35 ರೂ.ಗಳನ್ನು ತೆರಿಗೆ ಪಾವತಿಸುವುದು ನಮಗೆ ಕಷ್ಟವಾಗುವುದಿಲ್ಲ ಆದರೆ ಗ್ರಾಮಪಂಚಾಯತಿ ಊರವರಿಗಾಗಿ ಮೂಲಭೂತ ಅವಶ್ಯಕತೆಗಳ ಪೂರೈಕೆ ಮಾಡಬೇಕಾಗಿದೆ ಎಂದು ಗ್ರಾಮಸ್ಥರ ಬೇಡಿಕೆ ಆಗಿದೆ. ಗ್ರಾಮಪಂಚಾಯತಿಯು ಗ್ರಾಮದ ನಾಗರಿಕ ಕೆಲಸಗಳನ್ನು ಸರಿಯಾಗಿ ನಿರ್ವಹಿಸಿದರೆ ಸಿಬ್ಬಂದಿಯವರಿಗೆ ವಸೂಲಿ ಮಾಡುವುದಕ್ಕೆ ಸಹಾಯಕವಾಗುತ್ತದೆ. ಅಂದರೆ ವಸೂಲಾತಿಯ ಮೇಲೆ ತೆರಿಗೆ ಸಂಗ್ರಹ ನಿರ್ಧಾರವಾಗಿದೆ ಎಂದು ಹೇಳಬಹುದು. ಇಲ್ಲಿಯ ಗ್ರಾಮಸ್ಥರಿಗೆ ತೆರಿಗೆಯು ಕಡಿಮೆ ಇದ್ದು ಅಂಥಹ ಹೊರೆಯೇನು ಆಗಿಲ್ಲ. ಕ್ರಮಪ್ರಕಾರ ತೆರಿಗೆ ಆಗದಿರಲು ಕಾರಣಗಳನ್ನು ಪಂಚಾಯತಿ ಸದಸ್ಯರಿಂದ, ಅಧಿಕಾರಿಗಳಿಂದ ಮತ್ತು ಊರವರಿಂದ ಅಭಿಪ್ರಾಯವನ್ನು ಸಂಗ್ರಹಿಸಲಾಗಿದೆ. ಪಂಚಾಯತಿ ಸದಸ್ಯರು ಮತ್ತು ಅಧಿಕಾರಿಗಳು ಹೇಳುವುದೇನೆಂದರೆ ಗ್ರಾಮಪಂಚಾಯತಿ ಬಗ್ಗೆ ಗ್ರಾಮಸ್ಥರಿಗೆ ನಿರ್ಲಕ್ಷ್ಯ ಧೋರಣೆ ಇದೆ ಎನ್ನುತ್ತಾರೆ. ಆದ್ದರಿಂದ ಕ್ರಮ ಪ್ರಕಾರ ತೆರಿಗೆ ಸಂಗ್ರಹ ಆಗುವುದಿಲ್ಲ ಎಂದು ಹೇಳಿದ್ದಾರೆ. ಗ್ರಾಮಸ್ಥರ ಪ್ರಕಾರ, ಶೇ.50ರಷ್ಟು ಜನರು ಗೊತ್ತಿಲ್ಲವೆಂದು, ಶೇ.15ರಷ್ಟು ಜನರು ವಸೂಲಿಗೆ ಬರುವುದಿಲ್ಲ, ಶೇ.35ರಷ್ಟು ಜನರು ಬೇರೆ ಬೇರೆ ಕಾರಣಗಳನ್ನು ಕೊಟ್ಟಿದ್ದಾರೆ(ಕೋಷ್ಟಕ-44). ಪಂಚಾಯತಿ ಸಿಬ್ಬಂದಿ ಅವರಿಗೆ ತಿಳಿದಾಗ ವಸೂಲಿಗೆ ಬರುತ್ತಾರೆ, ನಿರ್ದಿಷ್ಟ ಸಮಯವಿಲ್ಲ, ಅವರು ಬಂದಾಗ ನಮ್ಮಲ್ಲಿ ಹಣವಿರುವುದಿಲ್ಲ ಈ ತರಹದ ಅಂಶಗಳು ಸಹ ಕ್ರಮ ಪ್ರಕಾರ ತೆರಿಗೆ ಆಗದಿರಲು ಕಾರಣವಾಗಿವೆ ಎಂದು ಉತ್ತರಿಸಿದ್ದಾರೆ. ತೆರಿಗೆ ಸಂಗ್ರಹ, ಅರಿವು, ತೆರಿಗೆಯ ಮೊತ್ತ, ಮತ್ತು ಕ್ರಮಪ್ರಕಾರ ತೆರಿಗೆ ಸಂಗ್ರಹ ಆಗದೆ ಇರುವುದು ಈ ಎಲ್ಲಾ ಅಂಶಗಳ ವಿವರಣೆಯನ್ನು ನೋಡಿದಾಗ ಹಿರೇಹೆಗ್ಡಾಳ್ ಗ್ರಾಮಪಂಚಾಯತಿಯಲ್ಲಿ ತೆರಿಗೆ ಸಂಗ್ರಹ ಪ್ರಮಾಣ

ಉತ್ತಮವಾಗಿದ್ದು, ಇದಕ್ಕೆ ಪಂಚಾಯತಿ ಸಿಬ್ಬಂದಿ, ಸದಸ್ಯರು ಮತ್ತು ಗ್ರಾಮದ ಗ್ರಾಮಸ್ಥರು ಕಾರಣವಾಗಿದ್ದಾರೆ. ಗ್ರಾಮಪಂಚಾಯತಿಯ ಬಗ್ಗೆ ಊರವರಿಗೆ ಉತ್ತಮ ಅರಿವು ಇರುವುದರಿಂದ ತೆರಿಗೆ ಪಾವತಿಗೆ ಸಹಾಯಕವಾಗಿದೆ. ಗ್ರಾಮಪಂಚಾಯತಿ ಕಾರ್ಯಕ್ಷಮತೆಯು ತೆರಿಗೆ ಸಂಗ್ರಹದಲ್ಲಿ ಉತ್ತಮವಾಗಿ ಕಾರ್ಯ ನಿರ್ವಹಿಸಿದೆ. ತೆರಿಗೆ ಪಾವತಿ ಮೂಲಕ ಅಭಿವೃದ್ಧಿಯಲ್ಲಿ ಜನತೆಯ ಭಾಗವಹಿಸುವಿಕೆ ಸಹ ಈ ಪಂಚಾಯತಿಯಲ್ಲಿ ಚೆನ್ನಾಗಿದೆ. ಇಲ್ಲಿ ಮೇಲ್ವರ್ಗಗಳು ಹೆಚ್ಚಾಗಿ ಇರುವುದು ಮತ್ತು ನೀರಾವರಿ ಪ್ರದೇಶ ವಾಗಿರುವುದು ಅಧಿಕ ತೆರಿಗೆ ಸಂಗ್ರಹಕ್ಕೆ ಕಾರಣವಾಗಿವೆ. ತೆರಿಗೆಯಿಂದ ಜನತೆಯ ಭಾಗವಹಿಸುವಿಕೆ ಚೆನ್ನಾಗಿದೆ ಎಂದು ಹೇಳಬಹುದು. ತೆರಿಗೆ ಸಂಗ್ರಹವು ಸಹ ಗ್ರಾಮಪಂಚಾಯತಿಯ ಕಾರ್ಯಕ್ಷಮತೆ ಮೌಲ್ಯಮಾಪನ ಮಾಡುವುದಾದರೇ, ತೆರಿಗೆ ಸಂಗ್ರಹದಲ್ಲಿ ಸಹ ಗ್ರಾಮಪಂಚಾಯತಿ ಕಾರ್ಯಕ್ಷಮತೆ ಉತ್ತಮವಾಗಿದೆ. ಗ್ರಾಮಪಂಚಾಯತಿಯು ಇನ್ನೂ ಹೆಚ್ಚು ಗ್ರಾಮದಲ್ಲಿ ಮೂಲಭೂತ ಅವಶ್ಯಕತೆಗಳ ಪೂರೈಕೆ ನಿರ್ವಹಣೆ ಮತ್ತು ಜನತೆಯ ಬೇಡಿಕೆಗಳನ್ನು ಈಡೇರಿಸಿದಲ್ಲಿ ಗ್ರಾಮಪಂಚಾಯತಿಯ ಸ್ಥಳೀಯ ತೆರಿಗೆ ಸಂಗ್ರಹ ಇನ್ನೂ ಹೆಚ್ಚಾಗುತ್ತದೆ.

## ಉಜ್ಜನಿ ಗ್ರಾಮಪಂಚಾಯತಿ

ಉಜ್ಜನಿ ಗ್ರಾಮಪಂಚಾಯತಿಯಲ್ಲಿ 1995 ರಿಂದ 2000ವರೆಗಿನ ಸಂಗ್ರಹವನ್ನು ನೋಡಿದಾಗ ಕನಿಷ್ಠ ಶೇ.28 ರಿಂದ ಶೇ.46ರವರೆಗೆ ತೆರಿಗೆ ಸಂಗ್ರಹವಾಗಿದೆ(ಕೋಷ್ಟಕ-40).[19] ಕಳೆದ ಐದು ವರ್ಷದಿಂದ ತೆರಿಗೆ ಸಂಗ್ರಹದ ಪ್ರಮಾಣವನ್ನು ನೋಡಿದಾಗ ಒಣಭೂಮಿ ಪ್ರದೇಶವಾದರೂ ತಕ್ಕಮಟ್ಟಿಗೆ ತೆರಿಗೆ ಸಂಗ್ರಹ ಚೆನ್ನಾಗಿದೆ ಎಂದು ಹೇಳಬಹುದು. ಇಲ್ಲಿ ತೆರಿಗೆ ಸಂಗ್ರಹ ಉತ್ತಮವಾಗಿರುವುದಕ್ಕೆ ಕೆಲವು ಕಾರಣಗಳೆಂದರೆ, 1. ಕೃಷಿಯೇತರ ಚಟುವಟಿಕೆಗಳು, 2. ಗ್ರಾಮ ಪಂಚಾಯತಿಯ ಮಳಿಗೆಗಳು, ಅಂಗಡಿ, ಹೋಟೆಲ್‌ಗಳು, ವಾರದ ಸಂತೆ, ಜಾತ್ರೆ ಇನ್ನಿತರ ಮೂಲಗಳಿಂದ ಆದಾಯ ಸಂಗ್ರಹವಾಗುತ್ತಿದೆ. 3. ಮೇಲ್ವರ್ಗಗಳು ಹೆಚ್ಚು ಇರುವುದು. ಇವೆಲ್ಲ ಅಂಶಗಳು ಹೆಚ್ಚು ತೆರಿಗೆ ಸಂಗ್ರಹಕ್ಕೆ ಕಾರಣವಾಗಿರಬಹುದು. ಪ್ರತಿವರ್ಷ ಶೇ.45ರಷ್ಟು ಹಣ ಇತರೆ ಆದಾಯಗಳಿಂದ ಬರುತ್ತದೆ. ಈ ತೆರಿಗೆಗಳು ಆಯಾ ವರ್ಷ ಪಾವತಿ ಮಾಡಲೇಬೇಕು, ಹೆಚ್ಚು ಸ್ಥಳೀಯ ಸಂಪನ್ಮೂಲ ಇದರಿಂದಲೆ ಸಂಗ್ರಹವಾಗುತ್ತದೆ. ಇಲ್ಲಿಯ ಪ್ರತಿಯೊಂದು ಜಾತಿಗಳು ತಮ್ಮ ಜಾತಿಯ ಉಪಕಸಬುಗಳನ್ನು ಅವಲಂಬಿಸಿದ್ದುರಿಂದ ಆರ್ಥಿಕವಾಗಿ ಸ್ವಲ್ಪಮಟ್ಟಿಗೆ ಉತ್ತಮ ಸ್ಥಿತಿಯಲ್ಲಿದ್ದಾರೆ. ಪ್ರತಿ ವರ್ಷದ ಬೇಡಿಕೆಯು ರೂ.1,18,410ಗಳಿದ್ದು ಅಧ್ಯಯನಕ್ಕೆ ಆಯ್ಕೆ ಮಾಡಿಕೊಂಡ ನಾಲ್ಕು ಪಂಚಾಯತಿಗಳಲ್ಲಿ ಇದು ದೊಡ್ಡ ಗ್ರಾಮಪಂಚಾಯತಿಯಾಗಿದೆ. ಇದರಲ್ಲಿ ಶೇ.38ರಷ್ಟು ಮನೆತೆರಿಗೆ, ಮತ್ತು ಶೇ.45ರಷ್ಟು ಇತರೆ ಆದಾಯಗಳು ಸೇರಿವೆ. ಎಲ್ಲಾ ಮನೆಗಳಿಗೆ ಒಂದೇ ನಮೂನೆಯ ತೆರಿಗೆಯನ್ನು ವಿಧಿಸಲಾಗುತ್ತಿದೆ. ಪ್ರತಿ ಮನೆಗೆ 40 ರೂ.ಗಳನ್ನು ವಿಧಿಸಲಾಗುತ್ತದೆ(ಕೋಷ್ಟಕ-45). ಈ ತೆರಿಗೆಯಲ್ಲಿ ಭೂಮಿಯ ಕರ ಸೇರಿಲ್ಲ. ನೀರು, ದೀಪ, ಆರೋಗ್ಯ, ಶಿಕ್ಷಣ ಮತ್ತು ಗ್ರಂಥಾಲಯ ಕರಗಳು ಸೇರಿವೆ. ಪ್ರತಿ ಕುಟುಂಬಕ್ಕೆ ಮನೆ ತೆರಿಗೆ ರೂ.20ಗಳಿದ್ದು, ಒಟ್ಟು ಪ್ರತಿ ಮನೆಗೆ ರೂ.40ಗಳನ್ನು ವಸೂಲಿ ಮಾಡಲಾಗುತ್ತಿದೆ. ಉಜ್ಜನಿ ದೊಡ್ಡ ಗ್ರಾಮ ಪಂಚಾಯತಿಯಾಗಿದ್ದು ಸ್ಥಳೀಯವಾಗಿ ಸಂಪನ್ಮೂಲ ಕ್ರೋಢೀಕರಣ ಉತ್ತಮವಾಗಿದೆ.

ಪ್ರತಿವಾರ ಸಂತೆ ನಡೆಯುತ್ತಿದ್ದು, ಪ್ರತಿವರ್ಷ ಸಂತೆ ತೆರಿಗೆಗಾಗಿ ಟೆಂಡರ್ ಕರೆಯಲಾಗುತ್ತದೆ. ಈ ಹಣವು ಸಹ ಇತರೆ ಆದಾಯದಲ್ಲಿ ಸೇರಿದ ಪ್ರಮುಖ ಸಂಪನ್ಮೂಲವಾಗಿದೆ.

ತೆರಿಗೆಯ ಬಗ್ಗೆ ಊರವರ ಅರಿವನ್ನು ನೋಡಿದಾಗ ಶೇ.25ರಷ್ಟು ತೆರಿಗೆ ಪಾವತಿ ಕುರಿತು ಅರಿವು ಹೊಂದಿದ್ದು ಶೇ.75ರಷ್ಟು ಜನರು ಗೊತ್ತಿಲ್ಲವೆಂದು ಹೇಳಿದ್ದಾರೆ. ಇನ್ನೂ ಪಂಚಾಯತಿ ಸದಸ್ಯರ ಅರಿವನ್ನು ನೋಡಿದಾಗ, ಶೇ.70ರಷ್ಟು ಸದಸ್ಯರು ತೆರಿಗೆ ಪಾವತಿಸುವುದರ ಬಗ್ಗೆ ಅರಿವು ಹೊಂದಿದ್ದಾರೆ (ಕೋಷ್ಟಕ-43). ಎಲ್ಲಾ ಪಂಚಾಯತಿಗಳಂತೆ ಇಲ್ಲಿಯೂ ಸಹ ಊರವರಿಗಿಂತ ಪಂಚಾಯತಿ ಸದಸ್ಯರು ಅಧಿಕ ತಿಳುವಳಿಕೆಯನ್ನು ತೆರಿಗೆಯ ಬಗ್ಗೆ ಹೊಂದಿದ್ದಾರೆ. ಊರವರು ತೆರಿಗೆಯ ಬಗ್ಗೆ ಬಹಳ ಕಡಿಮೆ ತಿಳಿವಳಿಕೆ ಹೊಂದಿದ್ದಾರೆ. ಇದರಲ್ಲಿ ಪರಿಶಿಷ್ಟರೆ ಕಡಿಮೆ ಅರಿವು ಹೊಂದಿದ್ದಾರೆ. ಮೇಲ್ವರ್ಗಗಳು ಹೆಚ್ಚು ಅರಿವನ್ನು ಹೊಂದಿದ್ದಾರೆ. ಅರಿವು ಪಾವತಿಗೆ ಸಂಬಂಧಿಸಿದೆ ಎಂಬುದನ್ನು ಇಲ್ಲಿ ತೆಗೆದು ಹಾಕುವ ಆಗಿಲ್ಲ. ಹೆಚ್ಚು ಅರಿವು ಹೊಂದಿದ್ದರೆ ಪಾವತಿಯು ಸಹ ಹೆಚ್ಚಿಗೆ ಆಗುತ್ತದೆ ಎಂದು ಹೇಳಬಹುದು. ಈ ಪಂಚಾಯತಿಯಲ್ಲಿ ಹಿಂದುಳಿದ ವರ್ಗಗಳು ಮತ್ತು ಮೇಲ್ವರ್ಗಗಳು ಹೆಚ್ಚು ಇವೆ. ಈ ವರ್ಗಗಳು ಆರ್ಥಿಕವಾಗಿ ಉತ್ತಮವಾಗಿರುವುದರಿಂದ ತೆರಿಗೆ ಸಂಗ್ರಹದಲ್ಲಿ ಸ್ವಲ್ಪ ಸುಧಾರಣೆ ಕಂಡುಬಂದಿದೆ.

ಗ್ರಾಮಪಂಚಾಯತಿಯು ಕಳೆದ ಮೂರು ವರ್ಷದಿಂದ ತೆರಿಗೆಯನ್ನು ಹೆಚ್ಚಿಸಿಲ್ಲ. ಚಾಲ್ತಿಯಲ್ಲಿರುವ ತೆರಿಗೆ ಮೊತ್ತದ ಬಗ್ಗೆ ಊರವರಿಂದ ಅಭಿಪ್ರಾಯವನ್ನು ಸಂಗ್ರಹಿಸಲಾಗಿದೆ. ಶೇ.9ರಷ್ಟು ಜನರು ಸರಿಯಿದೆ, ಶೇ.15ರಷ್ಟು ಜನರು ಹೆಚ್ಚಿದೆ ಎಂದು, ಮತ್ತು ಶೇ.75ರಷ್ಟು ಜನರು ಗೊತ್ತಿಲ್ಲವೆಂದು ಉತ್ತರಿಸಿದ್ದಾರೆ. ಜಾತಿವಾರು ಅಭಿಪ್ರಾಯವನ್ನು ನೋಡಿದಾಗ ಪರಿಶಿಷ್ಟರು ತೆರಿಗೆ ಹೆಚ್ಚಿಗೆ ಇದೆ ಎಂದು ಅಭಿಪ್ರಾಯಪಟ್ಟಿದ್ದಾರೆ(ಕೋಷ್ಟಕ-44). ಪಂಚಾಯತಿಯು ಎಲ್ಲ ಮನೆಗೂ ಒಂದೆ ತೆರಿಗೆಯನ್ನು ವಿಧಿಸಿದೆ. ಕೆಲವು ವಿದ್ಯಾವಂತ ಪರಿಶಿಷ್ಟ ಜನರು ಇದು ಯಾವ ನ್ಯಾಯ, ಗುಡಿಸಲಿಗೂ ದೊಡ್ಡ ಮನೆಗೂ ಒಂದೇ ದರ, ಇವರು ಮನೆಯ ನಮೂನೆಯ ಮೇಲೆ ತೆರಿಗೆ ಹಾಕಬೇಕು. ಪಂಚಾಯತಿ ಏನು ಕೆಲಸ ಮಾಡುತ್ತಿದೆ, ಕುಡಿಯುವುದಕ್ಕೆ ನೀರು ಸರಿಯಿಲ್ಲ, ಚರಂಡಿ ಇಲ್ಲ ಹೀಗಾದರೆ ನಾವು ಏಕೆ ತೆರಿಗೆ ಕಟ್ಟಬೇಕೆಂದು ಅಭಿಪ್ರಾಯ ಪಟ್ಟಿದ್ದಾರೆ. ಇವರು ಗ್ರಾಮಪಂಚಾಯತಿ ಕಾರ್ಯಗಳ ಬಗ್ಗೆ ಹೆಚ್ಚು ಅತೃಪ್ತಿಯನ್ನು ವ್ಯಕ್ತಪಡಿಸಿದ್ದಾರೆ.

ಕ್ರಮಪ್ರಕಾರ ತೆರಿಗೆ ಸಂಗ್ರಹ ಆಗದಿರಲು ಕಾರಣಗಳನ್ನು ಪಂಚಾಯತಿ ಸದಸ್ಯರು, ಅಧಿಕಾರಿಗಳು ಊರವರಿಂದ ಸಂಗ್ರಹಿಸಲಾಗಿದೆ. ಎಲ್ಲಾ ಪಂಚಾಯತಿ ಸದಸ್ಯರು, ಅಧಿಕಾರಿಗಳು ಹೇಳಿದಂತೆ ಇಲ್ಲಿಯೂ ಸಹ ಗ್ರಾಮಸ್ಥರಿಗೂ ಪಂಚಾಯತಿ ಬಗ್ಗೆ ನಿರ್ಲಕ್ಷ್ಯ ಭಾವನೆ ಇದೆ ಎಂದು ಹೇಳಿದ್ದಾರೆ. ಕೆಲವು ರೈತರು, ಕೃಷಿ ಕೂಲಿಕಾರರು ಆರ್ಥಿಕವಾಗಿ ದುರ್ಬಲರು. ಆ ಕಾರಣಕ್ಕಾಗಿ ತೆರಿಗೆಯನ್ನು ಸರಿಯಾಗಿ ಪಾವತಿಸುವುದಿಲ್ಲದಿರುವುದು ಕಂಡುಬರುತ್ತದೆ. ಊರವರು ಪ್ರಕಾರ, ಸರಿಯಾಗಿ ವಸೂಲಿಗೆ ಬರುವುದಿಲ್ಲ ಎಂದು, ಹೆಚ್ಚು ಜನರು ಗ್ರಾಮಪಂಚಾಯತಿ ಕಾರ್ಯನಿರ್ವಹಣೆಯ ಬಗ್ಗೆ ಅತೃಪ್ತಿಯನ್ನು ಸೂಚಿಸಿ, ಗ್ರಾಮಪಂಚಾಯತಿಯು ನಮಗೇನು ಮಾಡಿಲ್ಲ ನಾವೇಕೆ ತೆರಿಗೆ ಕಟ್ಟಬೇಕು ಮೂಲಭೂತ ಅವಶ್ಯಕತೆಗಳ ಪೂರೈಕೆ ಸರಿಯಿಲ್ಲ ಹೇಗೆ ಕೆಲವು ಕಾರಣಗಳನ್ನು ತಿಳಿಸಿದ್ದಾರೆ. ಗ್ರಾಮಪಂಚಾಯತಿಗೆ ವಹಿಸಿರುವ ತನ್ನ

ಕಾರ್ಯಗಳನ್ನು ಚೆನ್ನಾಗಿ ನಿರ್ವಹಿಸಿದರೆ ತೆರಿಗೆ ವಸೂಲಾತಿಗೆ ಹೆಚ್ಚು ನೆರವಾಗುತ್ತದೆ. ಪಂಚಾಯತಿಯು ಸರಿಯಾಗಿ ಕೆಲಸ ನಿರ್ವಹಿಸಿಲ್ಲ ಎಂದರೆ ಪಂಚಾಯತಿ ಸಿಬ್ಬಂದಿಯು ಊರವರಿಂದ ತೆರಿಗೆ ವಸೂಲಿಯು ಕಷ್ಟವಾಗುತ್ತದೆ. ಒಟ್ಟಾರೆ ಈ ಎಲ್ಲಾ ಪ್ರಾಥಮಿಕ ಮತ್ತು ಆನುಷಂಗಿಕ ಮಾಹಿತಿಯನ್ನು ಗಮನಿಸಿದಾಗ ಊರವರ ಭಾಗವಹಿಸುವಿಕೆಯನ್ನು ತೆರಿಗೆಯ ಮೂಲಕ ಗುರುತಿಸುವುದಾದರೇ ಶೇ.35-50ರಷ್ಟು ಕುಟುಂಬಗಳು ಅಭಿವೃದ್ಧಿಯಲ್ಲಿ ಭಾಗವಹಿಸಿವೆ ಎಂದು ಹೇಳಬಹುದು. ತೆರಿಗೆಯಿಂದ ಗ್ರಾಮಪಂಚಾಯತಿಯ ಕಾರ್ಯಕ್ಷಮತೆಯನ್ನು ಅಳೆಯುವುದಾದರೇ ತಕ್ಕಮಟ್ಟಿನ ಪ್ರಗತಿ ಇದೆ ಎಂದು ಗ್ರಹಿಸಬಹುದು. ಒಣಭೂಮಿ ಪ್ರದೇಶವಾದರೂ ಬೇರೆ ಒಣಭೂಮಿ ಪ್ರದೇಶಗಳಿಗೆ ಹೋಲಿಸಿದರೆ ತೆರಿಗೆ ಸಂಗ್ರಹದಲ್ಲಿ ಉತ್ತಮ ಸ್ಥಿತಿಯಲ್ಲಿದೆ. ಆದರೆ ಗ್ರಾಮಪಂಚಾಯತಿ ನಿರ್ವಹಿಸಬೇಕಾದ ಕಾರ್ಯಗಳ ಬಗ್ಗೆ ಗಮನಹರಿಸಬೇಕಾಗಿದೆ. ಹೆಚ್ಚು ಊರವರು ಗ್ರಾಮ ಪಂಚಾಯತಿಯ ಕಾರ್ಯಕ್ಷಮತೆಯ ಬಗ್ಗೆ ಅತೃಪ್ತಿಯನ್ನು ಸೂಚಿಸಿದ್ದಾರೆ. ಗ್ರಾಮಪಂಚಾಯತಿ ಇನ್ನೂ ಹೆಚ್ಚು ತೆರಿಗೆ ಸಂಗ್ರಹದಲ್ಲಿ ತೊಡಗಬೇಕಾಗಿದೆ. ಅದೇ ರೀತಿ ಪಂಚಾಯತಿಯು ತನಗೆ ವಹಿಸಿರುವ ಜವಬ್ದಾರಿಗಳನ್ನು ಸರಿಯಾಗಿ ನಿರ್ವಹಿಸಬೇಕಾಗಿದೆ. ಹೀಗೆ ಪಂಚಾಯತಿಯಲ್ಲಿ ತೆರಿಗೆ ಸಂಗ್ರಹವಾಗಿದೆ.

## ಗ್ರಾಮಪಂಚಾಯತಿಗಳ ತೌಲನಿಕ ವಿವರಣೆ

ತೆರಿಗೆ ಸಂಗ್ರಹದ ಮೂಲಕ ಗ್ರಾಮಪಂಚಾಯತಿಗಳ ಕಾರ್ಯಕ್ಷಮತೆ ಮತ್ತು ಜನತೆಯ ಭಾಗವಹಿಸುವಿಕೆಯನ್ನು ಅಧ್ಯಯನ ಕೈಗೊಂಡ ನಾಲ್ಕು ಗ್ರಾಮಪಂಚಾಯತಿಗಳಲ್ಲಿ ನೋಡಿದ್ದೇವೆ. ನಾಲ್ಕು ಪಂಚಾಯತಿಗಳಲ್ಲೂ ತೆರಿಗೆ ಸಂಗ್ರಹವನ್ನು ತೌಲನಿಕವಾಗಿ ನೋಡಿದಾಗ ನೀರಾವರಿ ಪಂಚಾಯತಿಗಳಾದ ನಾಗೇನಹಳ್ಳಿ ಮತ್ತು ಹಿರೇಹೆಗ್ಡಾಳ್‌ನಲ್ಲಿ ತೆರಿಗೆ ಸಂಗ್ರಹವು ಒಣ ಪಂಚಾಯತಿಗಳಾದ ಬೈಲುವದ್ದಿಗೆರೆ ಮತ್ತು ಉಜ್ಜನಿ ಗಿಂತ ಹೆಚ್ಚು ಉತ್ತಮವಾಗಿದೆ. ನೀರಾವರಿ ಪಂಚಾಯತಿಗಳಲ್ಲಿ ತೆರಿಗೆ ಸಂಗ್ರಹ ಚೆನ್ನಾಗಿರುವುದಕ್ಕೆ ಕಾರಣಗಳು ಹೀಗಿವೆ. ಆರ್ಥಿಕವಾಗಿ ಇಲ್ಲಿಯ ಜನತೆ ಉತ್ತಮವಾಗಿದ್ದಾರೆ. ಈ ಪಂಚಾಯತಿಗಳು ಪಟ್ಟಣಕ್ಕೆ ಹತ್ತಿರ ಇವೆ. ಗ್ರಾಮಪಂಚಾಯತಿಯ ಬಗ್ಗೆ ಅರಿವು ಮತ್ತು ಭಾಗವಹಿಸುವಿಕೆ ಒಣಭೂಮಿ ಪಂಚಾಯತಿಗಳಿಗಿಂತ ಉತ್ತಮವಾಗಿದೆ. ಉದ್ಯೋಗದ ಸಮಸ್ಯೆ ಇಲ್ಲ ಎಂದು ಹೇಳಬಹುದು. ಈ ಎಲ್ಲ ಅಂಶಗಳು ಅಧಿಕ ತೆರಿಗೆ ಸಂಗ್ರಹಕ್ಕೆ ಕಾರಣವಾಗಿವೆ ಎಂದು ಗ್ರಹಿಸಲಾಗಿದೆ. ಅದೇ ರೀತಿ ಒಣಭೂಮಿ ಪಂಚಾಯತಿಗಳು ಪಟ್ಟಣದಿಂದ ದೂರ ಇವೆ. ಕೃಷಿ ಅವಲಂಬನೆ ಹೆಚ್ಚು ಇದೆ. ಆರ್ಥಿಕವಾಗಿ ದುರ್ಬಲರಾಗಿದ್ದಾರೆ. ನಿರುದ್ಯೋಗದ ಸಮಸ್ಯೆ ಇದೆ. ನೀರಾವರಿ ಪಂಚಾಯತಿಯಲ್ಲಿರುವ ಎಲ್ಲಾ ಅಂಶಗಳು ಒಣಭೂಮಿ ಪಂಚಾಯತಿಗಳಲ್ಲಿ ವಿರುದ್ದವಾಗಿವೆ.

ನೀರಾವರಿ ಪ್ರದೇಶದಲ್ಲಿರುವ ಪಂಚಾಯತಿಗಳಾದ ನಾಗೇನಹಳ್ಳಿ ಮತ್ತು ಹಿರೇಹೆಗ್ಡಾಳನಲ್ಲಿ ತೆರಿಗೆ ಸಂಗ್ರಹವನ್ನು ತೌಲನಿಕವಾಗಿ ನೋಡಿದಾಗ ನಾಗೇನಹಳ್ಳಿಗಿಂತ ಹಿರೇಹೆಗ್ಡಾಳ್‌ನಲ್ಲಿ ತೆರಿಗೆ ಸಂಗ್ರಹ ಉತ್ತಮವಾಗಿದೆ. ಎರಡು ಪಂಚಾಯತಿಗಳು ನೀರಾವರಿ ಪ್ರದೇಶವಾಗಿದ್ದರು ಹಿಂದುಳಿದ ತಾಲ್ಲೂಕಿನ ಪಂಚಾಯತಿಯಾದ ಹಿರೇಹೆಗ್ಡಾಳ್‌ನಲ್ಲಿ ಅಭಿವೃದ್ಧಿ ಹೊಂದಿದ ತಾಲ್ಲೂಕಿನ ನಾಗೇನಹಳ್ಳಿ ಪಂಚಾಯತಿಗಿಂತ

ಉತ್ತಮವಾಗಿದೆ. ಇದಕ್ಕೆ ಕೆಲವು ಕಾರಣಗಳನ್ನು ಕೊಡಬಹುದು. ಹಿರೇಹೆಗ್ಡಾಳನಲ್ಲಿ ನಾಗೇನಹಳ್ಳಿಗಿಂತ ಹೆಚ್ಚು ಮೇಲ್ವರ್ಗಗಳನ್ನು, ನಾಗೇನಹಳ್ಳಿ ಪಂಚಾಯತಿಯ ಹೆಚ್ಚು ಪರಿಶಿಷ್ಟರನ್ನು ಹೊಂದಿದೆ. ಹಿರೇಹೆಗ್ಡಾಳ್‌ನ್ನು ತೆರಿಗೇತರ ಮೂಲವಾದ ಹುಣಸೆ ಮರದ ಟೆಂಡರ್‌ನಿಂದ ಹೆಚ್ಚು ಆದಾಯ ಸಂಗ್ರಹವಾಗುತ್ತದೆ. ನಾಗೇನಹಳ್ಳಿಯಲ್ಲಿ ಶೇ.35ರಷ್ಟು ಇತರೆ ಕರಗಳಿಂದ ಸಂಗ್ರಹವಾದರೆ, ಹಿರೇಹೆಗ್ಡಾಳ್‌ನಲ್ಲಿ ಶೇ.67ರಷ್ಟು ಇತರೇ ಕರಗಳಿಂದ ಸಂಗ್ರಹವಾಗುತ್ತದೆ(ಕೋಷ್ಟಕ-40). ಹಾಗಾಗಿ ನೀರಾವರಿ ಪಂಚಾಯತಿಯಲ್ಲಿ ತೆರಿಗೆ ಸಂಗ್ರಹದಲ್ಲಿ ಅಂತರ ಕಂಡುಬಂದಿದೆ.

ಒಣಭೂಮಿ ಪಂಚಾಯತಿಗಳಾದ ಬೈಲುವದ್ದಿಗೆರೆ ಮತ್ತು ಉಜ್ಜನಿ ಗ್ರಾಮ ಪಂಚಾಯತಿಗಳಲ್ಲಿ ತೆರಿಗೆ ಸಂಗ್ರಹವನ್ನು ತೌಲನಿಕವಾಗಿ ನೋಡಿದಾಗ ಬೈಲುವದ್ದಿಗೆರೆಗಿಂತ ಉಜ್ಜನಿ ಗ್ರಾಮಪಂಚಾಯತಿಯಲ್ಲಿ ತೆರಿಗೆ ಸಂಗ್ರಹ ಚೆನ್ನಾಗಿದೆ. ಉಜ್ಜನಿ ಪಂಚಾಯತಿಯಲ್ಲಿ ಇತರೇ ಕರಗಳಿಂದ ಶೇ.45ರಷ್ಟು ಸಂಗ್ರಹವಾದರೇ, ಬೈಲುವದ್ದಿಗೆರೆ ಪಂಚಾಯತಿಯಲ್ಲಿ ಶೇ.12ರಷ್ಟು ಇತರೇ ಕರಗಳಿಂದ ಸಂಗ್ರಹವಾಗುತ್ತದೆ. ಉಜ್ಜನಿಯು ಒಣಭೂಮಿ ಪ್ರದೇಶವಾದರೂ ಕೃಷಿಯೇತರ ಚಟುವಟಿಕೆಗಳು ಹೆಚ್ಚು ಇದ್ದು, ಇಲ್ಲಿ ಆರ್ಥಿಕವಾಗಿ ಬೈಲುವದ್ದಿಗೆರೆ ಗ್ರಾಮಪಂಚಾಯತಿಗಿಂತ ಉತ್ತಮ ಸ್ಥಿತಿಯಲ್ಲಿದ್ದರೆ, ಬಡತನ ರೇಖೆ ಕೆಳಗಿನ ಕುಟುಂಬಗಳು ಬೈಲುವದ್ದಿಗೆರೆಯಲ್ಲಿ ಶೇ.44ರಷ್ಟಿದ್ದರೇ, ಉಜ್ಜನಿಯಲ್ಲಿ ಶೇ.32ರಷ್ಟು ಕುಟುಂಬಗಳು ಬಡತನ ರೇಖೆಗಿಂತ ಕೆಳಗೆ ಇದ್ದಾರೆ. ಹಾಗಾಗಿ ಉಜ್ಜನಿ ಪಂಚಾಯತಿಯಲ್ಲಿ ಹೆಚ್ಚು ತೆರಿಗೆ ಸಂಗ್ರಹವಿದೆ. ಒಟ್ಟಾರೇ ಅಧ್ಯಯನ ಕೈಗೊಂಡ ಗ್ರಾಮಪಂಚಾಯತಿಗಳ ತೆರಿಗೆ ಸಂಗ್ರಹದಲ್ಲಿ ಹಿರೇಹೆಗ್ಡಾಳ್ ಮೊದಲನೇ ಸ್ಥಾನದಲ್ಲಿದ್ದರೇ ಬೈಲುವದ್ದಿಗೆರೆ ಕೊನೆಯ ಸ್ಥಾನದಲ್ಲಿದೆ. ನಾಗೇನಹಳ್ಳಿ ಮತ್ತು ಉಜ್ಜನಿ ಪಂಚಾಯತಿಗಳು ಎರಡನೇ ಮತ್ತು ಮೂರನೇ ಸ್ಥಾನದಲ್ಲಿವೆ ಎಂದು ಹೇಳಬಹುದು.

ಒಣಭೂಮಿ ಪಂಚಾಯತಿಗಳಲ್ಲಿ ಎಲ್ಲಾ ಕುಟುಂಬಗಳಿಗೆ ಒಂದೇ ತೆರನಾದ ತೆರಿಗೆ ಸಂಗ್ರಹಿಸಿದರೆ, ನೀರಾವರಿ ಪಂಚಾಯತಿಗಳಲ್ಲಿ ಮನೆಯ ಮಾದರಿಯ ಮೇಲೆ ತೆರಿಗೆ ಸಂಗ್ರಹಿಸಲಾಗಿದೆ. ಪ್ರತಿವರ್ಷದ ಬೇಡಿಕೆಯಲ್ಲಿ ಉಜ್ಜನಿಯು ಮೊದಲ ಸ್ಥಾನದಲ್ಲಿದೆ, ಕೊನೆಯ ಸ್ಥಾನದಲ್ಲಿ ಹಿರೇಹೆಗ್ಡಾಳ್ ಪಂಚಾಯತಿ ಇದೆ. ಆದರೂ ತೆರಿಗೆ ಸಂಗ್ರಹದಲ್ಲಿ ಹಿರೇಹೆಗ್ಡಾಳ್ ಮೊದಲ ಸ್ಥಾನದಲ್ಲಿದೆ.

ಅಭಿವೃದ್ಧಿ ಹೊಂದಿದ ತಾಲೂಕು ನಾಗೇನಹಳ್ಳಿ ಮತ್ತು ಬೈಲುವದ್ದಿಗೆರೆ ಗ್ರಾಮಪಂಚಾಯತಿ ಗಳಿಗಿಂತ ಹಿಂದುಳಿದ ತಾಲ್ಲೂಕಿನ ಹಿರೇಹೆಗ್ಡಾಳ್ ಮತ್ತು ಉಜ್ಜನಿ ಯಲ್ಲಿ ಗ್ರಾಮಪಂಚಾಯತಿ ಗಳಲ್ಲಿ ತೆರಿಗೇತರ ಮೂಲಗಳಿಂದ ಹೆಚ್ಚು ಆದಾಯ ಸಂಗ್ರಹವಾಗುತ್ತಿದೆ. ಆದಕಾರಣ ಸ್ಥಳೀಯ ಸಂಪನ್ಮೂಲ ಕ್ರೋಢೀಕರಣದಲ್ಲಿ ಹಿಂದುಳಿದ ತಾಲ್ಲೂಕಿನ ಗ್ರಾಮಪಂಚಾಯತಿಗಳಲ್ಲಿ ಅಧಿಕ ಸಂಗ್ರಹವಾಗಿದೆ ಎಂದು ಹೇಳಬಹುದು. ಹಾಗೆಯೆ ಆಯಾ ಪ್ರದೇಶದ ಆರ್ಥಿಕ, ಸಾಮಾಜಿಕ ಸ್ಥಿತಿಗತಿಗಳು ಮತ್ತು ಪಂಚಾಯತಿಯ ಅರಿವು ಭಾಗವಹಿಸುವಿಕೆಯ ಮೇಲೆ ತೆರಿಗೆ ಸಂಗ್ರಹದಲ್ಲಿ ಪ್ರಮುಖ ಪಾತ್ರವಹಿಸಿವೆ ಎಂಬುದು ಅಧ್ಯಯನದಿಂದ ತಿಳಿದುಬಂದಿದೆ.

ತೆರಿಗೆ ಸಂಗ್ರಹದ ಮೂಲಕ ಗ್ರಾಮಪಂಚಾಯತಿಗಳ ಕಾರ್ಯಕ್ಷಮತೆಯನ್ನು ಗುರುತಿಸುವುದಾದರೆ ನೀರಾವರಿ ಪಂಚಾಯತಿಗಳಲ್ಲಿ ತೆರಿಗೆ ಸಂಗ್ರಹ ಚೆನ್ನಾಗಿರುವುದರಿಂದ ಅಭಿವೃದ್ಧಿಯಲ್ಲಿ ಭಾಗವಹಿಸುವಿಕೆಯು

ಸಹ ಉತ್ತಮವಾಗಿದೆ ಎಂದು ಹೇಳಬಹುದು. ಅಧ್ಯಯನ ಕೈಗೊಂಡ ನಾಲ್ಕು ಗ್ರಾಮಪಂಚಾಯತಿಗಳಲ್ಲಿ ಬೈಲುವದ್ದಿಗೆರೆ ಹೊರತುಪಡಿಸಿ ಉಳಿದ ಮೂರು ಪಂಚಾಯತಿಗಳಲ್ಲಿ ತೆರಿಗೆ ಸಂಗ್ರಹ ಪ್ರಗತಿದಾಯಕವಾಗಿದೆ. ತೆರಿಗೆ ಸಂಗ್ರಹದಲ್ಲಿ ಗ್ರಾಮಪಂಚಾಯತಿಯ ಸಿಬ್ಬಂದಿ, ಅಧಿಕಾರಿಗಳ ಮತ್ತು ಸದಸ್ಯರ ಪಾತ್ರ ಇರುವುದರಿಂದ ಅಧಿಕ ತೆರಿಗೆ ಸಂಗ್ರಹವಾದ ಗ್ರಾಮಪಂಚಾಯತಿಗಳ ಕಾರ್ಯಕ್ಷಮತೆ ಉತ್ತಮವಾಗಿದೆ ಎಂಬ ನಿರ್ಧಾರಕ್ಕೆ ಬರಬಹುದು.

## 5.4 ಪಂಚಾಯತ್ ವ್ಯವಸ್ಥೆ: ವಿವಿಧ ಸ್ತರಗಳು ಮತ್ತು ಪಕ್ಷರಾಜಕೀಯ

ಅಧಿಕಾರವನ್ನು ಸಂವಿಧಾನದ ತಿದ್ದುಪಡಿಗನುಗುಣವಾಗಿ ವಿಕೇಂದ್ರೀಕರಣಗೊಳಿಸಲು ಪಂಚಾಯತ್‌ರಾಜ್ ಅಧಿನಿಯಮ 1993ನ್ನು ಕರ್ನಾಟಕ ಸರ್ಕಾರ ಮೂರು ಹಂತದ ಪಂಚಾಯತ್‌ರಾಜ್ ಆಡಳಿತದ ವ್ಯವಸ್ಥೆಯನ್ನು ಜಾರಿಗೊಳಿಸಲಾಗಿದೆ. ಗ್ರಾಮೀಣ ಜನರ ಅಭಿವೃದ್ಧಿಗಾಗಿ ಬಡತನ ನಿವಾರಣಾ ಕಾರ್ಯಕ್ರಮಗಳು, ಮೂಲಭೂತ ಸೌಕರ್ಯಗಳ ಅಭಿವೃದ್ಧಿಗೆ ಸಂಬಂಧಿಸಿದ ಕಾರ್ಯಗಳು, ಪ್ರದೇಶಾಭಿವೃದ್ಧಿ ಕಾರ್ಯಕ್ರಮಗಳು ಮತ್ತು ಸ್ವಯಂ ಉದ್ಯೋಗ ಕಾರ್ಯಕ್ರಮಗಳನ್ನು ಪಂಚಾಯತ್‌ರಾಜ್ ಸಂಸ್ಥೆಗಳ ಮೂಲಕ ಜಾರಿಗೊಳಿಸಲಾಗುತ್ತಿದೆ. ತಳಮಟ್ಟದ ಅಭಿವೃದ್ಧಿಯಲ್ಲಿ ಈ ಎಲ್ಲಾ ಕಾರ್ಯಕ್ರಮಗಳ ಅನುಷ್ಠಾನದಲ್ಲಿ ಪಂಚಾಯತ್ ವ್ಯವಸ್ಥೆಯ ಮೂರು ಸ್ಥರಗಳಾದ ಜಿಲ್ಲಾ ಪಂಚಾಯತಿ, ತಾಲೂಕ್ ಪಂಚಾಯತಿ ಮತ್ತು ಗ್ರಾಮಪಂಚಾಯತಿಗಳ ಪಾತ್ರ ಬಹಳ ಮುಖ್ಯ. ಅದರಲ್ಲೂ ಗ್ರಾಮೀಣ ಅಭಿವೃದ್ಧಿಯಲ್ಲಿ ಮೇಲ್‌ಸ್ತರಗಳಾದ ಜಿಲ್ಲಾ ಮತ್ತು ತಾಲೂಕ್ ಪಂಚಾಯತ್‌ಗಳ ಪಾತ್ರ ಬಹಳ ಮುಖ್ಯವಾಗಿದೆ. ಪಂಚಾಯತ್ ವ್ಯವಸ್ಥೆಯಲ್ಲಿ ಜಿಲ್ಲಾ ಪಂಚಾಯತಿಯು ಅಭಿವೃದ್ಧಿ ಮುಖ್ಯ ಘಟಕವಾಗಿದೆ. ಏಕೆಂದರೆ ಕೇಂದ್ರ ಮತ್ತು ರಾಜ್ಯಸರ್ಕಾರದ ಅನುದಾನಗಳು ನೇರವಾಗಿ ಈ ಸಂಸ್ಥೆಗಳಿಗೆ ಒದಗಿಸಲಾಗುತ್ತಿದ್ದು, ಈ ಅನುದಾನಗಳನ್ನು ಸರ್ಕಾರಗಳು ನಿರ್ದಿಷ್ಟ ಪಡಿಸಿದ ಹಾಗೇ ಕೆಳಗಿನ ಸ್ತರಗಳಿಗೆ ವಿತರಿಸುತ್ತದೆ. ಒಟ್ಟಾರೆ ಈ ಮೂರು ಸ್ತರಗಳು ಗ್ರಾಮಗಳ ಸರ್ವಾಂಗೀಣ ಅಭಿವೃದ್ಧಿಗೆ ಚುನಾಯಿತ ಸಂಸ್ಥೆಗಳನ್ನು ಹೊಂದಿವೆ. ಅಂದರೆ ವಿಕೇಂದ್ರೀಕರಣದ ಮುಖ್ಯ ಉದ್ದೇಶ ಸಮಗ್ರ ಗ್ರಾಮೀಣಾಭಿವೃದ್ಧಿ. ಈ ಗ್ರಾಮೀಣಾಭಿವೃದ್ಧಿಯ ಬಹುತೇಕ ಕಾರ್ಯಕ್ರಮಗಳು ಕೇಂದ್ರ ಮತ್ತು ರಾಜ್ಯ ಸರ್ಕಾರಗಳು ನಿರ್ದೇಶಿಸಿದಂತೆ ಕೈಗೊಳ್ಳಬೇಕಾಗಿದೆ. ಕಾರ್ಯಗತಗೊಳಿಸುವ ಎಲ್ಲ ಜವಾಬ್ದಾರಿಗಳನ್ನು ಪಂಚಾಯತಿ ಸಂಸ್ಥೆಗಳು ಹೊಂದಿವೆ.

ಗ್ರಾಮೀಣಾಭಿವೃದ್ಧಿಯ ಬಹುತೇಕ ಯೋಜನೆಗಳನ್ನು ಜಿಲ್ಲಾಪಂಚಾಯತ್ ಹಾಗೂ ತಾಲ್ಲೂಕ್ ಪಂಚಾಯತ್‌ಗಳು ಹೊಂದಿವೆ. ಆದರೆ ತಳಮಟ್ಟದ ಸಂಸ್ಥೆಯಾದ ಗ್ರಾಮಪಂಚಾಯತಿಯ ಕಾರ್ಯಕ್ರಮಗಳು ಬಹಳ ಸೀಮಿತವಾಗಿವೆ. ಗ್ರಾಮಪಂಚಾಯತಿ ಯೋಜನೆಗಳ ಕುರಿತು ಡಾ.ಚಂದ್ರಪೂಜಾರಿಯವರು ಹೀಗೆ ಹೇಳಿದ್ದಾರೆ. ಕರ್ನಾಟಕದಲ್ಲಿ ಗ್ರಾಮ ಪಂಚಾಯತಿಗೆ ಮಹತ್ವ ಪೇಪರ್‌ನಲ್ಲಿ ಮಾತ್ರ, ವಾಸ್ತವದಲ್ಲಿ ಗ್ರಾಮಪಂಚಾಯತ್ ರಾಜ್ಯ ಮತ್ತು ಕೇಂದ್ರ ಸರ್ಕಾರಗಳ ಯೋಜನೆಗಳನ್ನು ಕಾರ್ಯರೂಪಕ್ಕೆ ತರುವ ಒಂದು ಮಾಧ್ಯಮವಾಗಿದೆ. ಎಂಬ ಅಂಶವನ್ನು ಬಳ್ಳಾರಿ ಜಿಲ್ಲಾ ಪಂಚಾಯತ್‌ನ 2000-01ನೇ ಸಾಲಿನ ವಾರ್ಷಿಕ ಯೋಜನೆಗಳ ಅಂಕಿ-ಅಂಶಗಳನ್ನು ಉದಾಹರಣೆಯ ಮೂಲಕ ಹೇಳಿದ್ದಾರೆ. 2000-01ನೇ ಸಾಲಿನಲ್ಲಿ

ಅನುಷ್ಠಾನಗೊಳಿಸುತ್ತಿರುವ ಯೋಜನೆಗಳು 188, ಅದರಲ್ಲಿ 148 ಯೋಜನೆಗಳು ರಾಜ್ಯ ಸರ್ಕಾರ ನಿರ್ಧಾರಿತ, 25 ಕೇಂದ್ರ ಸರ್ಕಾರದ್ದು, 15 ಕೇಂದ್ರಸರ್ಕಾರ ಪುರಸ್ಕೃತ. ಒಟ್ಟು ಅನುದಾನವಾದರೇ ಶೇ.45 ಕೇಂದ್ರ ಸರ್ಕಾರದ ಅನುದಾನ. ಮೇಲಿನ ಅನುದಾನದಲ್ಲಿ ವಿವಿಧ ಹಂತದ ಪಂಚಾಯತಿಗಳ ಪಾಲು ಇಂತಿವೆ. ಜಿಲ್ಲಾ ಪಂಚಾಯತ್ ಶೇ.37 ತಾಲೂಕ್ ಪಂಚಾಯತ್ ಶೇ. 51 ಮತ್ತು ಗ್ರಾಮಪಂಚಾಯತ್ ಕೇವಲ ಶೇ.12 ರಷ್ಟು ಆಗಿವೆ.[20] ಈ ಎಲ್ಲಾ ಅಂಕಿ-ಅಂಶಗಳನ್ನು ಗಮನಿಸಿದಾಗ ಅಧಿಕ ಯೋಜನೆಗಳನ್ನು ಮೇಲಿನ ಸ್ತರಗಳಾದ ತಾಲೂಕ್ ಪಂಚಾಯತಿ ಹಾಗೂ ಜಿಲ್ಲಾ ಪಂಚಾಯತಿಗಳು ಹೊಂದಿವೆ. ಹಾಗಾಗಿ ಗ್ರಾಮಪಂಚಾಯತಿ ಕಾರ್ಯಕ್ರಮಗಳು ಬಹಳ ಸೀಮಿತವಾಗಿದೆ. ಆಯಾ ಜಿಲ್ಲಾ ಮತ್ತು ತಾಲೂಕ್ ಪಂಚಾಯತ್ ಕ್ಷೇತ್ರಗಳಲ್ಲಿ ಈ ಯೋಜನೆಗಳು ಅನುಷ್ಠಾನಗೊಳಿಸಲಾಗುತ್ತದೆ. ಪ್ರತಿ ಕ್ಷೇತ್ರದಲ್ಲಿ ಕ್ರಮವಾಗಿ 4-6 ಮತ್ತು 2-3 ಗ್ರಾಮಪಂಚಾಯತಿಗಳಿವೆ. ಇವುಗಳ ವ್ಯಾಪ್ತಿಯಲ್ಲಿ ಸೇರಿದ ಗ್ರಾಮಗಳ ಅಭಿವೃದ್ಧಿಯಲ್ಲಿ ಜಿಲ್ಲಾ ಮತ್ತು ತಾಲ್ಲೂಕ್ ಪಂಚಾಯತ್ ಸದಸ್ಯರ ಪಾತ್ರ ಬಹಳ ಮುಖ್ಯ. ಈ ಚುನಾಯಿತ ಸದಸ್ಯರು ಆಯಾ ಕ್ಷೇತ್ರದ ಅಭಿವೃದ್ಧಿಗಾಗಿ ಗ್ರಾಮಪಂಚಾಯತಿ ಮಟ್ಟದಲ್ಲಿ ಗ್ರಾಮಸಭೆಗಳನ್ನು ನಡೆಸುವುದು, ಫಲಾನುಭವಿಗಳನ್ನು ಗುರುತಿಸುವುದು, ಮೂಲಭೂತ ಅವಶ್ಯಕತೆಗಳ ಪೂರೈಕೆಗೆ ಸಹಾಯಕವಾಗುವುದು. ಕಟ್ಟಡ ನಿರ್ಮಾಣ ಕಾಮಗಾರಿಗಳನ್ನು ಕೈಗೊಳ್ಳುವುದು ಮತ್ತು ಗ್ರಾಮಗಳ ಸರ್ವಾಂಗಣ ಅಭಿವೃದ್ಧಿಗೆ ಸಹಾಯಕವಾಗುವುದು ಈ ಎಲ್ಲಾ ಕಾರ್ಯಗಳನ್ನು ತಾಲೂಕ್ ಮತ್ತು ಜಿಲ್ಲಾ ಪಂಚಾಯತಿ ಹೊಂದಿದೆ.

ಒಟ್ಟಾರೆ ಆಯಾ ಕ್ಷೇತ್ರದ ಗ್ರಾಮಪಂಚಾಯತಿ ವ್ಯಾಪ್ತಿಯ ಗ್ರಾಮಗಳ ಅಭಿವೃದ್ಧಿಯಲ್ಲಿ ಮೇಲಿನ ಸ್ತರಗಳ ಪಾತ್ರ ಬಹುಮುಖ್ಯವಾಗಿರುವುದರಿಂದ, ಪ್ರಸ್ತುತ ಅಧ್ಯಯನದಲ್ಲಿ ನಾಲ್ಕು ಗ್ರಾಮಪಂಚಾಯತಿಗಳ ಕಾರ್ಯಕ್ಷಮತೆಯಲ್ಲಿ ಜಿಲ್ಲಾ ಮತ್ತು ತಾಲ್ಲೂಕ್ ಪಂಚಾಯತ್‌ಗಳ ಪಾತ್ರ ಹೇಗಿದೆ? ಗ್ರಾಮಗಳ ಅಭಿವೃದ್ಧಿಗೆ ಹೇಗೆ ಸದಸ್ಯರು ಸಹಕರಿಸಿದ್ದಾರೆ? ಅಭಿವೃದ್ಧಿಯಲ್ಲಿ ಪಕ್ಷ ರಾಜಕೀಯ ಹೇಗೆ ಕೆಲಸ ಮಾಡಿದೆ? ಮುಂತಾದ ಅಂಶಗಳ ಕುರಿತು ಚರ್ಚಿಸಲಾಗಿದೆ. ಹಾಗೆಯೆ ಗ್ರಾಮಪಂಚಾಯತಿಗಳನ್ನು ತೌಲನಿಕವಾಗಿ ಅಧ್ಯಯನ ಮಾಡಲಾಗಿದೆ.

## ನಾಗೇನಹಳ್ಳಿ ಗ್ರಾಮಪಂಚಾಯತಿ

ನಾಗೇನಹಳ್ಳಿ ಪಂಚಾಯತಿಯು ಹಂಪಿ ಜಿಲ್ಲಾ ಪಂಚಾಯತ್ ಕ್ಷೇತ್ರಕ್ಕೆ ಸೇರಿದ್ದು, ನಾಗೇನಹಳ್ಳಿಯೆ ತಾಲೂಕ್ ಪಂಚಾಯತ್ ಕ್ಷೇತ್ರವಾಗಿದೆ. ತಾಲೂಕ್ ಮತ್ತು ಜಿಲ್ಲಾ ಪಂಚಾಯತ್ ಸದಸ್ಯರಿಬ್ಬರು ಮಹಿಳಾ ಸದಸ್ಯರಾಗಿದ್ದಾರೆ. ಬಳ್ಳಾರಿ ಜಿಲ್ಲಾ ಪಂಚಾಯತ್ ಅಧ್ಯಕ್ಷರು ಇದೇ ಕ್ಷೇತ್ರದವರಾಗಿದ್ದು ಪರಿಶಿಷ್ಟಪಂಗಡಕ್ಕೆ ಸೇರಿದ್ದಾರೆ. ತಾಲೂಕ್ ಪಂಚಾಯತ್ ಸದಸ್ಯರು ನಾಗೇನಹಳ್ಳಿ ಪಕ್ಕದ ಹೊಸೂರು ಗ್ರಾಮದವರಾಗಿದ್ದಾರೆ. ಇಬ್ಬರು ಸದಸ್ಯರು ಕಾಂಗ್ರೆಸ್ ಪಕ್ಷಕ್ಕೆ ಸೇರಿದ್ದು, ಜಿಲ್ಲಾ ಮತ್ತು ತಾಲೂಕ್ ಪಂಚಾಯತಿಗಳ ಆಡಳಿತವನ್ನು ಕಾಂಗ್ರೆಸ್ ಪಕ್ಷ ನಡೆಸುತ್ತಿದೆ. ಹಾಗೆಯೇ ಗ್ರಾಮಪಂಚಾಯತಿ ಆಡಳಿತ ಸಹ ಕಾಂಗ್ರೆಸ್ ಪಕ್ಷದವರ ಪಾಲಾಗಿದೆ. ಒಟ್ಟಾರೆ ಪಂಚಾಯತ್ ವ್ಯವಸ್ಥೆಯ ಮೂರು ಸ್ತರಗಳಲ್ಲಿ ಮತ್ತು ರಾಜ್ಯದಲ್ಲೂ ಕಾಂಗ್ರೆಸ್ ಪಕ್ಷ ಅಧಿಕಾರದಲ್ಲಿದೆ. ಈ ಪಂಚಾಯತಿ ವ್ಯಾಪ್ತಿಯಲ್ಲಿ ಯಾವುದೇ ಇತರೆ ಪಕ್ಷಗಳು ಅಧಿಕಾರದಲಿಲ್ಲ, ಹಾಗಾಗಿ

ಇಲ್ಲಿ ಅಭಿವೃದ್ಧಿಯಲ್ಲಿ ಯಾವುದೇ ಪಕ್ಷ ರಾಜಕಾರಣ ಇಲ್ಲ. ಗ್ರಾಮಪಂಚಾಯತಿಯ ಕಾರ್ಯಕ್ಷಮತೆಯಲ್ಲಿ ಮೇಲಿನ ಸ್ತರಗಳ ಪಾತ್ರ ಹೇಗಿದೆ ಎಂಬುದನ್ನು ನೋಡಿದಾಗ, ಜಿಲ್ಲಾ ಪಂಚಾಯತ್ ಸದಸ್ಯರು ಗ್ರಾಮಸಭೆಗಳಿಗೆ ಭಾಗವಹಿಸಿಲ್ಲ. ತಾಲೂಕ್ ಪಂಚಾಯತ್ ಸದಸ್ಯರು ಕೆಲವೆ ಗ್ರಾಮಸಭೆಗಳಿಗೆ ಭಾಗವಹಿಸಿದ್ದಾರೆ. ಕಳೆದ ಐದು ವರ್ಷದಲ್ಲಿ ಕೈಗೊಂಡ ವಸತಿ ಯೋಜನೆಗಳಲ್ಲಿ 228 ವಸತಿಗಳನ್ನು ಪಂಚಾಯತ್ ವ್ಯಾಪ್ತಿಯ ಗ್ರಾಮಗಳಲ್ಲಿ ನಿರ್ಮಿಸಲಾಗಿದೆ. ಆದರೆ ಈ ವಸತಿಗಳು ಉದ್ದೇಶಿತ ವರ್ಗಕ್ಕೆ ತಲುಪಿಲ್ಲ ಎಂಬುದನ್ನು ಈಗಾಗಲೇ ನೋಡಲಾಗಿದೆ. ಕುಡಿಯುವ ನೀರು ಪೂರೈಕೆ ಸರಿಯಾಗಿ ಆಗುತ್ತಿಲ್ಲ. ಇದರ ಬಗ್ಗೆ ಜಿಲ್ಲಾ ಮತ್ತು ತಾಲೂಕ್ ಪಂಚಾಯತಿ ಸದಸ್ಯರು ಯಾವುದೇ ಕಾಳಜಿಯನ್ನು ಹೊಂದಿಲ್ಲ. ಗ್ರಾಮಪಂಚಾಯತಿ ಸದಸ್ಯರು ಕುಡಿಯುವ ನೀರು ಪೂರೈಕೆ ಕುರಿತು ಜಿಲ್ಲಾ ಮತ್ತು ತಾಲೂಕು ಪಂಚಾಯತಿ ಸದಸ್ಯರಿಗೆ ನಾವು ತಿಳಿಯಪಡಿಸಿದ್ದೇವೆ ಎಂದು ಹೇಳಿದ್ದಾರೆ. ಕುಡಿಯುವ ನೀರು ಪೂರೈಕೆಗಾಗಿ ಈಗಾಗಲೇ ಯೋಜನೆಗೆ ಪರವಾನಿಗೆ ದೊರತಿದೆ. ಇನ್ನೂ ಈ ಕಾಮಗಾರಿ ಅನುಷ್ಠಾನಗೊಳ್ಳಬೇಕಾಗಿದೆ. ಒಟ್ಟಾರೆಯಾಗಿ ಗ್ರಾಮಪಂಚಾಯತಿಯ ಕಾರ್ಯಕ್ಷಮತೆಯಲ್ಲಿ ಜಿಲ್ಲಾ ಮತ್ತು ತಾಲೂಕ್ ಪಂಚಾಯತಿಗಳ ಸದಸ್ಯರ ಪಾತ್ರ ಗಮನಾರ್ಹವಾಗಿಲ್ಲವೆಂಬುದು ಸ್ಪಷ್ಟವಾಗಿದೆ. ಈ ಸದಸ್ಯರು ಮಹಿಳಾ ಸದಸ್ಯರಾಗಿರುವುದು ಸಹ ಕಾರಣವಾಗಿರಬಹುದು. ಮಹಿಳಾ ಸದಸ್ಯರಾಗಿರುವುದರಿಂದ ಅವರಿಗೆ ಗ್ರಾಮಗಳ ಸಮಸ್ಯೆ ಗೊತ್ತಿಲ್ಲದೆ ಇರಬಹುದಾಗಿದೆ. ಹಾಗಾಗಿ ಅಭಿವೃದ್ಧಿಯಲ್ಲಿ ಇವರ ಸಹಭಾಗಿತ್ವ ಇಲ್ಲದೆ ಇರುವುದರಿಂದ ಕುಡಿಯುವ ನೀರಿನ ಸಮಸ್ಯೆ ಹಾಗೆ ಉಳಿದಿದೆ. ಒಂದೆ ಪಕ್ಷದವರಾದರೂ ಸಹ ಗ್ರಾಮಪಂಚಾಯತಿಯ ಕೆಲವು ಸಮಸ್ಯೆಗಳು ಹಾಗೆ ಉಳಿದಿವೆ. ಜಿಲ್ಲೆ, ತಾಲೂಕು ಮತ್ತು ಗ್ರಾಮಪಂಚಾಯತ್ ಸದಸ್ಯರು ಒಂದೇ ಪಕ್ಷಕ್ಕೆ ಸೇರಿದ್ದರೂ ಮೂಲಭೂತ ಅವಶ್ಯಕತೆಯಾದ ಕುಡಿಯುವ ನೀರು ಪೂರೈಕೆಯಲ್ಲಿ ಮತ್ತು ಕೆಲವು ಯೋಜನೆಗಳನ್ನು ಉದ್ದೇಶಿತ ವರ್ಗಕ್ಕೆ ತಲುಪಿಸುವಲ್ಲಿ ವಿಫಲವಾಗಿವೆ ಎಂದು ಹೇಳಬಹುದು.

### ಬೈಲುವದ್ದಿಗೆರೆ ಗ್ರಾಮಪಂಚಾಯತಿ

ಬೈಲುವದ್ದಿಗೆರೆ ಗ್ರಾಮಪಂಚಾಯತಿಯು ಗಾದಿಗನೂರು ಜಿಲ್ಲಾಪಂಚಾಯತಿ ಕ್ಷೇತ್ರಕ್ಕೆ ಸೇರಿದೆ. ಪಂಚಾಯತಿಯ ನಾಲ್ಕು ಗ್ರಾಮಗಳಲ್ಲಿ ಬೈಲುವದ್ದಿಗೆರೆ ಮತ್ತು ಗುಂಡ್ಲವದ್ದಿಗೆರೆಯ ಪಾಪಿನಾಯಕನಹಳ್ಳಿ ತಾಲೂಕ್ ಪಂಚಾಯತಿಗೆ ಸೇರಿದರೆ, ಧರ್ಮಸಾಗರ ಮತ್ತು ಕಾಕಬಾಳು ಗ್ರಾಮಗಳು ಗಾದಿಗನೂರು ತಾಲ್ಲೂಕು ಪಂಚಾಯತಿಗೆ ಸೇರಿದೆ. ಈ ಗ್ರಾಮಗಳು ಹೊಸಪೇಟೆ ತಾಲೂಕಿಗೆ ಸೇರಿದ್ದರೂ, ವಿಧಾನಸಭಾ ಕ್ಷೇತ್ರ ಸಂಡೂರಾಗಿದೆ. ಈ ಗ್ರಾಮಗಳು ಬೇರೆ ಬೇರೆ ಸರ್ಕಾರಿ ಕೆಲಸಗಳಿಗೆ ವಿವಿಧ ರಾಜಕೀಯ ಪ್ರತಿನಿಧಿಗಳನ್ನು ಅವಲಂಬಿಸಬೇಕಾಗಿದೆ. ಗ್ರಾಮಪಂಚಾಯತಿಯ ಕಾರ್ಯಕ್ಷಮತೆಯಲ್ಲಿ ತಾಲೂಕು ಮತ್ತು ಜಿಲ್ಲಾ ಪಂಚಾಯತ್ ಸದಸ್ಯರ ಪಾತ್ರವನ್ನು ನೋಡಿದಾಗ, ಗಾದಿಗನೂರು ಜಿಲ್ಲಾ ಪಂಚಾಯತ್ ಕ್ಷೇತ್ರದ ಸದಸ್ಯರು ಕುರುಬ ಜನಾಂಗಕ್ಕೆ ಸೇರಿದ್ದು, ಪಾಪಿನಾಯಕನಹಳ್ಳಿ ಮತ್ತು ಗಾದಿಗನೂರು ತಾಲೂಕ್ ಪಂಚಾಯತ್ ಸದಸ್ಯರು ಕ್ರಮವಾಗಿ ಒಬ್ಬರು ಲಿಂಗಾಯತ ಜನಾಂಗಕ್ಕೆ ಸೇರಿದ ಪುರುಷ ಸದಸ್ಯ, ಇನ್ನೊಬ್ಬರು ಕುರುಬ ಜಾತಿಗೆ ಸೇರಿದ ಮಹಿಳಾ ಸದಸ್ಯೆ. ಮೂವರು ಸದಸ್ಯರು ಬೇರೆ ಬೇರೆ ಸಮುದಾಯಕ್ಕೆ ಸೇರಿದ್ದಾರೆ. ಈ ಮೂವರು ಸದಸ್ಯರು ಕಾಂಗ್ರೆಸ್ ಪಕ್ಷಕ್ಕೆ ಸೇರಿದ್ದು, ಗ್ರಾಮಪಂಚಾಯತಿ ಆಡಳಿತ ಜನತಾದಳದವರ ಕೈಯಲ್ಲಿದೆ.

ಹಾಗಾಗಿ ಈ ಪಂಚಾಯತಿಗೆ ವಸತಿ ಯೋಜನೆಗಳಲ್ಲಿ ಕಡಿಮೆ ಮನೆಗಳನ್ನು ನಿರ್ಮಿಸಲಾಗಿದೆ. ಪಂಚಾಯತ್ ವ್ಯಾಪ್ತಿಯ ಎರಡು ಗ್ರಾಮಗಳಲ್ಲಿ ಕನಿಷ್ಠ ನೀರು ಲಭ್ಯವಿಲ್ಲ. ನೈರ್ಮಲ್ಯ ಕಾರ್ಯಕ್ರಮಗಳು ಮಾತ್ರ ಚೆನ್ನಾಗಿ ಅನುಷ್ಠಾನಗೊಂಡಿವೆ. ವಸತಿ ಯೋಜನೆಗಳ ವಿತರಣೆ ಉದ್ದೇಶಿತ ವರ್ಗಕ್ಕೆ ತಲುಪದೆ, ಬಡತನರೇಖೆ ಮೇಲಿನ ಕುಟುಂಬಗಳಿಗೆ ಹೆಚ್ಚು ವಿತರಿಸಲಾಗಿದೆ. ಒಟ್ಟಾರೆ ಗ್ರಾಮ ಪಂಚಾಯತಿಯ ಕೆಲಸಕಾರ್ಯಗಳಲ್ಲಿ ತಾಲೂಕ್ ಪಂಚಾಯತ್ ಮತ್ತು ಜಿಲ್ಲಾ ಪಂಚಾಯತ್ ಸದಸ್ಯರ ಪಾತ್ರ ಉತ್ತಮವಾಗಿಲ್ಲ. ಪಕ್ಷ ರಾಜಕೀಯದಿಂದ ಈ ಸದಸ್ಯರು ಸರಿಯಾಗಿ ಗ್ರಾಮಸಭೆಗೆ ಬರುವುದಿಲ್ಲ, ತಾಲ್ಲೂಕ್ ಪಂಚಾಯತಿಯ ಕೆಲವು ಕೆಲಸಗಳಲ್ಲಿ ವಿಳಂಬವಾಗುತ್ತದೆ. ಇವರ ಪಕ್ಷ ಇರುವ ಪಂಚಾಯತಿಗಳಲ್ಲಿ ಹೆಚ್ಚು ಮನೆಗಳನ್ನು ನಿರ್ಮಿಸಲಾಗಿದೆ. ಗ್ರಾಮಸಭೆಗಳಲ್ಲಿ ಫಲಾನುಭವಿಗಳನ್ನು ಆಯ್ಕೆ ಮಾಡಿದ್ದರು ಸಹ ಪುನಃ ಪೂರ್ತಿ ಪಟ್ಟಿಯನ್ನೆ ಬದಲಾಯಿಸಲಾಗಿದೆ. ಗ್ರಾಮಪಂಚಾಯತಿ ಕಾರ್ಯಕ್ಷಮತೆಯಲ್ಲಿ ಇವರ ಸಹಕಾರ ಇಲ್ಲದ್ದರಿಂದ ಇಲ್ಲಿಯ ಕೆಲವು ಮೂಲಭೂತ ಅವಶ್ಯಕತೆಗಳ ಪೂರೈಕೆ ಸರಿಯಾಗಿಲ್ಲ.

ಜಿಲ್ಲಾ ಹಾಗೂ ತಾಲ್ಲೂಕ್ ಪಂಚಾಯತ್‌ಗಳಲ್ಲಿ ಹೆಚ್ಚು ಯೋಜನೆಗಳು ಇರುವುದರಿಂದ ಗ್ರಾಮಪಂಚಾಯತಿ ಮಟ್ಟದ ಅಭಿವೃದ್ಧಿ ಕಾರ್ಯಗಳ ಅನುಷ್ಠಾನಗೊಳಿಸುವಲ್ಲಿ ಪಕ್ಷ ರಾಜಕೀಯವನ್ನು ಮಾಡಿದ್ದಾರೆ ಎಂದು ಪಂಚಾಯತಿ ಸದಸ್ಯರು ಮತ್ತು ಊರವರು ಅಭಿಪ್ರಾಯ ಪಟ್ಟಿದ್ದಾರೆ. ಇವರ ಪಾತ್ರ ಸರಿಯಿಲ್ಲದ್ದರಿಂದ ಗ್ರಾಮಪಂಚಾಯತಿಯ ಕಾರ್ಯಕ್ಷಮತೆ ಸಹ ಉತ್ತಮವಾಗಿಲ್ಲ ಎಂದು ಹೇಳಬಹುದು.

**ಹಿರೇಹೆಗ್ಡಾಳ್ ಗ್ರಾಮಪಂಚಾಯತಿ**

ಹಿರೇಹೆಗ್ಡಾಳ್ ಗ್ರಾಮಪಂಚಾಯತಿಯು ಗಜಾಪುರ ಜಿಲ್ಲಾ ಪಂಚಾಯತ್ ಕ್ಷೇತ್ರಕ್ಕೆ ಸೇರಿದ್ದು, ಶಿವಪುರ ತಾಲ್ಲೂಕ್ ಪಂಚಾಯತ್ ಕ್ಷೇತ್ರವಾಗಿದೆ. ಜಿಲ್ಲಾ ಪಂಚಾಯತ್ ಸದಸ್ಯರು ಮಹಿಳೆಯರಾಗಿದ್ದು, ಲಿಂಗಾಯಿತ ಕೋಮಿಗೆ ಸೇರಿದರೆ, ಶಿವಪುರ ತಾಲ್ಲೂಕ್ ಪಂಚಾಯತ್ ಸದಸ್ಯರು ಪುರುಷರಾಗಿದ್ದಾರೆ. ಇಬ್ಬರು ಸದಸ್ಯರು ಕಾಂಗ್ರೆಸ್ ಪಕ್ಷದವರಾಗಿದ್ದಾರೆ. ಗ್ರಾಮಪಂಚಾಯತಿಯ ಆಡಳಿತ ಸಹ ಕಾಂಗ್ರೇಸ್ ಪಕ್ಷದವರ ಪಾಲಾಗಿದೆ. ಹಾಗಾಗಿ ಇಲ್ಲಿ ಮೂಲಭೂತ ಅವಶ್ಯಕತೆಗಳಾದ ಕುಡಿಯುವ ನೀರು, ವಸತಿಗಳು, ಶಿಕ್ಷಣ, ಬಡತನ ನಿರ್ಮೂಲನೆ ಇನ್ನಿತರ ಕಾರ್ಯಕ್ರಮಗಳು, ಇತರೆ ಪಂಚಾಯತಿಗಳಿಗೆ ಹೋಲಿಸಿದರೆ ಉತ್ತಮವಾಗಿದೆ. ಗ್ರಾಮಪಂಚಾಯತಿಯ ಅಧ್ಯಕ್ಷರು ಪರಿಶಿಷ್ಟ ಜಾತಿಗೆ ಸೇರಿದ್ದರಿಂದ ಹೆಚ್ಚು ಪರಿಶಿಷ್ಟರ ಯೋಜನೆಯಲ್ಲಿ ಮನೆಗಳನ್ನು ನಿರ್ಮಿಸಲಾಗಿದೆ. ಆದರೆ ಎಲ್ಲಾ ವಸತಿಗಳು ಉದ್ದೇಶಿತ ವರ್ಗಕ್ಕೆ ತಲುಪಿಲ್ಲ, ಆದರೂ ಅಧ್ಯಯನದ ಇತರೆ ಪಂಚಾಯತಿಗಳಿಗೆ ಹೋಲಿಸಿದರೆ ಹೆಚ್ಚು ವಸತಿಗಳು ಬಡತನ ರೇಖೆ ಕೆಳಗಿನ ಕುಟುಂಬಗಳಿಗೆ ವಿತರಿಸಲಾಗಿದೆ.

ಪಂಚಾಯತ್ ವ್ಯಾಪ್ತಿಯ ಗ್ರಾಮಗಳಲ್ಲಿ ನೈರ್ಮಲ್ಯ ಕಾರ್ಯಕ್ರಮಗಳ ಅನುಷ್ಠಾನ ಕಡಿಮೆ ಇದೆ. ಈ ಪಂಚಾಯತ್ ಪ್ರದೇಶದಲ್ಲಿ ಕೆರೆ ಕಟ್ಟೆಗಳು ಇರುವುದರಿಂದ ಶೌಚಾಲಯಗಳನ್ನು ಕಡಿಮೆ ನಿರ್ಮಿಸಲಾಗಿದೆ. ಬಡತನ ನಿರ್ಮೂಲನ ಕಾರ್ಯಕ್ರಮಗಳು ಸಹ ಇತರೆ ಪಂಚಾಯತಿಗಳಿಗೆ ಹೋಲಿಸಿದರೆ ಅನುಷ್ಠಾನಗೊಂಡಿದೆ.

ಮೂಲಭೂತ ಆವಶ್ಯಕತೆಗಳ ಪೂರೈಕೆಗಳು ಇತರೇ ಪಂಚಾಯತಿಗಳಿಗೆ ಹೋಲಿಸಿದರೆ ಉತ್ತಮವಾಗಿದೆ. ಇಲ್ಲಿ ಮೇಲಿನ ಸ್ತರದ ತಾಲ್ಲೂಕ್ ಮತ್ತು ಜಿಲ್ಲಾ ಪಂಚಾಯತಿ ಸದಸ್ಯರ ಪಾತ್ರ ಸಹ ಇದೆ ಎಂದು ಗ್ರಹಿಸಲಾಗಿದೆ. ಗ್ರಾಮಪಂಚಾಯತಿ ಸದಸ್ಯರು, ಜಿಲ್ಲಾ ಮತ್ತು ತಾಲೂಕ್ ಪಂಚಾಯತ್ ಸದಸ್ಯರೆಲ್ಲ ಕಾಂಗ್ರೇಸ್ ಪಕ್ಷಕ್ಕೆ ಸೇರಿರುವುದು ಸಹ ಕಾರಣವಾಗಿದೆ. ಗ್ರಾಮ ಪಂಚಾಯತಿಯ ಅಭಿವೃದ್ಧಿ ಚಟುವಟಿಕೆಗಳಲ್ಲಿ ಯಾವುದೇ ಪಕ್ಷ ರಾಜಕೀಯ ಇಲ್ಲದೆ ಇರುವುದರಿಂದ ಅಭಿವೃದ್ಧಿ ಕೆಲಸಗಳು ಇತರೆ ಪಂಚಾಯತಿಗಳಿಗಿಂತ ಉತ್ತಮವಾಗಿ ಅನುಷ್ಠಾನಗೊಂಡಿದೆ. ಗ್ರಾಮಪಂಚಾಯತಿಯ ಕಾರ್ಯಕ್ಷಮತೆಯಲ್ಲಿ ಪಂಚಾಯತ್ ಸದಸ್ಯ ಮತ್ತು ತಾಲ್ಲೂಕ್ ಮತ್ತು ಜಿಲ್ಲಾ ಪಂಚಾಯತಿ ಸಹಕಾರದಿಂದ ಕೆಲವು ಮೂಲಭೂತ ಅವಶ್ಯಕತೆಗಳ ಪೂರೈಕೆ ಉತ್ತಮವಾಗಿದೆ.

## ಉಜ್ಜನಿ ಗ್ರಾಮಪಂಚಾಯತಿ

ಉಜ್ಜನಿಯು ಜಿಲ್ಲಾ ಮತ್ತು ತಾಲೂಕ್ ಪಂಚಾಯತ್ ಕ್ಷೇತ್ರವಾಗಿದ್ದು ದೊಡ್ಡ ಗ್ರಾಮ ಪಂಚಾಯತಿಯಾಗಿದೆ. ಜಿಲ್ಲಾ ಪಂಚಾಯತ್ ಸದಸ್ಯರು ಉಜ್ಜನಿ ಗ್ರಾಮದ ಪಕ್ಕದ ನಾಗರಕಟ್ಟೆ ಗ್ರಾಮದವರಾಗಿದ್ದು ಮಹಿಳಾ ಸದಸ್ಯರಾಗಿದ್ದಾರೆ. ತಾಲೂಕ್ ಪಂಚಾಯತ್ ಸದಸ್ಯರು ಉಜ್ಜನಿ ಗ್ರಾಮದವರಾಗಿದ್ದಾರೆ. ಇಬ್ಬರು ಸದಸ್ಯರು ಕಾಂಗ್ರೇಸ್ ಪಕ್ಷಕ್ಕೆ ಸೇರಿದ್ದಾರೆ. ಗ್ರಾಮಪಂಚಾಯತಿ ಆಡಳಿತ ಜನತಾದಳದವರ ಕೈಯಲ್ಲಿದೆ. ಉಜ್ಜನಿಯು ಕೊಟ್ಟೂರು ವಿಧಾನಸಭಾ ಕ್ಷೇತ್ರಕ್ಕೆ ಸೇರಿದ್ದು, ಶಾಸಕರು ಸಹ ಇದೇ ಗ್ರಾಮದವರಾಗಿದ್ದಾರೆ. ಇವರು ಸಹ ಕಾಂಗ್ರೇಸ್ ಪಕ್ಷಕ್ಕೆ ಸೇರಿದ್ದಾರೆ. ಹೀಗೆ ಉಜ್ಜನಿಯು ಜಿಲ್ಲಾ ಮತ್ತು ತಾಲ್ಲೂಕ್ ಪಂಚಾಯತ್ ಕ್ಷೇತ್ರವಾಗಿದ್ದು ಮತ್ತು ಸ್ಥಳೀಯ ಶಾಸಕರನ್ನು ಹೊಂದಿದೆ.

ಉಜ್ಜನಿ ಗ್ರಾಮಪಂಚಾಯತಿಯು ತನಗೆ ವಹಿಸಿರುವ ಪ್ರಕಾರ್ಯಗಳನ್ನು ಹೇಗೆ ನಿರ್ವಹಿಸಿದೆ ಎಂಬುದನ್ನು ಈಗಾಗಲೇ ನೋಡಲಾಗಿದ್ದು, ಇದರಲ್ಲಿ ಜಿಲ್ಲಾ ಮತ್ತು ತಾಲೂಕ್ ಪಂಚಾಯತ್ ಸದಸ್ಯರ ತಂತ್ರವನ್ನು ನೋಡೋಣ. ಗ್ರಾಮಪಂಚಾಯತಿಯು ಆಯೋಜಿಸಿದ ಗ್ರಾಮ ಸಭೆಗಳಲ್ಲಿ ಇವರು ಭಾಗವಹಿಸಿಲ್ಲ. ಜಿಲ್ಲಾ ಮತ್ತು ತಾಲೂಕ್ ಪಂಚಾಯತ್ ಕಾರ್ಯಕ್ರಮಗಳು ಗ್ರಾಮಪಂಚಾಯತಿಯ ಮೂಲಕ ಅನುಷ್ಠಾನ ಗೊಳಿಸಬೇಕು. ಉದಾಹರಣೆಗೆ ವಸತಿ ಯೋಜನೆಗಳನ್ನು ಗ್ರಾಮಸಭೆಯ ಮೂಲಕ ವಿತರಿಸಬೇಕು. ಆದರೆ ತಾಲೂಕ್ ಪಂಚಾಯತಿ ಸದಸ್ಯರೆ ಫಲಾನುಭವಿಗಳ ಪಟ್ಟಿಯನ್ನು ತಯಾರಿಸುತ್ತಾರೆ ಎಂದು ಇಲ್ಲಿನ ಸದಸ್ಯರ ಅಭಿಪ್ರಾಯವಾಗಿದೆ. ವಿಶ್ವಬ್ಯಾಂಕ್ ಯೋಜನೆಯು ಗ್ರಾಮಪಂಚಾಯತಿ ಮೂಲಕ ಅನುಷ್ಠಾನಗೊಳ್ಳಬೇಕು. ಆದರೆ ಪಕ್ಷ ರಾಜಕೀಯದಿಂದ ಯಾವುದೇ ದಾಖಲೆಗಳನ್ನು ಗ್ರಾಮಪಂಚಾಯತಿಯಲ್ಲಿ ಇಟ್ಟಿಲ್ಲ. ನೈರ್ಮಲ್ಯ ಕಾರ್ಯಕ್ರಮಗಳು ಸಹ ಸರಿಯಾಗಿ ಅನುಷ್ಠಾನಗೊಂಡಿಲ್ಲ. ಬಡತನ ನಿರ್ಮೂಲನ ಕಾರ್ಯಕ್ರಮಗಳ ಭೌತಿಕ ಗುರಿಯನ್ನು ಸಹ ಸಾಧಿಸಿಲ್ಲ. ಕನಿಷ್ಠ ಕುಡಿಯುವ ನೀರು ಪೂರೈಕೆಯಾಗುತ್ತಿಲ್ಲ. ಪಕ್ಷ ರಾಜಕೀಯದಿಂದ ಗ್ರಾಮಪಂಚಾಯತಿಯ ಅಭಿವೃದ್ಧಿ ಚಟುವಟಿಕೆಗಳಲ್ಲಿ ಸಹಕರಿಸುತ್ತಿಲ್ಲ. ಇಲ್ಲಿ ಸ್ಥಳೀಯ ಶಾಸಕರ ಪ್ರಭಾವ ಬಹಳ ಇದೆ. ಸ್ಥಳೀಯ ರಾಜಕೀಯದಲ್ಲಿ ಲಿಂಗಾಯತ್ತರು ಹೆಚ್ಚು ಪ್ರಭಾವಶಾಲಿಯಾಗಿದ್ದಾರೆ. ಒಟ್ಟಾರೆ ಗ್ರಾಮಪಂಚಾಯತಿಯ ಕೆಲಸ ಕಾರ್ಯಗಳಲ್ಲಿ ತಾಲೂಕ್ ಮತ್ತು ಜಿಲ್ಲಾ ಪಂಚಾಯತಿ ಸದಸ್ಯರ ಪಾತ್ರ

ಪಕ್ಷರಾಜಕೀಯದಿಂದ ಸರಿಯಿಲ್ಲ ಎಂದು ಹೇಳಬಹುದು. ಹಾಗಾಗಿ ಗ್ರಾಮಪಂಚಾಯತಿಯ ಕಾರ್ಯಕ್ಷಮತೆಯು ಇದರಿಂದಲೆ ಉತ್ತಮವಾಗಿ ಅಭಿವೃದ್ಧಿ ಕಾರ್ಯಗಳು ಸರಿಯಾಗಿ ಅನುಷ್ಠಾನಗೊಂಡಿಲ್ಲ. ಪಕ್ಷರಾಜಕೀಯದಿಂದ ತಾಲೂಕ್ ಪಂಚಾಯತಿಯಲ್ಲಿ ನಮ್ಮ ಕೆಲಸಗಳು ಬೇಗ ಆಗುವುದಿಲ್ಲ. ಗ್ರಾಮೀಣ ಜನತೆ ಬಂದು ನಮ್ಮನ್ನು ಕೇಳುತ್ತಾರೆ. ವಸತಿಗಳು ಸಹ ಹೆಚ್ಚು ನಿರ್ಮಿಸಿಲ್ಲ. ಹೀಗೆ ಗ್ರಾಮಪಂಚಾಯತಿ ಕಾರ್ಯಕ್ಷಮತೆಯಲ್ಲಿ ಮೇಲ್‌ಸ್ತರಗಳ ಪಾತ್ರ ಹೀಗಿದೆ.

## ಗ್ರಾಮಪಂಚಾಯತಿಗಳ ತೌಲನಿಕ ವಿವರಣೆ

ಗ್ರಾಮಗಳ ಅಭಿವೃದ್ಧಿಯಲ್ಲಿ ಪಂಚಾಯತ್ ವ್ಯವಸ್ಥೆಯ ಮೂರು ಸ್ತರಗಳ ಪಾತ್ರ ಬಹಳ ಮುಖ್ಯ. ಆದ್ದರಿಂದ ಗ್ರಾಮಪಂಚಾಯತಿಗಳ ಕಾರ್ಯಕ್ಷಮತೆಯಲ್ಲಿ ತಾಲೂಕ್ ಮತ್ತು ಜಿಲ್ಲಾಪಂಚಾಯತ್ ಸದಸ್ಯರ ಪಾತ್ರವನ್ನು ಈಗಾಗಲೇ ನೋಡಿದ್ದೇವೆ. ಗ್ರಾಮಪಂಚಾಯತಿಯ ಸದಸ್ಯರು ಯಾವ ಪಕ್ಷಕ್ಕೆ ಸೇರಿರುತ್ತಾರೋ, ಅದೇ ಪಕ್ಷದವರು ಮೇಲಿನಸ್ತರದಲ್ಲಿದ್ದರೆ ಆ ಗ್ರಾಮಪಂಚಾಯತಿಗಳ ಕಾರ್ಯಕ್ಷಮತೆ ಉತ್ತಮವಾಗಿದೆ.

ಹಿರೇಹೆಗ್ಡಾಳ್ ಮತ್ತು ನಾಗೇನಹಳ್ಳಿ ಪಂಚಾಯತಿಗಳ ಆಡಳಿತವು ಕಾಂಗ್ರೇಸ್ ಪಕ್ಷದವರ ಕೈಯಲ್ಲಿದ್ದು ಮೇಲಿನ ಸ್ತರಗಳಲ್ಲೂ ಸಹ ಇದೇ ಪಕ್ಷದವರಿದ್ದು ಕೆಲವು ವಸತಿ ಯೋಜನೆಗಳೂ, ಹೆಚ್ಚು ಅನುಷ್ಠಾನ ಗೊಂಡಿವೆ. ಗ್ರಾಮಸಭೆಗಳಲ್ಲಿ ಇದರ ಭಾಗವಹಿಸುವಿಕೆ ಸಹ ಚೆನ್ನಾಗಿದೆ. ಗ್ರಾಮಪಂಚಾಯತಿಯ ಕೆಲವು ಕೆಲಸಕಾರ್ಯಗಳಲ್ಲಿ ಸಹಕರಿಸಿದ್ದಾರೆ. ಈ ಎರಡು ಪಂಚಾಯತಿಗಳು ತಾಲೂಕಿಗೆ ಹತ್ತಿರವಿದ್ದು, ನೀರಾವರಿ ಪಂಚಾಯತಿಗಳು, ಒಂದೇ ಪಕ್ಷದವರು ಮತ್ತು ಆರ್ಥಿಕ ಮತ್ತು ಸಾಮಾಜಿಕವಾಗಿ ಉತ್ತಮವಾಗಿದೆ. ಈ ಎಲ್ಲ ಅಂಶಗಳು ಸಹ ಉತ್ತಮ ಕಾರ್ಯಕ್ಷಮತೆಗೆ ಕಾರಣವಾಗಿವೆ ಎಂದು ಹೇಳಬಹುದು.

ಬೈಲುವದ್ದಿಗೆರೆ ಮತ್ತು ಉಜ್ಜನಿ ಪಂಚಾಯತಿಗಳ ಆಡಳಿತವು ಜನತಾದಳದವರ ಕೈಯಲ್ಲಿದ್ದು, ತಾಲ್ಲೂಕ್ ಮತ್ತು ಜಿಲ್ಲಾ ಪಂಚಾಯತ್ ಸದಸ್ಯರು ಕಾಂಗ್ರೇಸ್ ಪಕ್ಷಕ್ಕೆ ಸೇರಿದ್ದಾರೆ. ಇಲ್ಲಿ ಪಕ್ಷರಾಜಕೀಯದಿಂದ ಈ ಪಂಚಾಯತಿಗಳಲ್ಲಿ ವಸತಿ ಯೋಜನೆಗಳಲ್ಲಿ ನಿರ್ಮಿಸಿದ ಮನೆಗಳ ಸಂಖ್ಯೆ ಕಡಿಮೆ, ಗ್ರಾಮಪಂಚಾಯತಿ ಕೆಲಸಕಾರ್ಯಗಳಲ್ಲಿ ಸಹಕಾರವಿಲ್ಲ, ಜಿಲ್ಲಾ ಮತ್ತು ತಾಲೂಕ್ ಪಂಚಾಯತ್ ಸದಸ್ಯರು ಗ್ರಾಮಸಭೆಗೆ ಭಾಗವಹಿಸದೆ ಇರುವುದು, ತಾಲೂಕ್ ಪಂಚಾಯತ್ ಕೆಲಸಗಳಲ್ಲಿ ವಿಳಂಬಕ್ಕೆ ಕಾರಣವಾಗಿದೆ. ಇವು ತಾಲೂಕಿನಿಂದ ದೂರ ಇವೆ. ಈ ಎಲ್ಲ ಅಂಶಗಳು ಸಹ ಗ್ರಾಮಪಂಚಾಯತಿಯ ಕಾರ್ಯಕ್ಷಮತೆಗೆ ಹಸ್ತಕ್ಷೇಪ ಮಾಡಿದೆ ಎಂದು ಹೇಳಬಹುದು. ಅದರಲ್ಲೂ ಈ ಎರಡು ಪಂಚಾಯತಿಗಳು ಒಣಭೂಮಿ ಪಂಚಾಯತಿಗಳಾಗಿದ್ದು ಆರ್ಥಿಕ ಮತ್ತು ಸಾಮಾಜಿಕವಾಗಿ ಹಿಂದುಳಿದಿವೆ. ಹೀಗಾಗಿ ಒಣಭೂಮಿ ಪಂಚಾಯತಿಗಳ ಕಾರ್ಯಕ್ಷಮತೆಗಿಂತ ನೀರಾವರಿ ಪಂಚಾಯತಿಗಳ ಕಾರ್ಯಕ್ಷಮತೆ ಉತ್ತಮವಾಗಿವೆ. ಇದಕ್ಕೆ ನೀರಾವರಿ ಪಂಚಾಯತಿ ಮತ್ತು ಮೇಲಿನ ಸ್ತರಗಳು ಕಾಂಗ್ರೇಸ್ ಪಕ್ಷಕ್ಕೆ ಸೇರಿರುವುದು ಸಹ ಮುಖ್ಯ ಅಂಶವಾಗಿದೆ. ಒಣಭೂಮಿ ಪಂಚಾಯತಿಗಳು ಜನತಾದಳಕ್ಕೆ ಸೇರಿದ್ದು, ಮೇಲಿನ ಸ್ತರಗಳು ಕಾಂಗ್ರೇಸ್ ಪಕ್ಷಕ್ಕೆ ಸೇರಿದ್ದರಿಂದ ಗ್ರಾಮ ಪಂಚಾಯತಿಯ ಕಾರ್ಯಕ್ಷಮತೆಯು ಉತ್ತಮವಾಗಿಲ್ಲ ಎಂದು ಹೇಳಬಹುದು.

## 5.5 ಹಣದ ಲಾಭಿ

ಗ್ರಾಮಪಂಚಾಯತಿಯ ಕಾರ್ಯಕ್ಷಮತೆಯಲ್ಲಿ ಹಣ ಹೇಗೆ ಕೆಲಸಮಾಡಿದೆ ಎಂಬುದನ್ನು ಮಾಪನ ಮಾಡಲು ಪ್ರಸ್ತುತ ಅಧ್ಯಯನದಲ್ಲಿ ಪ್ರಯತ್ನಿಸಲಾಗಿದೆ. ಇಂದು ಸರ್ಕಾರದ ಯಾವುದೆ ಯೋಜನೆಯ ಲಾಭವನ್ನು ಪಡೆಯಬೇಕೆಂದರೆ ಹಣದ ಲಾಭಿ ಮುಖ್ಯ ಪಾತ್ರವನ್ನು ವಹಿಸುತ್ತದೆ. ಹಣದಲಾಭಿ ಸರ್ಕಾರದ ಎಲ್ಲಾ ಕ್ಷೇತ್ರಗಳಲ್ಲಿ ಇದೆ. ಗ್ರಾಮ ಪಂಚಾಯತಿಯು ಸಹ ಈ ಹಣದಲಾಭಿಯಿಂದ ಮುಕ್ತವಾಗಿಲ್ಲ. ಈಗಿರುವ ಪರ್ಸೆಂಟೈಜ್ ಜಾಲದಲ್ಲಿ ಸರ್ಕಾರದ ಯೋಜನೆಗಳು ಇಂದು ಉದ್ದೇಶಿತ ವರ್ಗಕ್ಕೆ ತಲುಪುವಲ್ಲಿ ವಿಫಲವಾಗಿವೆ.

ಪ್ರಸ್ತುತ ಅಧ್ಯಯನದ ನಾಲ್ಕು ಗ್ರಾಮಪಂಚಾಯತಿಗಳಲ್ಲಿ ಹಣದ ಲಾಭಿಯನ್ನು ನೋಡಿದಾಗ, ಅಧ್ಯಯನ ಕೈಗೊಂಡ ಎಲ್ಲಾ ಗ್ರಾಮಪಂಚಾಯತಿಗಳಲ್ಲಿ ಹಣದ ಲಾಭಿ ತುಂಬಾ ಕೆಲಸ ಮಾಡಿರುವುದು ಅಧ್ಯಯನದಿಂದ ಕಂಡುಬಂದಿದೆ. ಅಂದರೆ ಗ್ರಾಮ ಪಂಚಾಯತಿಯ ಯೋಜನೆಗಳ ವಿತರಣೆಯಲ್ಲಿ ಹಣದಲಾಭಿ ನಡೆದಿದೆ. ಗ್ರಾಮಪಂಚಾಯತಿಗಳ ಯೋಜನೆಗಳ ಅನುಷ್ಠಾನವನ್ನು ನೋಡಿದಾಗ, ಅಧ್ಯಯನ ಕೈಗೊಂಡ ಎಲ್ಲಾ ಗ್ರಾಮ ಪಂಚಾಯತಿಗಳಲ್ಲಿ ಯಾವ ಕಾಮಗಾರಿಗಳಲ್ಲಿ ಹೆಚ್ಚು ಹಣದ ಲಾಭಿಯಾಗುತ್ತದೆಯೋ ಅಂತಹ ಕಾಮಗಾರಿಗಳನ್ನು ಹೆಚ್ಚು ಅನುಷ್ಠಾನಗೊಳಿಸಲಾಗಿದೆ. ಆಯಾ ವಾರ್ಡಿನ ಪಂಚಾಯತಿ ಸದಸ್ಯರು ತಮ್ಮ ವಾರ್ಡಿನ ಕಾಮಗಾರಿಗಳನ್ನು ಮಾಡಿಸಿದ್ದಾರೆ. ಉದಾಹರಣೆಗೆ ಬಂಡೆಹಾಕಿಸುವ, ನೀರಿನತೊಟ್ಟಿ ಕಟ್ಟಿಸುವ ಮತ್ತು ಅಗಸಿಕಟ್ಟೆಗಳ ನಿರ್ಮಾಣ ಎಲ್ಲಾ ಗ್ರಾಮಪಂಚಾಯತಿಗಳಲ್ಲಿ ಅನುಷ್ಠಾನಗೊಂಡಿವೆ. ವಸತಿ ಯೋಜನೆಗಳ ವಿತರಣೆಯಲ್ಲಂತೂ ಎಲ್ಲಾ ಗ್ರಾಮಪಂಚಾಯತಿಗಳಲ್ಲಿ ಮನೆಗೆ ರೂ.500ಗಳನ್ನು ನಿಗದಿಪಡಿಸಲಾಗಿದೆ. ಗ್ರಾಮಸಭೆಯಲ್ಲಿ ಫಲಾನುಭವಿಗಳ ಆಯ್ಕೆಯಾಗಿದ್ದರೂ ಸಹ ಯಾರು ಹೆಚ್ಚು ಹಣವನ್ನು ಕೊಟ್ಟಿರುತ್ತಾರೊ ಅಂತವರಿಗೆ ಹೆಚ್ಚು ಮನೆಗಳಾಗಿವೆ ಎಂದು ಎಲ್ಲಾ ಪಂಚಾಯತಿಗಳ ಗ್ರಾಮಸ್ಥರು ಅಭಿಪ್ರಾಯಪಟ್ಟಿದ್ದಾರೆ. ಇಲ್ಲಿ ಹಣ ಇದ್ದವನು ಹೆಚ್ಚು ಲಾಭ ಪಡೆದಿದ್ದಾನೆ.

ಪ್ರತಿ ಗ್ರಾಮಪಂಚಾಯತಿಯ ಕಾರ್ಯದರ್ಶಿ, ಅಧ್ಯಕ್ಷ, ಉಪಾಧ್ಯಕ್ಷರಿಗೆ ಮತ್ತು ಗುತ್ತಿಗೆದಾರರಿಗೆ ಇಂತಿಷ್ಟು ಪರ್ಸೆಂಟೈಜ್ ಎಂದು ನಿಗಧಿ ಮಾಡಲಾಗಿದ್ದು ಇದು ಎಲ್ಲರಿಗೂ ಗೊತ್ತಿರುವ ಗುಪ್ತ ವಿಚಾರವಾಗಿದೆ. ಕೆಲವು ಸದಸ್ಯರು ಇದನ್ನು ಒಪ್ಪಿಕೊಂಡಿದ್ದಾರೆ. ಪಂಚಾಯತಿಯ ಸಂಪೂರ್ಣ ಜವಾಬ್ದಾರಿ ಕಾರ್ಯದರ್ಶಿಯ ಮೇಲೆಯೇ ಅವಲಂಬಿತವಾಗಿರು ತ್ತದೆ. ಇಲ್ಲಿ ಪಂಚಾಯತಿ ಅಧ್ಯಕ್ಷ ಮತ್ತು ಸದಸ್ಯರು ಓದು ಬರಹ ಕಾನೂನು ಬಗ್ಗೆ ತಿಳಿದವರಾಗಿದ್ದರೆ ಎಲ್ಲವನ್ನು ಪ್ರಶ್ನಿಸುತ್ತಾರೆ ಇಲ್ಲವಾದರೆ ಕಾರ್ಯದರ್ಶಿಯ ತಿರ್ಮಾನವೇ ಅಂತಿಮವಾಗಿರುತ್ತದೆ. ಎಲ್ಲಾ ಗ್ರಾಮಪಂಚಾಯತಿ ಗಳಲ್ಲಿ ಇದೇ ಸ್ಥಿತಿ ಅಂದರೆ ಯಾವ ಗ್ರಾಮಪಂಚಾಯತಿಯು ಹಣದಲಾಭಿಯಿಂದ ಮುಕ್ತವಾಗಿಲ್ಲ. ಅಧ್ಯಯನದ ನಾಲ್ಕು ಗ್ರಾಮಪಂಚಾಯತಿಗಳಲ್ಲಿ ಹಣದ ಲಾಭಿಯನ್ನು ತೌಲಾನಿಕವಾಗಿ ನೋಡಿದಾಗ ನೀರಾವರಿ ಪ್ರದೇಶದ ಪಂಚಾಯತಿಗಳಾದ ನಾಗೇನಹಳ್ಳಿ ಮತ್ತು ಹಿರೇಹೆಗ್ಡಾಳ್‌ನಲ್ಲಿ ಹಣದಲಾಭಿಯು, ಒಣಭೂಮಿ ಪ್ರದೇಶದ

ಪಂಚಾಯತಿಗಳಾದ ಬೈಲುವದ್ದಿಗೆರೆ ಮತ್ತು ಉಜ್ಜನಿಗಿಂತ ಕಡಿಮೆ ನಡೆದಿದೆ ಎಂದು ಹೇಳಬಹುದು. ಒಣಭೂಮಿ ಪ್ರದೇಶದ ಎರಡು ಪಂಚಾಯತಿಗಳು ತಾಲೂಕು ಕೇಂದ್ರಕ್ಕೆ ದೂರವಿದ್ದು, ಇಲ್ಲಿಯ ಜನತೆ ತಮ್ಮ ಬದುಕನ್ನು ಬಿಟ್ಟು ಪಟ್ಟಣಕ್ಕೆ ಓಡಾಡುವ ಸ್ಥಿತಿಯಲ್ಲಿ ಇಲ್ಲ. ಕಾರಣ ಇವರು ಹೆಚ್ಚು ಕೂಲಿಕಾರರಿದ್ದಾರೆ. ಇವರು ಸರ್ಕಾರದ ಯೋಜನೆಗಳ ಸಿಕ್ಕರೆ ಸಾಕು ಎನ್ನುವ ಸ್ಥಿತಿಯಲ್ಲಿದ್ದಾರೆ. ಹಾಗಾಗಿ ಈ ಪ್ರದೇಶದಲ್ಲಿ ಸ್ವಲ್ಪ ಹಣವಿದ್ದವರು ಹಾಗೂ ರಾಜಕೀಯ ಪ್ರತಿನಿಧಿಗಳ ಒಡನಾಟವಿರುವವರು ಹೆಚ್ಚು ಸರ್ಕಾರದ ಯೋಜನೆಯ ಲಾಭವನ್ನು ಪಡೆದುಕೊಂಡಿದ್ದಾರೆ. ಹಾಗಾಗಿ ಇಲ್ಲಿ ನೀರಾವರಿ ಪಂಚಾಯತಿ ಪ್ರದೇಶಗಳು ಪಟ್ಟಣಕ್ಕೆ ಹತ್ತಿರವಿದ್ದು ಯಾವುದೇ ಸರ್ಕಾರದ ಯೋಜನೆ ಬಂದರೂ ಓಡಾಡಿ ಕೆಲಸವನ್ನು ಮಾಡಿಕೊಳ್ಳುತ್ತಾನೆ. ಇಲ್ಲಿಯ ಜನತೆ ಆರ್ಥಿಕವಾಗಿ ಉತ್ತಮವಾಗಿರುತ್ತಾರೆ. ಈ ಎಲ್ಲಾ ಅಂಶಗಳನ್ನು ಗಮನಿಸಿದಾಗ ನೀರಾವರಿ ಪ್ರದೇಶದ ಗ್ರಾಮಪಂಚಾಯತಿಗಳಿಗಿಂತ ಒಣಭೂಮಿ ಪಂಚಾಯತಿ ಪ್ರದೇಶಗಳಲ್ಲಿ ಹೆಚ್ಚು ಹಣದ ಲಾಭಿ ನಡೆದಿದೆ ಎಂದು ಹೇಳಬಹುದು. ಅಧ್ಯಯನದ ಎಲ್ಲಾ ಗ್ರಾಮಪಂಚಾಯತಿಗಳಲ್ಲಿ ಹಣದಲಾಭಿ ನಡೆದಿರುವುದು ಅಧ್ಯಯನದಿಂದ ಕಂಡುಬಂದಿದೆ.

ಸ್ವಾತಂತ್ರ್ಯಾನಂತರ ಜಾರಿಗೆ ತಂದ ಅಭಿವೃದ್ಧಿ ಯೋಜನೆಗಳು ಕೆಳಜಾತಿ/ವರ್ಗಗಳ ಬಡವರ ಮೂಲಭೂತ ಸಾಮಾಜಿಕ ಪರಿವರ್ತನೆಗೆ ಪೂರಕವಾಗಿಲ್ಲ. ಏಕಂದರೆ ಸ್ವಾತಂತ್ರ್ಯಾ ನಂತರ ಇಷ್ಟೆಲ್ಲಾ ಅಭಿವೃದ್ಧಿ ಯೋಜನೆಗಳು ಜಾರಿಗೆ ಬಂದಿದ್ದು ಕೆಳಜಾತಿ/ವರ್ಗಗಳ ಆರ್ಥಿಕ ಮತ್ತು ಸಾಮಾಜಿಕ ಬದಲಾವಣೆಗಾಗಿ. ಆದರೂ ಸಹ ಈ ಕೆಳಜಾತಿ/ವರ್ಗಗಳ ಸ್ಥಿತಿಗತಿಗಳು ಯಥಾ ರೀತಿಯಲ್ಲಿ ಮುಂದುವರಿದಿವೆ. ಇಲ್ಲಿ ಕಷ್ಟವಿರುವುದು ಈ ಕೆಳಜಾತಿ/ವರ್ಗಗಳ ತ್ರಿಶಂಕು ಸ್ಥಿತಿಯ ಬಗ್ಗೆ. ಹಾಗಾಗಿ ಸರ್ಕಾರದ ಆನೇಕ ಅಭಿವೃದ್ಧಿ ಕಾರ್ಯಕ್ರಮಗಳನ್ನು ತಲುಪಿಸುವ ದೃಷ್ಟಿಯಿಂದ ಪಂಚಾಯತ್ ವ್ಯವಸ್ಥೆ ರೂಪುಗೊಂಡಿದೆ. ಈ ಸಂಸ್ಥೆಗಳಿಂದ ಕೆಳಜಾತಿ/ವರ್ಗಗಳ ಎಲ್ಲಾ ಸಮಸ್ಯೆಗಳು ಪರಿಹಾರವಾಗುತ್ತವೆ ಎಂಬ ಗ್ರಹಿಕೆ ಇಲ್ಲಿದೆ. ಇಲ್ಲಿ ಯೋಜನೆಗಳು ಉದ್ದೇಶಿತ ವರ್ಗಕ್ಕೆ ತಲುಪಬೇಕು. ಆದರೆ ಯೋಜನೆಗಳ ವಿತರಣೆಯಲ್ಲಿ ಜಾತಿರಾಜಕಾರಣ, ಪಕ್ಷರಾಜಕಾರಣ ಮತ್ತು ಹಣದ ಲಾಭಿಗಳು ತುಂಬಾ ಪ್ರಭಾವ ಬೀರಿರುವುದು ಅಧ್ಯಯನದಿಂದ ಕಂಡುಬಂದಿದೆ. ಹೀಗೆ ಗ್ರಾಮಪಂಚಾಯತಿಯ ಕಾರ್ಯಕ್ಷಮತೆಯಲ್ಲಿ ಜಾತಿವಾರು ಪ್ರಾತಿನಿಧ್ಯ , ಗ್ರಾಮಸಭೆ , ತೆರಿಗೆ ಸಂಗ್ರಹ, ಪಂಚಾಯತ್ ವ್ಯವಸ್ಥೆಯ ವಿವಿಧ ಸ್ತರಗಳು, ಪಕ್ಷರಾಜಕೀಯ ಮತ್ತು ಹಣದ ಲಾಭಿ ಈ ರೀತಿ ಕೆಲಸ ಮಾಡಿವೆ ಎಂದು ಹೇಳಬಹುದು.

**ಅಡಿಟಿಪ್ಪಣಿಗಳು**

1. ನಾಗರಾಜ್ ಡಿ. ಆರ್., ''ಪಂಚಾಯತ್‌ರಾಜ್ ಬಗೆಗೆ'' ಅಗ್ರಹಾರ ಕೃಷ್ಣಮೂರ್ತಿ(ಸಂ), *ಸಂಸ್ಕೃತಿ ಕಥನ*, ಬೆಂಗಳೂರು : ಕನ್ನಡ ಪುಸ್ತಕ ಪ್ರಾಧಿಕಾರ, 2002, ಪುಟ.304

2. ಪಂಚಾಯತಿ ಕಾರ್ಯದರ್ಶಿ, *ಗ್ರಾಮಪಂಚಾಯತಿ ಸದಸ್ಯರ ಆಯ್ಕೆಪಟ್ಟಿ-1999*, ಪಂಚಾಯತಿ ದಾಖಲೆಗಳು, ನಾಗೇನಹಳ್ಳಿ : ಗ್ರಾಮಪಂಚಾಯತಿ ಕಚೇರಿ, 2001

3. ಪಂಚಾಯತಿ ಕಾರ್ಯದರ್ಶಿ, *ಗ್ರಾಮಪಂಚಾಯತಿ ಬೇಡಿಕೆ ರಿಜಿಸ್ಟರ್ ಮತ್ತು ಗ್ರಾಮಪಂಚಾಯತಿ ಸದಸ್ಯರ ಆಯ್ಕೆಪಟ್ಟಿ-1999*, ಪಂಚಾಯತಿ ದಾಖಲೆಗಳು, ನಾಗೇನಹಳ್ಳಿ: ಗ್ರಾಮಪಂಚಾಯತಿ ಕಚೇರಿ, 2001

4. ಪಂಚಾಯತಿ ಕಾರ್ಯದರ್ಶಿ, *ಗ್ರಾಮಪಂಚಾಯತಿ ಸದಸ್ಯರ ಆಯ್ಕೆಪಟ್ಟಿ-1999*, ಪಂಚಾಯತಿ ದಾಖಲೆಗಳು, ಬೈಲುವದ್ದಿಗೆರೆ: ಗ್ರಾಮಪಂಚಾಯತಿ ಕಚೇರಿ, 2001

5. ಪಂಚಾಯತಿ ಕಾರ್ಯದರ್ಶಿ, *ಗ್ರಾಮಪಂಚಾಯತಿ ಬೇಡಿಕೆ ರಿಜಿಸ್ಟರ್* ಮತ್ತು *ಗ್ರಾಮಪಂಚಾಯತಿ ಸದಸ್ಯರ ಆಯ್ಕೆಪಟ್ಟಿ-1999*, ಪಂಚಾಯತಿ ದಾಖಲೆಗಳು, ಬೈಲುವದ್ದಿಗೆರೆ: ಗ್ರಾಮಪಂಚಾಯತಿ ಕಚೇರಿ, 2001

6. ಪಂಚಾಯತಿ ಕಾರ್ಯದರ್ಶಿ, *ಗ್ರಾಮಪಂಚಾಯತಿ ಸದಸ್ಯರ ಆಯ್ಕೆಪಟ್ಟಿ-1999*, ಪಂಚಾಯತಿ ದಾಖಲೆಗಳು, ಹಿರೇಹೆಗ್ಡಾಳ್: ಗ್ರಾಮಪಂಚಾಯತಿ ಕಚೇರಿ, 2001

7. ಪಂಚಾಯತಿ ಕಾರ್ಯದರ್ಶಿ*ಗ್ರಾಮಪಂಚಾಯತಿ ಬೇಡಿಕೆ ರಿಜಿಸ್ಟರ್* ಮತ್ತು *ಗ್ರಾಮಪಂಚಾಯತಿ ಸದಸ್ಯರ ಆಯ್ಕೆಪಟ್ಟಿ-1999*, ಪಂಚಾಯತಿ ದಾಖಲೆಗಳು, ಹಿರೇಹೆಗ್ಡಾಳ್: ಗ್ರಾಮಪಂಚಾಯತಿ ಕಚೇರಿ, 2001

8. ಪಂಚಾಯತಿ ಕಾರ್ಯದರ್ಶಿ, *ಗ್ರಾಮಪಂಚಾಯತಿ ಸದಸ್ಯರ ಆಯ್ಕೆಪಟ್ಟಿ-1999*, ಪಂಚಾಯತಿ ದಾಖಲೆಗಳು, ಉಜ್ಜಿನಿ: ಗ್ರಾಮಪಂಚಾಯತಿ ಕಚೇರಿ, 2001

9. *ಗ್ರಾಮಪಂಚಾಯತಿ ಬೇಡಿಕೆ ರಿಜಿಸ್ಟರ್ ಮತ್ತು ಗ್ರಾಮಪಂಚಾಯತಿ ಸದಸ್ಯರ ಆಯ್ಕೆಪಟ್ಟಿ-1999*, ಪಂಚಾಯತಿ ದಾಖಲೆಗಳು, ಉಜ್ಜಿನಿ: ಗ್ರಾಮಪಂಚಾಯತಿ ಕಚೇರಿ, 2001

10. ಚಂದ್ರಪೂಜಾರಿ ಎಂ., *ದೇಶಿಯತೆ ನೆರಳಲ್ಲಿ ವಿಕೇಂದ್ರೀಕರಣ*, ಹಂಪಿ : ಕನ್ನಡ ವಿಶ್ವವಿದ್ಯಾಲಯ, 2001, ಪುಟ.147

11. ಶುಭ ಕೆ. ಮತ್ತು ಭಾರ್ಗವ ಬಿ. ಎಸ್.(ಸಂ), *ಗ್ರಾಮಸಭೆ ಮತ್ತು ಮಹಿಳೆ :ಕೇರಳದ ಅನುಭವಗಳು*, ಬೆಂಗಳೂರು : ಇನ್ಸ್ಟಿಟ್ಯೂಟ್ ಆಫ್ ಸೂಶಿಯಲ್ ಸೈನ್ಸ್, 2001, ಪುಟ.5

12. *ದಿನಾಂಕ 13-06-2001*ರಲ್ಲಿ ಬೈಲುವದ್ದಿಗೆರೆ ಗ್ರಾಮಪಂಚಾಯತಿಯ ಗ್ರಾಮಸಭೆಯಲ್ಲಿ ಭಾಗವಹಿಸಿ ಫಲಿತಗಳನ್ನು ದಾಖಲಿಸಲಾಗಿದೆ.

13. ಬಡ್ಡಿ ಎಂ. ಎಂ., *ಕರ್ನಾಟಕ ಪಂಚಾಯತಿ ಕಾಯ್ದೆ-1993*, ಧಾರವಾಡ : ಆಕಳವಾಡಿ ಬುಕ್‌ಡಿಪೋ, 1994, ಪುಟ.246

14. ಪಂಚಾಯತಿ ಕಾರ್ಯದರ್ಶಿ*ಲೆಕ್ಕಪರಿಶೋಧನಾ ವರದಿಗಳು, 1995-2000, ಪಂಚಾಯತಿ ದಾಖಲೆಗಳು*, ನಾಗೇನಹಳ್ಳಿ: ಗ್ರಾಮಪಂಚಾಯತಿ ಕಚೇರಿ, 2001

15. ಪಂಚಾಯತಿ ಕಾರ್ಯದರ್ಶಿ, *ಮನೆತೆರಿಗೆ ಕಡತಗಳು, ಪಂಚಾಯತಿ ದಾಖಲೆಗಳು*, ನಾಗೇನಹಳ್ಳಿ : ಗ್ರಾಮಪಂಚಾಯತಿ ಕಚೇರಿ, 2001

16. ಪಂಚಾಯತಿ ಕಾರ್ಯದರ್ಶಿ, *ಲೆಕ್ಕಪರಿಶೋಧನಾ ವರದಿಗಳು, 1995-2000, ಪಂಚಾಯತಿ ದಾಖಲೆಗಳು*, ಬೈಲುವದ್ದಿಗೆರೆ: ಗ್ರಾಮಪಂಚಾಯತಿ ಕಚೇರಿ, 2001

17. ಚಂದ್ರಪೂಜಾರಿ ಎಂ., ಪೂರ್ವೋಕ್ತ, ಪುಟ. 228

18. ಪಂಚಾಯತಿ ಕಾರ್ಯದರ್ಶಿ, *ಲೆಕ್ಕಪರಿಶೋಧನಾ ವರದಿಗಳು, 1995-2000, ಪಂಚಾಯತಿ ದಾಖಲೆಗಳು,* ಹಿರೇಹೆಗ್ಡಾಳ್: ಗ್ರಾಮಪಂಚಾಯತಿ ಕಚೇರಿ, 2001

19. ಪಂಚಾಯತಿ ಕಾರ್ಯದರ್ಶಿ, *ಲೆಕ್ಕಪರಿಶೋಧನಾ ವರದಿಗಳು, 1995-2000, ಪಂಚಾಯತಿ ದಾಖಲೆಗಳು,* ಉಜ್ಜಿನಿ: ಗ್ರಾಮಪಂಚಾಯತಿ ಕಚೇರಿ, 2001

20. ಚಂದ್ರಪೂಜಾರಿ ಎಂ., ಪೂರ್ವೋಕ್ತ, ಪುಟ.149

## ಕೋಷ್ಟಕ -28

### ಗ್ರಾಮಪಂಚಾಯತಿಗಳ ಜಾತಿವಾರು ಕುಟುಂಬಗಳು ಮತ್ತು ಪಂಚಾಯತಿ ಸದಸ್ಯರ ಪ್ರಾತಿನಿಧ್ಯ 1999-2004

| ಕ್ರ. ಸಂ. | ಜಾತಿಗಳು | ನಾಗೇನಹಳ್ಳಿ(ನೀರಾವರಿ) | | ಬೈಲುವದ್ದಿಗೆರೆ (ಒಣಭೂಮಿ) | | ಹಿರೇಹೆಗ್ಡಾಳ್ (ನೀರಾವರಿ) | | ಉಜ್ಜಿನಿ(ಒಣಭೂಮಿ) | |
|---|---|---|---|---|---|---|---|---|---|
| | | ಕುಟುಂಬಗಳು | ಒಟ್ಟು ಪ್ರಾತಿನಿಧ್ಯ | ಕುಟುಂಬಗಳು | ಒಟ್ಟು ಪ್ರಾತಿನಿಧ್ಯ | ಕುಟುಂಬಗಳು | ಒಟ್ಟು ಪ್ರಾತಿನಿಧ್ಯ | ಕುಟುಂಬಗಳು | ಒಟ್ಟು ಪ್ರಾತಿನಿಧ್ಯ |
| 01 | ವೀರಶೈವರು | 140 (14.26) | 01 (7.69) | 544 (41.46) | 05 (33.33) | 439 (54.60) | 03 (30.00) | 435 (26.19) | 04 (23.53) |
| 02 | ಕುರುಬರು | 124 (12.62) | 01 (7.69) | 181 (13.80) | 03 (20.00) | 52 (6.46) | 01 (10.00) | 325 (19.57) | 03 (17.64) |
| 03 | ಮಾದಿಗರು | 182 (16.49) | 02 (15.38) | 205 (20.84) | 03(20.00) | 122 (15.17) | 3(30.00) | 100 (6.02) | 03(17.64) |
| 04 | ಚೆಲುವಾದಿ | --- | --- | 22(0.67) | ----- | ------ | --- | 65 (3.91) | 01(5.88) |
| 05 | ಬೋವಿ | 44 (4.48) | 01(7.69) | 17 (1.29) | ---- | 58 (7.21) | 1(10.00) | 39 (2.34) | --- |
| 06 | ಲಂಬಾಣಿಗಳು | 60 (6.11) | 01(7.69) | ----- | --- | --- | --- | ------ | --- |
| 07 | ನಾಯಕರು | 147 (14.96) | 3(23.08) | 139 (10.59) | 03(20.00) | 47 (5.84) | 01(10.00) | 60 (3.61) | 02(11.76) |
| 08 | ಮುಸ್ಲಿಂರು | 195 (19.85) | 2(15.38) | 19 (1.44) | --- | 05 (0.62) | ---- | 153 (9.21) | 02(11.76) |
| 09 | ಅಗಸರು | 09 (0.91) | --- | 11 (0.88) | --- | 04 (0.49) | ---- | 25 (1.50) | ---- |
| 10 | ಬಾರಿಕರು | 26 (2.65) | 01(7.69) | 26 (1.98) | --- | 23 (2.86) | --- | 13 (0.78) | --- |
| 11 | ಈಡಿಗರು | 08 (0.81) | --- | 13 (0.99) | ---- | ---- | ---- | 05 (0.30) | |
| 12 | ಕುಂಬಾರರು | 09 (0.91) | --- | 10 (0.76) | ---- | 03 (0.37) | ---- | 35 (2.11) | ---- |
| 13 | ವಿಶ್ವಕರ್ಮ | 06 (0.61) | --- | 05 (0.36) | --- | 14 (1.74) | 01(10.00) | 54 (3.25) | ----- |
| 14 | ಗೊಲ್ಲರು | 01 (0.10) | ---- | 80 (6.11) | 01(6.67) | ---- | --- | 04 (0.24) | ---- |
| 15 | ನೇಕಾರರು | ----- | ---- | ---- | --- | ------- | --- | 274 (16.50) | 02(11.76) |
| 16 | ವೈಶ್ಯರು | 08 (0.81) | 01(7.69) | 04 (0.30) | --- | --- | ---- | 60(3.61) | ---- |
| 17 | ಉಪ್ಪಾರರು | ------- | --- | 04 (0.30) | ---- | 36 (4.47) | ---- | --- | --- |
| 18 | ಬ್ರಾಹ್ಮಣರು | 08 (0.81) | ---- | 04 (0.30) | ---- | ---- | --- | 08(0.48) | ---- |
| 19 | ಕ್ಷೌರಿಕರು | 07 (0.71) | --- | 19 (1.44) | --- | 01 (0.12) | --- | 04 (0.24) | ---- |
| 20 | ಇತರೆ | 08 (0.81) | ---- | 09 (0.69) | ---- | --- | --- | 02 (0.12) | --- |
| | **ಒಟ್ಟು** | **982 (100.00)** | **13(100)** | **1312 (100.00)** | **15(100)** | **804 (100.00)** | **10(100.00)** | **1661(100.00)** | **17(100.00)** |

ಸೂಚನೆ : ಆವರಣದಲ್ಲಿರುವುದು ಒಟ್ಟು ಕುಟುಂಬಗಳನ್ನು ಮತ್ತು ಒಟ್ಟು ಪ್ರಾತಿನಿಧ್ಯದ ಶೇಕಡವಾರು ಪ್ರಮಾಣವನ್ನು ಸೂಚಿಸುತ್ತದೆ.

ಮೂಲ : ಪಂಚಾಯತಿ ಕಾರ್ಯದರ್ಶಿಗಳು, *ಪಂಚಾಯತ್ ಬೇಡಿಕೆ ರಿಜಿಸ್ಟರ್‌ಗಳು, 2001 ಪಂಚಾಯತಿ ದಾಖಲೆಗಳು, ಗ್ರಾಮಪಂಚಾಯತಿ ಸದಸ್ಯರ ಪಟ್ಟಿಗಳು, 1999,* ಗ್ರಾಮಪಂಚಾಯತಿ ಕಾರ್ಯಾಲಯಗಳು, ನಾಗೇನಹಳ್ಳಿ, ಬೈಲುವದ್ದಿಗೆರೆ, ಹಿರೇಹೆಗ್ಡಾಳ್ ಮತ್ತು ಉಜ್ಜಿನಿ : ಗ್ರಾಮಪಂಚಾಯತಿ ಕಚೇರಿಗಳು, 2001

## ಕೋಷ್ಟಕ -29

## ಗ್ರಾಮಪಂಚಾಯತಿಗಳ ಜಾತಿವಾರು ಕುಟುಂಬಗಳು ಮತ್ತು ಸಂದರ್ಶಿಸಿದ ಕುಟುಂಬಗಳು 2001

| ಕ್ರ. ಸಂ. | ಜಾತಿಗಳು | ನಾಗೇನಹಳ್ಳಿ(ನೀರಾವರಿ) | | ಬೈಲುವದ್ದಿಗೆರೆ (ಒಣಭೂಮಿ) | | ಹಿರೇಹೆಗ್ಡಾಳ್ (ನೀರಾವರಿ) | | ಉಜ್ಜಿನಿ(ಒಣಭೂಮಿ) | |
|---|---|---|---|---|---|---|---|---|---|
| | | ಒಟ್ಟು ಕುಟುಂಬಗಳು | ಸಂದರ್ಶಿಸಿದ ಕುಟುಂಬಗಳು | ಒಟ್ಟು ಕುಟುಂಬಗಳು | ಸಂದರ್ಶಿಸಿದ ಕುಟುಂಬಗಳು | ಒಟ್ಟು ಕುಟುಂಬಗಳು | ಸಂದರ್ಶಿಸಿದ ಕುಟುಂಬಗಳು | ಒಟ್ಟು ಕುಟುಂಬಗಳು | ಸಂದರ್ಶಿಸಿದ ಕುಟುಂಬಗಳು |
| 01 | ವೀರಶೈವರು | 140(14.26) | 14(16.00) | 544(41.46) | 54(40.90) | 439(54.60) | 44(53.65) | 435(26.19) | 37(22.68) |
| 02 | ಕುರುಬರು | 124(12.62) | 09(09.00) | 181(13.80) | 16(12.12) | 52(6.46) | 6(7.31) | 325(19.57) | 32(19.27) |
| 03 | ಮಾದಿಗರು | 182(16.49) | 16(16.00) | 205(20.84) | 22(16.66) | 122(15.17) | 12(13.41) | 100(6.02) | 14(7.83) |
| 04 | ಚೆಲುವಾದಿ | ----------- | ----------- | 22(1.67) | 04(3.03) | -------- | ----------- | 65(3.91) | 06(3.01) |
| 05 | ಬೋವಿ | 44(4.48) | 05(5.00) | 17(1.29) | 03(2.27) | 58(7.21) | 7(8.54) | 39(2.34) | 04(2.41) |
| 06 | ಲಂಬಾಣಿಗಳು | 60(6.11) | 07(7.00) | ----- | ----------- | ----------- | ----------- | ------ | ----------- |
| 07 | ನಾಯಕರು | 147(14.96) | 16(16.00) | 139(10.59) | 16(12.12) | 47(5.84) | 06(7.31) | 60(3.61) | 06(3.61) |
| 08 | ಮುಸ್ಲಿಂರು | 195(19.85) | 19(19.00) | 19(1.44) | 02(1.51) | 05(0.62) | 01(1.21) | 153(9.21) | 15(9.04) |
| 09 | ಅಗಸರು | 09(0.91) | 01(1.00) | 11(0.83) | 01(0.76) | 04(0.49) | 01(1.21) | 25(1.50) | 03(1.80) |
| 10 | ಬಾರಿಕರು | 26(2.65) | 04(4.00) | 26(1.98) | 02(1.51) | 23(2.26) | 02(2.44) | 13(0.78) | 01(0.60) |
| 11 | ಈಡಿಗರು | 08(0.81) | 01(10.00) | 13(0.99) | 01(0.76) | ----------- | ----------- | 05(0.30) | 01(0.60) |
| 12 | ಕುಂಬಾರರು | 09(0.91) | 01(1.00) | 10(0.76) | 01(0.76) | 03(0.37) | ----------- | 35(2.11) | 02(1.20) |
| 13 | ವಿಶ್ವಕರ್ಮ | 06(0.61) | 01(1.00) | 05(0.38) | 01(0.76) | 14(1.74) | 01(1.21) | 54(3.25) | 06(3.01) |
| 14 | ಗೊಲ್ಲರು | 01(0.10) | ----------- | 80(6.11) | 07(5.30) | ----------- | ----------- | 04(0.24) | 01(0.60) |
| 15 | ನೇಕಾರರು | ----- | ----------- | ------- | ----------- | ----------- | ----------- | 274(16.50) | 07(10.24) |
| 16 | ವೈಶ್ಯರು | 08(0.81) | 02(2.00) | 04(0.30) | ----------- | ----------- | ----------- | 60(3.61) | 07(4.21) |
| 17 | ಉಪ್ಪಾರರು | ------- | ----------- | 04(0.30) | ----------- | 36(4.47) | 02(2.44) | ------- | ----------- |
| 18 | ಬ್ರಾಹ್ಮಣರು | 08(0.81) | 02(2.00) | 04(0.30) | ----------- | ------ | ----------- | 08(0.48) | 02(1.20) |
| 19 | ಕ್ಷೌರಿಕರು | 07(0.71) | ----------- | 19(1.44) | 01(0.76) | 01(0.12) | ----------- | 04(0.24) | 01(0.60) |
| 20 | ಇತರೆ | 08(0.81) | 02(2.00) | 09(0.69) | 02(0.76) | ---- | ----------- | 02(0.12) | 01(0.60) |
| | **ಒಟ್ಟು** | **982(100.00)** | **100(100)** | **1312(100.00)** | **122(100)** | **804(100.00)** | **82(100.00)** | **1661(100.00)** | **166(100.00)** |

ಸೂಚನೆ : ಆವರಣದಲ್ಲಿರುವುದು ಒಟ್ಟು ಕುಟುಂಬಗಳನ್ನು ಮತ್ತು ಒಟ್ಟು ಪ್ರಾತಿನಿಧ್ಯದ ಶೇಕಡವಾರು ಪ್ರಮಾಣವನ್ನು ಸೂಚಿಸುತ್ತದೆ.

ಮೂಲ : ಪಂಚಾಯತಿ ಕಾರ್ಯದರ್ಶಿಗಳು, *ಪಂಚಾಯತ್ ಬೇಡಿಕೆ ರಿಜಿಸ್ಟರ್‌ಗಳು, 2001 ಪಂಚಾಯತಿ ದಾಖಲೆಗಳು, ಗ್ರಾಮಪಂಚಾಯತಿ ಸದಸ್ಯರ ಪಟ್ಟಿಗಳು, 1999,* ಗ್ರಾಮಪಂಚಾಯತಿ ಕಾರ್ಯಾಲಯಗಳು, ನಾಗೇನಹಳ್ಳಿ, ಬೈಲುವದ್ದಿಗೆರೆ, ಹಿರೇಹೆಗ್ಡಾಳ್ ಮತ್ತು ಉಜ್ಜಿನಿ : ಗ್ರಾಮಪಂಚಾಯತಿ ಕಚೇರಿಗಳು, 2001

**ಕೋಷ್ಟಕ -30**

**ಗ್ರಾಮಪಂಚಾಯತಿ ಸದಸ್ಯರ ರಾಜಕೀಯ ಪಕ್ಷದ ವಿವರ 1999-2004**

| ಕ್ರ.ಸಂ. | ಗ್ರಾಮಪಂಚಾಯತಿಗಳು | ರಾಜಕೀಯ ಪಕ್ಷಗಳು | | |
|---|---|---|---|---|
| | | ಕಾಂಗ್ರೆಸ್ | ಜನತಾದಳ | ಒಟ್ಟು |
| 01 | ನಾಗೇನಹಳ್ಳಿ | 10<br>(76.92) | 03<br>(23.07) | 13<br>(100.00) |
| 02 | ಬೈಲುವದ್ದಿಗೆರೆ | 02<br>(13.33) | 13<br>(86.67) | 15<br>(100.00) |
| 03 | ಹಿರೇಹೆಗ್ಡಾಳ್ | 10<br>(100.00) | ------ | 10<br>(100.00) |
| 04 | ಉಜ್ಜಿನಿ | 05<br>(29.41) | 12<br>(70.59) | 17<br>(100.00) |
| ಒಟ್ಟು | | 27<br>(49.09) | 28<br>(50.91) | 55<br>(100.00) |

ಸೂಚನೆ : ಆವರಣದಲ್ಲಿರುವುದು ಪಂಚಾಯತಿ ಸದಸ್ಯರ ಪ್ರಾತಿನಿಧ್ಯದ ಶೇಕಡವಾರು ಪ್ರಮಾಣವನ್ನು ಸೂಚಿಸುತ್ತದೆ.

ಮೂಲ : ಪಂಚಾಯತಿ ಕಾರ್ಯದರ್ಶಿಗಳು, *ಪಂಚಾಯತಿ ಸದಸ್ಯರ ಪಟ್ಟಿ, 1999, ಪಂಚಾಯತಿ ದಾಖಲೆಗಳು,* ನಾಗೇನಹಳ್ಳಿ, ಬೈಲುವದ್ದಿಗೆರೆ, ಹಿರೇಹೆಗ್ಡಾಳ್ ಮತ್ತು ಉಜ್ಜಿನಿ : ಗ್ರಾಮ ಪಂಚಾಯತಿ ಕಚೇರಿಗಳು, 2001

## ಕೋಷ್ಟಕ -31

## ಗ್ರಾಮ ಪಂಚಾಯತಿ ಸದಸ್ಯರ ಆಯ್ಕೆಯ ಜಾತಿವಾರು ವಿವರ 1999-2004

| ಕ್ರ. ಸಂ. | ಜಾತಿಗಳು | ನಾಗೇನಹಳ್ಳಿ (ನೀರಾವರಿ) | | | ಬೈಲುವದ್ದಿಗೆರೆ (ಒಣಭೂಮಿ) | | | ಹಿರೇಹೆಗ್ಡಾಳ್ (ನೀರಾವರಿ) | | | ಉಜ್ಜಿನಿ (ಒಣಭೂಮಿ) | | |
|---|---|---|---|---|---|---|---|---|---|---|---|---|---|
| | | ಚುನಾವಣೆ | ಅವಿರೋಧ | ಒಟ್ಟು | ಚುನಾವಣೆ | ಅವಿರೋಧ | ಒಟ್ಟು | ಚುನಾವಣೆ | ಅವಿರೋಧ | ಒಟ್ಟು | ಚುನಾವಣೆ | ಅವಿರೋಧ | ಒಟ್ಟು |
| 01 | ಪರಿಶಿಷ್ಟ ಜಾತಿ | 04 | ---- | 04 | 02 | 01 | 03 | 04 | ----- | 04 | 04 | ---- | 04 |
| 02 | ಪರಿಶಿಷ್ಟ ಪಂಗಡ | 02 | 01 | 03 | 03 | ---- | 03 | 01 | ---- | 01 | 01 | 01 | 02 |
| 03 | ಹಿಂದುಳಿದ ವರ್ಗ | 04 | ---- | 04 | 04 | ---- | 04 | 02 | ---- | 02 | 06 | 01 | 07 |
| 04 | ಇತರೆ | 02 | ---- | 02 | 04 | 01 | 05 | 03 | --- | 03 | 04 | --- | 04 |
| | ಒಟ್ಟು | 12 (92.30) | 01 (7.09) | 13 (100.00) | 13 (86.66) | 02 (13.34) | 15 (100.00) | 10 (100.00) | ---- - | 10 (100.00) | 15 (88.24) | 02 (11.76) | 17 (100.00) |

ಸೂಚನೆ : ಆವರಣದಲ್ಲಿರುವುದು ಶೇಕಡವಾರು ಪ್ರಮಾಣವು ಪಂಚಾಯತಿ ಸದಸ್ಯರ ಜಾತಿವಾರು ಆಯ್ಕೆಯನ್ನು ಸೂಚಿಸುತ್ತದೆ.

ಮೂಲ : ಪಂಚಾಯತಿ ಕಾರ್ಯದರ್ಶಿಗಳು, *ಪಂಚಾಯತಿ ಸದಸ್ಯರ ಪಟ್ಟಿ 1999, ಪಂಚಾಯತಿ ದಾಖಲೆಗಳು*, ನಾಗೇನಹಳ್ಳಿ, ಬೈಲುವದ್ದಿಗೆರೆ, ಹಿರೇಹೆಗ್ಡಾಳ್ ಮತ್ತು ಉಜ್ಜಿನಿ : ಗ್ರಾಮ ಪಂಚಾಯತಿ ಕಚೇರಿಗಳು, 2001

## ಕೋಷ್ಟಕ -32

## ಗ್ರಾಮಪಂಚಾಯತಿ ಸದಸ್ಯರ ಮತ್ತು ಸಂದರ್ಶನ ಮಾಡಿದ ಗ್ರಾಮೀಣ ಜನತೆಯ ಶೈಕ್ಷಣಿಕ ಮಟ್ಟ

| ಕ್ರ. ಸಂ. | ವಿವರಗಳು | ನಾಗೇನಹಳ್ಳಿ (ನೀರಾವರಿ) | | ಬೈಲುವದ್ದಿಗೆರೆ (ಒಣಭೂಮಿ) | | ಹಿರೇಹೆಗ್ಡಾಳ್ (ನೀರಾವರಿ) | | ಉಜ್ಜಿನಿ (ಒಣಭೂಮಿ) | |
|---|---|---|---|---|---|---|---|---|---|
| | | ಪಂಚಾಯತಿ ಸದಸ್ಯರು | ಗ್ರಾಮೀಣ ಜನತೆ | ಪಂಚಾಯತಿ ಸದಸ್ಯರು | ಗ್ರಾಮೀಣ ಜನತೆ | ಪಂಚಾಯತಿ ಸದಸ್ಯರು | ಗ್ರಾಮೀಣ ಜನತೆ | ಪಂಚಾಯತಿ ಸದಸ್ಯರು | ಗ್ರಾಮೀಣ ಜನತೆ |
| 01 | ಶಿಕ್ಷಣವೇ ಇಲ್ಲಾ | 07 (53.85) | 50 (50.00) | 06 (40.00) | 68 (51.51) | 03 (30.00) | 30 (36.58) | 05 (29.41) | 48 (29.91) |
| 02 | ಪ್ರಾಥಮಿಕ | 02 (15.38) | 28 (28.00) | 06 (40.00) | 44 (33.33) | 03 (30.00) | 32 (39.02) | 07 (52.94) | 54 (32.53) |
| 03 | ಪ್ರೌಢಶಾಲೆ | 01 (7.69) | 08 (8.00) | 02 (13.33) | 08 (6.06) | 02 (20.00) | 10 (12.19) | 01 (5.880 | 22 (13.25) |
| 04 | ಪದವಿಪೂರ್ವ | 01 (7.69) | ---- ---- | ----- | 04 (3.78) | 01 (10.00) | 04 (4.87) | 01 (5.88) | 10 (10.84) |
| 05 | ಪದವಿ | 02 (15.38) | 08 (8.00) | ----- | 05 (3.78) | 01 (10.00) | 04 (4.87) | 01 (5.88) | 14 (8.43) |
| 06 | ಇತರೆ | ------ | 06 (6.00) | 01 (6.66) | 03 (2.27) | ----- | 02 (2.43) | ----- | 10 (6.02) |
| | ಒಟ್ಟು | 13 (100.00) | 100 (100.00) | 15 (100.00) | 132 (100.00) | 10 (100.00) | 82 (100.00) | 17 (100.00) | 166 (100.00) |

ಸೂಚನೆ : ಆವರಣದಲ್ಲಿರುವುದು ಸಂದರ್ಶಿಸಿದ ಪಂಚಾಯತಿ ಸದಸ್ಯರ ಮತ್ತು ಗ್ರಾಮೀಣ ಜನತೆಯ ಆರ್ಥಿಕ ಮಟ್ಟವನ್ನು ಶೇಕಡವಾರು ಪ್ರಮಾಣದಲ್ಲಿ ಸೂಚಿಸುತ್ತದೆ.

ಮೂಲ : ಪ್ರಾಥಮಿಕ ಮಾಹಿತಿ

## ಕೋಷ್ಟಕ -33

## ಗ್ರಾಮಪಂಚಾಯತ್ ಸದಸ್ಯರ ಮತ್ತು ಸಂದರ್ಶಿಸಿದ ಗ್ರಾಮೀಣ ಜನತೆ ಉದ್ಯೋಗದ ವಿವರ

| ಕ್ರ. ಸಂ. | ವಿವರಗಳು | ನಾಗೇನಹಳ್ಳಿ (ನೀರಾವರಿ) | | ಬೈಲುವದ್ದಿಗೆರೆ (ಒಣಭೂಮಿ) | | ಹಿರೇಹೆಗ್ಡಾಳ್ (ನೀರಾವರಿ) | | ಉಜ್ಜಿನಿ (ಒಣಭೂಮಿ) | |
|---|---|---|---|---|---|---|---|---|---|
| | | ಪಂಚಾಯತಿ ಸದಸ್ಯರು | ಗ್ರಾಮೀಣ ಜನತೆ | ಪಂಚಾಯತಿ ಸದಸ್ಯರು | ಗ್ರಾಮೀಣ ಜನತೆ | ಪಂಚಾಯತಿ ಸದಸ್ಯರು | ಗ್ರಾಮೀಣ ಜನತೆ | ಪಂಚಾಯತಿ ಸದಸ್ಯರು | ಗ್ರಾಮೀಣ ಜನತೆ |
| 01 | ಕೃಷಿಕೂಲಿ | --- | 25 (25.00) | 02 (13.33) | 45 (34.09) | ----- | 18 (21.95) | 03 (17.64) | 25 (15.06) |
| 02 | ಕೃಷಿ | 05 (46.15) | 40 (40.00) | 10 (66.66) | 55 (41.66) | 07 (70.00) | 44 (53.65) | 06 (35.29) | 30 (18.07) |
| 03 | ವ್ಯಾಪಾರ | 03 (23.07) | 15 (45.00) | ---- | 13 (9.84) | 01 (10.00) | 10 (12.19) | 02 (11.76) | 20 (12.04) |
| 04 | ಕರಕುಶಲ ಕೈಗಾರಿಕೆ | ---- | 05 (5.00) | ----- | 04 (3.03) | 01 (10.00) | 06 (7.31) | 04 (23.52) | 66 (39.75) |
| 05 | ಸೇವಾವಲಯ | 01 (7.69) | 05 (5.00) | ----- | 03 (2.27) | ---- | 04 (4.87) | ----- | 10 (6.02) |
| 06 | ಇತರೆ | 03 (23.07) | 10 (10.00) | 03 (20.00) | 12 (9.09) | 01 (10.00) | ----- | 02 (11.76) | 15 (9.03) |
| | ಒಟ್ಟು | 13 (100.00) | 100 (100.00) | 15 (100.00) | 132 (100.00) | 10 (100.00) | 82 (100.00) | 17 (100.00) | 166 (100.00) |

ಸೂಚನೆ : ಆವರಣದಲ್ಲಿರುವುದು ಸಂದರ್ಶಿಸಿದ ಪಂಚಾಯತಿ ಸದಸ್ಯರ ಮತ್ತು ಗ್ರಾಮೀಣ ಜನತೆಯ ಉದ್ಯೋಗದ ವಿವರವನ್ನು ಶೇಕಡವಾರು ಪ್ರಮಾಣದಲ್ಲಿ ಸೂಚಿಸುತ್ತದೆ.

ಮೂಲ : ಪ್ರಾಥಮಿಕ ಮಾಹಿತಿ

## ಕೋಷ್ಟಕ -34

### ಗ್ರಾಮಪಂಚಾಯತಿ ಸದಸ್ಯರ ಮತ್ತು ಸಂದರ್ಶಿಸಿದ ಗ್ರಾಮೀಣ ಜನತೆಯ ಭೂ ಹಿಡುವಳಿಯ ವಿವರ

| ಕ್ರ. ಸಂ. | ವಿವರಗಳು | ನಾಗೇನಹಳ್ಳಿ (ನೀರಾವರಿ) | | ಬೈಲುವದ್ದಿಗೆರೆ (ಒಣಭೂಮಿ) | | ಹಿರೇಹೆಗ್ಡಾಳ್ (ನೀರಾವರಿ) | | ಉಜ್ಜನಿ (ಒಣಭೂಮಿ) | |
|---|---|---|---|---|---|---|---|---|---|
| | | ಪಂಚಾಯತಿ ಸದಸ್ಯರು | ಗ್ರಾಮೀಣ ಜನತೆ | ಪಂಚಾಯತಿ ಸದಸ್ಯರು | ಗ್ರಾಮೀಣ ಜನತೆ | ಪಂಚಾಯತಿ ಸದಸ್ಯರು | ಗ್ರಾಮೀಣ ಜನತೆ | ಪಂಚಾಯತಿ ಸದಸ್ಯರು | ಗ್ರಾಮೀಣ ಜನತೆ |
| 01 | ಭೂಮಿ ಇಲ್ಲದವರು | ---- | 05 (5.00) | 04 (26.66) | 22 (16.66) | ---- | 11 (13.41) | 04 (23.52) | 28 (16.86) |
| 02 | 1 ರಿಂದ 2 ಎಕರೆ | 04 (30.76) | 25 (25.00) | 05 (33.33) | 38 (28.78) | 04 (40.00) | 35 (42.68) | 08 (47.05) | 49 (29.51) |
| 03 | 3 ರಿಂದ 5 ಎಕರೆ | 02 (15.38) | 38 (38.00) | 02 (13.33) | 45 (34.09) | 04 (40.00) | 25 (30.48) | 02 (11.76) | 61 (36.74) |
| 04 | 6 ರಿಂದ 10 ಎಕರೆ | 03 (23.07) | 22 (22.00) | 03 (20.00) | 19 (14.39) | 01 (10.00) | 06 (7.31) | 01 (5.88) | 15 (9.03) |
| 05 | 10 ಎಕರೆಗಿಂತ ಹೆಚ್ಚು | 04 (30.76) | 10 (10.00) | 01 (6.66) | 08 (6.06) | 01 (10.00) | 05 (6.09) | 02 (11.76) | 13 (7.83) |
| | ಒಟ್ಟು | 13 (100.00) | 100 (100.00) | 15 (100.00) | 132 (100.00) | 10 (100.00) | 82 (100.00) | 17 (100.00) | 166 (100.00) |

ಸೂಚನೆ : ಆವರಣದಲ್ಲಿರುವುದು ಸಂದರ್ಶಿಸಿದ ಪಂಚಾಯತಿ ಸದಸ್ಯರ ಮತ್ತು ಗ್ರಾಮೀಣ ಜನತೆಯ ಭೂ ಹಿಡುವಳಿಯ ವಿವರವನ್ನು ಶೇಕಡವಾರು ಪ್ರಮಾಣದಲ್ಲಿ ಸೂಚಿಸುತ್ತದೆ.

ಮೂಲ : ಪ್ರಾಥಮಿಕ ಮಾಹಿತಿ

## ಕೋಷ್ಟಕ -35

### ಗ್ರಾಮಪಂಚಾಯತಿ ಸದಸ್ಯರ ಮತ್ತು ಸಂದರ್ಶಿಸಿದ ಗ್ರಾಮೀಣ ಜನತೆಯ ವಾರ್ಷಿಕ ಆದಾಯದ ವಿವರ

| ಕ್ರ. ಸಂ. | ವಿವರಗಳು | ನಾಗೇನಹಳ್ಳಿ (ನೀರಾವರಿ) | | ಬೈಲುವದ್ದಿಗೆರ (ಒಣಭೂಮಿ) | | ಹಿರೇಹೆಗ್ಡಾಳ್ (ನೀರಾವರಿ) | | ಉಜ್ಜನಿ (ಒಣಭೂಮಿ) | |
|---|---|---|---|---|---|---|---|---|---|
| | | ಪಂಚಾಯತಿ ಸದಸ್ಯರು | ಗ್ರಾಮೀಣ ಜನತೆ | ಪಂಚಾಯತಿ ಸದಸ್ಯರು | ಗ್ರಾಮೀಣ ಜನತೆ | ಪಂಚಾಯತಿ ಸದಸ್ಯರು | ಗ್ರಾಮೀಣ ಜನತೆ | ಪಂಚಾಯತಿ ಸದಸ್ಯರು | ಗ್ರಾಮೀಣ ಜನತೆ |
| 01 | 5000ಕ್ಕಿಂತ ಕಡಿಮೆ | ---- | 05 (5.00) | 04 (26.66) | 22 (16.66) | ----- | 04 (4.89) | 04 (23.52) | 29 (17.46) |
| 02 | 10000ಕ್ಕಿಂತ ಕಡಿಮೆ | 04 (30.76) | 25 (25.00) | 05 (33.33) | 38 (28.78) | 04 (40.00) | 12 (14.63) | 08 (47.51) | 31 (18.67) |
| 03 | 15000ಕ್ಕಿಂತ ಕಡಿಮೆ | 04 (30.76) | 38 (38.00) | 02 (13.33) | 45 (34.09) | 02 (20.00) | 22 (26.82) | 02 (5.88) | 59 (35.54) |
| 04 | 20400ಕ್ಕಿಂತ ಕಡಿಮೆ | 02 (15.38) | 22 (22.00) | 03 (20.00) | 19 (14.39) | 01 (10.00) | 09 (10.97) | 01 (5.88) | 16 (9.63) |
| 05 | 20400ಕ್ಕಿಂತ ಹೆಚ್ಚು | 03 (23.07) | 10 (10.00) | 01 (6.66) | 08 (6.06) | 03 (30.00) | 25 (30.48) | 03 (17.64) | 31 (18.67) |
| | ಒಟ್ಟು | 13 (100.00) | 100 (100.00) | 15 (100.00) | 132 (100.00) | 10 (100.00) | 82 (100.00) | 17 (100.00) | 166 (100.00) |

ಸೂಚನೆ : ಆವರಣದಲ್ಲಿರುವುದು ಸಂದರ್ಶಿಸಿದ ಪಂಚಾಯತಿ ಸದಸ್ಯರ ಮತ್ತು ಗ್ರಾಮೀಣ ಜನತೆಯ ವಾರ್ಷಿಕ ಆದಾಯವನ್ನು ಸೂಚಿಸುತ್ತದೆ. ಶೇಕಡವಾರು ಪ್ರಮಾಣದಲ್ಲಿ ಸೂಚಿಸುತ್ತದೆ.

ಮೂಲ : ಪ್ರಾಥಮಿಕ ಮಾಹಿತಿ

## ಕೋಷ್ಟಕ -36

### ಪಂಚಾಯತಿ ಸದಸ್ಯರ ಅರಿವು ಮತ್ತು ಭಾಗವಹಿಸುವಿಕೆ ಸಂಬಂಧಿಸಿದ ಅಂಕಿ ಅಂಶಗಳ ವಿವರ ಗ್ರಾಮಪಂಚಾಯಿತಿವಾರು

| ಕ್ರ. ಸಂ. | ವಿವರಗಳು | ನಾಗೇನಹಳ್ಳಿ (ನೀರಾವರಿ) | | | | ಬೈಲುವದ್ದಿಗೆರೆ (ಒಣಭೂಮಿ) | | | | ಹಿರೇಹೆಗ್ಡಾಳ್ (ನೀರಾವರಿ) | | | | ಉಜ್ಜಿನಿ (ಒಣಭೂಮಿ) | | | |
|---|---|---|---|---|---|---|---|---|---|---|---|---|---|---|---|---|---|
| | | ಅರಿವು ಇರು ವವರು | | ಭಾಗವಹಿಸು ವವರು | | ಅರಿವು ಇರು ವವರು | | ಭಾಗವಹಿಸು ವವರು | | ಅರಿವು ಇರು ವವರು | | ಭಾಗವಹಿಸು ವವರು | | ಅರಿವು ಇರು ವವರು | | ಭಾಗವಹಿಸು ವವರು | |
| | | ಇದೆ | ಇಲ್ಲ | ಇದೆ | ಇಲ್ಲ | ಇದೆ | ಇಲ್ಲ | ಇದೆ | ಇಲ್ಲ | ಇದೆ | ಇಲ್ಲ | ಇದೆ | ಇಲ್ಲ | ಇದೆ | ಇಲ್ಲ | ಇದೆ | ಇಲ್ಲ |
| 01 | ಗ್ರಾಮಸಭೆ | 10 (7.92) | 03 (27.08) | 07 (53.85) | 06 (46.15) | 11 (73.33) | 04 (26.67) | 07 (46.66) | 08 (53.34) | 08 (80.00) | 02 (20.00) | 06 (60.00) | 04 (40.00) | 12 (70.59) | 05 (28.41) | 08 (47.06) | 09 (52.94) |
| 02 | ಫಲಾನುಭವಿ ಆಯ್ಕೆ | 07 (53.85) | 06 (46.15) | 07 (53.85) | 06 (46.15) | 06 (40.00) | 09 (60.00) | 04 (26.67) | 11 (73.33) | 06 (60.00) | 04 (40.00) | 05 (50.00) | 05 (50.00) | 07 (41.17) | 10 (58.83) | 05 (26.41) | 12 (70.59) |
| 03 | ಸ್ಥಾಯಿ ಸಮಿತಿಗಳು | 03 (27.08) | 10 (79.92) | 02 (15.38) | 11 (84.62) | 02 (13.33) | 13 (86.67) | 02 (13.33) | 13 (86.67) | 04 (40.00) | 06 (60.00) | 02 (20.00) | 08 (80.00) | 03 (17.65) | 14 (82.35) | 02 (11.76) | 15 (88.24) |
| 04 | ಆಯವ್ಯಯ | 05 (38.46) | 08 (61.54) | 03 (27.08) | 10 (76.92) | 03 (13.33) | 12 (86.67) | 02 (13.33) | 13 (86.67) | 04 (40.00) | 06 (60.00) | 03 (30.00) | 07 (70.00) | 03 (17.65) | 14 (82.35) | 02 (11.76) | 15 (88.24) |
| 05 | ಯೋಜನೆಗಳ ಬಗ್ಗೆ | 07 (53.85) | 06 (46.15) | 06 (46.15) | 07 (53.85) | 06 (40.00) | 09 (60.00) | 04 (26.67) | 11 (73.33) | 06 (40.00) | 04 (40.00) | 05 (50.00) | 05 (50.00) | 07 (41.17) | 10 (58.83) | 05 (28.41) | 12 (70.50) |
| 06 | ವಾರ್ಷಿಕ ಯೋಜನೆ | 05 (38.46) | 08 (61.54) | 03 (27.08) | 10 (76.92) | 03 (20.00) | 12 (80.00) | 02 (13.33) | 13 (86.67) | 04 (40.00) | 06 (60.00) | 03 (30.00) | 07 (70.00) | 03 (17.65) | 14 (82.35) | 02 (11.76) | 15 (88.24) |
| 07 | ಪಂಚಾಯತ್ ಸಭೆ | 12 (92.31) | 01 (7.69) | 11 (84.62) | 02 (15.38) | 13 (86.67) | 02 (13.33) | 10 (66.67) | 05 (33.33) | 08 (80.00) | 02 (20.00) | 07 (70.00) | 03 (30.00) | 13 (76.47) | 04 (23.53) | 10 (41.17) | 07 (82.35) |

ಸೂಚನೆ : ಆವರಣದಲ್ಲಿರುವುದು ಸಂದರ್ಶಿಸಿದ ಒಟ್ಟು ಪಂಚಾಯತಿ ಸದಸ್ಯರ ಪಂಚಾಯತಿ ವ್ಯವಸ್ಥೆಯ ಬಗ್ಗೆ ಅರಿವು ಮತ್ತು ಭಾಗವಹಿಸುವಿಕೆಯನ್ನು ಶೇಕಡವಾರು ಪ್ರಮಾಣದಲ್ಲಿ ತಿಳಿಸಲಾಗಿದೆ.

ಮೂಲ : ಪ್ರಾಥಮಿಕ ಮಾಹಿತಿ

**ಕೋಷ್ಟಕ -36.1**

**ಪಂಚಾಯತಿ ಸದಸ್ಯರ ಗ್ರಾಮಸಭೆಯ ಬಗ್ಗೆ ಅರಿವು ಮತ್ತು ಭಾಗವಹಿಸುವಿಕೆಯ ಅಂಕಿ ಅಂಶಗಳನ್ನು ರೇಖಾಚಿತ್ರದ ಮೂಲಕ ತಿಳಿಸಲಾಗಿದೆ.**

| ಕ್ರ. ಸಂ. | ಗ್ರಾಮಪಂಚಾಯತಿಗಳು | ನಾಗೇನಹಳ್ಳಿ (ನೀರಾವರಿ) | | | | ಬೈಲುವದ್ದಿಗೆರೆ (ಒಣಭೂಮಿ) | | | | ಹಿರೇಹೆಗ್ಡಾಳ್ (ನೀರಾವರಿ) | | | | ಉಜ್ಜಿನಿ (ಒಣಭೂಮಿ) | | | |
|---|---|---|---|---|---|---|---|---|---|---|---|---|---|---|---|---|---|
| | | ಅರಿವು ಇರುವವರು | | ಭಾಗವಹಿಸುವವರು | | ಅರಿವು ಇರುವವರು | | ಭಾಗವಹಿಸುವವರು | | ಅರಿವು ಇರುವವರು | | ಭಾಗವಹಿಸುವವರು | | ಅರಿವು ಇರುವವರು | | ಭಾಗವಹಿಸುವವರು | |
| | | ಇದೆ | ಇಲ್ಲ | ಇದೆ | ಇಲ್ಲ | ಇದೆ | ಇಲ್ಲ | ಇದೆ | ಇಲ್ಲ | ಇದೆ | ಇಲ್ಲ | ಇದೆ | ಇಲ್ಲ | ಇದೆ | ಇಲ್ಲ | ಇದೆ | ಇಲ್ಲ |
| 01 | ಗ್ರಾಮಸಭೆ | 10 (7.92) | 03 (27.08) | 07 (53.85) | 06 (46.15) | 11 (73.33) | 04 (26.67) | 07 (46.66) | 08 (53.34) | 08 (80.00) | 02 (20.00) | 06 (60.00) | 04 (40.00) | 12 (70.59) | 05 (28.41) | 08 (47.06) | 09 (52.94) |



## ಕೋಷ್ಟಕ -37

### ಸಂದರ್ಶಿಸಿದ ಊರವರ ಅರಿವು ಮತ್ತು ಭಾಗವಹಿಸುವಿಕೆಗೆ ಸಂಬಂಧಿಸಿದ ಅಂಕಿ ಅಂಶಗಳು ಗ್ರಾಮಪಂಚಾಯತಿಗಳವಾರು

| ಕ್ರ. ಸಂ. | ವಿವರಗಳು | ನಾಗೇನಹಳ್ಳಿ (ನೀರಾವರಿ) | | | | ಬೈಲುವದ್ದಿಗೆರೆ (ಒಣಭೂಮಿ) | | | | ಹಿರೇಹೆಗ್ಡಾಳ್ (ನೀರಾವರಿ) | | | | ಉಜ್ಜಿನಿ (ಒಣಭೂಮಿ) | | | |
|---|---|---|---|---|---|---|---|---|---|---|---|---|---|---|---|---|---|
| | | ಅರಿವು ಇರುವವರು | | ಭಾಗವಹಿಸುವವರು | | ಅರಿವು ಇರುವವರು | | ಭಾಗವಹಿಸುವವರು | | ಅರಿವು ಇರುವವರು | | ಭಾಗವಹಿಸುವವರು | | ಅರಿವು ಇರುವವರು | | ಭಾಗವಹಿಸುವವರು | |
| | | ಇದೆ | ಇಲ್ಲ | ಇದೆ | ಇಲ್ಲ | ಇದೆ | ಇಲ್ಲ | ಇದೆ | ಇಲ್ಲ | ಇದೆ | ಇಲ್ಲ | ಇದೆ | ಇಲ್ಲ | ಇದೆ | ಇಲ್ಲ | ಇದೆ | ಇಲ್ಲ |
| 01 | ಗ್ರಾಮಸಭೆ | 36 (36.00) | 64 (64.00) | 21 (21.00) | 79 (79.00) | 33 (2.50) | 99 (75.00) | 16 (12.12) | 116 (87.88) | 40 (48.78) | 42 (51.22) | 32 (39.02) | 50 (60.98) | 40 (24.10) | 126 (75.90) | 18 (10.84) | 148 (89.16) |
| 02 | ಫಲಾನುಭವಿ ಆಯ್ಕೆ | 22 (22.00) | 78 (78.00) | 10 (10.00) | 90 (90.00) | 15 (11.96) | 117 (88.63) | 10 (7.58) | 122 (92.42) | 27 (32.93) | 55 (67.09) | 12 (14.63) | 70 (85.37) | 18 (10.84) | 148 (89.16) | 10 (6.02) | 156 (93.98) |
| 03 | ಯೋಜನೆಗಳ ಬಗ್ಗೆ | 22 (22.00) | 78 (78.00) | 10 (10.00) | 90 (90.00) | 15 (11.96) | 117 (88.63) | 10 (7.58) | 122 (92.42) | 26 (31.70) | 56 (67.09) | 12 (14.63) | 70 (85.37) | 18 (10.84) | 148 (89.16) | 10 (6.02) | 156 (93.98) |
| 06 | ವಾರ್ಷಿಕ ಯೋಜನೆ ಬಗ್ಗೆ | 22 (22.00) | 78 (78.00) | 10 (10.00) | 90 (90.00) | 15 (11.96) | 117 (88.63) | 10 (7.58) | 122 (92.42) | 27 (32.93) | 56 (67.09) | 12 (14.63) | 70 (85.37) | 18 (10.84) | 148 (89.16) | 10 (6.02) | 156 (93.98) |
| 07 | ಪಂಚಾಯತಿ ಸಮಿತಿ ಬಗ್ಗೆ | 20 (22.00) | 78 (78.00) | 02 (2.00) | 100 (100) | 15 (11.96) | 117 (88.63) | 10 (7.58) | 132 (100) | 25 (30.49) | 57 (69.51) | 04 (9.75) | 78 (90.25) | 18 (10.84) | 148 (89.96) | 02 (1.20) | 164 (98.80) |

ಸೂಚನೆ : ಆವರಣದಲ್ಲಿರುವುದು ಸಂದರ್ಶಿಸಿದ ಒಟ್ಟು ಗ್ರಾಮೀಣ ಜನತೆಯ ಪಂಚಾಯತಿ ಬಗ್ಗೆ ಅರಿವು ಮತ್ತು ಭಾಗವಹಿಸುವಿಕೆಯನ್ನು ಶೇಕಡವಾರು ಪ್ರಮಾಣದಲ್ಲಿ ತಿಳಿಸಲಾಗಿದೆ.

ಮೂಲ : ಪ್ರಾಥಮಿಕ ಮಾಹಿತಿ

**ಕೋಷ್ಟಕ 37.1**

**ಸಂದರ್ಶಿಸಿದ ಊರವರ ಗ್ರಾಮಸಭೆಯ ಕುರಿತು ಅರಿವು ಮತ್ತು ಭಾಗವಹಿಸುವಿಕೆಯನ್ನು ರೇಖಾಚಿತ್ರದ ಮೂಲಕ ಶೇಕಡವಾರು ಪ್ರಮಾಣದಲ್ಲಿ ತಿಳಿಸಲಾಗಿದೆ**

| | ನಾಗೇನಹಳ್ಳಿ (ನೀರಾವರಿ) | | | | ಬೈಲುವದ್ದಿಗೆರೆ (ಒಣಭೂಮಿ) | | | | ಹಿರೇಹೆಗ್ಡಾಳ್ (ನೀರಾವರಿ) | | | | ಉಜ್ಜಿನಿ (ಒಣಭೂಮಿ) | | | |
|---|---|---|---|---|---|---|---|---|---|---|---|---|---|---|---|---|
| | ಅರಿವು ಇರುವವರು | | ಭಾಗವಹಿಸುವವರು | | ಅರಿವು ಇರುವವರು | | ಭಾಗವಹಿಸುವವರು | | ಅರಿವು ಇರುವವರು | | ಭಾಗವಹಿಸುವವರು | | ಅರಿವು ಇರುವವರು | | ಭಾಗವಹಿಸುವವರು | |
| | ಇದೆ | ಇಲ್ಲ | ಇದೆ | ಇಲ್ಲ | ಇದೆ | ಇಲ್ಲ | ಇದೆ | ಇಲ್ಲ | ಇದೆ | ಇಲ್ಲ | ಇದೆ | ಇಲ್ಲ | ಇದೆ | ಇಲ್ಲ | ಇದೆ | ಇಲ್ಲ |
| ಗ್ರಾಮಸಭೆ | 36 (36.00) | 64 (64.00) | 21 (21.00) | 79 (79.00) | 33 (2.50) | 99 (75.00) | 16 (12.12) | 116 (87.88) | 40 (48.78) | 42 (51.22) | 32 (39.02) | 50 (60.98) | 40 (24.10) | 126 (75.90) | 18 (10.84) | 148 (89.16) |




ಮೂಲ : ಪ್ರಾಥಮಿಕ ಮಾಹಿತಿ,

## ಕೋಷ್ಟಕ -38

### ಗ್ರಾಮೀಣ ಜನತೆ ಗ್ರಾಮಸಭೆಗೆ ಭಾಗವಹಿಸದೇ ಇರುವುದಕ್ಕೆ ಕಾರಣಗಳು

| ಕ್ರ. ಸಂ. | ವಿವರಗಳು | ನಾಗೇನಹಳ್ಳಿ (ನೀರಾವರಿ) | | | ಬೈಲುವದ್ದಿಗೆರೆ (ಒಣಭೂಮಿ) | | | ಹಿರೇಹೆಗ್ಡಾಳ್ (ನೀರಾವರಿ) | | | ಉಜ್ಜಿನಿ (ಒಣಭೂಮಿ) | | |
|---|---|---|---|---|---|---|---|---|---|---|---|---|---|
| | | ಪುರುಷ | ಮಹಿಳೆ | ಒಟ್ಟು | ಪುರುಷ | ಮಹಿಳೆ | ಒಟ್ಟು | ಪುರುಷ | ಮಹಿಳೆ | ಒಟ್ಟು | ಪುರುಷ | ಮಹಿಳೆ | ಒಟ್ಟು |
| 01 | ಸಭೆಯ ಬಗ್ಗೆ ಮಾಹಿತಿ ಇಲ್ಲ | 25 | 15 | 40 | 30 | 16 | 46 | 10 | 10 | 20 | 38 | 20 | 58 |
| 02 | ಸಮಯ ಅನುಕೂಲ ವಾಗಿಲ್ಲ | ---- | 05 | 05 | ---- | ---- | ---- | ---- | --- | ---- | 35 | 25 | 60 |
| 03 | ಸ್ಥಳ ಅನುಕೂಲ ವಾಗಿಲ್ಲ | 05 | --- | 05 | ---- | ---- | --- | ---- | ---- | ---- | 09 | 05 | 14 |
| 04 | ಗ್ರಾಮಸಭೆಯಲ್ಲಿ ಗಲಾಟೆ | 05 | 03 | 08 | 09 | 05 | 14 | --- | 02 | 02 | 08 | 05 | 13 |
| 05 | ಆಸಕ್ತಿ ಇಲ್ಲ | 01 | --- | 01 | ---- | 05 | 05 | --- | 05 | 05 | ---- | --- | --- |
| | ಒಟ್ಟು | 46 | 33 | 79 | 71 | 35 | 106 | 27 | 25 | 52 | 93 | 55 | 140 |

ಸೂಚನೆ : ಗ್ರಾಮಸಭೆಗೆ ಭಾಗವಹಿಸದೇ ಇರುವ ಗ್ರಾಮೀಣ ಜನರನ್ನು ಮಾತ್ರ ಪರಿಗಣಿಸಲಾಗಿದೆ.

ಮೂಲ : ಪ್ರಾಥಮಿಕ ಮಾಹಿತಿ

